# ಅರಸೀಕೆರೆ ತಾಲ್ಲೂಕಿನ ಶಾಸನಗಳ ಅಧ್ಯಯನ

## (ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕರು
ಎಚ್.ಆರ್.ಲಲಿತಾಂಬ

ಮಾರ್ಗದರ್ಶಕರು
ಡಾ. ಡಿ.ವಿ.ಪರಮಶಿವಮೂರ್ತಿ
ಪ್ರವಾಚಕರು, ಶಾಸನಶಾಸ್ತ್ರ ವಿಭಾಗ





ಶಾಸನಶಾಸ್ತ್ರ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಜುಲೈ ೨೦೦೭

# ಅರಸೀಕೆರೆ ತಾಲ್ಲೂಕಿನ ಶಾಸನಗಳ ಅಧ್ಯಯನ

## (ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕರು
**ಎನ್.ಆರ್.ಲಲಿತಾಂಬ**

ಮಾರ್ಗದರ್ಶಕರು
**ಡಾ. ಡಿ.ವಿ.ಪರಮಶಿವಮೂರ್ತಿ**
ಪ್ರವಾಚಕರು, ಶಾಸನಶಾಸ್ತ್ರ ವಿಭಾಗ





ಶಾಸನಶಾಸ್ತ್ರ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಜೂನ್ ೨೦೦೭

# ಸಂಶೋಧಕರ ಪ್ರಮಾಣ ಪತ್ರ

ಅರಸೀಕೆರೆ ತಾಲ್ಲೂಕಿನ ಶಾಸನಗಳ ಅಧ್ಯಯನ ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಡಾ.ಡಿ.ವಿ.ಪರಮಶಿವಮೂರ್ತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಎನ್.ಆರ್. ಲಲಿತಾಂಬ
ಸಂಶೋಧಕಿ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 20.08.2002
ಸ್ಥಳ : ವಿದ್ಯಾರಣ್ಯ

<u>ಮಾರ್ಗದರ್ಶಕರ ಪ್ರಮಾಣ ಪತ್ರ</u>

ಎನ್.ಆರ್.ಲಲಿತಾಂಬ ಅವರು ಅರಸೀಕೆರೆ ತಾಲ್ಲೂಕಿನ ಶಾಸನಗಳ ಅಧ್ಯಯನ ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಡಿ.ವಿ. ಪರಮಶಿವಮೂರ್ತಿ
ಮಾರ್ಗದರ್ಶಕರು ಮತ್ತು ಮುಖ್ಯಸ್ಥರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೨೦/೬/೦೨
ಸ್ಥಳ : ವಿದ್ಯಾರಣ್ಯ

# ಪರಿವಿಡಿ

## ಸಂಕ್ಷೇಪ ಸೂಚಿ

| | | |
|---|---|---|
| ಅ.ಕೆ. | : | ಅರಸೀಕೆರೆ |
| ಎ.ಕ.(ಪರಿ) | : | ಎಪಿಗ್ರಾಫಿಯಾ ಕರ್ನಾಟಿಕ ಪರಿಷ್ಕೃತ |
| ಎ.ಕ.ರೈಸ | : | ಎಪಿಗ್ರಾಫಿಯಾ ಕರ್ನಾಟಿಕ ರೈಸ್ ಸಂಪುಟಗಳು |
| ಎ.ಇ. | : | ಎಪಿಗ್ರಾಫಿಯಾ ಇಂಡಿಕ |
| ಕ.ಕೈ. | : | ಕರ್ನಾಟಕ ಕೈಫಿಯತ್ತು |
| ಕ.ಭಾ. | : | ಕರ್ನಾಟಕ ಭಾರತಿ |
| ಕ.ವಿ.ವಿ.ಕೋ | : | ಕನ್ನಡ ವಿಷಯ ವಿಶ್ವಕೋಶ |
| ಕ.ವಿ.ವಿ. | : | ಕನ್ನಡ ವಿಶ್ವವಿದ್ಯಾಲಯ |
| ಕ.ಶಾ.ಸಾ.ಅ. | : | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ |
| ಕ.ಸಾ.ಪ. | : | ಕನ್ನಡ ಸಾಹಿತ್ಯ ಪರಿಷತ್ತು |
| ಕ್ಯು.ಜೆ.ಎಂ.ಎಸ್. | : | ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ |
| ಶ್ರ.ಬೆ. | : | ಶ್ರವಣ ಬೆಳಗೊಳ |
| ಸ.ಕ.ಸಾ.ಚ. | : | ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ |

ಅಧ್ಯಾಯ ೧

# ಅಧ್ಯಯನ ಉದ್ದೇಶ ವ್ಯಾಪ್ತಿ

೧

# ಅಧ್ಯಯನ ಉದ್ದೇಶ ಮತ್ತು ವ್ಯಾಪ್ತಿ

## ೧.೧. ಪ್ರಸ್ತಾವನೆ

ಮಾನವ ಸಂಘಜೀವಿ, ಅವನು ಏಕಾಂಗಿಯಾಗಿ ಬದುಕಲಾರ. ಆದ್ದರಿಂದ ಇತರರೊಂದಿಗಿನ ಒಡನಾಟಕ್ಕಾಗಿ ಹಾಗೂ ತನ್ನ ಅಸಂಖ್ಯಾತ ಚಟುವಟಿಕೆಗಳಿಗಾಗಿ ಒಂದು ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದಾನೆ. ಹೀಗೆ ರೂಪಿತವಾದ ಅಭೌತಿಕ ಸ್ವರೂಪದ ವ್ಯವಸ್ಥೆಯೇ ಸಮಾಜ. ಇಂತಹ ಸಮಾಜವನ್ನು ತನ್ನ ಬೌದ್ಧಿಕ ಶಕ್ತಿಯಿಂದ, ಸಂಘಟನಾ ಚತುರತೆಯಿಂದ ಮತ್ತು ಸತತ ಪ್ರಯತ್ನಶೀಲತೆಯಿಂದ ರೂಪಿಸಿಕೊಂಡ ಮಾನವನ ದೀರ್ಘ ಕಾಲದ ಪ್ರಯತ್ನದ ಕಥೆಯೇ ಚರಿತ್ರೆ. ಆ ಪ್ರಯತ್ನದಲ್ಲಿ ಅವನು ಸೃಷ್ಟಿಸಿಕೊಂಡಿದ್ದೆಲ್ಲವೂ ಸಂಸ್ಕೃತಿ, ಸಮಾಜದ ಸದಸ್ಯನಾಗಿ ಅವನು ಕಲಿತಿದ್ದೆಲ್ಲ, ಸಾಧಿಸಿದ್ದೆಲ್ಲಾ ಸಾಮಾಜಿಕವಾದದ್ದು. ಕಾಲದಿಂದ ಕಾಲಕ್ಕೆ ನಾನಾ ಬದಲಾವಣೆಗೆ ಮೈಯೊಡ್ಡಿ ಅನೇಕ ಐತಿಹಾಸಿಕ ತಿರುವುಗಳನ್ನು ಪಡೆಯುತ್ತಾ ಸಾಗಿರುವ ಮಾನವ ಸಮಾಜವು ವೈವಿಧ್ಯಮಯವೂ ವಿಭಿನ್ನವೂ ಆಗಿದ್ದು, ವಿಶಿಷ್ಟ ಸಾಂಸ್ಕೃತಿಕ ಆಯಾಮವನ್ನು ಒಳಗೊಂಡಿರುತ್ತದೆ. ಹಾಗಾಗಿ ಮಾನವ ಸಮಾಜದ ಅಧ್ಯಯನವು ಕುತೂಹಲಕಾರಿಯಾದುದು.

೮-೯ನೇ ಶತಮಾನದ ನಂತರದಲ್ಲಿ ಪ್ರಾರಂಭವಾಗಿ ಮಧ್ಯಕಾಲೀನ ಅವಧಿಯಲ್ಲಿ ವಿಶಿಷ್ಟ ಬದಲಾವಣೆಗೆ ಕರ್ನಾಟಕ ತೆರೆದುಕೊಂಡಿತು. ಪ್ರಮುಖವಾಗಿ ಆರ್ಥಿಕ, ರಾಜಕೀಯ, ಧಾರ್ಮಿಕ ಕ್ಷೇತ್ರದಲ್ಲಾದ ಬದಲಾವಣೆಗಳು ಕೃಷಿವಿಸ್ತರಣೆ ನಂತರದಲ್ಲಾದ ಉತ್ಪಾದನಾಹೆಚ್ಚಳ ವ್ಯಾಪಾರ ವಾಣಿಜ್ಯಕ್ಕೆ ಒದಗಿದ ಪ್ರೋತ್ಸಾಹ, ಧಾರ್ಮಿಕ ಕ್ರಾಂತಿ ಇವೆಲ್ಲವುಗಳು ಒಂದಕ್ಕೊಂದು ಪೂರಕವಾಗಿ ಒಂದು ಸಾಮಾಜಿಕ ಪಲ್ಲಟ ಕಾಣಿಸಿಕೊಂಡಿತು. ಈ ಬದಲಾವಣೆಗೆ ಸಮಾಜವನ್ನು ಒಗ್ಗಿಸಲು ಹೊಸ ರೀತಿಯ ಕಾನೂನು ಕಟ್ಟಲೆಗಳು ಮೌಲ್ಯಗಳನ್ನು ಹೇಳುವ ಶಾಸನಗಳು, ಸಾಹಿತ್ಯ ಕೃತಿಗಳು, ಶಾಸ್ತ್ರ ಗ್ರಂಥಗಳು, ವಿವಿಧ ಜ್ಞಾನ ಶಾಖೆಗಳಿಗೆ ಸಂಬಂಧಿಸಿದ ಗ್ರಂಥಗಳು, ವಾಣಿಜ್ಯ, ಧಾರ್ಮಿಕ ಕ್ಷೇತ್ರಕ್ಕೆ ಸಂಬಂಧಿಸಿದ ವಿಧಿ ನಿಷೇಧಗಳು, ಸಂಘ ಸಂಸ್ಥೆಗಳು ಹುಟ್ಟಿಕೊಂಡವು. ಸಾಹಸಿಗರಾದವರಿಗೆ, ಉತ್ಸಾಹಿಗಳಿಗೆ ಹೊಸ ಅವಕಾಶಗಳನ್ನು ತೆರೆದವು. ಈ ತೀವ್ರ ಸಂಚಲನವು ಉಂಟಾದ ಸಾವಿರ ವರ್ಷಗಳ ಈಚೆಗೆ ನಿಂತಿರುವ ನಮ್ಮ ಸದ್ಯದ ಸಮಾಜವೂ ಈಗ ಇಂತಹುದೇ ತೀವ್ರವಾದ ಮತ್ತೊಂದು ಸಂಚಲನಕ್ಕೆ ಸಿಕ್ಕಿದೆ. ಹೊಸ ಅವಕಾಶದ ಬಾಗಿಲು ತೆರೆಯುತ್ತಿರುವಷ್ಟೇ ಸತ್ಯವಾಗಿ ಹೊಸ ಸವಾಲುಗಳು ವಿಭಿನ್ನ ಸಮಸ್ಯೆಗಳೂ

ಎದುರಾಗುತ್ತಿವೆ. ಸುಭದ್ರವಾದ ತಳಹದಿಯ ಮೇಲೆ ನಮ್ಮ ಸಮಾಜವನ್ನು ಪುನರ್‌ರಚಿಸಿಕೊಳ್ಳುವ ಅಗತ್ಯ ಕಂಡುಬರುತ್ತಿರುವ ಈ ಸಂದರ್ಭದಲ್ಲಿ ನಮ್ಮ ಪೂರ್ವಿಕರ ಸಮಾಜದ ಸ್ವರೂಪದ ತಾತ್ವಿಕ ನೆಲೆಯನ್ನು, ಅದರ ಪ್ರಸ್ತುತತೆಯನ್ನೂ ಕಾಲಕಾಲಕ್ಕೆ ಒದಗಿಬಂದ ಪಲ್ಲಟಗಳನ್ನು ಅದು ಜೀರ್ಣಿಸಿಕೊಂಡ ಬಗೆಯನ್ನೂ ಇಂಥ ಪಲ್ಲಟ, ಒತ್ತಡಗಳ ಮಧ್ಯದಲ್ಲೂ ಒಳಸುಳಿಯಾಗಿ ಉಳಿದುಬಂದಿರುವ ಬದುಕಿನ ಪರವಾದ ಎಳೆಗಳನ್ನು ಶೋಧಿಸಿಕೊಂಡು ಇಂದಿನ ಸವಾಲುಗಳನ್ನು ಎದುರಿಸಲು ಸಜ್ಜಾಗಬೇಕಾಗಿದೆ.

ಸಮಾಜದ ಪ್ರತಿಷ್ಠಿತ ಸಮುದಾಯದ ಶಕ್ತಿ ಕೇಂದ್ರದ ಸುತ್ತಲೇ ನಮ್ಮ ಅಧ್ಯಯನವು ಸುತ್ತುತ್ತ ಅದನ್ನೇ ವೈಭವೀಕರಿಸಿಕೊಳ್ಳುತ್ತ ಹುಸಿ ಹೆಮ್ಮೆ ಪಡುವುದರಲ್ಲಿ ಅರ್ಥವಿಲ್ಲ. ಇಡೀ ಜಗತ್ತು ಅಲಕ್ಷಿತ ಅಂಚುಗಳ ಕಡೆಗೆ ದೇಸೀ ಬೇರುಗಳ ಕಡೆಗೆ ಸ್ಥಳೀಯ ಸಂಸ್ಕೃತಿಗಳ, ಜನಇತಿಹಾಸದ ಕಡೆಗೆ ಮುಖಮಾಡಿದೆ. ಒಂದು ದೊಡ್ಡ ಸಾಮ್ರಾಜ್ಯದ ನಿರ್ಮಾಣದಲ್ಲಿ ಪುಟ್ಟ ಪುಟ್ಟ ಹಳ್ಳಿ, ಊರು, ಸಂಸ್ಥಾನ, ನಾಡು, ಅವುಗಳ ಒಡೆಯರು, ಸಾಮಾನ್ಯರು ಹೇಗೆ ತಮ್ಮ ಪಾಲಿನ ಕರ್ತವ್ಯ ನಿಭಾಯಿಸಿದ್ದಾರೆ ಆ ಮೂಲಕ ಸುಭದ್ರ ಸಾಮ್ರಾಜ್ಯಗಳನ್ನು ಸ್ವಸ್ತ ಸಮಾಜವನ್ನು ಕಟ್ಟುವ ಪ್ರಯತ್ನ ಮಾಡಿದ್ದಾರೆ ಎಂಬುದನ್ನು ನಾವೀಗ ಗಮನಿಸಬೇಕಾಗಿದೆ. ಸ್ಥಳೀಯವಾದ ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಸಾಮಾಜಿಕ ವಿವರಗಳ ಸಣ್ಣ ಸಣ್ಣ ಎಳೆಗಳನ್ನು ಹಿಡಿದು ಆ ಕಾಲದ ಬದುಕಿನ ಸಮಗ್ರ ಚಿತ್ರಣ ಮಾಡಿಕೊಳ್ಳಬೇಕಾಗಿದೆ. ಹಾಗಾಗಿ ಯಾವುದೇ ರಾಜ್ಯದ ಮೂಲೆಯ ಸಣ್ಣ ಸಣ್ಣ ಪ್ರದೇಶಗಳ ಅಧ್ಯಯನವೂ ಮುಖ್ಯವಾಗುತ್ತದೆ.

ಒಂದು ಕಾಲಕ್ಕೆ ಪ್ರಾಮುಖ್ಯತೆಯನ್ನು ಪಡೆದು ಪಟ್ಟಣಗಳಾಗಿಯೋ ರಾಜಧಾನಿಗಳಾಗಿಯೋ ಸಾಂಸ್ಕೃತಿಕ ಕೇಂದ್ರಗಳಾಗಿಯೋ ಮೆರೆದ ಪ್ರದೇಶಗಳು ಮತ್ತೊಂದು ಕಾಲಕ್ಕೆ ಸಂಪೂರ್ಣ ನೆಲಕಚ್ಚಿ ವಿಘಟನೆಗೊಂಡು ಬೂದಿಗುಡ್ಡೆಗಳಾಗಿಯೋ ಹಾಳೂರುಗಳಾಗಿಯೋ ಉಳಿದು, ಗತಕಾಲದ ಸತ್ಯಗಳನ್ನು ತಮ್ಮ ಗರ್ಭದಲ್ಲಿ ಅಡಗಿಸಿಕೊಂಡಿರುತ್ತವೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನಕ್ಕೆ ಆರಿಸಿಕೊಂಡಿರುವ ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನ ಪರಿಸರವು ಇಂತಹ ಏಳು ಬೀಳುಗಳನ್ನು ಕಂಡ ಪ್ರದೇಶವಾಗಿದೆ. ಅರಸೀಕೆರೆಯು ಹೊಯ್ಸಳರ ಪ್ರಮುಖ ಭಂಡಾರವಾಡವೂ ಪ್ರಾಂತೀಯ ರಾಜಧಾನಿಯೂ ಆಗಿದ್ದು, ಮಧ್ಯಕಾಲೀನ ಕರ್ನಾಟಕದ ರಾಜಕೀಯ, ಸಾಂಸ್ಕೃತಿಕ, ವಾಣಿಜ್ಯ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರ ವಹಿಸಿದ್ದರೂ ಸಹ ಹಾಸನ ಜಿಲ್ಲೆಯ ಇತರ ಸಾಂಸ್ಕೃತಿಕ ಕೇಂದ್ರಗಳಾದ ಶ್ರವಣಬೆಳಗೊಳ, ಬೇಲೂರು, ಹಳೇಬೀಡಿಗೆ ವಿದ್ವಾಂಸರ ವಿಶೇಷಗಮನಹರಿದಿದ್ದು ಈ ಪ್ರಾಂತ್ಯವು ಅವಗಣನೆಗೆ ಒಳಗಾಗಿದೆ. ಹಾಗಾಗಿ ಈ ಪ್ರದೇಶವನ್ನು ಕುರಿತ ಪ್ರತ್ಯೇಕ ಅಧ್ಯಯನದ ಅವಶ್ಯಕತೆಯನ್ನು ಮನಗಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಯಾವುದೇ ಒಂದು ಪ್ರದೇಶದ ಚೌಕಟ್ಟಿನಲ್ಲಿ ಅಧ್ಯಯನಕ್ಕೆ ತೊಡಗಿದಾಗ ಅಲ್ಲಿನ ಸಂಸ್ಕೃತಿ ಸ್ಥಳೀಯ ಸಮಾಜದ ವೈಶಿಷ್ಟ್ಯತೆಯನ್ನು ಗುರುತಿಸುವ ಭರದಲ್ಲಿ ಇಡಿಯಾದ ಸಾಂಸ್ಕೃತಿಕ ಸಾಮಾಜಿಕ

ರಚನೆಯಿಂದ ಕಳಚಿಕೊಳ್ಳುವ ಅಪಾಯವಿರುತ್ತದೆ. 'ಅರಸೀಕೆರೆ ತಾಲ್ಲೂಕಿನ ಶಾಸನಗಳ ಅಧ್ಯಯನ' ವೆಂಬ ಹೆಸರಿನಲ್ಲಿ ಈ ಸಂಶೋಧನೆಗೆ ತೊಡಗಿದ್ದರೂ ರಾಜಕೀಯ ಎಲ್ಲೆಗಳನ್ನು ಮೀರಿ ಹರಡಿಕೊಳ್ಳುವ ಸಾಂಸ್ಕೃತಿಕ ಸಂಗತಿಗಳನ್ನು ಇಂದಿನ ಕಂದಾಯ ಗ್ರಾಮ, ತಾಲ್ಲೂಕು, ಜಿಲ್ಲೆಗಳ ಪರಿಕಲ್ಪನೆಯ ಒಳಗೆ ಹುದುಗಿಸಿ ನೋಡುವುದು ಸರಿಯಾಗಲಾರದು ಎಂಬ ಅರಿವಿರುವುದರಿಂದ ಸಾಂಸ್ಕೃತಿಕವಾಗಿ ಈ ಪ್ರದೇಶ ವನ್ನು ಬೇರೆ ರೀತಿ ಕಟ್ಟಿಕೊಳ್ಳಬೇಕಾಗುತ್ತದೆ. ಈ ನಿಟ್ಟಿನಲ್ಲಿ ಹೊಯ್ಸಳ ಸೀಮೆಯ ಅರಸೀಕೆರೆಯ ಸಾಂಸ್ಕೃತಿಕ ಪರಿಸರವನ್ನು ಮೂರು ಆಡಳಿತ ವಿಭಾಗಗಳಾದ ಪ್ರಾಚೀನ ನೀರ್ಗುಂದನಾಡು, ಮಗರೆನಾಡು, ಆಸಂದಿನಾಡುಗಳಲ್ಲಿ ಗುರುತಿಸಿಕೊಳ್ಳಲಾಗಿದೆ.

## ೧.೨. ಅಧ್ಯಯನದ ಉದ್ದೇಶ

೧೧ನೇ ಶತಮಾನದ ಹೊತ್ತಿಗೆ ದಕ್ಷಿಣ ಭಾರತದ ಒಂದು ಅತ್ಯಂತ ಪ್ರಬಲ ರಾಜಮನೆತನವಾದ ಹೊಯ್ಸಳರ ಉದಯದೊಂದಿಗೆ ಅಲ್ಲಿಯವರೆಗೂ ಸಾಂಸ್ಕೃತಿಕವಾಗಿ ಮುಂಚೂಣಿಯಲ್ಲಿಲ್ಲದ ಹಾಸನ ಜಿಲ್ಲೆಯ ಪ್ರದೇಶಗಳು ಅಭಿವೃದ್ಧಿಗೊಂಡು ಹೊಯ್ಸಳ ನಾಡಿನ ಪ್ರಮುಖ ಕೇಂದ್ರಗಳಾಗಿ ಪ್ರಾಮುಖ್ಯತೆಯನ್ನು ಗಳಿಸಿಕೊಂಡವು. ಹೊಯ್ಸಳರು ದಕ್ಷಿಣ ಭಾರತದಾದ್ಯಂತ ತಮ್ಮ ಬಾಹುಗಳನ್ನು ಚಾಚುವ ಮೊದಲು ಚಿಕ್ಕಮಗಳೂರು ಹಾಸನ ಜಿಲ್ಲೆಯ ಪ್ರದೇಶಗಳಲ್ಲಿ ಸಮೃದ್ಧ ಕಾಡುಗುಡ್ಡ ಫಲವತ್ತಾದ ಕನ್ನೆನೆಲವನ್ನು ತಮ್ಮದಾಗಿಸಿಕೊಂಡು ವಿಸ್ತಾರವಾದ ತಮ್ಮ ಸಾಮ್ರಾಜ್ಯಕ್ಕೆ ಭದ್ರ ಬುನಾದಿಯನ್ನು ಹಾಕಿದರು. ಗಂಗರು ಮತ್ತು ನೊಳಂಬರ ಮೇಲಾಟದಲ್ಲಿ ಸದಾ ಸಿಕ್ಕಿಕೊಳ್ಳುತ್ತಿದ್ದ ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನ ಪ್ರದೇಶವು ಹೊಯ್ಸಳರ ಉದಯದೊಂದಿಗೆ ಅವರ ಪ್ರಮುಖ ಆಡಳಿತ ಕೇಂದ್ರಗಳಲ್ಲಿ ಒಂದಾಗಿ ಕಂಡ ತೀವ್ರ ರಾಜಕೀಯ, ಆರ್ಥಿಕ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಬದಲಾವಣೆಗಳು ಮತ್ತು ಅನಂತರದ ಕಾಲದಲ್ಲಿ ಟಿಪ್ಪುವಿನವರೆಗೆ ಕಂಡ ಏಳುಬೀಳುಗಳನ್ನು ಗುರುತಿಸಿಕೊಳ್ಳುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಈ ಪರಿಸರದ ಅಂದಿನ ಸಮಾಜ, ಅದರ ನಿಯಂತ್ರಣ ಶಕ್ತಿಗಳು, ಸಾಮಾಜಿಕ ಬದಲಾವಣೆಗೆ ಪೂರಕವಾದ ರಾಜಕೀಯ, ಧಾರ್ಮಿಕ ಪ್ರಭುತ್ವಗಳು, ಆರ್ಥಿಕ ಪ್ರಗತಿಗೆ ಸಂಪತ್ತಿನ ಕ್ರೋಢೀಕರಣಕ್ಕೆ ಕಾರಣವಾದ ಕೃಷಿ ವಿಸ್ತರಣೆ, ಉತ್ಪಾದನೆಯ ಹೆಚ್ಚಳ, ಮಾರುಕಟ್ಟೆಯ ಬೆಳವಣಿಗೆ ಗ್ರಾಮ ಸಮುದಾಯದಲ್ಲುಂಟಾದ ಸಂಚಲನ, ಅಗ್ರಹಾರ ಪಟ್ಟಣಗಳ ನಿರ್ಮಾಣ ನಗರೀಕರಣದ ಲಕ್ಷಣಗಳು, ಸಂಪತ್ತಿನ ಅಭಿವೃದ್ಧಿಗೆ ಅಪಾರ ಅವಕಾಶಗಳಿದ್ದ ಈ ಪ್ರದೇಶಕ್ಕೆ ಆದ ವಲಸೆಗಳು, ಅವುಗಳಿಂದ ಸ್ಥಳೀಯ ಸಮಾಜ ಸಂಸ್ಕೃತಿಯ ಮೇಲಾದ ಪ್ರಭಾವ ಪರಿಣಾಮಗಳನ್ನು, ಇಲ್ಲಿನ ಶಿಕ್ಷಣ, ಕಲೆ, ಸಾಹಿತ್ಯ ಸಂಸ್ಕೃತಿಗಳನ್ನು ಕ್ರಿ.ಶ.೮ ರಿಂದ ೧೮ನೇ ಶತಮಾನದವರೆಗೆ ಹರಡಿರುವ ಈ ಪರಿಸರದ ಶಾಸನಗಳನ್ನು

ಪ್ರಮುಖವಾಗಿ ಆಧರಿಸಿ ಅಧ್ಯಯನ ಮಾಡಲಾಗಿದೆ. ಅಂದರೆ ಒಂದು ಕಿರು ಭೌಗೋಳಿಕ ಆವರಣದ ಸಾಮಾಜಿಕ ಸಂರಚನೆಯ ಹತ್ತಿರದ ಅವಲೋಕನದಿಂದ ಆ ಇಡೀ ಸಾಂಸ್ಕೃತಿಕ ಪರಿಸರದ ಒಳಸೆಳವುಗಳನ್ನು, ಅದರ ಸ್ಥಿತಿ ಸಂಚಲನಗಳನ್ನು ಅರಿಯುವ ಪ್ರಯತ್ನವೇ ಈ ಅಧ್ಯಯನದ ಉದ್ದೇಶ.

## ೧.೩. ಆಕರಗಳು

ವಿವಿಧ ಕಾಲಮಾನದಲ್ಲಿ ಸೃಷ್ಟಿಗೊಂಡ ಸಾಹಿತ್ಯ, ಶಾಸ್ತ್ರ, ನೀತಿಸಂಹಿತೆಗಳು, ದಾಖಲೆಗಳು ಆಯಾ ಕಾಲದ ಸಮಾಜದ ಒಡಲೊಳಗಿಂದಲೇ ಉದ್ಭವಿಸಿರುತ್ತವೆಯಾದ್ದರಿಂದ ಅವುಗಳೊಳಗಿನ ಆಶಯಗಳು ಮತ್ತು ಅವು ಪಡೆದುಕೊಳ್ಳುವ ಆಕೃತಿಗಳಿಗೆ ಆ ಸಮಾಜದಲ್ಲುಂಟಾಗಿರುವ ಸಂಚಲನವೇ ಕಾರಣ ಎಂಬುದು ಸತ್ಯ. ಶಿಷ್ಟ ಸಾಹಿತಿಗಳಿರಲಿ ಜನಪದರಿರಲಿ ಆಡಳಿತಾಂಗದ ದಾಖಲೆಗಳಿರಲಿ, ಪುರಾಣಿಕರು, ಶಾಸ್ತ್ರಕಾರರು, ನೀತಿ ಸಂಹಿತೆಕಾರರು ಯಾರೇ ಇರಲಿ, ಅವರು ತಮ್ಮ ಕಾಲದ ಸಮಾಜದ ಸ್ಥಿತಿ ಮತ್ತು ಸಂಚಲನವನ್ನು ಹೇಗೆ ಗ್ರಹಿಸಿದರು, ದಾಖಲಿಸಿದರು ಎಂಬುದು ಮುಖ್ಯವಾಗುತ್ತದೆ. ಅವರವರ ದೃಷ್ಟಿಕೋನ, ಅವಶ್ಯಕತೆಗಳಿಗೆ ತಕ್ಕಂತೆ ಆ ಗ್ರಹಿಕೆಯೂ ವೈವಿಧ್ಯಮಯವಾಗಿರುತ್ತದೆಯಾದರೂ ಆಳದಲ್ಲಿ ಅವೆಲ್ಲವೂ ಸತ್ಯದ ಹಲವು ಮುಖಗಳನ್ನು ನಿರ್ದೇಶಿಸುತ್ತಿರುತ್ತವೆ. ಹೀಗೆ ಸೃಷ್ಟಿಯಾದ ಸಾಹಿತ್ಯ, ಶಾಸನ, ಕೈಫಿಯತ್ತುಗಳು, ಐತಿಹ್ಯಗಳು, ಸ್ಥಳಪುರಾಣಗಳು, ಸ್ಮಾರಕಗಳು, ಜಾನಪದ ಆರಾಧನೆ, ಆಚರಣೆಗಳು ಸ್ಥಳೀಯ ಹಾಗೂ ವಿದೇಶೀ ಬರಹಗಳು ಇವೆಲ್ಲಾ ಆಕರಗಳೂ ಸಂಶೋಧಕನಿಗೆ ಮುಖ್ಯವಾಗುತ್ತವೆ. ಇಂತಹ ಆಕರಗಳನ್ನು ಸಂಗ್ರಹಿಸಿ ಸಂರಕ್ಷಿಸುವಲ್ಲಿ ವಿದೇಶಿ ಹಾಗೂ ದೇಸೀ ವಿದ್ವಾಂಸರ ಕೊಡುಗೆ ಅಪಾರವಾಗಿದೆ.

ಅರಸೀಕೆರೆ ತಾಲ್ಲೂಕಿನ ಪ್ರಾಕ್ ಚರಿತ್ರೆಯನ್ನು ಅರಿಯಲು ಈ ಪರಿಸರದ ಪ್ರಾಚೀನ ಮಾನವನ ನೆಲೆಗಳನ್ನು ಕುರಿತು ಹನುಮನಾಯಕರ 'ಚೆಲುವನಹಳ್ಳಿಯ ಗವಿಮಠ ಒಂದು ಪ್ರಾಗೈತಿಹಾಸಿಕ ನೆಲೆ' ಹಾಗೂ ಆರ್.ವೆಂಕಟೇಶಮೂರ್ತಿಯವರ 'ಅರಸೀಕೆರೆ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು ಒಂದು ಶೋಧ' ಲೇಖನಗಳು[೧] ಸಹಾಯಕವಾಗಿವೆ. ಇಲ್ಲಿನ ಚಾರಿತ್ರಿಕ ಅವಶೇಷಗಳು, ದೇವಾಲಯ, ಸ್ಮಾರಕಗಳು, ಶಾಸನಗಳು, ಸ್ಥಳಪುರಾಣ, ಕೈಫಿಯತ್ತುಗಳು, ಐತಿಹ್ಯಗಳು ಇಲ್ಲಿನ ಸಾಂಸ್ಕೃತಿಕ ವೈಶಿಷ್ಟತೆಯನ್ನರಿಯಲು ಆಕರಗಳಾಗಿವೆ.

ಅರಸೀಕೆರೆ ತಾಲ್ಲೂಕಿಗೆ ಸಂಬಂಧಿಸಿದಂತೆ ಎಪಿಗ್ರಾಫಿಯಾ ಕರ್ನಾಟಿಕ ಪರಿಷ್ಕೃತ ಹತ್ತನೇ ಸಂಪುಟದಲ್ಲಿ ಪ್ರಕಟಗೊಂಡಿರುವ ೩೨೮ ಶಾಸನಗಳಲ್ಲದೆ ಎಸ್.ಶೆಟ್ಟರ್‌ರವರು ಪ್ರಕಟಿಸಿರುವ ಅರಸೀಕೆರೆಯ ಎರಡು ಶಾಸನಗಳು[೨] ಡಾ.ಹನುಮನಾಯಕರು ಪ್ರಕಟಿಸಿರುವ ನಾಲ್ಕು ಅಪ್ರಕಟಿತ ಶಾಸನಗಳು[೩] ಹಾಗೂ ನನ್ನ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಭಾಗೇಶ್‌ಪುರ, ನೀರುಗ್ಗುಂದ, ಬಾಣಾವರ, ಉಬ್ಬೇನಹಳ್ಳಿ, ಉಂಡಿಗನಾಳು,

ಜಾವಗಲ್ಲು, ಮುರುಂಡಿಗಳಲ್ಲಿ ಪತ್ತೆಯಾಗಿರುವ ಹತ್ತು ಶಾಸನಗಳನ್ನು ಈ ಅಧ್ಯಯನದ ಪ್ರಮುಖ ಪ್ರಥಮ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಜೊತೆಗೆ ಅರಸೀಕೆರೆ ತಾಲ್ಲೂಕಿನ ಸುತ್ತಮುತ್ತಿನ ಚನ್ನರಾಯಪಟ್ಟಣ, ಹಾಸನ, ಬೇಲೂರು, ಕಡೂರು, ತುರವೇಕೆರೆ, ತಿಪಟೂರು, ಚಿಕ್ಕನಾಯಕನಹಳ್ಳಿ ತಾಲ್ಲೂಕುಗಳಲ್ಲಿ ಪ್ರಾಚೀನ ಆಡಳಿತ ವಿಭಾಗಗಳಾದ ನೀರ್ಗುಂದ, ಆಸಂದಿ, ಮಗರೆನಾಡಿನ ವ್ಯಾಪ್ತಿಗೆ ಬರುವ ಗ್ರಾಮಗಳ ಕೆಲವು ಶಾಸನಗಳನ್ನು ಬಳಸಿಕೊಳ್ಳಲಾಗಿದೆ. ವಿಷಯ ವಿವರ ಮತ್ತು ವಿಶ್ಲೇಷಣೆಯ ಅವಶ್ಯಕತೆಗೆ ತಕ್ಕಂತೆ ಕರ್ನಾಟಕದ ಬಳ್ಳಾರಿ[೪], ನಾಗಮಂಗಲ, ಶಿಕಾರಿಪುರ[೫] ಮುಂತಾದ ಕೆಲವು ಪ್ರದೇಶಗಳ ಶಾಸನಗಳನ್ನು ಬಳಸಿಕೊಳ್ಳಲಾಗಿದೆ. ಇದಕ್ಕೆ ಪೂರಕವಾಗಿ ಅಧ್ಯಯನ ಪ್ರದೇಶದ ಸ್ಮಾರಕಗಳು, ಶಾಸನ ಶಿಲ್ಪಗಳ ನೆರವನ್ನು ಪಡೆಯಲಾಗಿದೆ.

ಈ ಪ್ರದೇಶದ ವಿಜಯನಗರೋತ್ತರ ಇತಿಹಾಸವನ್ನರಿಯಲು ಹಾರನಹಳ್ಳಿ ಕೈಫಿಯತ್ತು, ಬಾಗಡೆ ಕೈಫಿಯತ್ತು, ಯಗಟಿ ಕೈಫಿಯತ್ತು[೬] ತರೀಕೆರೆ ಪಾಳೆಗಾರರ ಕೈಫಿಯತ್ತು[೭]ಗಳನ್ನು ಆಕರವಾಗಿ ಬಳಸಿ ಕೊಳ್ಳಲಾಗಿದೆ.

ಪ್ರಥಮ ಆಕರಗಳಾದ ಶಾಸನಗಳೊಂದಿಗೆ ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ತಳಮಳಗಳನ್ನು ಯಶಸ್ವಿಯಾಗಿ ಹಿಡಿದಿಟ್ಟಿರುವ ವಚನಸಾಹಿತ್ಯ, ನಯಸೇನನ ಧರ್ಮಾಮೃತ, ಬ್ರಹ್ಮಶಿವನ ಸಮಯಪರೀಕ್ಷೆ ಜನ್ನನ ಅನಂತನಾಥ ಪುರಾಣ, ಯಶೋಧರ ಚರಿತೆ, ರುದ್ರಭಟ್ಟನ ಜಗನ್ನಾಥ ವಿಜಯ ಸಿರುಮನೃಪಾಲ ಚರಿತೆ[೮], ಸರ್ಜಪ್ಪನಾಯಕನ ಕಥನ ಕಾವ್ಯ,[೯] ಗೋವಿಂದವೈದ್ಯನ ಕಂಠೀರವನರಸರಾಜ ವಿಜಯ ಮುಂತಾದ ಕೃತಿಗಳನ್ನು ಬಳಸಿಕೊಳ್ಳಲಾಗಿದೆ.

ದಕ್ಷಿಣ ಕರ್ನಾಟಕದ ರಾಜಕೀಯ ಇತಿಹಾಸವನ್ನು ಅರಿಯಲು ನಂಜುಂಡಸ್ವಾಮಿಯವರ 'ಕದಂಬ ಮತ್ತು ಗಂಗರ ಇತಿಹಾಸ" ಎಂ.ವಿ.ಕೃಷ್ಣರಾವ್‌ರ 'ದಿ ಗಂಗಾಸ್ ಆಫ್ ತಲಕಾಡ್", ಎಂ.ಎಸ್. ಕೃಷ್ಣಮೂರ್ತಿ ಅವರ 'ದಿ ನೊಳಂಬಾಸ್", ಜೆ.ಡಿ.ಡೆರೆಟ್‌ರ 'ದಿ ಹೊಯ್ಸಳಾಸ್ ಎ ಮಿಡೀವಲ್ ಇಂಡಿಯನ್ ರಾಯಲ್ ಫ್ಯಾಮಿಲಿ", ಎ.ವಿ.ವೆಂಕಟರತ್ನಂ ಅವರ "ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ", ಪಿ.ಅಬ್ದುಲ್ ಸತ್ತಾರ್ ಅವರ 'ತರೀಕೆರೆ ಪಾಳೆಗಾರರು", ಡಾ.ವಸು ಸಂಪಾದಿತ ದಕ್ಷಿಣ ಕರ್ನಾಟಕದ ಅರಸು ಮನೆತನಗಳು" ಮುಂತಾದ ಗ್ರಂಥಗಳನ್ನು ಬಳಸಿಕೊಳ್ಳಲಾಗಿದೆ.

ಮಧ್ಯಕಾಲೀನ ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಚರಿತ್ರೆಯನ್ನು, ಸಾಮಾಜಿಕ ಸಂರಚನೆಯ ಒಳ ಸೆಳವುಗಳನ್ನು ಅರ್ಥೈಸಿಕೊಳ್ಳಲು ಡಾ.ಎಂ.ಚಿದಾನಂದಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ", ಎಂ.ಎಂ.ಕಲಬುರ್ಗಿಯವರ 'ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು", ಎಸ್.ಶೆಟ್ಟರ್ ಅವರ 'ಇನ್‌ವೈಟಿಂಗ್ ಡೆತ್, ಪರ್‌ಸೂಯಿಂಗ್ ಡೆತ್", ಆರ್.ಶೇಷಶಾಸ್ತ್ರಿಯವರ

'ಕರ್ನಾಟಕದ ವೀರಗಲ್ಲುಗಳು'', ಬಸವರಾಜ ಕಲ್ಗುಡಿಯವರ 'ಮಹಾಸತಿ ಆಚರಣೆ ಒಂದು ಅಧ್ಯಯನ'', ಶಾಸನಮೌಲ್ಯ ವ್ಯವಸ್ಥೆ ಮತ್ತು ಸಂಸ್ಕೃತಿಯ ಸ್ಥಿತ್ಯಂತರ''[೧೦] ಚೆನ್ನಕ್ಕ ಎಲಿಗಾರರ 'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ'', ಲೀಲಾ ಶಾಂತಕುಮಾರಿಯವರ 'ಹಿಸ್ಟರಿ ಆಫ್ ಅಗ್ರಹಾರಾಸ್ ಇನ್ ಕರ್ನಾಟಕ'', ಬಿ.ಆರ್.ಹಿರೇಮಠ ಅವರ 'ಶಾಸನಗಳಲ್ಲಿ ಕರ್ನಾಟಕದ ವರ್ತಕರು'', ಡಾ.ಡಿ.ವಿ.ಪರಮಶಿವಮೂರ್ತಿಯವರ 'ಕನ್ನಡ ಶಾಸನಶಿಲ್ಪ'', ಬಾ.ರಾ.ಗೋಪಾಲ್‌ರ 'ಕರ್ನಾಟಕದಲ್ಲಿ ಶ್ರೀರಾಮಾನುಜಾಚಾರ್ಯರು'', ಹಂಪನಾಗರಾಜಯ್ಯನವರ 'ಯಾಪನೀಯಸಂಘ'', ಕೆ.ವಸಂತಲಕ್ಷ್ಮಿಯವರ 'ಹಾಸನ ಜಿಲ್ಲೆಯ ಹೊಯ್ಸಳ ಬಸದಿಗಳು'', ಕಪಟರಾಳ ಕೃಷ್ಣರಾಯರ 'ಕರ್ನಾಟಕ ಲಾಕುಳ ಶೈವರ ಇತಿಹಾಸ'', ಆರ್.ಎನ್.ನಂದಿಯವರ 'ರಿಲಿಜಿಯಸ್ ಇನ್ಸ್‌ಟಿಟೂಷನ್ ಅಂಡ್ ಕಲ್ಟ್ಸ್ ಇನ್ ಡೆಕನ್'', ಪ್ರೊ.ಕೆ.ಎಸ್.ಶರ್ಮರ 'ಮಾರ್ಕ್ಸ್-ಮಾರ್ಕ್ಸ್‌ವಾದ'', ಎಸ್.ಎ.ಡಾಂಗೆಯವರ 'ಇಂಡಿಯನ್ ಫ್ರಮ್ ಪ್ರಿಮಿಟೀವ್ ಕಮ್ಯುನಿಸಮ್ ಟು ಸ್ಲೇವರಿ'', ದೇಬಿಪ್ರಸಾದ್ ಚಟ್ಟೋಪಾಧ್ಯಾಯರ 'ಭಾರತೀಯ ದರ್ಶನಗಳು, ಮಾತೆಯರು ಮಾನ್ಯರಾಗಿದ್ದಾಗ'', ಎಸ್.ಜಿ.ಸರ್ ದೇಸಾಯಿಯವರ 'ಪ್ರಾಚೀನ ಭಾರತದಲ್ಲಿ ದಾರ್ಶನಿಕ ಸಂಘರ್ಷ ಮತ್ತು ಅದರ ಮಹತ್ವ'', ವಿಜಯಕುಮಾರ್ ಠಾಕೂರ್‌ರ 'ಅರ್ಬನೈಜೇಷನ್ ಇನ್ ಏನ್ಷಿಯಂಟ್ ಇಂಡಿಯಾ'', ಮೋಹನ್ ಕೃಷ್ಣರೈಯವರ 'ಪ್ರಭುತ್ವ ಮತ್ತು ಜನತೆ'', ರಹಮತ್ ತರೀಕೆರೆಯವರ 'ಕರ್ನಾಟಕದ ನಾಥಪಂಥ'' ಮುಂತಾದ ಸಂಶೋಧನಾ ಗ್ರಂಥಗಳನ್ನು ದ್ವಿತೀಯ ಆಕರಗಳಾಗಿ ಬಳಸಿಕೊಳ್ಳಲಾಗಿದೆ.

ತೀವ್ರ ಬದಲಾವಣೆಗೆ ಒಡ್ಡಿಕೊಂಡಿದ್ದ ಮಧ್ಯಕಾಲೀನ ಕರ್ನಾಟಕದ ಸಮಾಜದ ತಳಮಳಗಳನ್ನು ಕನ್ನಡ ಕವಿಗಳು ಗ್ರಹಿಸಿದ ಬಗೆಗೂ ಶಾಸನ ಕವಿಗಳು ಬಿಂಬಿಸಿದ ಬಗೆಗೂ, ಮೌಖಿಕ ಪರಂಪರೆಯಲ್ಲಿ ಜನಪದರು ಗ್ರಹಿಸಿಕೊಂಡಿರುವ ಬಗೆಗೂ ವಿಭಿನ್ನತೆಯಿದೆ. ಒಂದು ಸಾಂಸ್ಕೃತಿಕ ಪರಿಸರದ ಚರಿತ್ರೆಯನ್ನು ಕಟ್ಟುವಾಗ ಲಿಖಿತ ಆಕರಗಳು ಭೌತಿಕ ಸ್ಮಾರಕಗಳೊಂದಿಗೆ ಸ್ಥಳೀಯ ಜನ ಸಮುದಾಯದ ಸ್ಪಂದನವನ್ನು ಅರಿಯಲು ಅಲ್ಲಿನ ಮೌಖಿಕ ಆಕರಗಳು ಮುಖ್ಯವಾಗುತ್ತವೆ. ರಾಜಮಹಾರಾಜರ ಅಧಿಕಾರಿಗಳ ಸಿರಿವಂತರ ಶಾಸನಗಳಲ್ಲಿ ಬಿರುದಾವಳಿಗಳನ್ನು ದಾಟಿಕೊಂಡು ದಾನಭಾಗಕ್ಕೆ ಬಂದರೆ, ಸಾಮಾನ್ಯರು ಹಾಕಿಸಿದ ಶಾಸನಗಳ ಕಡೆಗೆ ಸೂಕ್ಷ್ಮದೃಷ್ಟಿ ಹರಿಸಿದರೆ, ಅವು ಆನುಷಂಗಿಕವಾಗಿ ನೀಡಿರುವ ಅಂದಿನ ಜನ ಸಮುದಾಯದ ಸಾಂಸ್ಕೃತಿಕ ಸಾಮಾಜಿಕ ಜೀವನದ ಒಳನೋಟಗಳು ಗೋಚರಿಸುತ್ತವೆ. ಬರಹವಿಲ್ಲದ ಅನೇಕ ಸ್ಮಾರಕ ಶಿಲ್ಪಗಳು ಬರಹ ಉಳ್ಳವುಗಳಿಗಿಂತ ಹೆಚ್ಚಿನ ಆಪ್ತತೆಯನ್ನು ಜನಪದರೊಂದಿಗೆ ಹೊಂದಿವೆ. ಅವರ ಬದುಕಿನ ಆಚರಣೆಗಳ ಭಾಗವಾಗಿವೆ. ಅವುಗಳನ್ನು ಕುರಿತು ಹುಟ್ಟಿಕೊಂಡಿರುವ ಕಥೆಗಳು, ಹಾಡು, ಜಾತ್ರೆ, ಪರಿಸೆ, ಕೊಂಡ ಪರುವುಗಳು ಇಂದಿಗೂ ಆ ಕಾಲದ ಮೌಲ್ಯಗಳಿಗೆ ಜನರು ತೋರಿದ ಪ್ರತಿಕ್ರಿಯೆಯನ್ನು ಸ್ಪಷ್ಟಪಡಿಸುತ್ತವೆ.

ಪ್ರಸ್ತುತ ಅಧ್ಯಯನ ಪ್ರದೇಶದ ಸಾಂಸ್ಕೃತಿಕ ನಾಯಕರಾಗಿ, ದೇವತೆಗಳಾಗಿ ಆರಾಧನೆಗೊಳ್ಳುವ ಎತ್ತಪ್ಪ, ಜುಂಜಪ್ಪ, ವೀರಣ್ಣ ಮಾಸ್ತ್ಯಮ್ಮರು, ಸಿದ್ಧರುಗಳ ಕಥೆಗಳು, ಮಾಲೆಕಲ್ಲು ತಿರುಪತಿಯ ಸ್ಥಳಪುರಾಣ, ಗರುಡನಗಿರಿಗೆ ಬಾಣಾವರದ ಜನರ ಸ್ಥಳಾಂತರದ ಬಾಧೆಗಳ ಐತಿಹ್ಯಗಳು, ಉಂಡಿಗನಾಳಿನ ನವನೂಲು ಜಟ್ಟಪ್ಪದೇವರ ಕಥೆ, ಉಂಡಿಗನಾಳಿಗೆ ಚೆನ್ನಮ್ಮಾಜಿಯ ಆಕ್ರಮಣ, ಕೋಡಿಮಠದ ನೀಲಮ್ಮಜ್ಜಯ್ಯನ ಕಥೆ, ಬೆಂಡೆಕೆರೆಯ ಕೃಷ್ಣಭಕ್ತಶೆಟ್ಟಿಯ ಕಥೆ, ಗೀಜಿಹಳ್ಳಿಯ ವೀರಣ್ಣ ಮಾಸ್ತ್ಯಮ್ಮರ ಕೊಂಡ ಆಚರಣೆಯ ಕಥೆ, ನಿತ್ಯ ಮದವಣಿಗ ಹನುಮಪ್ಪನಾಯಕ ಹಾಗೂ ಸರ್ಜಪ್ಪನಾಯಕರ ಕಥನಗಳು ಕಲ್ಯಾಡಿಯ ಹುಲಿಖೆಡ್ಡ ಮುಂತಾದ ಅನೇಕ ಪುರಾಣ, ಕಥೆ, ಐತಿಹ್ಯಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಿಕೊಂಡು ಅವುಗಳನ್ನು ಪೂರಕ ಆಕರಗಳಾಗಿ ಬಳಸಿಕೊಳ್ಳಲಾಗಿದೆ.

ಇದುವರೆವಿಗೂ ಈ ತಾಲ್ಲೂಕಿನಲ್ಲಿ ದೊರೆತಿರುವ ಸುಮಾರು ೩೪೫ ಶಾಸನಗಳಲ್ಲಿ ೧೮೦ ದಾನಶಾಸನಗಳು, ಸುಮಾರು ೮೨ ವೀರಗಲ್ಲುಗಳು, ೩ ಮಾಸ್ತಿಕಲ್ಲುಗಳು, ಸುಮಾರು ೩೦ರಷ್ಟು ಕೊಡಗಿಯ ಶಾಸನಗಳು, ೭ ನಿಷಿಧಿ ಶಾಸನಗಳು, ಭೂಮಿ ಹಂಚಿಕೆ ಕ್ರಯಪತ್ರ, ಪರಿವರ್ತನೆ, ಅಳತೆ ನಿಬಂಧನೆಗಳಿಗೆ ಸಂಬಂಧಿಸಿದ ಸುಮಾರು ೨೫ ಶಾಸನಗಳು ಮತ್ತು ಉಳಿದವು ನಾಮಪಟ್ಟಿಕಾ ಶಾಸನಗಳಾಗಿವೆ. ಸೆಟ್ಟಿಹಳ್ಳಿಯ ಗೊರವನ ಕಲ್ಲಿನ 'ಬೀವುತ ಗೊರವ' ಎಂಬ ೭-೮ನೇ ಶತಮಾನಕ್ಕೆ ಸೇರಿದ ನಿಸಿಧಿ ಶಾಸನ[೧೧] ಈ ತಾಲ್ಲೂಕಿನಲ್ಲಿ ದೊರೆತ ಪ್ರಾಚೀನ ಶಾಸನವಾದರೆ ಕ್ರಿ.ಶ.೧೯ನೇ ಶತಮಾನಕ್ಕೆ ಸೇರಿದ ೧೮೧೭ರ ಕೃಷ್ಣರಾಜ ಒಡೆಯರ ಹಾರನಹಳ್ಳಿ ಶಾಸನ[೧೨] ತೇದಿಯುಳ್ಳ ಅರ್ವಾಚೀನ ಶಾಸನವಾಗಿದೆ. ಒಂದು ಅಡಿ ಚದುರ ವ್ಯಾಸಕ್ಕಿಂತಲೂ ಕಡಿಮೆ ಅಳತೆಯ ೯ ಇಂಚು ದಪ್ಪವಿರುವ ನಾಲ್ಕು ಮುಖದಲ್ಲಿ ಬರಹವುಳ್ಳ ಸುಲಭವಾಗಿ ಸಾಗಿಸಬಲ್ಲ ಕ್ರಯಪತ್ರ ಶಿಲಾಶಾಸನದಿಂದ[೧೩] ಹಿಡಿದು ೮ ಅಡಿ ಎತ್ತರ ೪ ಅಡಿ ಅಗಲದ ದೊಡ್ಡ ಶಾಸನದವರೆಗೆ[೧೪], ಸಿದ್ಧ ಶಿಲಾಪಲಕ, ಸಹಜ ಬಂಡೆಗಲ್ಲು, ದೇವಾಲಯ ಬಿತ್ತಿ, ಕಂಬ, ತೊಲೆ, ಬಾಗಿಲುವಾಡ, ವಿಗ್ರಹ ಪೀಠಗಳು, ಲೋಹಪ್ರತಿಮೆಗಳ ಹಿಂಭಾಗದಲ್ಲಿ ಇಲ್ಲಿನ ಶಾಸನಗಳು ವೈವಿಧ್ಯಮಯವಾಗಿವೆ. ಸುಮಾರು ೩೩೫ ಶಿಲಾಶಾಸನಗಳು, ೮ ತಾಮ್ರ ಶಾಸನಗಳು, ೪ ಹಿತ್ತಾಳೆಯ ಪ್ರತಿಮೆ ಪ್ರಭಾವಳಿಯ ಮೇಲಿನ ಶಾಸನಗಳಿವೆ. ಒಂದು ಸಂಪೂರ್ಣ ಸಂಸ್ಕೃತ ಭಾಷೆ ನಾಗರೀ ಲಿಪಿಯ ಶಾಸನ[೧೫] ಮೂರು ಸಂಸ್ಕೃತ ಮತ್ತು ಕನ್ನಡ ಮಿಶ್ರ ಭಾಷೆಯ ನಾಗರಿಲಿಪಿಯ ಶಾಸನಗಳು ಒಂದು ಪ್ರಾಕೃತ ಭಾಷೆ, ನಾಗರಿಲಿಪಿಯ ಶಾಸನ[೧೬]ಗಳನ್ನು ಹೊರತುಪಡಿಸಿ ಉಳಿದವೆಲ್ಲ ಕನ್ನಡ ಭಾಷೆ, ಕನ್ನಡ ಲಿಪಿಯ ಶಾಸನಗಳಾಗಿವೆ. ಗಂಗರ ಕಾಲದಿಂದ ಮೈಸೂರು ಒಡೆಯರವರೆಗೆ ಇವುಗಳು ಕಂಡುಬಂದರೂ ಹೊಯ್ಸಳರ ಶಾಸನಗಳೇ ಹೆಚ್ಚಿದ್ದು ದೀರ್ಘವೂ ಕಾವ್ಯಾತ್ಮಕವೂ ಆಗಿವೆ. ಇಲ್ಲಿ ಸ್ಮಾರಕ ಶಾಸನಗಳು ಅತ್ಯಂತ ಕಲಾತ್ಮಕವಾಗಿದ್ದು ಹೊಯ್ಸಳ ಶಿಲ್ಪಶೈಲಿಯ ನೈಪುಣ್ಯತೆಗಳನ್ನು ಪಡೆದಿವೆ. ಇವೆಲ್ಲ ಬರಹ ಉಳ್ಳ ಶಾಸನಗಳ ವಿವರವಾದರೆ, ಬರಹ ರಹಿತವಾದ ಅನೇಕ ಸ್ಮಾರಕ ಶಾಸನಗಳು, ಬರಹವಿದ್ದೂ ಓದಲಾಗದ

ಶಾಸನಗಳ ಸಂಖ್ಯೆಯೂ ಹೆಚ್ಚಾಗಿಯೇ ಇದೆ. ಇವೆಲ್ಲವೂ ಪ್ರಸ್ತುತ ಪ್ರದೇಶದ ಸಾಂಸ್ಕೃತಿಕ ಕಥನವನ್ನು ಅಡಗಿಸಿಟ್ಟುಕೊಂಡಿವೆ.

## ೧.೪. ಈವರೆಗಿನ ಅಧ್ಯಯನಗಳು

ಮೈಸೂರು ವಿಶ್ವವಿದ್ಯಾಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯು ೧೯೭೭ರಲ್ಲಿ, ಎಪಿಗ್ರಾಫಿಯಾ ಕರ್ನಾಟಿಕಾ (ಹಳೆಯ) ಸಂಪುಟ ೫ ಮತ್ತು ೧೫ರಲ್ಲಿ ಹಾಗೂ ಮೈಸೂರು ಆರ್ಕಿಯಾಲಜಿಕಲ್ ವಾರ್ಷಿಕ ವರದಿಗಳಲ್ಲಿ ಆ ಮೊದಲು ಪ್ರಕಟಗೊಂಡಿದ್ದ ಅರಸೀಕೆರೆ ತಾಲ್ಲೂಕಿನ ೮೨ ಗ್ರಾಮಗಳ ೩೨೮ ಶಾಸನಗಳನ್ನು ಎಪಿಗ್ರಾಫಿಯಾ ಕರ್ನಾಟಿಕಾ ಪರಿಷ್ಕೃತ ೧೦ನೇ ಸಂಪುಟದಲ್ಲಿ ಪ್ರಕಟಿಸಿದೆ. ಪ್ರಮುಖ ರಾಜಕೀಯ, ಸಾಂಸ್ಕೃತಿಕ ಸಂಗತಿಗಳ ಮೇಲೆ ಬೆಳಕು ಚೆಲ್ಲುವ ಇಲ್ಲಿನ ಕೆಲವು ಶಾಸನಗಳ ಪ್ರಾಮುಖ್ಯತೆಯನ್ನು ಕುರಿತು ಈ ಸಂಪುಟದ ಮುನ್ನುಡಿಯಲ್ಲಿ ಪರಿಚಯಿಸಿರುವುದು ನಮ್ಮ ಅಧ್ಯಯನಕ್ಕೆ ಸಹಾಯಕವಾಗಿದೆ.

ಅರಸೀಕೆರೆ ಪ್ರಾಂತ್ಯವು ಹೊಯ್ಸಳರ ಉದಯದೊಂದಿಗೆ ಪ್ರಾಮುಖ್ಯತೆಯನ್ನು ಪಡೆದುಕೊಂಡು ವೀರಬಲ್ಲಾಳನ ಕಾಲದಲ್ಲಿ ಪ್ರಮುಖ ಆಡಳಿತ ಕೇಂದ್ರವಾಗಿ ಭಂಡಾರವಾಡವಾಗಿ, ರಾಜಧಾನಿಯೆಂದು ಕರೆಸಿಕೊಂಡಿದ್ದಷ್ಟೇ ಅಲ್ಲ ತೆಂಕಣ ಅಯ್ಯಾವಳೆ ಎಂದೂ ಸೀತಾಳ ಮಳಿಗೆ ಎಂದೂ ಪ್ರಸಿದ್ಧವಾಗಿದ್ದು, ಪ್ರಮುಖ ವಾಣಿಜ್ಯ ಕೇಂದ್ರವಾಗಿ, ಶ್ರೀಮಂತ ವರ್ತಕ ಸಮೂಹವನ್ನು ಕಲಾವಿದರನ್ನು, ಆಡಳಿತಗಾರರನ್ನು, ವಿದ್ವಾಂಸರನ್ನು ತನ್ನತ್ತ ಆಕರ್ಷಿಸ ತೊಡಗಿತು. ಅಭಿವೃದ್ಧಿಕಾರ್ಯಗಳಿಗೆ ಚಾಲನೆ ದೊರೆತು ಸಂಪದ್ಭರಿತ ಪ್ರದೇಶವಾಯಿತು. ಹೊಯ್ಸಳರನ್ನು ಕುರಿತು ಹೆಚ್ಚು ಅಧ್ಯಯನಗಳು ನಡೆದಿದ್ದರೂ, ಹೊಯ್ಸಳ ನಾಡಿನ ಇತರ ಪ್ರಮುಖ ಕೇಂದ್ರಗಳಾದ ಹಳೇಬೀಡು, ಬೇಲೂರು, ಸೋಮನಾಥಪುರ, ತಲಕಾಡು, ಶ್ರವಣ ಬೆಳಗೊಳಗಳಿಗೆ ನೀಡಿದ ಪ್ರಾಮುಖ್ಯತೆಯನ್ನು ವಿದ್ವಾಂಸರು ಅರಸೀಕೆರೆ ಪ್ರದೇಶಕ್ಕೆ ನೀಡಿಲ್ಲ. ಹೊಯ್ಸಳರ ಚರಿತ್ರೆ, ಆಡಳಿತ, ವಾಸ್ತುಕಲೆ, ಆರ್ಥಿಕ ಸ್ಥಿತಿಗತಿಗಳನ್ನು ಹೇಳುವಾಗ ಆನುಷಂಗಿಕವಾಗಿ ಇಲ್ಲಿನ ಕೆಲವೇ ಶಾಸನಗಳನ್ನು ಮತ್ತೆ ಮತ್ತೆ ಉಲ್ಲೇಖಿಸಿರುವುದು ಕಂಡುಬರುತ್ತದೆ. 'ಹೊಯ್ಸಳರ ಕಾಲದ ಮುಖ್ಯನಗರ ಕೇಂದ್ರಗಳು ಮತ್ತು ನಗರೀಕರಣ ಒಂದು ಅಧ್ಯಯನ'' ಎಂಬ ಕೆ.ಎಂ. ಮಹಾದೇವಸ್ವಾಮಿಯವರ ಸಂಶೋಧನಾ ಪ್ರಬಂಧದಲ್ಲಿ ಆ ಕಾಲದ ಪ್ರಮುಖ ನಗರಗಳನ್ನು ಗುರುತಿಸಿ ಅವುಗಳ ಪ್ರಾಮುಖ್ಯತೆಯನ್ನು ಚರ್ಚಿಸಿದ್ದಾರೆ. ಆದರೆ ಹೊಯ್ಸಳರ ಕಾಲದ ಪ್ರಮುಖ ನಗರವಾಗಿದ್ದ ಅರಸೀಕೆರೆಯನ್ನು ಯಾವ ಕಾರಣಕ್ಕೋ ಕೈಬಿಟ್ಟಿದ್ದಾರೆ.

ಹೊಯ್ಸಳರನ್ನು ಕುರಿತು ಡಂಕನ್ ಎಂ.ಡೆರೆಟ್‌ರವರು ಬರೆದಿರುವ 'ದ ಹೊಯ್ಸಳಾಸ್ ಎ ಮಿಡೀವಲ್ ಇಂಡಿಯನ್ ರಾಯಲ್ ಫ್ಯಾಮಿಲಿ'' ಮತ್ತು ವಿಲಿಯಂ ಕೊಯೆಲ್ಹೋರವರ ''ದಿ ಹೊಯ್ಸಳ ವಂಶ'' ಗ್ರಂಥಗಳಲ್ಲಿ ಹೊಯ್ಸಳ ವಂಶದ ಚರಿತ್ರೆ ಸಾಧನೆ ಸಿದ್ಧಿಗಳನ್ನು ಗುರುತಿಸುವಲ್ಲಿ ಪ್ರಸ್ತುತ

ಪರಿಸರದ ಕೆಲವು ಶಾಸನಗಳನ್ನು ಬಳಸಿಕೊಂಡಿದ್ದಾರೆ. ಡಾ.ಸಕಲೇಶ್ ಅವರ 'ಹೊಯ್ಸಳೋದಯ ಸಂಶೋಧನ" ಗ್ರಂಥದಲ್ಲಿ ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಗಳ ೫ ರಿಂದ ೧೧ನೇ ಶತಮಾನಗಳ ಹೊಯ್ಸಳ ಪೂರ್ವದ ಹಾಗೂ ಅವರ ಆರಂಭಕಾಲದ ಶಾಸನಗಳನ್ನು ಬಳಸಿಕೊಂಡು ಹೊಯ್ಸಳ ಹಾಗೂ ಪ್ರಾದೇಶಿಕವಾಗಿ ಆಳಿದ ಮನೆತನಗಳ ಉದಯ ಮತ್ತು ಬೆಳವಣಿಗೆಗಳನ್ನು ರಾಜಕೀಯ ಚರಿತ್ರೆಯನ್ನು ಪುನಾರಚಿಸುವ ಕಡೆಗೆ ಅವರ ಗಮನವಿದೆ. ಹಾಗಾಗಿ ಅರಸೀಕೆರೆ ತಾಲ್ಲೂಕಿನ ನೂರಾರು ಶಾಸನಗಳು ಅವರ ಅಧ್ಯಯನ ವ್ಯಾಪ್ತಿಯಿಂದ ಹೊರಗೆ ಉಳಿದು ಬಿಟ್ಟಿವೆ.

ಡಾ.ಕೆ.ವಸಂತಲಕ್ಷ್ಮಿಯವರು 'ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು" ಎಂಬ ಸಂಶೋಧನಾ ಪ್ರಬಂಧದಲ್ಲಿ ಹಾಸನ ಜಿಲ್ಲೆಯ ಇತರ ಜೈನ ಬಸದಿಗಳೊಂದಿಗೆ ಅರಸೀಕೆರೆ ತಾಲ್ಲೂಕಿನ ಹೊಯ್ಸಳರ ಕಾಲದ ಬಸದಿಗಳ ಬಗ್ಗೆಯೂ ಚರ್ಚಿಸಿದ್ದಾರೆ.

ಡಾ.ಜಗದೀಶ್‌ರವರು ತಮ್ಮ 'ಮೆಜರ್‌ಮೆಂಟ್ ಸಿಸ್ಟಮ್ ಇನ್ ಕರ್ನಾಟಕ" ಎಂಬ ಸಂಶೋಧನಾ ಪ್ರಬಂಧದಲ್ಲಿ ಈ ತಾಲ್ಲೂಕಿನಲ್ಲಿ ಕಂಡುಬರುವ ಅಳತೆ ಮತ್ತು ತೂಕಗಳಿಗೆ ಸಂಬಂಧಿಸಿದ ಶಾಸನ ವಿವರಗಳನ್ನು ವಿಶ್ಲೇಷಿಸಿದ್ದಾರೆ.

ಡಾ.ಚೆನ್ನಕ್ಕ ಎಲಿಗಾರ ಅವರು "ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ" ಎಂಬ ಸಂಶೋಧನಾ ಮಹಾಪ್ರಬಂಧದಲ್ಲಿ ಕರ್ನಾಟಕದ ಉದ್ದಗಲಕ್ಕೂ ಹರಡಿರುವ, ಅಶೋಕನ ಕಾಲದಿಂದ ವಿಜಯನಗರ ಕಾಲದವರೆಗಿನ ಶಾಸನಗಳನ್ನು ಅಧ್ಯಯನ ಮಾಡಿದ್ದಾರೆ.

ಡಾ.ಎಂ.ಚಿದಾನಂದಮೂರ್ತಿಯವರು "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ"ದಲ್ಲಿ ತಮ್ಮ ಸಂಶೋಧನೆಯ ಕಾಲಾವಧಿಯ ಒಳಗೆ ಬರುವ ಅರಸೀಕೆರೆ ಪರಿಸರದ ಕೆಲವು ಶಾಸನಗಳನ್ನು ಕುರಿತು ಚರ್ಚಿಸಿದ್ದಾರೆ.

ಡಾ.ಎಂ.ಎಂ.ಕಲಬುರ್ಗಿಯವರು ಶಾಸನಗಳಲ್ಲಿ ಶಿವಶರಣರು ಹಾಗೂ ಶಾಸನಗಳ ಲಿಪಿಕಾರರು ರೂವಾರಿಗಳನ್ನು[೧೭] ಕುರಿತ ಚರ್ಚೆಗಳಲ್ಲಿ ಇಲ್ಲಿನ ಶಾಸನಗಳನ್ನು ಬಳಸಿಕೊಂಡಿದ್ದಾರೆ. ಮೇವುಂಡಿ ಮಲ್ಲಾರಿಯವರು ಈ ಪ್ರಾಂತ್ಯದ ಕೆಲವು ಶಾಸನ ಕವಿಗಳನ್ನು 'ಕನ್ನಡನಾಡಿನ ಶಾಸನ ಕವಿಗಳು" ಎಂಬ ಗ್ರಂಥದಲ್ಲಿ ಪರಿಚಯಿಸಿದ್ದಾರೆ.

ಡಾ.ದೇವರಕೊಂಡಾರೆಡ್ಡಿಯವರು 'ತಲಕಾಡಿನ ಗಂಗರ ದೇವಾಲಯಗಳು" ಎಂಬ ಸಂಶೋಧನಾ ಪ್ರಬಂಧದಲ್ಲಿ ಅರಸೀಕೆರೆ ಪ್ರದೇಶದಲ್ಲಿನ ತಳಲೂರು, ಕೆಲ್ಲಂಗೆರೆ, ಮಾಲೆಕಲ್ಲುತಿರುಪತಿಗಳಲ್ಲಿ ಕಂಡುಬರುವ ಗಂಗರ ಕಾಲದ ದೇವಾಲಯ ಶಿಲ್ಪಗಳ ಬಗೆಗೆ ಚರ್ಚಿಸಿದ್ದಾರೆ. ಡಾ.ಶ್ರೀಕಂಠಶಾಸ್ತ್ರಿಗಳು ತಮ್ಮ 'ಹೊಯ್ಸಳ ವಾಸ್ತುಶಿಲ್ಪ" ಗ್ರಂಥದಲ್ಲಿ ಪ್ರಸ್ತುತ ಪ್ರದೇಶದ ಕೆಲವು ಹೊಯ್ಸಳ ದೇವಾಲಯಗಳನ್ನು

ಪರಿಚಯಿಸಿದ್ದಾರೆ. ಡಾ.ಡಿ.ವಿ.ಪರಮಶಿವಮೂರ್ತಿಯವರು 'ಕನ್ನಡ ಶಾಸನಶಿಲ್ಪ'' ಎಂಬ ಸಂಶೋಧನಾ ಗ್ರಂಥದಲ್ಲಿ ಹೊಯ್ಸಳರ ಸ್ಮಾರಕ ಶಿಲ್ಪಗಳ ವೈಶಿಷ್ಟ್ಯತೆಯ ಬಗೆಗೆ ಚರ್ಚಿಸಿದ್ದು, ಈ ಪ್ರದೇಶದ ಹಲ್ಲೂರು, ಕಿತ್ತನಕೆರೆ, ಶಾನೆಗೆರೆಗಳ ವೀರಗಲ್ಲುಗಳನ್ನು ವಿಶ್ಲೇಷಿಸಿದ್ದಾರೆ.

ಈ ಎಲ್ಲಾ ಗ್ರಂಥಗಳೂ ತಮ್ಮ ಅಧ್ಯಯನ ವ್ಯಾಪ್ತಿಯಲ್ಲಿ ಆನುಷಂಗಿಕವಾಗಿ ಇಲ್ಲಿನ ಕೆಲವು ವಿಚಾರಗಳನ್ನು ಚರ್ಚೆ ಮಾಡುತ್ತವೆ.

ನಮ್ಮ ಅಧ್ಯಯನಕ್ಕೆ ಅನುವಾಗುವಂತಹ ಕೆಲವು ಬಿಡಿ ಲೇಖನಗಳು ಈ ಸಮಯದಲ್ಲಿ ಉಲ್ಲೇಖಾರ್ಹವಾಗಿವೆ. ಡಾ.ಹನುಮನಾಯಕರ 'ಚೆಲುವನಹಳ್ಳಿ ಗವಿಮಠ ಒಂದು ಪ್ರಾಗೈತಿಹಾಸಿಕ ನೆಲೆ''[೧೮] ಹಾಗೂ ಆರ್.ವೆಂಕಟೇಶಮೂರ್ತಿಯವರ 'ಅರಸೀಕೆರೆ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು ಒಂದು ಶೋಧ''[೧೯] ಎಂಬ ಲೇಖನಗಳು ಈ ಪ್ರದೇಶದ ಪ್ರಾಗೈತಿಹಾಸಿಕ ನೆಲೆಗಳ ಮೇಲೆ ಬೆಳಕು ಚೆಲ್ಲುತ್ತವೆ.

ಡಾ.ಹನುಮನಾಯಕರ 'ಹೊಯ್ಸಳರ ಕಾಲದಲ್ಲಿ ನಗರೀಕರಣ ಪ್ರಕ್ರಿಯೆ : ಕಳಿಕಟ್ಟೆ ಒಂದು ವಿಶ್ಲೇಷಣೆ'' ಎಂಬ ಲೇಖನವು[೨೦] ಕಣಕಟ್ಟೆ ಗ್ರಾಮವು ನಗರೀಕರಣಕ್ಕೆ ತೆರೆದುಕೊಂಡ ಬಗೆಯನ್ನು ವಿಶ್ಲೇಷಿಸುತ್ತದೆ.

ಡಾ.ಎಸ್.ಶೆಟ್ಟರ್ ಅವರು 'ಅರಸೀಕೆರೆ ಅಂಡರ್ ದಿ ಹೊಯ್ಸಳಾಸ್'' ಎಂಬ ಲೇಖನದಲ್ಲಿ[೨೧] ಅರಸೀಕೆರೆ ಪಟ್ಟಣವು ಹೊಯ್ಸಳರ ಕಾಲದಲ್ಲಿ ಕಂಡ ಸಂಪತ್ ಸಮೃದ್ಧಿಯನ್ನು ಅಲ್ಲಿನ ಶಿವಾಲಯದ ವಾಸ್ತು ಸೌಂದರ್ಯವನ್ನು ವಿವರಿಸಿದ್ದಾರೆ. 'ಅರಸೀಕೆರೆಯಲ್ಲಿ ದೊರೆತ ಜೈನಧರ್ಮದ ಯಾಪನೀಯ ಸಂಘದ ಶಿಲಾಶಾಸನಗಳು'' ಎಂಬ ಎಸ್.ಶೆಟ್ಟರ್ ಅವರ ಮತ್ತೊಂದು ಲೇಖನ[೨೨] ಇಲ್ಲಿನ ಜೈನ ಧರ್ಮದ ಸ್ಥಿತಿಗತಿಗಳ ಬಗೆಗೆ ಹೊಸ ಬೆಳಕನ್ನು ಚೆಲ್ಲಿದೆ.

ಹಾಸನ ರಂಗಾಚೆಟ್ಟಿ ಸೋಮಸುಂದರಂ ಅವರ 'ಕರ್ನಾಟಕದ ಚೆಟ್ಟಿಗಳು'' ಎಂಬ ಕಿರುಹೊತ್ತಿಗೆ ಉಂಡಿಗನಾಳಿನ ಚೆಟ್ಟಿಕುಲದ ಮೇಲೆ ಬೆಳಕು ಚೆಲ್ಲುತ್ತದೆ.

ಇಷ್ಟೆಲ್ಲಾ ಪ್ರಯತ್ನಗಳು ನಡೆದಿದ್ದರೂ ಯಾವುವೂ ಈ ಪ್ರದೇಶದ ಶಾಸನಗಳನ್ನು ಸಂಪೂರ್ಣವಾಗಿ ಅಧ್ಯಯನಕ್ಕೆ ಒಳಪಡಿಸದ ಕಾರಣ ಈ ಪರಿಸರದ ಸಮಗ್ರ ಚಿತ್ರವನ್ನು ಕಟ್ಟಿಕೊಡಲಾರವು. ಹಾಗಾಗಿ ಈ ಪ್ರದೇಶಕ್ಕೆ ಕೇಂದ್ರೀಕೃತವಾದ ಅಧ್ಯಯನವೊಂದರ ಅವಶ್ಯಕತೆಯಿದ್ದು, ಆ ಕೊರತೆಯನ್ನು ನೀಗಿಸುವ ಪ್ರಯತ್ನವಿದಾಗಿದೆ.

ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ನಮ್ಮ ಸಂಸ್ಕೃತಿಯ ಬಗ್ಗೆ ಅತಿಭಾವುಕವಾದ ಆದರ್ಶಮಯ ನಿಲುವನ್ನು ತಾಳುವ ಅಭ್ಯಾಸ ಹುಟ್ಟಿಕೊಂಡಿತು. ವಸಾಹತುಶಾಹಿಯಿಂದ ದತ್ತವಾದ ಓರಿಯಂಟಲಿಸ್ಟ್

ಚಿಂತನೆ ಭಾರತೀಯವಾದುದೆಲ್ಲವನ್ನು ವೈಭವೀಕರಿಸುವುದಕ್ಕೆ ತೊಡಗಿತು. ಇದರೊಂದಿಗೆ ವಸಾಹತುಶಾಹಿ ಹುಟ್ಟಿಸಿದ ಮರುಹಂಬಲದ ಧೋರಣೆಯೂ ಅಧ್ಯಯನಗಳ ಮೇಲೆ ಪ್ರಭಾವ ಬೀರಿತು. ಇದಕ್ಕೆ ವ್ಯತಿರಿಕ್ತವಾಗಿ ಪರಂಪರೆಯನ್ನು ಸಾರಾಸಗಟಾಗಿ ತಿರಸ್ಕರಿಸುವ ಧೋರಣೆ ಸ್ವಾತಂತ್ರ್ಯದ ನಂತರದ ಭ್ರಮನಿರಸನದಿಂದ ಹುಟ್ಟಿಕೊಂಡಿತು. ಈ ಎರಡೂ ಧೋರಣೆಗಳಿಂದ ವಸ್ತು ನಿಷ್ಠತೆ ಸಾಧ್ಯವಿಲ್ಲ. ಅಲಕ್ಷತೆಗಾಗಲೀ, ಅತಿಭಾವುಕತೆಗಾಗಲೀ ಅವಕಾಶ ಕೊಡದೆ ಲಿಖಿತ ಆಕರಗಳು, ಭೌತಿಕ ಆಕರಗಳು ಹಾಗೂ ಮೌಖಿಕ ಆಕರಗಳನ್ನು ಸೂಕ್ಷ್ಮ ವಿಶ್ಲೇಷಣೆಗೆ ಒಳಪಡಿಸಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲು ಪ್ರಯತ್ನಿಸಲಾಗಿದೆ.

## ೧.೫. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವನ್ನು ಒಟ್ಟು ೮ ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿಯನ್ನು ಕುರಿತಿದೆ. ಎರಡನೆಯ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನ ಪ್ರದೇಶದ ಪ್ರಾಗೈತಿಹಾಸಿಕ ಮತ್ತು ಐತಿಹಾಸಿಕ ಕಾಲದ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗುವುದು. ಈ ಪ್ರದೇಶವನ್ನು ಆಳಿದ ವಿವಿಧ ರಾಜವಂಶಗಳು, ಅರಸರು, ರಾಣಿಯರು, ಸಾಮಂತರು, ಅಧಿಕಾರಿಗಳ ಬಗೆಗೆ ಶಾಸನಗಳು ನೀಡಿರುವ ಮಾಹಿತಿಗಳನ್ನು ಗಮನಿಸಲಾಗಿದೆ. ರಾಜಕೀಯ ಇತಿಹಾಸವನ್ನು ಹೇಳುವುದು ನಮ್ಮ ಅಧ್ಯಯನದ ಉದ್ದೇಶವಲ್ಲವಾದರೂ ಯಾವುದೇ ಸಮಾಜದ ಏಳು ಬೀಳಿನ ಕಥೆ ಆ ಪ್ರದೇಶವನ್ನು ಆಳಿದ ಶಕ್ತಿಯಿಂದ ಬೇರೆಯಾಗಿ ನಿಲ್ಲುವುದಿಲ್ಲ ಎಂಬ ಕಾರಣಕ್ಕೆ ಈ ಅಧ್ಯಾಯವನ್ನು ಇಟ್ಟುಕೊಳ್ಳಲಾಗಿದೆ.

ಯಾವುದೇ ಪ್ರದೇಶದ ಸಾಮಾಜಿಕ ಸಾಂಸ್ಕೃತಿಕ ಸ್ಥಿತಿಸಂಚಲನವನ್ನು ಅಧ್ಯಯನ ಮಾಡಲು ಹೊರಟವರು ಅಲ್ಲಿನ ಭೂಸಂಪತ್ತು ಅದರ ಒಡೆತನ, ಅಭಿವೃದ್ಧಿ, ಹಂಚಿಕೆ, ಕೃಷಿ ವಿಸ್ತರಣೆ, ಕೃಷಿಯೇತರ ಉತ್ಪಾದನೆ, ವಾಣಿಜ್ಯ, ವ್ಯವಹಾರದಲ್ಲಾದ ಅರ್ಥಸಂಬಂಧೀ ಪಲ್ಲಟಗಳನ್ನು ಅರಿತುಕೊಳ್ಳದೇ ಆ ಸಮಾಜದ ಸ್ವರೂಪವನ್ನು ಅರ್ಥೈಸಲು ಸಾಧ್ಯವಾಗುವುದಿಲ್ಲ. ಅರ್ಥವ್ಯವಸ್ಥೆ ಪ್ರತೀ ಸಮಾಜದ ತಳರಚನೆಯಾಗಿರುತ್ತದಾದ್ದರಿಂದ ಮೂರನೇ ಅಧ್ಯಾಯದಲ್ಲಿ ಈ ಪ್ರದೇಶದ ಆರ್ಥಿಕಾಭಿವೃದ್ಧಿಯ ಮೊದಲ ಹೆಜ್ಜೆಗಳನ್ನು, ಕೃಷಿ ವಿಸ್ತರಣೆ, ಭೂಮಿಯ ಒಡೆಯ- ಒಕ್ಕಲುಗಳ ಸಂಬಂಧ, ದಾನ, ಕ್ರಯ, ಪರಿವರ್ತನೆ, ಸಾಲಪತ್ರ, ಪುದಾವಳಿಗಳು, ಅಳತೆ, ಗಡಿಕಲ್ಲು, ಭೂತೆರಿಗೆ ಇತ್ಯಾದಿ ಭೂಸಂಬಂಧಿ ಆರ್ಥಿಕ ವ್ಯವಸ್ಥೆಯನ್ನು ಶಾಸನಗಳ ಆಧಾರದಿಂದ ಅರ್ಥೈಸಲಾಗಿದೆ.

ಕೃಷಿ ಸಮಾಜದ ಜೀವದ್ರವ್ಯವಾದ ಜಲಸಂಪನ್ಮೂಲದ ಅಭಿವೃದ್ಧಿ ಹಂಚಿಕೆಗಳನ್ನು, ಪ್ರಸ್ತುತ ಪ್ರದೇಶವು ಸಂಪದ್ಭರಿತವಾಗಲು ಇಲ್ಲಿ ಸ್ಥಳೀಯರು ಕೈಗೊಂಡ ಕೆರೆ, ಕಟ್ಟೆ, ಬಾವಿ, ಕಾಲುವೆ ನೀರಾವರಿ

ನಿರ್ಮಾಣ ತತ್‌ಸಂಬಂಧಿತ ದಾನ ಕೊಡುಗೆ ತಂತ್ರಜ್ಞಾನ ಇತ್ಯಾದಿಗಳನ್ನು, ನೀರಾವರಿ ಭೂಮಿಯ ಹಂಚಿಕೆ ಮತ್ತು ನೀರಿನ ಸದ್ಬಳಕೆಗೆ ಸಂಬಂಧಿಸಿದ ವಿಧಿ ನಿಷೇಧ, ವ್ಯಾಜ್ಯಗಳನ್ನು ಕುರಿತು ಗಮನಿಸಲಾಗಿದೆ. ಜೊತೆಗೆ ಇಂದು ನಾವು ಅವಶ್ಯಕವಾಗಿ ಅರಿಯಬೇಕಾಗಿರುವ ಕೆರೆಕಟ್ಟೆಗಳ ನಿರ್ವಹಣೆ, ಏರಿ ನಿರ್ವಹಣೆ, ಕೆರೆಯ ಅಂಗಳದ ಹೂಳು ನಿರ್ವಹಣೆ, ತೂಬು, ಕೋಡಿಗಳ ನಿರ್ವಹಣೆ, ಜಲಾನಯನ ಪ್ರದೇಶಗಳನ್ನು ಕಾಪಾಡುವುದಕ್ಕಾಗಿ ನಮ್ಮ ಪೂರ್ವಿಕರು ಕೈಗೊಳ್ಳುತ್ತಿದ್ದ ಶಿಸ್ತುಬದ್ಧ ಕಾರ್ಯಚಟುವಟಿಕೆಗಳನ್ನು ಚರ್ಚಿಸಲಾಗಿದೆ. ಇದರೊಂದಿಗೆ ಕೃಷಿ ತೆರಿಗೆ, ವೃತ್ತಿ ತೆರಿಗೆ, ವಾಣಿಜ್ಯ ತೆರಿಗೆ, ಸುಂಕ ಮುಂತಾದ ರಾಜಾಯದ ಕ್ರೋಢೀಕರಣ, ನಾಣ್ಯ ವ್ಯವಸ್ಥೆ, ಪ್ರಸ್ತುತ ಪ್ರದೇಶದಲ್ಲಿ ಕಂಡುಬರುವ ಕಮ್ಮಟಗಳು ಹಾಗೂ ಅವುಗಳ ಅಧಿಕಾರಿಗಳ ವಿಚಾರವು ಸಂಕ್ಷಿಪ್ತವಾಗಿ ಸೇರಿದೆ.

ಸಾಮಾಜಿಕ ಸ್ಥಿತಿ ಸಂಚಲನವೆಂಬ ನಾಲ್ಕನೆಯ ಅಧ್ಯಾಯದಲ್ಲಿ ಪ್ರಸ್ತುತ ಪ್ರದೇಶದ ಕೈಗಾರಿಕೆ ಮತ್ತು ವಾಣಿಜ್ಯೋದ್ಯಮದ ಬೆಳವಣಿಗೆಯು ಕೃಷಿ ಪ್ರಧಾನವಾದ ಗ್ರಾಮ ಸಮಾಜದಲ್ಲಿ ಉಂಟುಮಾಡಿದ ಸಂಚಲನವನ್ನು ಅದು ನಗರೀಕರಣಕ್ಕೆ ಹೇಗೆ ದಾರಿಯಾಯಿತೆಂಬುದನ್ನು ಇಲ್ಲಿನ ಶಾಸನಗಳ ಸಹಾಯದಿಂದ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಅಲ್ಲದೆ ರಾಜಕೀಯ ಶಕ್ತಿಗಳು ಹಾಗೂ ನೀತಿಗಳು ಇಲ್ಲಿನ ಕೆಲವು ಆಯಕಟ್ಟಿನ ಪ್ರದೇಶಗಳನ್ನು ಆಡಳಿತ ಕೇಂದ್ರಗಳಾಗಿ ಮಾಡಿಕೊಂಡ ಕಾರಣ, ಶೆಟ್ಟಿ ಪಟ್ಟಣಗಳಾಗಿ, ಅಗ್ರಹಾರಗಳಾಗಿ ಪರಿವರ್ತಿಸಿದ ಕಾರಣ ಅವು ಹೇಗೆ ಪ್ರಮುಖ ನಗರಪಟ್ಟಣಗಳಾಗಿಯೂ ಸಾಂಸ್ಕೃತಿಕ ಕೇಂದ್ರಗಳಾಗಿಯೂ ವಿದ್ಯಾಕೇಂದ್ರಗಳಾಗಿಯೂ ವಾಣಿಜ್ಯಕೇಂದ್ರವಾಗಿಯೂ ಬೆಳೆದವು ಮತ್ತು ಹೊರಗಿನಿಂದ ವಲಸಿಗರನ್ನು ಆಕರ್ಷಿಸಿದವೆಂಬುದನ್ನು ಗಮನಿಸಲಾಗಿದೆ.

ಇಲ್ಲಿನ ಅನೇಕ ಶಾಸನಗಳು ನೇರವಾಗಿ ವಲಸೆಗಳನ್ನು ಉಲ್ಲೇಖಿಸಿವೆ. ಇತಿಹಾಸದುದ್ದಕ್ಕೂ ವಲಸೆಯ ಪ್ರಕ್ರಿಯೆ ನಡೆಯುತ್ತಿರುತ್ತದಾದರೂ ವಲಸೆಯ ಲಕ್ಷಣಗಳು ಮತ್ತು ವಿವಿಧ ಆಯಾಮಗಳು ಆಯಾಯ ಕಾಲ ಮತ್ತು ಪ್ರದೇಶಗಳಿಗೆ ವಿಶಿಷ್ಟವಾಗಿರುತ್ತವೆ. ಪ್ರಸ್ತುತ ಪ್ರದೇಶವು ವಲಸೆಗಳಿಗೆ ತೆರೆದುಕೊಂಡ ಬಗೆಯನ್ನು, ಇಲ್ಲಿನ ವಲಸೆಗೆ ಪ್ರೇರಕವಾದ ಅಂಶಗಳು ಯಾವುವು ಎಂಬುದನ್ನು ಅರಿಯಲು ಪ್ರಯತ್ನಿಸಲಾಗುವುದು. ವಲಸೆಯ ಪ್ರೇರಣೆ ಮತ್ತು ಪ್ರಯೋಜನವನ್ನು ಆಧರಿಸಿ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ವಲಸೆಗಳೆಂದು ವಿಂಗಡಿಸಿಕೊಂಡು, ವಲಸಿಗ ಸಾಮಂತರು, ಅಧಿಕಾರಿಗಳು, ಬ್ರಾಹ್ಮಣರು, ವ್ಯಾಪಾರಿಗಳು, ವೈದ್ಯರು, ರೂವಾರಿಗಳು, ಧರ್ಮಗುರುಗಳ ನೇತೃತ್ವದ ವಲಸೆಗಳನ್ನು ಈ ಪ್ರದೇಶದ ಶಾಸನಗಳಲ್ಲಿ ಗುರುತಿಸಿಕೊಳ್ಳಲಾಗಿದೆ. ಈ ವಲಸಿಗರು ಮತ್ತು ಸ್ಥಳೀಯರ ಸಂಬಂಧ ಮತ್ತು ಅವರ ಸ್ಥಾನಮಾನ ಸಂಸ್ಕೃತಿಗಳನ್ನು ಕುರಿತು ಚರ್ಚಿಸಲಾಗಿದೆ.

ಇದೇ ಅಧ್ಯಾಯದಲ್ಲಿ ಶಾಸನಗಳು ಬಿಂಬಿಸಿರುವ ಸ್ತ್ರೀ ಸಮಾಜದ ವಿವಿಧತೆ, ಕಾಲಕಾಲಕ್ಕೆ ಬದಲಾದ ಸಾಮಾಜಿಕ ಮೌಲ್ಯಗಳು ಸ್ತ್ರೀ ಸಮಾಜದ ಮೇಲೆ ಉಂಟುಮಾಡಿದ ಸಂಚಲನಗಳೇನೆಂಬುದನ್ನು

ಗಮನಿಸಲಾಗಿದೆ. ರಾಣಿಯರು, ಅಧಿಕಾರೀ ವರ್ಗದ ಸ್ತ್ರೀಯರು, ಪೂಜಾರಿಣಿಯರು, ಸ್ಥಾನಿಕ ಸ್ತ್ರೀಯರು, ದಾಸಿಯರು, ಸಾಮಾನ್ಯ ಸ್ತ್ರೀಯರು, ಮಾಸ್ತಿಯರನ್ನು ಕುರಿತ ಶಾಸನಗಳ ಸಹಾಯದಿಂದ ಸ್ತ್ರೀಯರ ರಾಜಕೀಯ, ಧಾರ್ಮಿಕ, ಆಡಳಿತ ಮತ್ತು ಅವರ ಆರ್ಥಿಕ ಸ್ವಾತಂತ್ರ್ಯವನ್ನು, ಸ್ಥಿತಿಗತಿಯ ಚಿತ್ರವನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಐದನೆಯ ಅಧ್ಯಾಯವು ಸಾಮಾಜಿಕ ನಿಯಂತ್ರಣ ಮತ್ತು ರಕ್ಷಣಾ ವ್ಯವಸ್ಥೆಯನ್ನು ಕುರಿತಿದೆ. ಯಾವುದೇ ಒಂದು ಸಮಾಜದಲ್ಲಿ ಒಂದು ವ್ಯವಸ್ಥೆ, ಪ್ರಕ್ರಮ ಹಾಗೂ ಸಮತೋಲನವನ್ನು ಕಾಪಾಡಲು ಅವಶ್ಯಕವಾದ ನಿಯಂತ್ರಣ ವ್ಯವಸ್ಥೆ ಮತ್ತು ರಕ್ಷಣಾ ವ್ಯವಸ್ಥೆಯ ಪಾತ್ರವೇನು ಮತ್ತು ಯಾವೆಲ್ಲ ನಿಯೋಗಗಳ ಮೂಲಕ ಒಂದು ಸಮಾಜ ತನ್ನ ಸದಸ್ಯರ ವರ್ತನೆಯನ್ನು ನಿಯಂತ್ರಿಸುತ್ತದೆ ಎಂಬುದನ್ನೂ ಶಾಸನಗಳಲ್ಲಿ ಉಕ್ತವಾದ ಭಿನ್ನ ಭಿನ್ನ ಕ್ಷೇತ್ರಕ್ಕೆ ಸಂಬಂಧಿಸಿದ ವಿಧಿ-ನಿಷೇಧಗಳು, ಶಾಪಾಶಯಗಳು, ಶಾಸ್ತ್ರ ಗ್ರಂಥಗಳಲ್ಲಿ ಕಂಡುಬರುವ ಅಪಾರಾಧ-ಶಿಕ್ಷಾ ವಿಚಾರಗಳು ವ್ಯಷ್ಠಿಯನ್ನು, ಸಮಷ್ಠಿಯನ್ನು ನಿಯಂತ್ರಿಸಿದ ಬಗೆಗಳಾವುವು ಎಂಬುದನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ದುಷ್ಟ ಶಿಕ್ಷಣದೊಂದಿಗೆ ಶಿಷ್ಟ ರಕ್ಷಣೆಯ ನೀತಿಯನ್ನು ಅಳವಡಿಸಿಕೊಂಡ ನಿಯಂತ್ರಣ ಶಕ್ತಿಯು ಸಾಮಾಜಿಕ ಭದ್ರತೆಗಾಗಿ ರೂಪಿಸಿಕೊಂಡ ರಕ್ಷಣಾ ವ್ಯವಸ್ಥೆ ಎಂಥದ್ದು. ಅದು ನಿಯಂತ್ರಣ ನಿಯೋಗಗಳೊಂದಿಗೆ ಸ್ವಸ್ತ ಸಮಾಜ ನಿರ್ಮಾಣಕ್ಕೆ ಯಾವ ರೀತಿ ಪೂರಕವಾಗಿ ದುಡಿದಿದೆ ಎಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ. ರಕ್ಷಣೆಯ ಅಂಗವಾಗಿ ಸೈನ್ಯ ವ್ಯವಸ್ಥೆ, ಕೋಟೆಗಳು, ಸ್ವಾಮಿನಿಷ್ಠ ವೀರ ಪಡೆಗಳು ಯಾವೆಲ್ಲಾ ವೈಶಿಷ್ಟ್ಯತೆಗಳಿಂದ ಶಾಸನಗಳಲ್ಲಿ ಕಾಣಿಸಿಕೊಂಡಿವೆ, ಇಂಥ ವ್ಯವಸ್ಥೆಯನ್ನು ಹುಟ್ಟುಹಾಕಿದ ಶಕ್ತಿಗಳು ಯಾವುವು ಎಂಬುದನ್ನು ಚರ್ಚಿಸಲಾಗಿದೆ. ಗ್ರಾಮದ ಶಾಂತಿ ಸೌಖ್ಯವನ್ನು ಭಂಗಪಡಿಸುವ ದುಷ್ಟರ ಆಕ್ರಮಣಗಳು, ಆತಂಕಗಳಾದ ಊರಳಿವು ತುರುಗೊಳ್ ಇತ್ಯಾದಿ ಸಂದರ್ಭಗಳಲ್ಲಿ ಸಮುದಾಯದ ಸಂಪತ್ತು, ಮಾನ, ಅಭಿಮಾನಗಳ ರಕ್ಷಣೆಗಾಗಿ ಪ್ರಾಣ ತೆತ್ತ ಸ್ಥಳೀಯ ವೀರರ ಸಾಹಸ, ತ್ಯಾಗಗಳನ್ನು ಶಾಸನಾಧಾರದ ಮೇಲೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಮನುಷ್ಯನ ಅಪವರ್ತನೆಯನ್ನು ತಡೆಯಲು ಕೇವಲ ವಿಧಿ ನಿಷೇಧಗಳು, ಶಿಕ್ಷೆ, ರಕ್ಷಣಾ ವ್ಯವಸ್ಥೆಗಳಷ್ಟೇ ಸಾಲದೆಂಬ ಅರಿವಿನಿಂದ ಕೊಡುಗೆ, ಪುರಸ್ಕಾರ, ಮಾನಸನ್ಮಾನಗಳನ್ನು ಪ್ರೋತ್ಸಾಹಕ ನಿಯೋಗಗಳಾಗಿ ಅಳವಡಿಸಿಕೊಂಡು ನಮ್ಮ ಹಿರಿಯರು ಯಾವ ರೀತಿ ತಮ್ಮ ಸಮಾಜದ ಸದಸ್ಯರ ಮೇಲೆ ಇತ್ಯಾತ್ಮಕ ಪರಿಣಾಮ ಬೀರಿ ಅವರ ಅಪವರ್ತನೆಯನ್ನು ತಡೆಯುತ್ತಿದ್ದರು, ಒಂದು ಸಾಮಾಜಿಕ ನಿಷ್ಠೆ, ಬದ್ಧತೆ, ಹೊಣೆಗಾರಿಕೆಯ, ಸಂತೃಪ್ತಿಯ ಭಾವವನ್ನು, ಕ್ರಿಯಾಶೀಲತೆಯನ್ನು ಉಂಟುಮಾಡುವಲ್ಲಿ ಯಶಸ್ವಿಯಾಗುತ್ತಿದ್ದರು ಎಂಬುದನ್ನು ಶಾಸನಗಳ ಸಹಾಯದಿಂದ ಚರ್ಚಿಸಲಾಗಿದೆ.

ಆರನೆಯ ಅಧ್ಯಾಯವು ಧಾರ್ಮಿಕ ಸ್ಥಿತಿಸಂಚಲನದ ಚರ್ಚೆಗೆ ಮೀಸಲಾಗಿದೆ. ರಾಜಕೀಯ ಪ್ರಭುತ್ವದಷ್ಟೇ ಪ್ರಬಲವಾಗಿ ಸಮಾಜವನ್ನು ತನ್ನ ತೆಕ್ಕೆಯಲ್ಲಿಟ್ಟು ನಡೆಸಿದ ಮತ್ತೊಂದು ಶಕ್ತಿ ಧರ್ಮ. ಕರ್ನಾಟಕದ ರಾಜಕೀಯದಲ್ಲಾದ ಎಲ್ಲಾ ಸ್ಥಿತ್ಯಂತರಗಳು ಧಾರ್ಮಿಕ ಸ್ಥಿತ್ಯಂತರಕ್ಕೆ ಕಾರಣವಾಗಿರುವುದನ್ನು ಇಲ್ಲಿನ ಶಾಸನಗಳು ತಿಳಿಸಿಕೊಡುತ್ತವೆ. ವಿವಿಧ ಮತ ಸಮುದಾಯಗಳ ಪಂಥ ಪಂಗಡಗಳ ನಡುವೆ ಪರಸ್ಪರ ಸಾಂಸ್ಕೃತಿಕ ಪ್ರಭಾವ, ಪ್ರಸಾರ, ಸಂಘರ್ಷ, ಸಮನ್ವಯ ಜರುಗಿದೆ. ಎಲ್ಲ ಧರ್ಮಗಳು, ಪ್ರಬಲ ಜಾತಿವರ್ಗ ಜನಾಂಗಗಳು ವಿಶೇಷವಾಗಿ ತಮ್ಮ ಧಾರ್ಮಿಕ ಸಂಸ್ಥೆಗಳನ್ನು ನಿರ್ಮಿಸಿ ತಮ್ಮ ಧರ್ಮವನ್ನು ಬಲಗೊಳಿಸಿಕೊಳ್ಳಲು ರಾಜಾಶ್ರಯಕ್ಕಾಗಿ ಸಿರಿವಂತರ ಪ್ರೋತ್ಸಾಹಕ್ಕಾಗಿ ಹಾತೊರೆಯುವುದು, ಅದಕ್ಕಾಗಿ ಇತರ ಧರ್ಮಗಳೊಂದಿಗೆ ಮೇಲಾಟ ನಡೆಸುವುದು ಯಾಕೆ? ಜನಪರ ಚಿಂತಕರಾದ ಲೋಕಾಯತರು, ವಚನಕಾರರು ಅರಸೊತ್ತಿಗೆಯನ್ನು, ದೇವಾಲಯ ವ್ಯವಸ್ಥೆಯನ್ನು, ಪಾರಲೌಕಿಕ ಚಿಂತನೆಗಳನ್ನು ವಿರೋಧಿಸಿದ್ದೇಕೆ ಈ ವಿರೋಧಗಳನ್ನೆಲ್ಲಾ ಜೀರ್ಣಿಸಿಕೊಂಡು ಈ 'ದೇವಾಲಯ ಸಂಸ್ಕೃತಿ' ಇಂದಿಗೂ ಉಳಿದು ಬಂದಿರಲು ಕಾರಣವೇನು ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವ, ಧರ್ಮ ಮತ್ತು ದೇವಾಲಯ ಸಂಸ್ಕೃತಿಯ ಹುಟ್ಟು ಬೆಳವಣಿಗೆ ಹಾಗೂ ಭಾರತೀಯ ದರ್ಶನಗಳು ನೀಡಿರುವ ಜೀವನ ದೃಷ್ಟಿ ಮತ್ತು ಧರ್ಮಗಳ ಸಂಬಂಧವನ್ನು ಅರ್ಥೈಸುವ ಪ್ರಯತ್ನ ಮಾಡಲಾಗಿದೆ.

ವರ್ಣ ಮತ್ತು ವರ್ಗ ವ್ಯವಸ್ಥೆಯಿಂದ ರೂಪುಗೊಂಡ ಯಜಮಾನ ಸಂಸ್ಕೃತಿಯೊಂದಿಗೆ ಅಧಿಕಾರ ಮತ್ತು ಅರ್ಥಮುಖಿಯಾದ ಧರ್ಮವು ತಳುಕು ಹಾಕಿಕೊಂಡ ಬಗೆಯನ್ನೂ ರಾಜಕೀಯ, ಧಾರ್ಮಿಕ, ಆರ್ಥಿಕ ಶಕ್ತಿ ಕೇಂದ್ರಗಳು ಒಂದಕ್ಕೊಂದು ಅವಲಂಬನೆ, ಒಡಂಬಡಿಕೆ ಮಾಡಿಕೊಂಡು ಸಾಗಿದ ಬಗೆಯನ್ನೂ ಅರಿಯುವ ಪ್ರಯತ್ನ ಮಾಡಲಾಗಿದೆ.

ಈ ಪ್ರದೇಶದಲ್ಲಿ ವಿವಿಧ ಧರ್ಮಗಳ ಸ್ಥಾನಮಾನವನ್ನು ದೇವಾಲಯ, ಜಿನಾಲಯ, ದೇವತೆಗಳು, ಮಠಮಾನ್ಯಗಳು, ಸ್ಥಳೀಯ ಅರಸರೊಂದಿಗೆ ಹಾಗೂ ಅಧಿಕಾರಿಗಳು, ವರ್ತಕರು, ಸಿರಿವಂತರು, ಜನಸಾಮಾನ್ಯರೊಂದಿಗೆ ಹೊಂದಿದ್ದ ಸಂಬಂಧವನ್ನು ಮತ್ತು ಪರಸ್ಪರ ಧರ್ಮಗಳ ಸಂಘರ್ಷ-ಸಮನ್ವಯಗಳನ್ನು, ಜನಪರವಾಗುವ, ಜನಪ್ರಿಯವಾಗುವ ನಿಟ್ಟಿನಲ್ಲಿ ಧರ್ಮಗಳೊಳಗೆ ಉಂಟಾದ ಸಂಚಲನ, ಒಡಂಬಡಿಕೆಗಳನ್ನು ಗುರುತಿಸಲಾಗಿದೆ.

ಏಳನೆಯ ಅಧ್ಯಾಯವು ಶಿಕ್ಷಣ, ಸಾಹಿತ್ಯ ಮತ್ತು ಕಲೆಗೆ ಮೀಸಲಾಗಿದ್ದು, ಪ್ರಸ್ತುತ ಪ್ರದೇಶದ ಬೌದ್ಧಿಕತೆ, ವಿವಿಧ ಜ್ಞಾನಶಾಖೆಗಳ ವಿಕಾಸದ ಬಗೆಗೆ ತಿಳಿದುಕೊಳ್ಳುವ ಪ್ರಯತ್ನವಾಗಿದೆ. ಯಾವುದೇ ಸಾಮಾಜಿಕ ಪ್ರದೇಶದ ಅಭಿವೃದ್ಧಿಯನ್ನು ಪರಿಗಣಿಸುವಾಗ ಕೇವಲ ಅದರ ಭೌತಿಕ ಸಂಪತ್ತಿನ ಅಭಿವೃದ್ಧಿಯನ್ನು ಹೇಳಿದರೆ ಸಾಲದು ಅದರೊಂದಿಗೆ ಆ ಪ್ರದೇಶದ ಬೌದ್ಧಿಕವಾದ ಸಂಪನ್ಮೂಲ ಅಭಿವೃದ್ಧಿಯಾದ ಶಿಕ್ಷಣ, ತಂತ್ರಜ್ಞಾನ ಕಲೆ ಇತ್ಯಾದಿಗಳ ಮೌಲ್ಯಿಕತೆಯನ್ನು ಪರಿಗಣಿಸಬೇಕಾಗುತ್ತದೆ.

ಈ ನಿಟ್ಟಿನಲ್ಲಿ ಪ್ರಸ್ತುತ ಪ್ರದೇಶದ ಅಗ್ರಹಾರಗಳು, ಬ್ರಹ್ಮಪುರಿಗಳು, ಶಿಕ್ಷಣ ವಿಷಯಗಳು, ಬಾಲ ಶಿಕ್ಷಣ ಮತ್ತು ಉನ್ನತ ಶಿಕ್ಷಣದ ಬಗೆಗಿನ ವಿವರಗಳನ್ನು ಸಂಗ್ರಹಿಸಲಾಗಿದೆ. ಹೊಯ್ಸಳ ಅಧಿಕಾರಿಗಳು, ಅರಸರು, ಶಿಕ್ಷಣ ಸಂಸ್ಥೆಗಳಿಗೆ ನೀಡಿದ ಪ್ರೋತ್ಸಾಹ, ಶ್ರೇಷ್ಠವಾದ ಸರ್ವಜ್ಞಪುರಿಗಳೆಂದೇ ಪ್ರಖ್ಯಾತವಾದ, ವಲ್ಲಭಿಗೆ ಸಮಾನವಾದ ಅಗ್ರಹಾರಗಳನ್ನು, ಬ್ರಹ್ಮಪುರಿಗಳನ್ನು ಸ್ಥಾಪಿಸುವಲ್ಲಿ ಅವರು ತೋರಿದ ಆಸಕ್ತಿ, ದೇವಾಲಯಗಳೊಂದಿಗೆ ಅಲ್ಲಿನ ಮಠಗಳಲ್ಲಿ ಅಧ್ಯಯನಕ್ಕಾಗಿ ಬಿಟ್ಟ ದಾನಗಳು ಇತ್ಯಾದಿಗಳನ್ನು ಗಮನಿಸಲಾಗಿದೆ.

ಇಲ್ಲಿನ ವಿದ್ಯಾಕೇಂದ್ರಗಳಲ್ಲಿನ ಸಾಂಪ್ರದಾಯಿಕ ಶಿಕ್ಷಣದೊಂದಿಗೆ ನೀಡುತ್ತಿದ್ದ ವಿವಿಧ ಭಾಷಾ ಬೋಧನೆ, ಲಿಪಿ ರಚನಾ ತರಬೇತಿ, ಕಾವ್ಯ, ನಾಟಕ, ಅವಧಾನಕಲೆ ಇತ್ಯಾದಿಗಳ ಬಗೆಗೆ ಹಾಗೂ ಅನೌಪಚಾರಿಕ ಶಿಕ್ಷಣ ವ್ಯವಸ್ಥೆಯಲ್ಲಿ ಮುಂದುವರೆಯುವ ಖಂಡರಣೆಯ ಕಲೆ, ವಿವಿಧ ಕುಶಲತೆ, ನೈಪುಣ್ಯತೆಗಳ ಬಗೆಗೆ ತಿಳಿದುಕೊಳ್ಳಲಾಗುವುದು. ಶ್ರೇಷ್ಠರಾದ ಕವಿಗಳು, ಅವರ ಕಾವ್ಯಪ್ರತಿಭೆ, ನಾನಾ ಭಾಷಾ ಪಂಡಿತರು, ನಿಪುಣ ಲಿಪಿಕಾರರು, ಖಂಡರಣೆಕಾರರು, ಶಿಲ್ಪಿಗಳ ಬಗೆಗೆ ಪರಿಚಯ ಮಾಡಿಕೊಳ್ಳಲಾಗಿದೆ.

ಅಂತಿಮವಾಗಿ ಪ್ರಸ್ತುತ ಅಧ್ಯಯನದ ಫಲಿತಗಳನ್ನು ಒರೆಗಲ್ಲಿಗೆ ಹಚ್ಚುವ ಮತ್ತು ಅಧ್ಯಯನದ ಸಾಧನೆಯನ್ನು ಪರಿಶೀಲಿಸುವ ಕಾರ್ಯವನ್ನು ಸಮಾರೋಪದಲ್ಲಿ ಕೈಗೊಳ್ಳಲಾಗಿದೆ. ಮೊದಲಬಾರಿಗೆ ಅರಸೀಕೆರೆ ತಾಲ್ಲೂಕಿನ ಶಾಸನಗಳನ್ನು ಸಮಗ್ರವಾದ ಅಧ್ಯಯನಕ್ಕೊಳಪಡಿಸಿ, ಅವುಗಳೊಳಗಿದ್ದ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಸಂಚಲನಗಳ ಬಗೆಗೆ ವಿವಿಧ ಆಕರಗಳ ನೆರವಿನೊಂದಿಗೆ ಮತ್ತು ಕ್ಷೇತ್ರಕಾರ್ಯದ ಬೆಂಬಲದೊಂದಿಗೆ ಅಧ್ಯಯನ ನಡೆಸಿರುವ ಒಂದು ಪ್ರಯತ್ನ ಇದಾಗಿದೆ.

**ಅಡಿಟಿಪ್ಪಣಿಗಳು**

೧. ಚಲುವನಹಳ್ಳಿ ಗವಿಮಠ ಒಂದು ಪ್ರಾಗೈತಿಹಾಸಿಕ ನೆಲೆ, ಹನುಮನಾಯಕ, ಇತಿಹಾಸ ದರ್ಶನ, ಸಂ.೯, ಪು.೬-೮; ಅರಸೀಕೆರೆ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು ಒಂದು ಶೋಧ, ಆರ್.ವೆಂಕಟೇಶಮೂರ್ತಿ, ಇತಿಹಾಸ ದರ್ಶನ, ಸಂ.೧೧, ಪು.೩೭-೩೮

೨. ಅರಸೀಕೆರೆಯಲ್ಲಿ ದೊರೆತ ಜೈನಧರ್ಮದ ಯಾಪನೀಯ ಸಂಘದ ಶಿಲಾಶಾಸನಗಳು, ಎಸ್.ಶೆಟ್ಟರ್, ಜಿ.ಕೆ.ಯು, ಸಂ.೧೦, ಪು.೧೫೯-೧೭೧

೩. ಚಲುವನಹಳ್ಳಿಯ ಎರಡು ಅಪ್ರಕಟಿತ ಶಾಸನಗಳು, ಇ.ದ.ಸಂ.೮, ಅರಸೀಕೆರೆ ತಾಲ್ಲೂಕಿನ ಎರಡು ಅಪ್ರಕಟಿತ ಶಾಸನವುಳ್ಳ ವೀರಗಲ್ಲುಗಳು, ಇತಿಹಾಸ ದರ್ಶನ ೧೦, ಪು.೯೩-೯೬

೪. ಕ.ವಿ.ವಿ.ಶಾ.ಸಂಪುಟ, ಬಳ್ಳಾರಿ ಜಿಲ್ಲೆ

೫. ಎ.ಕ. (ಪರಿಷ್ಕೃತ) ಸಂ.೭, ನಾಗಮಂಗಲ, ಎ.ಕ. (ರೈಸ್) ಸಂ.೭, ಶಿಕಾರಿಪುರ

೬. ಕರ್ನಾಟಕದ ಕೈಫಿಯತ್ತುಗಳು (ಸಂ), ಎಂ.ಎಂ.ಕಲಬುರ್ಗಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭. ತರೀಕೆರೆ ಪಾಳೆಯಗಾರರ ಕೈಫಿಯತ್ತು (ಸಂ) ಲಕ್ಷ್ಮಣ್ ತೆಲಗಾವಿ, ಹರಿತಿಸಿರಿ

೮. ಸಿರುಮನೃಪಾಲ ಕನ್ನಡ ಕಲಿ ಸಿರುಮನ ಚರಿತ್ರೆ, ಹುಲ್ಲೂರು ಶ್ರೀನಿವಾಸ ಜೋಯಿಸ್

೯. ತರೀಕೆರೆ ಪಾಳೆಯಗಾರ ಸರ್ಜಪ್ಪನಾಯಕನ ಕಥನಕಾವ್ಯ (ಸಂ) ಡಾ.ವಿರೂಪಾಕ್ಷಿ ಪೂಜಾರಹಳ್ಳಿ

೧೦. ಶಾಸನಮೌಲ್ಯ ವ್ಯವಸ್ಥೆ ಮತ್ತು ಸಂಸ್ಕೃತಿ ಸ್ಥಿತ್ಯಂತರ, ಬಸವರಾಜ ಕಲ್ಗುಡಿ, ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ ೧, ಪು.೧೧-೧೯

೧೧. ಎ.ಕ. (ಪರಿ) ಸಂ.೧೦, ಅ.ಕೆ.ಶಾ.ಸಂ.೭೧, ಶೆಟ್ಟಿಹಳ್ಳಿ, ಕ್ರಿ.ಶ.೭-೮ನೇ ಶತಮಾನ

೧೨. ಅದೇ, ಅ.ಕೆ.ಶಾ.ಸಂ.೨೪೯, ಹಾರನಹಳ್ಳಿ, ಕ್ರಿ.ಶ.೧೮೧೭

೧೩. ಅದೇ, ಅ.ಕೆ.ಶಾ.ಸಂ.೩೧೩, ಕೋಳಿಗುಂದ, ಕ್ರಿ.ಶ.೧೩ನೇ ಶತಮಾನ

೧೪. ಅದೇ, ಅ.ಕೆ.ಶಾ.ಸಂ.೩೧೪, ಅರೆಕೆರೆ, ಕ್ರಿ.ಶ.೧೨೩೩

೧೫. ಅದೇ, ಅ.ಕೆ.ಶಾ.ಸಂ.೨೪೦, ಹಾರನಹಳ್ಳಿ, ಕ್ರಿ.ಶ.೧೫೩೫

೧೬. ಅದೇ, ಅ.ಕೆ.ಶಾ.ಸಂ.೧೯, ಅರಸೀಕೆರೆ, ಕ್ರಿ.ಶ.೧೪೯೧

೧೭. ಎಂ.ಎಂ.ಕಲಬುರ್ಗಿ, ಮಾರ್ಗ-೨, ಪು.೧೭೩, ೧೯೦, ೧೯೯

೧೮. ಹನುಮನಾಯಕ, ಪೂರ್ವೋಕ್ತ, ಇ.ದ.ಸಂ.೯, ಪು.೬-೮

೧೯. ಆರ್.ವೆಂಕಟೇಶಮೂರ್ತಿ, ಪೂರ್ವೋಕ್ತ, ಇ.ದ.ಸಂ.೧೧, ಪು.೩೭-೩೮

೨೦. ಇತಿಹಾಸ ದರ್ಶನ ೧೩, ಪು.೨೦೫-೨೧೧

೨೧. ಜಿ.ಕೆ.ಯು, ಸಂ.೭, ಪು.೧೫೨-೧೬೮

೨೨. ಜಿ.ಕೆ.ಯು, ಸಂ.೧೦, ಪು.೧೪೯-೧೭೧

# ಅಧ್ಯಾಯ ೨

# ಚಾರಿತ್ರಿಕ ಹಿನ್ನೆಲೆ

# ೨

# ಚಾರಿತ್ರಿಕ ಹಿನ್ನೆಲೆ

## ೨.೧. ಅರಸೀಕೆರೆ-ಪರಿಚಯ

ತುಱುಗಿದ ನಂದನಂ ಪರಿವ ಕಾಲ್ವೆ ಕಡಲ್ಗಿವೆ ತೋಡೆನಿಪ್ಪಪೆ
ಗ್ರ್ಗಿಱಿ ಬಳಸಿರ್ದ ಪೆರ್ವೆಳಸು ಸಂದಣಿವೆತ್ತ ಜನಂ ವಿಳಾಸದಿಂ
ಮೆಱೆವಮರಾಲಯಂ ಬಹುಗೃಹಂಗಳ ಸೊಂಪಿವಱಿಂದೆ ಚೆಲ್ವುಕ
ಣ್ದೆಱೆದವೊಲೀ ಜಗಕ್ಕೆ ಜಯಗೊಂಡ ಪುರಂ ನಿಶದಂ ವಿರಾಜಿಕುಂ[೧]

'ಪರಮೇಷ್ಠಿ ಪ್ರಖ್ಯರಪ್ಪ ವಿಪ್ರರೂ, ಇಳಾಪ್ರಖ್ಯರಪ್ಪ ಶೂದ್ರಾಳಿ'ಯೂ ಕುಬೇರನನ್ನು ಮೀರಿಸುವ ವಣಿಜರೂ, ಇನಜನಂತೆ ದಾನಿಗಳಾದ ಕೊಯ್ಸಾಳ್ಗಳಿಂದ ಕೂಡಿ ವಿಶಾಲವಾದ ಕೆರೆ, ಸುಂದರ ನಂದನ, ದೇವಾಲಯಗಳಿಂದ ತುಂಬಿದ್ದು ಸುವರ್ಣವೃಷ್ಟಿ ಕರೆಯುತ್ತಿದ್ದ ರಾಜಧಾನಿ ಅರಸಿಯಕೆರೆಯು ಅಮರಾವತಿಯನ್ನು ಹೋಲುತ್ತಿತ್ತು.[೨] ದಕ್ಷಿಣ ಅಯ್ಯಾವಳೆ ಎಂದು ಖ್ಯಾತವಾಗಿದ್ದ ಅರಸೀಕೆರೆ ಹೊಯ್ಸಳ ಇಮ್ಮಡಿ ಬಲ್ಲಾಳನ ಕಾಲದಲ್ಲಿ ಭಂಡಾರವಾಡವಾಗಿತ್ತು ಅಷ್ಟೇ ಅಲ್ಲ ಸರ್ವಜ್ಞಪುರವೆಂದೂ, 'ಜಯಗೊಂಡ ಬಲ್ಲಾಳ ಪುರವಾದ ರಾಜಧಾನಿ ಅರಸೀಕೆರೆ' ಎಂದೂ ಪ್ರಖ್ಯಾತವಾಗಿತ್ತು. ಪ್ರಮುಖ ವಾಣಿಜ್ಯ ಕೇಂದ್ರವೂ ಧಾರ್ಮಿಕ ಕೇಂದ್ರವೂ ಪ್ರಾಂತೀಯ ರಾಜಧಾನಿಯೂ ಆಗಿ ಪ್ರತಿಷ್ಠೆ ವೈಭವಗಳಿಂದ ಮೆರೆದಿತ್ತು.

ಹಾಸನ ಜಿಲ್ಲೆಯ ತಾಲ್ಲೂಕುಗಳಲ್ಲಿ ಒಂದಾಗಿರುವ ಅರಸೀಕೆರೆಯು, ಅರಸೀಕೆರೆ ಪಟ್ಟಣವನ್ನು ತಾಲ್ಲೂಕು ಕೇಂದ್ರವಾಗಿ ಹೊಂದಿದೆ. ಬೇಲೂರು, ಚಿಕ್ಕಮಗಳೂರು, ಕಡೂರು, ಚಿಕ್ಕನಾಯಕನಹಳ್ಳಿ, ತಿಪಟೂರು, ಚನ್ನರಾಯಪಟ್ಟಣ, ಹಾಸನ ತಾಲ್ಲೂಕುಗಳಿಂದ ಸುತ್ತುವರೆದಿದೆ. ಮಲೆನಾಡನ್ನು ಮತ್ತು ಬಯಲು ಸೀಮೆಯನ್ನು ಬೆಸೆಯುವ ಈ ಪ್ರದೇಶವು ಬೆಟ್ಟ ಗುಡ್ಡಗಳಿಂದಲೂ ಕುರುಚಲು ಕಾಡುಗಳಿಂದಲೂ ಹುಲ್ಲುಗಾವಲುಗಳಿಂದಲೂ ತುಂಬಿದ್ದು ಹೆಚ್ಚು ಕೆರೆಗಳನ್ನು ಹೊಂದಿದೆ. ಮಾಲೆಯಂತೆ ಹಬ್ಬಿರುವ ಹಿರೇಕಲ್ಲು ಬೆಟ್ಟದ ಶ್ರೇಣಿ, ಕಲ್ಯಾಡಿ, ದೇಶಾಣಿ, ಜೇನುಕಲ್ಲು, ರಾಂಪುರ ಇತ್ಯಾದಿ ಗುಡ್ಡಗಳೂ ಗರುಡನ ಗಿರಿ, ನಾಗಪುರಿ ಬೆಟ್ಟಗಳು, ಕಣಿವೆ, ಕೊರಕಲು, ಹಳ್ಳ, ಕಲ್ಲಾಸರೆಗಳೂ ಗವಿಗಳೂ ಇದ್ದು ಆದಿ ಮಾನವನಿಗೆ ವಾಸಯೋಗ್ಯವಾದ ನೆಲೆಯನ್ನು ಒದಗಿಸಿದ್ದವು.

ಬಾಣಾವರ, ಗರುಡನಗಿರಿ, ಹಾರನಹಳ್ಳಿ, ಹುಲ್ಲೇಕೆರೆ, ಜಾವಗಲ್ಲು, ಅರಸೀಕೆರೆಯ ಪ್ರಸಿದ್ಧ ಐತಿಹಾಸಿಕ ಸ್ಥಳಗಳಾದರೆ ಮಾಲೆಕಲ್ಲುತಿರುಪತಿ ಇಲ್ಲಿನ ಪ್ರಸಿದ್ಧ ಧಾರ್ಮಿಕ ಯಾತ್ರಾ ಸ್ಥಳವಾಗಿದೆ. ಸಾವಿರ

ವರ್ಷಗಳ ಇತಿಹಾಸವಿರುವ ಅರಸೀಕೆರೆಯು ತನ್ನೆಲ್ಲ ವೈಭವವನ್ನು ಕಳೆದುಕೊಂಡು ನೆಲಕಚ್ಚಿದ್ದಾಗ ಮೈಸೂರು ಅರಸು ಮುಮ್ಮಡಿ ಕೃಷ್ಣರಾಜ ಒಡೆಯರು ಕೆಲವು ಅಭಿವೃದ್ಧಿಕಾರ್ಯಗಳನ್ನು ಕೈಗೊಂಡರು. ಕ್ರಿ.ಶ.೧೮೩೧ರಲ್ಲಿ ಬ್ರಿಟೀಷರ ನೇರ ಆಡಳಿತಕ್ಕೆ ಒಳಪಟ್ಟ ಮೇಲೆ ಕ್ರಿ.ಶ.೧೮೮೬ರಲ್ಲಿ ಕಣಕಟ್ಟೆ, ಅರಸೀಕೆರೆ, ಬಾಣಾವರ, ಜಾವಗಲ್ಲು, ಗಂಡಸಿ ಹೋಬಳಿಗಳನ್ನು ಹೊಂದಿ, ೧೨೭೮ ಕಿ.ಮೀ, ವ್ಯಾಪ್ತಿಯನ್ನು ಪಡೆದು ತಾಲ್ಲೂಕಾಗಿ ರಚನೆಗೊಂಡಿತು. ಕಲ್ಯಾಡಿಯಲ್ಲಿ ತಾಮ್ರದ ಗಣಿ ಉದ್ಯಮ, ಬಾಗೇಶಪುರದಲ್ಲಿ ಜೇಡಿಮಣ್ಣಿನ ಪಿಂಗಾಣಿ ತಯಾರಿಕಾ ಕಾರ್ಖಾನೆಗಳು ಪ್ರಾರಂಭವಾದವು. ಪುಣೆ ಬೆಂಗಳೂರನ್ನು ಬೆಸೆಯುವ ಕೂಡುರೈಲ್ವೇ ನಿಲ್ದಾಣವಾಗಿ ಅರಸೀಕೆರೆ ಪ್ರಸಿದ್ಧವಾಯಿತು. ಇದು ಈ ತಾಲೂಕಿನ ಪುನರುಜ್ಜೀವನಕ್ಕೆ ಕಾರಣವಾಯಿತು.

## ೨.೨. ಪ್ರಾಗೈತಿಹಾಸಿಕ ನೆಲೆಗಳು

ಕರ್ನಾಟಕದಲ್ಲಿ ನಡೆದಿರುವ ಪುರಾತತ್ವ ಶೋಧನೆಗಳಿಂದ ಇತಿಹಾಸ ಪೂರ್ವದಲ್ಲಿ ಸಹಸ್ರಾರು ವರ್ಷಗಳಿಂದ ಇಲ್ಲಿ ಜನಜೀವನದ ಕುರುಹುಗಳು ಪತ್ತೆಯಾಗಿವೆ. ಪ್ರಸ್ತುತ ಅಧ್ಯಯನ ಪ್ರದೇಶವಾದ ಅರಸೀಕೆರೆಯ ಪರಿಸರವು ಬೆಟ್ಟ ಗುಡ್ಡಗಳಿಂದ ಕೂಡಿದ್ದು ಅನೇಕ ಕಲ್ಲಾಸರೆಗಳನ್ನು, ನೀರಿನ ಆಸರೆಗಳನ್ನು ಹೊಂದಿದ್ದು ಹಿಂದೆ ಬೃಹತ್ ಶಿಲಾಯುಗದ ಜನರ ಶಾಶ್ವತ ನೆಲೆಯಾಗಿತ್ತೆಂಬುದಕ್ಕೆ ಈ ಪ್ರದೇಶದಲ್ಲಿ ಪತ್ತೆಯಾಗಿರುವ ಕಬ್ಬಿಣ ಯುಗದ ಬೃಹತ್ ಶಿಲಾಯುಗದ ಸಂಸ್ಕೃತಿಯ ಜನರ ವಾಸ್ತವ್ಯದ ನೆಲೆಗಳೂ ಹಾಗೂ ಶವಸಂಸ್ಕಾರದ ನೆಲೆಗಳೂ ಸಾಕ್ಷಿಯಾಗಿವೆ.

ಇದುವರೆಗೆ ಈ ಪ್ರದೇಶದಲ್ಲಿ ಐದು ಪ್ರಾಗೈತಿಹಾಸಿಕ ನೆಲೆಗಳು ಕಂಡುಬಂದಿವೆ. ಚಟ್ಟನಹಳ್ಳಿಯಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ನೆಲೆಯೂ ಚಲುವನಹಳ್ಳಿ, ತಳಲೂರು, ಬೊಮ್ಮೇನಹಳ್ಳಿ ರಾಂಪುರಗಳಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳೂ ನಿಲುವುಗಲ್ಲುಗಳೂ ವಾಸ್ತವ್ಯದ ನೆಲೆಗಳನ್ನು ಗುರುತಿಸಲಾಗಿದೆ. ಚಲುವನಹಳ್ಳಿ ಮತ್ತು ರಾಂಪುರ (ಬೇಚಿರಾರ್) ನಡುವಿನ ಗುಡ್ಡದ ತಪ್ಪಲಿನಲ್ಲಿ ಸುಮಾರು ೪ ಎಕರೆ ಹರಡಿರುವ 'ಬೂದಿ ಹೊಲ'ದಲ್ಲಿ ಕಂದುಕೆಂಪು ಬಣ್ಣದ ವಂಕಿ ಮತ್ತು ರೇಖಾವಿನ್ಯಾಸದ ಮಡಕೆ ಕುಡಿಕೆಗಳ ಚೂರುಗಳು ಹೇರಳವಾಗಿ ದೊರಕುತ್ತವೆ. ಇದರ ಸಮೀಪದಲ್ಲಿ ೩ ರಿಂದ ೫ ಅಡಿಗಳ ಎತ್ತರದ ನಿಲುವುಗಲ್ಲುಗಳನ್ನು ನೋಡಬಹುದು. ಕಲ್ಲು ಚಪ್ಪಡಿಗಳನ್ನು ಹಾಸಿರುವ ಸಮಾಧಿಯನ್ನು ಗುರುತಿಸಬಹುದು. ಇಲ್ಲಿನ ಗವಿ ಮಠಗಳಲ್ಲಿ ಕಡುಕೆಂಪು ಬಣ್ಣದ ಮತ್ತು ಬಿಳಿಯಬಣ್ಣದ ಮನುಷ್ಯ, ಜಿಂಕೆ, ನಾಯಿ, ನವಿಲು, ಏಣಿ, ಬಲೆ, ಹಾವುಗಳ ವರ್ಣಚಿತ್ರಗಳನ್ನು ಗುರುತಿಸಿದ್ದಾರೆ.[೩] ಬೊಮ್ಮೇನಹಳ್ಳಿಯ ಸಮೀಪ ಅನೇಕ ನಿಲುವುಗಲ್ಲುಗಳಿದ್ದು, ಒಂದು ನಿಲುವುಗಲ್ಲು ಸುಮಾರು ೨೫ ಅಡಿ ಎತ್ತರವಾಗಿದೆ. ತಳಲೂರಿನಲ್ಲಿ ೧೦ ರಿಂದ ೧೫ ಸಮಾಧಿಗಳು ಕಂಡುಬಂದಿದ್ದು ಇವುಗಳನ್ನು ಕ್ರಿ.ಪೂ. ೫೦೦ರ ಕಾಲವೆಂದು ಪರಿಗಣಿಸಲಾಗಿದೆ. ಕೆಂಪು ಕಪ್ಪು ಬಣ್ಣದ ಮಡಕೆ ಚೂರು, ಕುಡಿಕೆಗಳು, ಅರೆಯುವ

ಕಲ್ಲು, ನುಣುಪುಗಲ್ಲು, ಕಬ್ಬಿಣದ ಆಯುಧ ದೊರಕಿವೆ. ಕಲ್ಲಾಸರೆ, ನೀರಿನ ಆಸರೆ ಫಲವತ್ತಾದ ಮಣ್ಣು, ಕಾಡು ಇವುಗಳು ಬೇಟೆಯ ಜೀವನದೊಂದಿಗೆ ವ್ಯವಸಾಯವನ್ನು ರೂಡಿಸಿಕೊಳ್ಳಲು ಸಹಾಯಕವಾಗಿದ್ದು, ಗ್ರಾಮ ಜೀವನವು ಇಲ್ಲಿ ನೆಲೆಗೊಂಡಿತ್ತೆಂಬುದು ಸ್ಪಷ್ಟವಾಗುತ್ತದೆ.[೪]

## ೨.೩. ಸ್ಥಳೀಯ ಚರಿತ್ರೆ

ಇತಿಹಾಸದ ಆರಂಭಕಾಲವು ಪ್ರಾದೇಶಿಕ ಗಡಿಗಳ ಪ್ರಜ್ಞೆ ಮತ್ತು ರಾಜಕೀಯ ಸಾರ್ವಭೌಮತ್ವದ ಕಲ್ಪನೆ ದೃಢಗೊಳ್ಳತೊಡಗಿದ ಕಾಲ. ಭಾರತದಲ್ಲಿ ದೊಡ್ಡ ಸಾಮ್ರಾಜ್ಯಗಳು ತಲೆ ಎತ್ತತೊಡಗಿದವು. ಕ್ರಿ.ಪೂ.೩ನೇ ಶತಮಾನದ ಹೊತ್ತಿಗೆ ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ ಚಂದ್ರವಳ್ಳಿಗಳಲ್ಲಿ ಮೌರ್ಯ ಸಾಮ್ರಾಜ್ಯವು ವ್ಯಾಪಿಸಿತ್ತೆಂಬುದು, ಈ ಪ್ರದೇಶವು ಅವನ ದಕ್ಷಿಣದ ಗಡಿಯಾಗಿತ್ತೆಂದು ಅಲ್ಲಿನ ಶಿಲಾಲಿಪಿಗಳಿಂದ ತಿಳಿದುಬಂದಿದೆ. ಅರಸೀಕೆರೆ ಪರಿಸರದಲ್ಲಿ ಇಂತಹ ಯಾವುದೇ ಪ್ರಾಚೀನ ಕುರುಹುಗಳು ದೊರೆತಿಲ್ಲ.

ದಕ್ಷಿಣ ಕರ್ನಾಟಕದಲ್ಲಿ ಪ್ರಸಿದ್ಧವಾದ ಗಂಗ ಮಂಡಲ ಅಥವಾ ಗಂಗವಾಡಿ ೯೬೦೦೦ದಲ್ಲಿನ ನೀರ್ಗುಂದ ನಾಡು, ಮಗರೆನಾಡು ಮತ್ತು ಆಸಂದಿ ನಾಡುಗಳಲ್ಲಿ ಪ್ರಸ್ತುತ ಅರಸೀಕೆರೆ ತಾಲ್ಲೂಕು ಸೇರಿರುವುದು ಇಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ.

ನೀರ್ಗುಂದ ನಾಡು, ಗಂಗರು ಹಾಗೂ ಹೊಯ್ಸಳರ ಕಾಲಕ್ಕೆ ಪ್ರಮುಖ ಆಡಳಿತ ವಿಭಾಗವಾಗಿತ್ತು. ಇದು 'ನೀರ್ಗುಂದ ವಿಷಯ' ಎಂದೂ 'ನೀರ್ಗುಂದ ೩೦೦' ಎಂದೂ ಹಿರಿಯ ನೀರ್ಗುಂದ ನಾಡೆಂದು ಪ್ರಸಿದ್ಧವಾಗಿತ್ತು. ಕ್ರಿ.ಶ.೫-೬ನೇ ಶತಮಾನಕ್ಕೆ ಸೇರಿದ ಅವಿನೀತಕೊಂಗುಣಿ ಮಹಾಧಿರಾಜನ ಕೊಂಡಂಚೆರುವು ಶಾಸನದಲ್ಲಿ[೫] ಗಂಗವಾಡಿ ೯೬೦೦೦ದ ಅನೇಕ ನಾಡುಗಳ ಸಾಲಿನಲ್ಲಿ ಮರುಗರೆ, ನೀರ್ಗುನ್ದ, ಬೆಳಗೊಳ ಇತ್ಯಾದಿ ಉಲ್ಲೇಖಿಸಿದೆ.*[1] ನೀರ್ಗುಂದ ಮರುಗರೆ ಒಟ್ಟಾಗಿ ಗಂಗರ ಅನೇಕ ಶಾಸನಗಳಲ್ಲಿ ಕಂಡುಬಂದಿವೆ.[೬] ಅರಸೀಕೆರೆ, ಗಂಡಸಿ ಹೋಬಳಿಗಳ ಪ್ರದೇಶ ಹಾಸನ ತಾಲ್ಲೂಕಿನ ಸಾಲಗಾಮೆ ಹೋಬಳಿಯ ಕೆಲವು ಗ್ರಾಮಗಳು, ಚನ್ನರಾಯ ಪಟ್ಟಣದ ಬೆಳಗಲಿಯಿಂದ ಅಗ್ರಹಾರ ಬೆಳುಗಲಿಯವರೆಗಿನ ಉತ್ತರ ಭಾಗ, ತುಮಕೂರು ಜಿಲ್ಲೆಯ ತುರುವೆಕೆರೆ ತಾಲ್ಲೂಕಿನ ಹಾಗೂ ತಿಪಟೂರು ತಾಲ್ಲೂಕಿನ ಕೆಲವು ಗ್ರಾಮಗಳು ಈ ನೀರ್ಗುಂದ ಮುನ್ನೂರರ ಪರಿಧಿಯೊಳಗೆ ಬರುತ್ತವೆ.*[2]

ಮಗರೆನಾಡಿನ ಸ್ಪಷ್ಟ ಉಲ್ಲೇಖ ಕ್ರಿ.ಶ.೯೭೫ರ ಗಂಗ ನಾಲ್ಕನೇ ರಾಚಮಲ್ಲನ ಕೆರೆಗೋಡಿ ರಂಗಾಪುರದ ಶಾಸನದಲ್ಲಿ ನೀರ್ಗುಂದ ನಾಡಿನೊಂದಿಗೆ ಬಂದಿದೆ.[೭] ಮಗರೆ ಮುನ್ನೂರರ ವ್ಯಾಪ್ತಿಯು

---

* ಇಲ್ಲಿನ ಮರುಗರೆ ಮುಂದೆ ಮಗರೆ ಎಂದು ಕರೆಯಲ್ಪಟ್ಟಿರಬಹುದು
* ಆಯಾ ಪ್ರದೇಶದ ಶಾಸನಗಳಲ್ಲಿ ನೀರ್ಗುಂದ ನಾಡಿನ ಉಲ್ಲೇಖದ ಆಧಾರ

ಅರಸೀಕೆರೆಯ ಹಿರೇಕಲ್ಲು ಬೆಟ್ಟಸಾಲಿನ ಉತ್ತರದ ಪ್ರದೇಶ ಕಣಕಟ್ಟೆ ಹೋಬಳಿಯನ್ನು, ತಿಪಟೂರು ತಾಲ್ಲೂಕಿನ ಉತ್ತರ ಭಾಗವನ್ನು ಚಿಕ್ಕನಾಯಕನಹಳ್ಳಿ, ಹಿರಿಯೂರು ತಾಲ್ಲೂಕು ಮತ್ತು ಕಡೂರಿನ ನಿಡಗಟ್ಟ ಮಾದಾಪುರ ಸಿಂಗಟಗೆರೆ, ಯಗಟಿ ಮುಂತಾದ ಕೆಲವು ಪ್ರದೇಶಗಳನ್ನೂ ಒಳಗೊಂಡಿತ್ತು. ಕಣಕಟ್ಟೆಯನ್ನು ಮಗರೆ ಮೂನ್ನೂರರ ಮೊದಲ ಬಾಡವೆಂದು ಸುಮಾರು ಹತ್ತು ಶಾಸನಗಳು ಉಲ್ಲೇಖಿಸುತ್ತವೆ. ಹುಳಿಯಾರು ಮಗರೆನಾಡಿನ ರಾಜಧಾನಿಯಾಗಿತ್ತು.[೮]

ಆಸಂದಿನಾಡು ಗಂಗರ ಮತ್ತು ಹೊಯ್ಸಳರ ಕಾಲದಲ್ಲಿ ಒಂದು ಪ್ರಮುಖ ಆಡಳಿತ ವಿಭಾಗವಾಗಿತ್ತು. ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ಆಸಂದಿ ಗ್ರಾಮವು ಇದರ ಕೇಂದ್ರವಾಗಿತ್ತು. ಗಂಗ ಶ್ರೀಪುರುಷನ ಮಗ ವಿಜಯಾದಿತ್ಯನು ಎಂಟನೆಯ ಶತಮಾನದಲ್ಲಿ ಇಲ್ಲಿ ಆಡಳಿತ ನಡೆಸುತ್ತಿದ್ದನು. ತಲಕಾಡಿನ ಗಂಗರನ್ನು ಹೊಯ್ಸಳರು ಗೆದ್ದ ನಂತರ ಆಸಂಧಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಸಂದಿ ಗಂಗರೆಂಬ ಗಂಗರ ಶಾಖೆಯೊಂದು ೧೦ನೇ ಶತಮಾನದಿಂದ ೧೩ನೇ ಶತಮಾನದವರೆಗೆ ಹೊಯ್ಸಳರ ಸಾಮಂತರಾಗಿ ಆಳುತ್ತಿದ್ದರು.[೯] ಅರಸೀಕೆರೆ ತಾಲ್ಲೂಕಿನ ದೇಸಾಣಿ, ಕುರಾದ ಹಳ್ಳಿಗಳವರೆಗಿನ ಜಾವಗಲ್ಲು ಹಾಗೂ ಬಾಣಾವರ ಹೋಬಳಿಯ ಪ್ರದೇಶವು ಆಸಂದಿ ನಾಡಿಗೆ ಸೇರಿದ್ದವು.

### ೩.೩.೧. ಗಂಗರು

**ಶ್ರೀಪುರುಷ (೭೨೫-೮೮) :** ಅರಸೀಕೆರೆ ತಾಲ್ಲೂಕಿನಲ್ಲಿ ಗಂಗ ಪೂರ್ವದ ಯಾವುದೇ ಶಾಸನ ಕಂಡು ಬಂದಿಲ್ಲ. ಕೊಂಗುಣಿ ಮಹಾರಾಜ ಶ್ರೀಪುರುಷನ ಕಾಲದ ಎರಡು ಶಾಸನಗಳು ನೀರ್ಗುಂದರಸನನ್ನು ಉಲ್ಲೇಖಿಸಿವೆ. ಈ ನೀರ್ಗುಂದರಸನ ಆಳು ಪೊಟ್ಟೆಯರ ಕುಡಿಮುದ್ದನ ಮರಣವನ್ನು ದಾಖಲಿಸಿರುವ ಕಕ್ಕಿಹಳ್ಳಿ ಶಾಸನ ಅರಸನ ಹೆಸರನ್ನು ಹೇಳಿಲ್ಲ.[೧೦] ನಾಗಮಂಗಲ ತಾಮ್ರಪಟದಲ್ಲಿ ಪರಮಗೂಳ ಪೃಥುವೀ ನೀರ್ಗುಂದರಸ ದುಂಡು ಎಂದು ಹೇಳಿದ್ದು ಅವನ ಮಡದಿ ಕುಂದಾಚಿ ಶ್ರೀಪುರ (ಶಿವುರ)ದಲ್ಲಿ 'ಲೋಕತಿಲಕ ಜಿನಾಲಯ'ವನ್ನು ಕಟ್ಟಿಸಿದ್ದನ್ನು ಹೇಳಿದೆ.[೧೧]

**ಒಂದನೇ ರಾಚಮಲ್ಲ (೮೧೬-೫೩) :** ಇವನ ಗಂಡಸಿ ಶಾಸನ ರಾಷ್ಟ್ರಕೂಟ ಅರಸ ಬಲ್ಲಹ (ನೃಪತುಂಗ)ನನ್ನು, ಸ್ಥಳೀಯ ಅಧಿಕಾರಿ ಬಾಸಯ್ಯನನ್ನು, ಪ್ರಸಿದ್ಧ ಮುನಿ ಜಿನಸೇನ ಹಾಗೂ ಗುಣಭದ್ರರನ್ನು ಅವರ ಶಿಷಿತಿ ಕಾಡಬ್ಬೆ ಕಂತಿಯನ್ನು ಉಲ್ಲೇಖಿಸಿದೆ.[೧೨] ಇವನ ಕಾಲದಲ್ಲಿ ರಾಷ್ಟ್ರಕೂಟರ ಸೇನಾನಿಯಾದ ಬಂಕೇಶನು ಗಂಗರಾಜ್ಯದ ವಿಸ್ತರಣೆಯನ್ನು ತಡೆದಿದ್ದರಿಂದ ರಾಚಮಲ್ಲನು ನೊಳಂಬಾಧಿರಾಜ ಪೊಳಲ್ಚೋರನೊಂದಿಗೆ ಮಗಳು ಜಾಯಬ್ಬೆಯನ್ನು ಮದುವೆ ಮಾಡಿ ಸಂಬಂಧ ಬೆಸೆದಿದ್ದನು.[೧೩]

**ಇಮ್ಮಡಿ ರಾಚಮಲ್ಲ (೮೭೦-೯೧೯) ಎರೆಯಪ್ಪರಸ (೮೮೬-೯೨೦) :** ಇವನು ಗಂಗವಾಡಿಯನ್ನು ಆಳುತ್ತಿದ್ದಾಗ ಎರೆಯಪ್ಪರಸನು ಆತನಿಗೆ ನೆರವಾಗುತ್ತಿದ್ದನೆಂಬುದು ಕೆಲವು ಶಾಸನಗಳಿಂದ ತಿಳಿದು

ಬರುತ್ತದೆ. ಇವರಿಬ್ಬರ ಕಾಲದಲ್ಲಿ ನೊಳಂಬರೊಂದಿಗೆ ಕದನಗಳು ನಡೆಯುತ್ತಿದ್ದುದ್ದನ್ನು ಈ ಪ್ರದೇಶದ ಶಾಸನಗಳು ಉಲ್ಲೇಖಿಸುತ್ತವೆ. ಚಲುವನಹಳ್ಳಿ ಶಾಸನವು [೧೪] ಅತಿರಥ ಮಂಗಲದಲ್ಲಿ(?) ನಡೆದ ಯುದ್ಧವನ್ನು ಹೇಳಿದೆ. ಅರಕೆರೆಯ ಶಾಸನವು ಆಸಂದಿನಾಡನ್ನು ಆಳುತ್ತಿದ್ದ ಸಾಮಂತ ಮುತ್ತರನು ನೊಳಂಬರೊಂದಿಗಿನ ಕಣೆಕಟ್ಟೆಯಲ್ಲಿ ನಡೆದ ಯುದ್ಧದಲ್ಲಿ ಮಡಿದುದನ್ನು ಹೇಳುತ್ತದೆ. ಈ ಮುತ್ತರ ಬಲಿವಂಶ ತಿಲಕನಾಗಿದ್ದನು. ಇವನಿಗೆ ಭುವನಾದಿತ್ಯ ಮತ್ತು ಕಲಿಕಾಲ ಶೂದ್ರಕ ಎಂಬ ಬಿರುದುಗಳಿದ್ದವು.[೧೫] ಕಡೂರು ಮತ್ತು ಮುಗಳವಳ್ಳಿಯ ಶಾಸನಗಳೂ ಈ ಯುದ್ಧವನ್ನು ದಾಖಲಿಸಿವೆ.[೧೬] ಮತ್ತು ಈ ನೊಳಂಬಾಧಿರಾಜನು ಒಂದನೆಯ ಅಯ್ಯಪದೇವನೆಂದು ತಿಳಿಯುತ್ತದೆ. ಮಗರೆ ಮೂನ್ನೂರರ ಮೊದಲ ಬಾಡ ಕಣೆಕಟ್ಟೆ ಆಯಕಟ್ಟಿನ ಜಾಗದಲ್ಲಿದ್ದು ಸದಾ ದಾಳಿಗೆ ಒಳಗಾಗುತ್ತಿತ್ತು. ಗಂಗ ನೊಳಂಬರ ಸ್ನೇಹ ಹಳಸಿದ್ದು ದ್ವೇಷಕ್ಕೆ ತಿರುಗಿತ್ತೆಂಬುದು ಇದರಿಂದ ತಿಳಿಯುತ್ತದೆ. ಈ ಕಾಲದ ಅನೇಕ ವೀರಗಲ್ಲು ಶಾಸನಗಳು ದೊರಕುತ್ತವೆ. ಗಂಗ ನೊಳಂಬ ಬಾಣರ ನಡುವಿನ ಹೋರಾಟದಲ್ಲಿ ಪ್ರಕ್ಷುಬ್ಧ ಪರಿಸ್ಥಿತಿ ಉಂಟಾಗಿತ್ತು.

**ಇಮ್ಮಡಿ ಮಾರಸಿಂಹ (೯೬೩-೭೪) :** ಇವನ ಆಳ್ವಿಕೆಯ ಕಾಲದ ಮೂರು ಶಾಸನಗಳೂ ವೀರಗಲ್ಲುಗಳಾಗಿದ್ದು ಉಳನೂರಿನಲ್ಲಿ ನಡೆದ ಯುದ್ಧದ ಹಾಗೂ, ರಾಜಾದಿತ್ಯನು (ಚಾಳುಕ್ಯ) ಮಡಿದ ಕದನವೊಂದರ ಉಲ್ಲೇಖವಿದೆ.[೧೭] ನೊಳಂಬರ ವಿರುದ್ಧದ ಕದನದಲ್ಲಿ ಅಣ್ಣವಸಯ್ಯನು ಮರಣ ಹೊಂದಿದ್ದು ಅವನ ಮಗ ಬೂತುಗ ನೇರ್ಲಿಗೆಯನ್ನು ಕಲ್ನಾಡಾಗಿ ಪಡೆದಿದ್ದಾನೆ.[೧೮] ವಸಯ್ಯನು ವೀರಾವೇಶದಲ್ಲಿ ಹೋರಾಡಿ ಎದುರಿಸಿದ ನೊಳಂಬ ದೊರೆ ಕಟ್ಟಾನೆ ಮಲ್ಲ ಒಂದನೆಯ ನನ್ನಿನೊಳಂಬನಾಗಿದ್ದು ಅವನೊಂದಿಗೆ ಅವರ ವೀರರಾದ ಕಾಡುಗತ್ತಿ, ಉತ್ತಿಗ, ನೊಲಿಪ ಹಾಗೂ ಚಟ್ಟಿಗ ಇದ್ದರು[೧೯] ಈ ಯುದ್ಧಗಳಲ್ಲಿ ಜಯಶೀಲನಾದ ಇಮ್ಮಡಿ ಮಾರಸಿಂಹನು 'ನೊಳಂಬ ಕುಲಾನ್ತಕ'ನೆಂಬ ಬಿರುದನ್ನು ಧರಿಸಿದನು.

### ೩.೩.೨. ಕಲ್ಯಾಣ ಚಾಲುಕ್ಯರು

ಕಲ್ಯಾಣ ಚಾಲುಕ್ಯ ಅರಸರಾದ ಆರನೆ ವಿಕ್ರಮಾದಿತ್ಯ, ಆಹವಮಲ್ಲ, ಜಗದೇಕ ಮಲ್ಲ, ತ್ರಿಭುವನ ಮಲ್ಲರನ್ನು ಉಲ್ಲೇಖಿಸುವ ಶಾಸನಗಳು ವಿವಿಧ ಹೊಯ್ಸಳ ಅರಸರಿಗೆ ಸೇರಿದವಾಗಿದ್ದು, ಇದು ವಿಷ್ಣುವರ್ಧನನ ನಂತರ ಕೇವಲ ನಾಮಮಾತ್ರ ವಿಧೇಯತೆಯಾಗಿ ಕಂಡುಬರುತ್ತದೆ. ಈ ಶಾಸನಗಳು ಚಾಳುಕ್ಯರ ಬಗೆಗೆ ಯಾವ ಹೆಚ್ಚಿನ ಮಾಹಿತಿಯನ್ನು ನೀಡುವುದಿಲ್ಲ.

### ೩.೩.೩.ಹೊಯ್ಸಳರು

ಹೊಯ್ಸಳರ ಕಾಲದಲ್ಲಿ ಈ ಪ್ರದೇಶವು ಆರ್ಥಿಕ ಸಮೃದ್ಧಿಯನ್ನು ಪಡೆದು ಇಮ್ಮಡಿ ಬಲ್ಲಾಳನ ಕಾಲದಲ್ಲಿ ತನ್ನ ವೈಭವದ ಪರಾಕಾಷ್ಠೆಯನ್ನು ಮುಟ್ಟಿತ್ತು. ಮೂಲತಃ ಮಲೆಪರಾದ ಹೊಯ್ಸಳರು ಪ್ರಬಲ

ಮಾಂಡಲೀಕರಾಗಿ ಚಕ್ರವರ್ತಿಗಳಾಗಿ ಉದಯಗೊಂಡ ಅವರ ಗೆಲುವಿನ ಚರಿತ್ರೆಯನ್ನು ಕಟ್ಟಿಕೊಡಲು ಈ ಪ್ರದೇಶದ ಅಪಾರ ಶಾಸನಗಳು ಸಹಾಯಕವಾಗಿವೆ. ಹೊಯ್ಸಳ ಅರಸರ ಪಾದ ಪದ್ಮೋಪ ಜೀವಿಗಳಾದ ಅನೇಕ ಸಾಮಂತ ಅರಸರು, ನಾಳ್ಪಭುಗಳು, ಗಾವುಂಡರೂ, ಮಹಾ ಪ್ರಧಾನರು, ದಂಡನಾಯಕರು ಈ ಪ್ರದೇಶದ ವಿವಿಧ ಭಾಗಗಳ ಆಡಳಿತದ ಚುಕ್ಕಾಣಿ ಹಿಡಿದು ಇಲ್ಲಿನ ಅಭಿವೃದ್ಧಿಗೆ ಸಂಸ್ಕೃತಿ ವಿಕಸನಕ್ಕೆ ಅಪಾರ ಕೊಡುಗೆ ನೀಡಿದ್ದಾರೆ.

**ವಿನಯಾದಿತ್ಯ (೧೦೪೭-೧೦೯೮)** : ನೃಪಕಾಮನು ವಿನಯಾದಿತ್ಯನ ತಂದೆ ಎಂಬ ಉಲ್ಲೇಖವಷ್ಟೇ ಕರುಗುಂದ ಶಾಸನದಲ್ಲಿದೆ.[೨೦] ವಿನಯಾದಿತ್ಯನ ಕಾಲಕ್ಕೆ ಹೊಯ್ಸಳ ರಾಜ್ಯ ಹಾಸನ, ಚಿಕ್ಕಮಗಳೂರು ಜಿಲ್ಲೆಗಳನ್ನು ಮೀರಿ ಬೆಳೆಯತೊಡಗಿತ್ತು. ಈತ ಚಾಲುಕ್ಯರೊಡನೆ ರಕ್ತ ಸಂಬಂಧ ಮತ್ತು ರಾಜಕೀಯ ಬಾಂಧವ್ಯ ಬೆಳೆಸಿಕೊಳ್ಳಲು ಪ್ರಯತ್ನಿಸಿದನು. ಎರಡನೆಯ ಸೋಮೇಶ್ವರ ಮತ್ತು ಆರನೇ ವಿಕ್ರಮಾದಿತ್ಯರೊಡನೆ ಸ್ನೇಹ ಬಾಂಧವ್ಯ ಸಾಧಿಸಿ ಮಗ ಎರೆಯಂಗ ಮೊಮ್ಮಕ್ಕಳು ಚಾಳುಕ್ಯರ ದಂಡಯಾತ್ರೆಗಳಲ್ಲಿ ಪಾಲ್ಗೊಳ್ಳುವಂತೆ ಅವಕಾಶ ಮಾಡಿದನು. ಇದು ಅವರ ರಾಜಕೀಯ ಮತ್ತು ಯುದ್ಧತಂತ್ರಗಳನ್ನು ಹೇಳುತ್ತದೆ. ಇವನ ಆಳ್ವಿಕೆ ಸುದೀರ್ಘವಾಗಿತ್ತು.

ಮಹಾಪ್ರಚಂಡ ದಂಡನಾಯಕನಾಗಿದ್ದ ಏಚಿಮಯ್ಯನ ಮಗ ಪೋಚಿಮಯ್ಯ ದಂಡನಾಯಕನು ಕೋಳಿಗುಂದವನ್ನು ಆಳುತ್ತಿದ್ದನು. ಅವರ ಭದ್ರತಾ ದಳದ ಸುಭಟರು ಒಂದು ದೇವಾಲಯ ನಿರ್ಮಿಸಿದ್ದಾರೆ.[೨೧] ನೇರ್ಲಿಗೆಯನ್ನು ಆಳುತ್ತಿದ್ದ ಮಹಾ ಸಾಮಂತ ಬರ್ಮಯ್ಯನ ಚಿಕ್ಕಪ್ಪನಾದ ಆಲಮಯ್ಯನು ನೊಳಂಬನಕೆರೆಯಲ್ಲಿ (ನೊಣವಿನಕೆರೆ) ನಡೆದ ಯುದ್ಧದಲ್ಲಿ ಮಡಿದ ವಿಷಯ ದಾಖಲಾಗಿದೆ.[೨೨]

ನೀರ್ಗುಂದ ನಾಡಿನ ಕೆಂಬಾಳು ಹಾಗೂ ಬಾಗವಾಳು ಕೊಮಾರವೃತ್ತಿಯೆಂದು ವಿನಯಾದಿತ್ಯನ ಕಾಲದಲ್ಲಿ ಕರೆಯಲ್ಪಟ್ಟಿದ್ದವು. ಬಾಗೆವಾಳಿನಲ್ಲಿ 'ಪಟ್ಟವತ್ತನದ ಕುಲತಿಲಕ' ಗಡಿಯಂಕಕೇಸರಿ ನಂಟರಸನ್ನಹನ ಮಗನಾದ ಬೀಚಗಾವುಂಡ ಮತ್ತು ಮೊಮ್ಮಗ ಬಾಚಿಗಾವುಂಡರು ಆಳುತ್ತಿದ್ದು ಶಿವಾಲಯ ಮಾಡಿಸಿದ್ದಾರೆ.[೨೩]

ನೀರ್ಗುಂದನಾಡು ಹೊಯ್ಸಳ ರಾಜಧಾನಿಗೆ ಪೂರ್ವದ ಗಡಿಯಂತಿದ್ದು ಹೆಚ್ಚು ಸಂಪದ್ಭರಿತವಾಗಿತ್ತು. ಹಾಗೂ ಶ್ರೇಷ್ಠ ವಾಣಿಜ್ಯ ಪಟ್ಟಣಗಳನ್ನು ಹೊಂದಿದ್ದಿತು. ಅಲ್ಲದೆ ಹೊರಗಿನ ಆಕ್ರಮಣಕಾರರಿಗೆ ತಡೆಗೋಡೆಯಂತಿದ್ದುದರಿಂದ ಇಲ್ಲಿನ ಆಡಳಿತ ಮತ್ತು ರಕ್ಷಣೆಯ ವ್ಯವಸ್ಥೆಯನ್ನು ಹೊಯ್ಸಳ ಅರಸರು ತಮ್ಮ ನಿಷ್ಠಾವಂತ ಸಾಮಂತರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿ ಯುವರಾಜರಿಗೆ ಮತ್ತು ರಾಣಿಯರಿಗೆ ಈ ಪ್ರಾಂತವನ್ನು ವಹಿಸಿಕೊಟ್ಟಿರುವುದು ಹೆಚ್ಚಾಗಿ ಕಾಣುತ್ತದೆ.

**ಎಱೆಯಂಗ (೧೦೯೮-೧೧೦೦)** : ಇವನು ತಂದೆ ವಿನಯಾದಿತ್ಯನೊಂದಿಗೆ ಯುವರಾಜನಾಗಿದ್ದಾಗಲೇ ಕಲ್ಯಾಣದ ಚಾಲುಕ್ಯರ ದಿಗ್ವಿಜಯಗಳಲ್ಲಿ ಸಾಹಸವನ್ನು ಮೆರೆದು ಹೆಸರಾಗಿದ್ದನು. ಇವನು ಮಾಳವ

ಸೈನ್ಯವನ್ನು ಧಾರಾನಗರವನ್ನು ತುಳಿದವನೆಂದೂ ಚೋಳರನ್ನು ಸೋಲಿಸಿ ಅವರ ಶಿಬಿರವನ್ನು ಸುಟ್ಟನೆಂದೂ ಕಳಿಂಗರನ್ನು ಸೋಲಿಸಿ ಬಳೆಯ ಪಟ್ಟಣ ಎಂಬ ನಗರವನ್ನು ಸುಟ್ಟನೆಂದೂ ವಿಕ್ರಮಾದಿತ್ಯನ ಬಲಭುಜ ದಂತಿದ್ದನೆಂದೂ ಶಾಸನಗಳು ಹೊಗಳಿವೆ.[೨೪]

ಅರಸೀಕೆರೆಯಲ್ಲಿ ಇವನ ಮನೆ ಮೊನೆಯ ಮೆಚ್ಚಿನ ಅಧಿಕಾರಿ ಕಚ್ಚಪೆರ್ಗಡೆ ಆಳುತ್ತಿದ್ದು ಎಡೆಯಂಗನ ರಾಣಿಯ ಹೆಸರಿನಲ್ಲಿ ಅರಸೀಕೆರೆಯನ್ನು ಕಟ್ಟಿಸಿದನು.[೨೫] ಎಡೆಯಂಗನ ಎರಡನೆಯ ರಾಣಿ ಪಾಂಡ್ಯ ತೇಜರಾಯನ ಮೊಮ್ಮಗಳೂ ಕರ್ಕಡ ಮಹಾರಾಯನ ಮೊಮ್ಮಗಳೂ ಆದ ಮಹಾದೇವಿಯು ಮುತ್ತನ ಹೊಸವೂರಿನಲ್ಲಿ ಕೆರೆಯೊಂದನ್ನು ಕಟ್ಟಿಸುತ್ತಾಳೆ. ಇವಳು ಈ ಪ್ರದೇಶದ ರಾಣಿಯಾಗಿದ್ದು ಅವಳ ಅಧಿಕಾರಿ ಕಾಡುವಿಟ್ಟಿಯು ಕೆರೆ ಕಟ್ಟಿಸುವಲ್ಲಿ ನೆರವಾಗಿ, ದಾನ ಬಿಟ್ಟಿದ್ದಾನೆ.[೨೬] ಇವನ ಹೆಸರಿನಲ್ಲಿ ಕಾಡುವಿಟ್ಟಿಯ ಕೆರೆ (ಕಾಟಿಕೆರೆ) ಎಂಬ ಗ್ರಾಮವೊಂದು ನಿರ್ಮಾಣವಾಗಿದೆ.

ದೇಸಾಣಿ ಪ್ರದೇಶವನ್ನು ಹೆಗ್ಗಡೆ ಚಾವುಂಡಮಯ್ಯನ್ನು ಆಳುತ್ತಿದ್ದು ಅವನ ವಂಶದವರು ಹೊಯ್ಸಳರ ಸೇವೆಯನ್ನು ನಿಷ್ಠೆಯಿಂದ ಮಾಡಿದ್ದಾರೆ. ಇವನ ಮಕ್ಕಳಲ್ಲಿ ಜಿನ್ನ ಮತ್ತು ಪಾರ್ಶ್ವರು ಕರುಗುಂದ, ಗೋವಿಂದಪುರ, ದೇಶಾಣಿ, ಕುರಾದಹಳ್ಳಿಗಳ ಪ್ರದೇಶವನ್ನು ಆಳುತ್ತಿದ್ದರು. ಜೈನ ಧರ್ಮಕ್ಕೆ ಇವರ ಕೊಡುಗೆ ಅಪಾರ. ಗಂಗ ಮಂತ್ರಿ ಚಾವುಂಡರಾಯನೂ ವಿನಯಾದಿತ್ಯನ ಸಂಧಿವಿಗ್ರಹಿ ಹೆಗ್ಗಡೆ ಯಾದ ಈ ಚಾವುಂಡ ರಾಯನೂ ಭಿನ್ನರಾಗಿದ್ದು, ಚಾವುಂಡರಾಯ ಬಸದಿಯನ್ನು ಬೆಳಗೊಳ ಬೆಟ್ಟದಲ್ಲಿ ದೇಸಾಣಿಯನ್ನಾಳುತ್ತಿದ್ದ ಸಂಧಿವಿಗ್ರಹಿ ಚಾವುಂಡರಾಯನು ಕಟ್ಟಿಸಿದನು. ಜಿನ್ನನು ದೇಶಾಣಿಯನ್ನಾಳುತ್ತಿದ್ದ ಚಾವುಂಡರಾಯನ ಮಗ, ಪಾರ್ಶ್ವನ ಸೋದರನೆಂದು, ಬೆಳಗೊಳದಲ್ಲಿ ಈತ ಜನರೆಲ್ಲ ಹೊಗಳುವಂತೆ ದ್ವಿತಳ ಬಸದಿಯನ್ನು ಮತ್ತು ಪಾರ್ಶ್ವನಾಥ ಶಿಲ್ಪವನ್ನು ಮಾಡಿಸಿದ್ದಾನೆ ಎಂದು ಸಂಶೋಧಕರು ಗುರುತಿಸಿದ್ದಾರೆ.[೨೭]

**ಬಲ್ಲಾಳ ವಿಷ್ಣುವರ್ಧನ ಉದಯಾದಿತ್ಯ (೧೧೦೦ ರಿಂದ ೧೧೫೨) :** ಎರೆಯಂಗನ ಮಕ್ಕಳಾದ ಇವರು ಪರಾಕ್ರಮಿಗಳೂ ಸ್ವಾತಂತ್ರ್ಯ ಪ್ರಿಯರೂ ಆಗಿದ್ದು, ತಮ್ಮ ಬಲವನ್ನು ಹೆಚ್ಚಿಸಿಕೊಳ್ಳತೊಡಗಿದರು. ಚಂಗಾಳ್ವರು ಅಳುಪರು ಉಚ್ಚಂಗಿಪಾಂಡ್ಯರ ಮೇಲೆ ಜಯಗಳಿಸಿಕೊಂಡರು. ಮೇಲೇರಿ ಬಂದ ಜಗದೇವನನ್ನು ಸೋಲಿಸಿದ ನಂತರ ಚಾಳುಕ್ಯರೊಂದಿಗಿನ ಸಂಬಂಧ ಬಿರುಕು ಬಿಟ್ಟಿತು. ಉದಯಾದಿತ್ಯನು ನೀರ್ಗುಂದ ನಾಡಿನ ಕೆಲ್ಲವತ್ತಿಯಲ್ಲಿ ಆಳ್ವಿಕೆ ಮಾಡುತ್ತಿದ್ದು ಅವನ ಮರಣದ ಸಂದರ್ಭದಲ್ಲಿ ಪರೋಕ್ಷ ವಿನಯಕ್ಕಾಗಿ ದೇವಾಲಯ, ಅಗ್ರಹಾರ ಸ್ಥಾಪನೆಯನ್ನು ವಿಷ್ಣುವರ್ಧನ ಮಾಡಿದ್ದಾನೆ.[೨೮]

ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಆಸಂದಿ ಐನೂರು ಮತ್ತು ನೀರ್ಗುಂದ ಮುನ್ನೂರುಗಳನ್ನು ಅವನ ರಾಣಿ ಬಮ್ಮಲಾದೇವಿ ಆಳುತ್ತಿದ್ದಳು.[೨೯] ಮಗರೆ ಮುನ್ನೂರರ ಮೊದಲ ಬಾಡವಾದ ಕಣೆಕಟ್ಟೆಯ

ಭಾಗವನ್ನು ಅರಸೀಕೆರೆಯ ಸಿಂಘರಸನು ಆಳುತ್ತಿದ್ದನು.[೩೦] ಬಮ್ಮಲ ದೇವಿಯರ ಅಧಿಕಾರಿ ನಾಳ್ಪ್ರಭು ಎರಕಗಾವುಂಡ ಹಾರನಹಳ್ಳಿ ಕಿಸೂರುಗಳನ್ನು ಆಳುತ್ತಿದ್ದನು.[೩೧] ದೇಸಾಣಿ ಪ್ರದೇಶವನ್ನು ಚಾವುಂಡಮಯ್ಯ ಅವನ ಮಕ್ಕಳು ಆಳುತ್ತಿದ್ದರು.[೩೨] ಉಂಡಿಗನಾಳು ಚಲವನಹಳ್ಳಿಯ (ಚೆಲುವನಹಳ್ಳಿ) ಪ್ರದೇಶವನ್ನು ಉಂಡಿಗನಾಳಿನ ಜಟ್ಟಿ ವಂಶದವರು ಆಳುತ್ತಿದ್ದರು.[೩೩] ಸೇನವಗೆರೆ-೧೨ನ್ನು ಸಾಮಂತ ಬಂಕಯ್ಯನೂ[೩೪] ಚಳುಕೆಯವೃತ್ತಿಗಳನ್ನು ನಿಷ್ಠಾವಂತರಾದ ಡಿಂಗರಿಗ ಚಳುಕೆಯ ನಾಯಕನ ವಂಶದವರೂ ಆಳುತ್ತಿದ್ದರು.[೩೫] ಮನಗತ್ತೂರಿನ ಪ್ರದೇಶವನ್ನು ಸಂಕಗಾವುಂಡ ಚಟ್ಟಗಾವುಂಡ ನಾಳ್ಪ್ರಭುಗಳು ಆಳುತ್ತಿದ್ದರು.[೩೬]

**ಒಂದನೇ ನರಸಿಂಹ (೧೧೪೨-೭೩) :** ಇವನ ಕಾಲದ ಸುಮಾರು ೨೦ ಶಾಸನಗಳು ಈ ಪ್ರದೇಶದಲ್ಲಿ ದೊರಕಿವೆ. ಯುವರಾಜನಾಗಿದ್ದಾಗಲೇ ಕ್ರಿ.ಶ.೧೧೫೫ರ ಒಂದು ಶಾಸನದಲ್ಲಿ ಇವನ ಉಲ್ಲೇಖವಾಗಿದೆ.[೩೭] ಈ ಪ್ರದೇಶದ ಇವನ ಕೊನೆಯ ಶಾಸನ ಕ್ರಿ.ಶ.೧೧೬೩ಕ್ಕೆ ಸೇರುತ್ತದೆ. ತಂದೆಯಂತೆ ಸಮರ್ಥನಲ್ಲದ ಇವನ ಕಾಲದಲ್ಲಿ ಕಲಚುರ್ಯರು ಕರ್ನಾಟಕದ ರಾಜಕೀಯದಲ್ಲಿ ಮೇಲುಗೈ ಪಡೆಯಲು ಪ್ರಯತ್ನಿಸಿದರು. ಕಲಚುರ್ಯರ ಸಾಮಂತನಾದ ಬರ್ಮರಸನು ಬಿಜ್ಜಳನ ಮಗ ಅಹವಮಲ್ಲನ ಸೈನ್ಯದ ನೇತೃತ್ವ ವಹಿಸಿ ಹೊಯ್ಸಳ ಸೈನ್ಯವನ್ನು ತುಂಗಭದ್ರಾ ತೀರದಲ್ಲಿ ಭೀಕರ ಕಾಳಗದಲ್ಲಿ ಸೋಲಿಸಿದನು. ಈ ಕದನದಲ್ಲಿ 'ನರಸಿಂಹಹೊಯ್ಸಳ ದೇವನವಸರಕ್ಕೆ ತಲೆಗೊಟ್ಟ' ವೀರ ಪಟ್ಟಿಸ ಭಂಡಾರಿ ಪಾರಿಸಯ್ಯನ ಪರೋಕ್ಷವಿನಯದ ಶಾಸನವು ತಿಳಿಸುವಂತೆ ಕರುಗುಂದವನ್ನು ಪ್ರಭುತ್ವ ಸಹಿತ ಅವನ ಮಗ ಶಾಂತಿಯಣ್ಣ ದಂಡನಾಯಕನಿಗೆ ನರಸಿಂಹನು ನೀಡಿದ್ದಾನೆ.[೩೮]

ನರಸಿಂಹನ ಕಾಲದಲ್ಲಿ ಪ್ರಸಿದ್ಧ ಮಹಾಪ್ರಧಾನರು ದಂಡನಾಯಕರು ಈ ಪ್ರದೇಶವನ್ನು ಆಳಿದ್ದಾರೆ. ಮಹಾಪ್ರಧಾನ ಕೇತಯನು ದೇಶವಣಿಯನ್ನು ಆಳುತ್ತಿದ್ದನು.[೩೯] ಸಾಮಂತ ಗೋಯಿದೇವನು ಮಗರೆ ಮುನ್ನೂರನ್ನು ಆಳುತ್ತಿದ್ದನು.[೪೦]

ಸರ್ವಾಧಿಕಾರಿ, ಮಹಾಪ್ರಧಾನ ಬೂಚಣನು ಗಂಜಿಗೆರೆಯಲ್ಲಿ ಅಮೃತೇಶ್ವರ ದೇವರಿಗೆ ದಾನ ನೀಡಿದ್ದಾನೆ. ಹುಲ್ಲೇಕೆರೆಯನ್ನು ಅರಸನಿಂದ ಪಡೆದು ಅಗ್ರಹಾರ ಮಾಡಿ ಸುಂದರ ಕೇಶವದೇವಾಲಯ ನಿರ್ಮಿಸಿದ್ದಾನೆ.[೪೧]

ನೀರ್ಗುಂದ ನಾಡಿನ ಕುಮಾರ ವೃತ್ತಿಯ ಕೆಂಬಾಳಿನಲ್ಲಿ ಹೊಯ್ಸಳ ನರಸಿಂಹ ಅರಸು ಮತ್ತು ಗೌರಲದೇವಿಯರ ಮಗನಾದ ಕುಮಾರ ಎರೆಯಂಗದೇವನು ಆಳುತ್ತಿದ್ದನು.[೪೨] ಈ ಗೌರಲ ದೇವಿಯ ತಂದೆಯು ನರಸಿಂಹನ ನೆಚ್ಚಿನ ಅಂಗರಕ್ಷಕನಾಗಿದ್ದು ನಂತರ ಭಂಡಾರಿಗ ಪಸಾಯಿತನಾಗಿದ್ದ ನಿಷ್ಠಾವಂತ ಯೋಧ. ಇವನು ನೀರ್ಗುಂದ ನಾಡ ಕುಮಾರ ವೃತ್ತಿ ಕಗ್ಗನ ಬಿದಿರೆಯಲ್ಲಿ ಕಲಿದೇವರ ದೇವಾಲಯ ಮಾಡಿಸಿದ್ದಾನೆ.[೪೩]

**ಇಮ್ಮಡಿ ವೀರ ಬಲ್ಲಾಳ (೧೧೭೩-೧೨೨೦)** :ಪ್ರಸ್ತುತ ಪ್ರದೇಶದಲ್ಲಿ ಸುಮಾರು ೭೫ಕ್ಕೂ ಹೆಚ್ಚು ಶಾಸನಗಳು ಇವನಿಗೆ ಸೇರುತ್ತವೆ. ಕ್ರಿ.ಶ.೧೧೬೫, ೧೧೬೮ರ ಕೆಲವು ಶಾಸನಗಳು[೪೪] ಇವನು ರಾಜ್ಯಭಾರ ಮಾಡುತ್ತಿದ್ದನೆಂದು ಹೇಳುತ್ತವೆ. ತಂದೆಯಾದ ನರಸಿಂಹನ ಆಳ್ವಿಕೆಯಲ್ಲಿ ರಾಜ್ಯದ ಅಭಿವೃದ್ಧಿ ಕುಂಟಿತ ವಾಗಿದ್ದು ಅವನ ಅಸಮರ್ಥತೆಯಿಂದ ಶತ್ರುಗಳು ಪ್ರಬಲರಾಗುತ್ತಿದ್ದುದನ್ನು ಗಮನಿಸಿ ಸುಮ್ಮನಿರಲಾಗದ ಬಲ್ಲಾಳನು ತಂದೆಯೊಂದಿಗೆ ವೈಮನಸ್ಯ ಬೆಳೆಸಿಕೊಂಡಿದ್ದು ತಂದೆಯ ವಿರುದ್ಧ ದಂಗೆ ಎದ್ದು ೧೧೭೩ರಲ್ಲಿ ಪಟ್ಟಾಭಿಷಿಕ್ತನಾದನು. ಅರಸನು ದೋರ ಸಮುದ್ರದಲ್ಲಿದ್ದಾಗ ಯುವರಾಜ ಬಲ್ಲಾಳನು ನೀರ್ಗುಂದ ನಾಡಿನಲ್ಲಿ ಪ್ರಬಲನಾಗಿ ಅಲ್ಲಿನ ಸಾಮಂತರ ನಿಷ್ಠಾವಂತ ದಂಡನಾಯಕರುಗಳ ಬೆಂಬಲ ಪಡೆದಿದ್ದನು. ಅಲ್ಲದೆ ಅವನ ರಾಣಿಯರಾದ ಉಮಾದೇವಿ, ಚೋಳ ಮಹಾದೇವಿಬಮ್ಮಲದೇವಿಯರು. ಅರಸೀಕೆರೆ, ಕೆಂಬಾಳು, ಹುಲಿಕಲ್ಲು, ಭಾಗಗಳನ್ನು ಆಳುತ್ತಿದ್ದರು.

ಪಿರಿಯರಸಿ ಪಟ್ಟಮಹಾದೇವಿ ಉಮಾದೇವಿ ಅರಸೀಕೆರೆಯ ಪ್ರಧಾನ ಹರಿಹರ ವಿಭುವಿನ ಮೊಮ್ಮಗಳು, ಭಂಡಾರವಾಡದ ರಾಜ್ಯಾಧ್ಯಕ್ಷ ಕೇಶವಯ್ಯನ ಮಗಳಾಗಿದ್ದು ಅತ್ಯಂತ ಸಮರ್ಥ ಆಡಳಿತಗಾರ್ತಿಯಾಗಿದ್ದಳು. ಮಗರೆ ಮೂನ್ನೂರು ನೀರ್ಗುಂದ ನಾಡಿನ ಕೆಲವು ಭಾಗಗಳು ಇವಳ ಆಳ್ವಿಕೆಗೆ ಒಳಪಟ್ಟಿತ್ತು. ಹಿರಿಯ ಮನೆವೆರ್ಗಡೆ ಕೇಸಿಮಯ್ಯ, ಬಿಟ್ಟಿಯಣ್ಣ, ರೇಚಿಮಯ್ಯ, ಕೇತಮಲ್ಲ ಕುಮಾರ ಪಂಡಿತಯ್ಯ, ಚಂದ್ರಮೌಳಿಯಣ್ಣ ಮುಂತಾದ ಸಮರ್ಥ ಅಧಿಕಾರಿ ದಂಡನಾಯಕರು ಪ್ರಧಾನಿಗಳು ಅವಳ ಸಹಾಯಕ್ಕಿದ್ದರು.[೪೫]

ಚೋಳಮಹಾದೇವಿ ನೀರ್ಗುಂದನಾಡಿನ ಕುಮಾರ ವೃತ್ತಿಯ ಕೆಂಬಾಳನ್ನು ಹಾಗೂ ಕೈದಾಳ ನಾಡಿನ ಬೇವೂರು ಭಾಗಗಳನ್ನು ಸಮರ್ಥವಾಗಿ ಆಳುತ್ತಿದ್ದು, ರಾಮಣ್ಣ ಮತ್ತು ನಾಚಣ್ಣ ಹೆಗ್ಗಡೆಗಳಂತಹ ನಿಷ್ಠಾವಂತ ಅಧಿಕಾರಿಗಳನ್ನು ಹೊಂದಿದ್ದಳು.[೪೬]

ಬಮ್ಮಲದೇವಿಯ ತಂದೆ ಮೊಖರಿ ಲಖಯ್ಯನು ಮಹಾಪಸಾಯಿತನೂ ನೀರ್ಗುಂದ ನಾಡಿನ ಹುಲಿಕಲ್ಲಿನ ಪ್ರಭುವೂ ಆಗಿದ್ದನು.[೪೭] ಅವಳ ಮಾವ ಬಲ್ಲಾಳನು ಹಲುಕೂರಿನ ಅಧಿಕಾರಿಯಾಗಿದ್ದನು.[೪೮]

ಇಮ್ಮಡಿ ಬಲ್ಲಾಳನ ನಿಷ್ಠಾವಂತ ಸಾಮಂತರು, ಅಧಿಕಾರಿಗಳಲ್ಲಿ ಕೋಳಿಗುಂದದ ಮಾವಂತರು.[೪೯] ಮುದುಡಿಯ ಪಟ್ಟದ ಇಭದಾರುಕ ಮಾವಂತರು.[೫೦] ... ಹುಳಿಯೇರದ ಗೋವಿದೇವ ಮತ್ತು ಬಲ್ಲಾಳರು.[೫೧] ಹೊಳಲ್ಕೆರೆಯ ಮಾಚಿದೇವ[೫೨],ಆಸಂದಿಯ ಗಂಗವಂಶದ ಬಮ್ಮರಸ[೫೩],ಅಮಿತದಂಡಾದಿಪ[೫೪] ಎರೆಯಣ್ಣ[೫೫], ನೀರ್ಗುಂದದ ಚಟ್ಟರಸ[೫೬],ಮಹಾಪ್ರಧಾನ ಕೇಶೀರಾಜ[೫೭],ಮಧುಸೂಧನ ದಂಡಾಧಿಪರು[೫೮] ಮುಖ್ಯರಾಗಿದ್ದು ಈ ಪ್ರಾಂತ್ಯವು ಸಂಪದ್ಭರಿತವೂ ಸುರಕ್ಷಿತವೂ ಆಗಿರುವಂತೆ ಮಾಡಿ ಅನೇಕ ಕೊಡುಗೆಗಳನ್ನು ನೀಡಿದ್ದಾರೆ. ಬಲ್ಲಾಳನ ದಿಗ್ವಿಜಯಗಳಿಗಾಗಿ ದುಡಿದಿದ್ದಾರೆ.

ರಾಣಿ ಉಮಾದೇವಿಯ ತವರೂರಾಗಿದ್ದು ತೆಂಕಣ ಅಯ್ಯಾವಳೆ, ಸರ್ವಜ್ಞಪುರಿ ಎಂದು ಖ್ಯಾತಿಗೆ ಒಳಗಾಗಿದ್ದ ಅರಸೀಕೆರೆಯನ್ನು ಬಲ್ಲಾಳನು ಪ್ರಾಂತೀಯ ರಾಜಧಾನಿಯನ್ನಾಗಿ ಮಾಡಿಕೊಂಡು ಅದನ್ನು ತನ್ನ ಪಟ್ಟಾಭಿಷೇಕದಂದು ಜಯಗೊಂಡ ಬಲ್ಲಾಳಪುರವೆಂದು ಕರೆದುದಲ್ಲದೆ, ಅದರ ಸರ್ವತೋಮುಖ ಬೆಳವಣಿಗೆಗೆ ಕಾರಣನಾದನು. ಧಾರ್ಮಿಕ, ಆರ್ಥಿಕ, ರಾಜಕೀಯ ಪ್ರಾಮುಖ್ಯತೆಯನ್ನು ಪಡೆದ ಅರಸೀಕೆರೆ ಭಂಡಾರವಾಡವಾಗಿ ಮೆರೆಯಿತು. ಈ ಪ್ರಾಂತವು ಬಲ್ಲಾಳನ ಶಕ್ತಿಕೇಂದ್ರವಾಗಿದ್ದು ಯುವ ರಾಜನಾಗಿದ್ದಾಗಿನಿಂದ ಚಕ್ರವರ್ತಿಯಾಗಿ ಮೆರೆಯುವಲ್ಲಿ ಅವನ ಕಾರ್ಯ ಚಟುವಟಿಕೆಗೆ ಒತ್ತಾಸೆಯಾಗಿ ನಿಂತಿತು. ಈ ಪ್ರದೇಶ ಇವನ ಕಾಲದಲ್ಲಿ ಅಭಿವೃದ್ಧಿಯ ಪರಾಕಾಷ್ಠೆಯನ್ನು ಮುಟ್ಟಿತು.

**ಇಮ್ಮಡಿ ನರಸಿಂಹ (೧೨೨೦-೧೨೩೫) :** ನರಸಿಂಹನು ಯುವರಾಜನಾಗಿದ್ದಾಗಲೇ ತಂದೆಯೊಂದಿಗೆ ಯುದ್ಧ ಮತ್ತು ಆಡಳಿತಗಳಲ್ಲಿ ನೆರವಾಗುತ್ತಿದ್ದನು. ಕ್ರಿ.ಶ.೧೨೦೭ ರಿಂದಲೇ ಇವನ ಶಾಸನಗಳು ಈ ಪ್ರದೇಶದಲ್ಲಿ ಕಾಣಿಸಿಕೊಳ್ಳುತ್ತವೆ.[೫೯] ಅಗ್ರಹಾರ ಬೆಳಗುಲಿಯ ೧೨೦೯ರ ಶಾಸನವು ನರಸಿಂಹನನ್ನು ಅಧಿರಾಜನೆಂದೂ ಯುವರಾಜನೆಂದೂ ನರಸಿಂಹ ಕುಮಾರನೆಂದೂ ಕರೆದು ಅವನ ಶೌರ್ಯೋತ್ಸಾಹಗಳನ್ನು ಅವನ ಸೋದರಿ ಸೋವಲಾದೇವಿಯ ಚೆಲುವು ದಾನಗುಣಗಳನ್ನು ವಿಶೇಷವಾಗಿ ಹೊಗಳಿದೆ. ಎಲ್ಲ ಹೊಯ್ಸಳ ರಾಜಕುಮಾರರಂತೆ ಈ ನರಸಿಂಹನೂ ನೀರ್ಗುಂದ ನಾಡಿನ ಕುಮಾರ ವೃತ್ತಿಯ ಆಡಳಿತವನ್ನು ವಹಿಸಿಕೊಂಡು ರಾಜ್ಯಾಡಳಿತದ ಅನುಭವ ಪಡೆಯುತ್ತಿದ್ದನೆನ್ನಬಹುದು. ಈತ ಕ್ರಿ.ಶ.೧೨೨೦ರಲ್ಲಿ ಪಟ್ಟಕ್ಕೆ ಬಂದಿದ್ದಾನೆ.[೬೦]

ತಂದೆಯಂತೆ ಮಹಾ ಪರಾಕ್ರಮಿಯೂ ಮಹತ್ವಾಕಾಂಕ್ಷಿಯೂ ಆದ ಇಮ್ಮಡಿ ನರಸಿಂಹನ ದಿಗ್ವಿಜಯಗಳ ಬಗೆಗೆ ಕೆಲವು ಶಾಸನಗಳು ಬೆಳಕು ಚೆಲ್ಲುತ್ತವೆ. ಅವನು ತೀವ್ರವಾಗಿ ಚೋಳ ಪಾಂಡ್ಯರ ರಾಜಕೀಯ ವ್ಯವಹಾರಗಳಲ್ಲಿ ಆಸಕ್ತಿವಹಿಸಿದ್ದನು. ಕಾಡವ, ಪಲ್ಲವ ಪಾಂಡ್ಯರ ಒಕ್ಕೂಟವನ್ನು ಮುರಿದು ಅವನ ಸೇನಾನಿಗಳಾದ ಅಪ್ಪಣ್ಣ ಮತ್ತು ಗೋಪಣ್ಣರು ವಿಜಯಸಾಧಿಸಿದ್ದರು. ನರಸಿಂಹನು ರವಿತದಾಣದ ಕುಪ್ಪದಲ್ಲಿ ಅವನ ಮಗ ವೀರ ಸೋವಿದೇವನು ಮಂಗಲದ ಕುಪ್ಪದಲ್ಲಿ ಬೀಡು ಬಿಟ್ಟ ವಿಚಾರಗಳನ್ನು ಹಾರನಹಳ್ಳಿ ಶಾಸನ ಹೇಳಿದೆ.[೬೧] ಮಗರ ರಾಜ್ಯದ ಮೇಲಿನ ತನ್ನ ದಿಗ್ವಿಜಯವನ್ನು ಸಾಧಿಸಿ 'ಮುನಿವರಾದಿತ್ಯನಿಂದ ತನ್ನ ಜಯಮಾಲೆಗೆ ಮತ್ತೊಂದು ಮರಕತವನ್ನು ಸೇರಿಸಿಕೊಂಡ" ನರಸಿಂಹನು ಚೂಡವಾಡಿಯ ಕೊಪ್ಪದಲ್ಲಿ ಬೀಡುಬಿಟ್ಟು ವಿಜಯೋತ್ಸವ ಔತಣಕೂಟವನ್ನು ಏರ್ಪಡಿಸಿದ್ದನೆಂದೂ ಆ ಸಂದರ್ಭದಲ್ಲಿ ಕೆಂಬಾಳನ್ನು ಅಗ್ರಹಾರ ಮಾಡಲು ಶ್ರೀಕರಣದ ವಿಶ್ವನಾಥನಿಗೆ ಆಜ್ಞೆ ಮಾಡಿದನೆಂದು ತಿಳಿದುಬರುತ್ತದೆ.[೬೨] ಇವನು ಮಗರರಾಜ್ಯ ನಿರ್ಮೂಲಕನೆಂದು ಚೋಳರಾಜ್ಯ ಪ್ರತಿಷ್ಠಾಪಕನೆಂದೂ ಬಿರುದನ್ನು ಪಡೆದನು.

ಇವನ ಕಾಲದಲ್ಲಿ ಅನೇಕ ಅಗ್ರಹಾರಗಳನ್ನು ಸ್ಥಾಪಿಸಲಾಯಿತು. ವಿದ್ಯಾಸಂಸ್ಥೆಗಳಿಗೆ ಹಿಂದಿನ ಮಾನ್ಯತೆಗಳನ್ನು ಮುಂದುವರಿಸಿದ್ದಲ್ಲದೆ ಸವಲತ್ತುಗಳನ್ನು ಹೆಚ್ಚಿಸಿರುವುದು ಕಂಡುಬರುತ್ತದೆ.[೬೩] ಶ್ರೇಷ್ಠರಾದ

ಕೇರಳದ ಮಹಾವಡ್ಡ ವ್ಯವಹಾರಿ ದಾಮೋದರ ಶೆಟ್ಟಿಯು ನರಸಿಂಹನ ಆಪ್ತನಾಗಿದ್ದು, ರಾಜಪೂಜ್ಯನೆನಿಸಿದ್ದು ಅರಕೆರೆ ಬೆಂಡೆಕೆರೆಗಳ ಅಭಿವೃದ್ಧಿಗೆ ಕಾರಣನಾಗಿದ್ದಾನೆ.

ಹಾರನಹಳ್ಳಿಯಲ್ಲಿನ ಸೋಮೇಶ್ವರ ದೇವಾಲಯ, ಲಕ್ಷ್ಮೀನರಸಿಂಹ ದೇವಾಲಯ ಅರಸೀಕೆರೆಯ ಬಲ್ಲೇಶ್ವರ ದೇವಾಲಯ ಇವನ ಕಾಲದಲ್ಲಿ ನಿರ್ಮಾಣವಾಯಿತು. ಈ ಪ್ರದೇಶದಲ್ಲಿ ತಂದೆ ಬಲ್ಲಾಳನು ಮಾಡಿದ್ದ ಅಭಿವೃದ್ಧಿ ಕಾರ್ಯಗಳನ್ನು ಈತ ಮುಂದುವರಿಸಿದ್ದಾನೆ. ಇವನ ಸೋದರಿ ಸೋವಲದೇವಿ ಹಾರನಹಳ್ಳಿಸೋಮೇಶ್ವರ ಅಗ್ರಹಾರವನ್ನು ಶ್ರೇಷ್ಠ ವಿದ್ಯಾಕೇಂದ್ರವಾಗಿ ಮಾಡಿದಳು.[೬೪]

**ಸೋಮೇಶ್ವರ (೧೨೩೫-೧೨೫೩) :** ಇವನ ಕಾಲದಲ್ಲಿ ಕೇವಲ ಹತ್ತು ಶಾಸನಗಳು ಈ ಪ್ರದೇಶದಲ್ಲಿ ಕಂಡುಬಂದಿದ್ದರೂ, ಆರ್ಥಿಕ ಅಭಿವೃದ್ಧಿ, ದೇವಾಲಯ ನಿರ್ಮಾಣ ವಿಶೇಷವಾಗಿ ಇಲ್ಲಿ ನಡೆದಿದೆ. ಸೋಮೇಶ್ವರನು ತಂದೆಯೊಂದಿಗೆ, ಅವನ ದಕ್ಷಿಣ ದಿಗ್ವಿಜಯಗಳಲ್ಲಿ ಪಾಲ್ಗೊಂಡಿದ್ದು, ಕಾಡವನನ್ನು ಜಯಿಸಿದನೆಂದು ತಿಳಿದು ಬರುತ್ತದೆ. ಸೋದರತ್ತೆಯಾದ ಸೋವಲದೇವಿಯು ಚೋಳ ಕುಲೋತ್ತುಂಗನ ಮಡದಿಯಾಗಿದ್ದು, ಸೋಮೇಶ್ವರನನ್ನು ತಾಯಿಯಂತೆ ಸಾಕಿ ಸಲಹಿದ್ದರಿಂದ ಇವನು ತಮಿಳು ನಾಡಿನಲ್ಲೇ ಬೆಳೆದನು. ಮುಂದೆ ಕಣ್ಣಾನೂರಿನಲ್ಲಿ (ವಿಕ್ರಮಪುರ) ವಿಸ್ತರಿಸಿದ ರಾಜ್ಯದ ಒಡೆಯನಾಗಿ ನೇಮಕಗೊಂಡನು.[೬೫]

ಇವನ ಕಾಲದಲ್ಲಿ ಹಾರನಹಳ್ಳಿ, ನುಗ್ಗೇಹಳ್ಳಿ, ಜಾವಗಲ್ಲಿನಲ್ಲಿ ಅತ್ಯಂತ ಸುಂದರದೇವಾಲಯ ಮಲ್ಲಿತಮನಿಂದ ನಿರ್ಮಾಣವಾಯಿತು. ಕೇರಳ ವ್ಯಾಪಾರಿಗಳು ಪ್ರಸ್ತುತ ಪ್ರದೇಶದ ವ್ಯಾಪಾರ ವಹಿವಾಟನ್ನು ಮುನ್ನಡೆಸುತ್ತಿದ್ದರು.[೬೬]

**ಮೂರನೇ ನರಸಿಂಹ (೧೨೫೩-೧೨೯೨) ರಾಮನಾಥ (೧೨೫೩-೧೨೯೫) :** ಮೂರನೇ ನರಸಿಂಹನ ೧೪ ಶಾಸನಗಳು ಪ್ರಸ್ತುತ ಪ್ರದೇಶದಲ್ಲಿ ೧೨೫೮ ರಿಂದ ೧೨೯೪ರವರೆಗೆ ದೊರಕಿವೆ. ಮದುಡಿಯ ಶಾಸನ ನಿಡುಗಲ್ಲು ಕೋಟೆಯ ಕಾಳಗದಲ್ಲಿ ಮಡಿದ ವೀರನ ವೀರಗಲ್ಲಾಗಿದೆ.

ರಾಮನಾಥನ ಮೂರು ಶಾಸನಗಳು ಕಣ್ಣಾನೂರಿನಿಂದ ಆಳುತ್ತಿದ್ದನೆಂದು ಹೇಳಿವೆ. ಇವೆಲ್ಲವೂ ವೀರಗಲ್ಲುಗಳಾಗಿವೆ. ಕೊಂಕಣ ಕುಡಿಯಲ್ಲಿ ನಡೆದ ಕದನವೊಂದರಲ್ಲಿ ಅಂಗರಕ್ಷಕ ಕಲ್ಲೆಯ ಮತ್ತು ಇತರರು ಒಟ್ಟು ೧೧ ಜನ ಮಡಿದ ದಾಖಲೆಯ ವೀರಗಲ್ಲಿದೆ.[೬೮] ನರಸಿಂಹ ಮತ್ತು ರಾಮನಾಥರ ನಡುವಿನ ಹೋರಾಟದ ವೀರಗಲ್ಲುಗಳೇ ಈ ಕಾಲದಲ್ಲಿ ಹೆಚ್ಚಾಗಿ ಕಂಡುಬರುತ್ತವೆ.[೬೯] ಮುಮ್ಮಡಿ ನರಸಿಂಹನ ಪ್ರಮುಖ ಸೇನಾನಿಗಳಲ್ಲಿ ಪೆರುಮಾಳೆ ದಂಡನಾಯಕ,[೭೦] ಬೀರಯ್ಯ ದಂಡ ನಾಯಕರನ್ನು[೭೧] ಉಲ್ಲೇಖಿಸುವ ಶಾಸನಗಳಿವೆ. ಇವರು ಪರಮಸ್ವಾಮಿನಿಷ್ಠ ವೀರರೂ, ಧರ್ಮಪರರೂ ಆಗಿದ್ದು ಯುದ್ಧಗಳಲ್ಲಿ, ದೇವಾಲಯ ನಿರ್ಮಾಣದಲ್ಲಿ ಮುಂದಿದ್ದರು.

**ವಿಶ್ವನಾಥ-ಮುಮ್ಮಡಿ ಬಲ್ಲಾಳ :** ರಾಮನಾಥನ ಮಗ ವಿಶ್ವನಾಥನ ಶಾಸನಗಳು ಈ ಪ್ರದೇಶದಲ್ಲಿ ದೊರಕಿಲ್ಲ. ಮುಮ್ಮಡಿ ಬಲ್ಲಾಳನ ಏಳು ಶಾಸನಗಳು ದೊರಕಿವೆ. ಇವನ ಪ್ರಮುಖ ದಂಣಾಯಕರಲ್ಲಿ ಕಾಮೆಯ ದಂಣಾಯಕ, ಅಂಕೆಯ ದಂಣಾಯಕ, ಸೋಮೆಯ ದಂಡನಾಯಕರು ಇಲ್ಲಿ ಕಾಣಿಸಿಕೊಂಡಿದ್ದಾರೆ. ಕಲ್ಗುಂಡಿಯ ಶಾಸನದಲ್ಲಿ[೭೨] ತುರುಕರ ಸೈನ ಗೊರವನ ಕಲ್ಲಿನವರೆಗೆ (ಕಣಿಕಟ್ಟೆ ಸಮೀಪ) ಬಂದಾಗ ಲಿಂಗದ ಹಳ್ಳಿಯ ಮಾರಗೌಡ ಕಾದಿ ಕುದುರೆಯನ್ನು ಹಿಡಿದು ಬಲ್ಲಾಳ, ಕಾಮೆಯ್ಯ ದಂಣಾಯಕರಿಂದ ಮೆಚ್ಚುಗೆಯಾಗಿ ಕಲ್ಲುಂಡಿಯನ್ನು ಪಡೆದ ವಿಚಾರವಿದೆ. ಹಿರಿಯ ನೀರ್ಗುಂದ ನಾಡೊಳಗಿನ ಕುಮಾರವೃತ್ತಿಯ ಕೂಸದ ಬಾಗೀವಾಳನ್ನು ಅಂಕೆಯ ದಂಣಾಯಕ ಆಳುತ್ತಿದ್ದು, ರಾಣಿ ಚಿಕ್ಕಾಯಿ ತಾಯಿಯ ರಕ್ಷಣೆಗಾಗಿ ಬಾರಕೂರಿನಲ್ಲಿ ಬಲ್ಲಾಳನು ಇಟ್ಟಿದ್ದ ದಂಡಿನ ತುಕಡಿಯ ನೇತೃತ್ವವನ್ನು ವಹಿಸಿ ಅಲ್ಲಿಗೆ ತೆರಳಿದ್ದಕ್ಕಾಗಿ ಅಂಕೆಯ ದಂಡನಾಯಕನಿಗೆ ಆಲದಹಳ್ಳಿಯನ್ನು ಉಂಬಳಿಯಾಗಿ ಬಲ್ಲಾಳ ನೀಡಿದ್ದಾನೆ.[೭೩]

ನಾಲ್ಕನೆ ಬಲ್ಲಾಳನು ವಿರೂಪಾಕ್ಷ ಪಟ್ಟಣದಿಂದ ಆಳುತ್ತಿದ್ದನೆಂದು ಒಂದು ಶಾಸನ ಉಲ್ಲೇಖಿಸಿದೆ.[೭೪] ವಿನಯಾದಿತ್ಯನಿಂದ ನಾಲ್ಕನೇ ಬಲ್ಲಾಳನವರೆಗೆ ಹೊಯ್ಸಳರು ಈ ಪ್ರದೇಶವನ್ನು ಆಳಿದ್ದು, ಇಮ್ಮಡಿ ಬಲ್ಲಾಳನ ಕಾಲವು ಈ ಪ್ರದೇಶದ ಸುವರ್ಣಕಾಲವಾಗಿತ್ತೆಂದು ಹೇಳಬಹುದು. ಮುಂದೆ ಈ ಪ್ರದೇಶ ವಿಜಯನಗರದ ಅರಸರ ಆಳ್ವಿಕೆಗೆ ಒಳಪಟ್ಟಿತು.

### ೩.೩.೪. ವಿಜಯನಗರದ ಅರಸರು

ಹೊಯ್ಸಳರ ನಂತರದಲ್ಲಿ ವಿಜಯನಗರ ಅರಸರ ಆಳ್ವಿಕೆಯಲ್ಲಿ ಪ್ರಸ್ತುತ ಪ್ರದೇಶ ಅನೇಕ ಸಣ್ಣ ಸಣ್ಣ ಸೀಮೆಗಳಾಗಿ ವಿಭಾಗಿಸಲ್ಪಟ್ಟಿತು. ಮತ್ತು ಸ್ಥಳೀಯ ತುಂಡರಸರ ಪಾಳೆಪಟ್ಟಾಗಿ ಇಲ್ಲವೆ ಆಳರಸರಿಂದ ನೇಮಿಸಲ್ಪಟ್ಟ ಅಮರ ನಾಯಕರ ಆಳ್ವಿಕೆಗೆ ಒಳಪಟ್ಟಿತು. ವೀರನಾದ ಕುಮಾರ ಕಂಪಣ್ಣೊಡೆಯ, ಬುಕ್ಕಮಹೀಶ, ಇಮ್ಮಡಿ ಹರಿಹರ, ಇಮ್ಮಡಿ ದೇವರಾಯ, ಅಚ್ಚುತರಾಯ, ರಾಮರಾಯರ ಒಟ್ಟು ಎಂಟು ಶಾಸನಗಳು ಮಾತ್ರ ದೊರಕಿವೆ.

**ಕುಮಾರ ಕಂಪಣ್ಣ ಒಡೆಯ :** ದಕ್ಷಿಣ ಭಾರತದಲ್ಲಿ ವಿಜಯನಗರ ಸಾಮ್ರಾಜ್ಯದ ಆಳ್ವಿಕೆಗೆ ಭದ್ರಬುನಾದಿಯನ್ನು ಹಾಕಿದ ಕುಮಾರ ಕಪ್ಪಣ್ಣನು ಕ್ರಿ.ಶ.೧೩೫೨ರಲ್ಲಿ ಬೆಲೂರ 'ಹಬಾನ' ಮೇಲೆ ಆಕ್ರಮಣ ಮಾಡಿದ ಸಂದರ್ಭದಲ್ಲಿ ನೀರ್ಗುಂದ ನಾಡಿನ ಬಾಗೇವಾಳಿನ ನಾಯಕನೊಬ್ಬನ ಮರಣವನ್ನು ಒಂದು ಶಾಸನ ದಾಖಲಿಸಿದೆ.[೭೫] ಕಂಪಣ್ಣನು ಮಧುರೆಯ ದಿಗ್ವಿಜಯಕ್ಕೆ ಸಾಗುವ ಮೊದಲು ಬೇಲೂರು ರಾಜ್ಯವನ್ನು ಆಕ್ರಮಿಸಿದಂತೆ ತೋರುತ್ತದೆ.

**ಬುಕ್ಕಮಹೀಶ :** ಇವನನ್ನು ಉಲ್ಲೇಖಿಸುವ ಕೆಲ್ಲಂಗೆರೆಯ ಶಾಸನವೊಂದು[೭೬] ೧೩೬೭ರಲ್ಲಿ ಊರಿನಕೆರೆಯ ಕೆರೆಬಂಡಿ ಆಳ ಜೀವಿತಕ್ಕೆ ಮಾಡಿದ ಏರ್ಪಾಟೊಂದನ್ನು ಹೇಳುತ್ತದೆ. ಕ್ರಿ.ಶ.೧೩೬೮ರ ಅರಸೀಕೆರೆಯ

ಶಾಸನವೊಂದು[೭೭] ಅರಸೀಕೆರೆಯನ್ನು 'ಸರ್ವನಮಸ್ಯವಾದ ಪಿರಿಯ ಪಟ್ಟಣ ಮಹಾಗ್ರಹಾರ ಉದ್ಭವ ಸರ್ವಜ್ಞ ವೀರ ವಿಜಯ ಬಲ್ಲಾಳಪುರ'ವೆಂದು ಕರೆದು ಮಲ್ಲಿಕಾರ್ಜುನ ದೇವಾಲಯಕ್ಕೆ ಮಹಾಜನರ ದಾನವನ್ನು ಹೇಳುತ್ತದೆ. ಅಂದರೆ ಈ ಕಾಲಕ್ಕೆ ಅರಸೀಕೆರೆಯು ರಾಜಧಾನಿಯಾಗಿ ಗುರುತಿಸಲ್ಪಡದೆ, 'ಪಿರಿಯಪಟ್ಟಣ ಮಹಾಗ್ರಹಾರ'ವಾಗಿ ಹೊಯ್ಸಳ ವೀರ ಬಲ್ಲಾಳನ ನೆನಪನ್ನು ಮಾತ್ರ ಉಳಿಸಿಕೊಂಡಿತ್ತು ಎನ್ನಬಹುದು. ಮಹಾಪ್ರಧಾನ ಬಸವೆಯ ದಂಡನಾಯಕ ಮತ್ತು ಆಚರಸರು ಇಲ್ಲಿನ ಆಡಳಿತ ನಡೆಸುತ್ತಿದ್ದರು. ಪ್ರಸ್ತುತ ಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅಗ್ರಹಾರಗಳಿದ್ದು, ಅವುಗಳ ಆಡಳಿತವನ್ನು ಮಹಾಜನರು ಸುಸೂತ್ರವಾಗಿ ನಡೆಸಿಕೊಂಡು ಹೋಗುತ್ತಿದ್ದುದರಿಂದ ವಿಜಯನಗರದ ಅರಸರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಅಮರನಾಯಕರು ಅವುಗಳ ಜೀರ್ಣೋದ್ಧಾರ ಅಭಿವೃದ್ಧಿಯನ್ನು ಗಮನಿಸುತ್ತಿದ್ದರೆಂದು ಹೇಳಬಹುದು. ದೇವಾಲಯ ಕೆರೆ ಕಟ್ಟೆ ಕಾಲುವೆಗಳ ಜೀರ್ಣೋದ್ಧಾರವನ್ನೇ ಇಲ್ಲಿನ ಅವರ ಹೆಚ್ಚಿನ ಶಾಸನಗಳು ಹೇಳುತ್ತವೆಂಬುದನ್ನು ಗಮನಿಸಬಹುದು.

**ಇಮ್ಮಡಿ ಹರಿಹರ** : ಕ್ರಿ.ಶ.೧೩೭೮ರ ಶಾಸನದ ಪ್ರಕಾರ ಇಮ್ಮಡಿ ಹರಿಹರ ತಾಯಿಯ ಹೆಸರಿನಲ್ಲಿ ಹೊನ್ನಲಾಪುರವೆಂದು ಹೆಸರಿಟ್ಟು ಜಂಬೂರು ಗ್ರಾಮವನ್ನು ದಾನವಿತ್ತಿದ್ದಾನೆ. ಮುದ್ದ ದಂಡೇಶನೆಂಬ ಸಚಿವನ ಉಲ್ಲೇಖವಿದೆ. ಒಂದನೇ ಬುಕ್ಕನ ರಾಜಗುರುವೆಂದು ಕ್ರಿಯಾಶಕ್ತಿ ಆಚಾರ್ಯನನ್ನು ವರ್ಣಿಸಿದೆ.[೭೮] ೧೩೯೮ರಲ್ಲಿ ನಡೆದ ಮರಯವೂರಿನ ಯುದ್ಧವೊಂದರಲ್ಲಿ ಬೋರೆಯನಾಯಕ ಮಡಿದನೆಂದು ಶಾಸನವೊಂದು ಹೇಳಿದೆ.[೭೯] ೧೩೯೯ರ ಶಾಸನವೊಂದರಲ್ಲಿ ಲಖ್ಖಣ್ಣ ವೊಡೆಯನನ್ನೂ ದಾನವನ್ನು ಉಲ್ಲೇಖಿಸಿದರೆ[೮೦] ೧೪೦೩ರ ಶಾಸನ ಬಾಯಣ್ಣನೆಂಬ ಅಧಿಕಾರಿ ಗಂಡಸಿಯ ಸ್ಥಳವನ್ನಾಳುತ್ತಿದ್ದು ತಾಯಿಯ ಹೆಸರಿನಲ್ಲಿ ಮಂಗಾಪುರವೆಂಬ ಗ್ರಾಮವನ್ನು, ಮಂಗಸಮುದ್ರವೆಂಬ ತಟಾಕವನ್ನು ಕಟ್ಟಿಸಿ ಹಿರಿಯಗಂಡಸಿ ಅಗ್ರಹಾರವನ್ನು ಜೀರ್ಣೋದ್ಧಾರ ಮಾಡಿ, ಹನುಮಂತ ದೇವರ ಗುಡಿ ಕಟ್ಟಿಸಿದ್ದಾನೆ.[೮೧]

**ಇಮ್ಮಡಿ ದೇವರಾಯ** : ಇವನ ಕಾಲದಲ್ಲಿ ನೇರ್ಲಿಗೆಯ ವಿರುಪಣ್ಣ ನಾಯಕನು ಕ್ರಿ.ಶ.೧೪೨೯ರಲ್ಲಿ ನೇರ್ಲಿಗೆಯ ಕೆರೆಯ ಕೆರೆಬಂಡಿ ವ್ಯವಸ್ಥೆ ಮಾಡಿ ಭೂಮಿದಾನ ನೀಡಿದ್ದಾನೆ. ಈ ಕಾರ್ಯ ಅಲ್ಲಿನ ಅಧಿಕಾರಿ 'ತಿರುಮಕ್ಕಳ್' ಎಂದು ವರ್ಣಿತವಾದ ಜಯಪ್ಪ ನಾಯಕನ ನಿರೂಪದ ಮೇರೆಗೆ ನಡೆದಿದೆ.[೮೨] ಕ್ರಿ.ಶ.೧೪೩೨ರಲ್ಲಿ ಇಂಥದೇ ಉದ್ದೇಶಕ್ಕೆ ಶಂಕರಶೆಟ್ಟಿ ದಾನ ನೀಡಿದ್ದಾನೆ. ಇವನು 'ಮೂರು ರಾಯರ ಬಸವ'ನೆಂದು ಬಿರುದಾಂಕಿತನಾಗಿದ್ದನು.[೮೩]

ಈ ಪ್ರದೇಶದಲ್ಲಿ ವಿಜಯನಗರ ಅರಸರ ಕಾಲದಲ್ಲಿ ನುಗ್ಗೇಹಳ್ಳಿ ಪಾಳೆಪಟ್ಟು, ಜಾವಗಲ್ಲು ಸೀಮೆ, ಹೊನ್ನವಳ್ಳಿ ಸೀಮೆ ಗರುಡನಗಿರಿಸೀಮೆ, ಬಾಣವರ ಸೀಮೆ, ಹಾರನಹಳ್ಳಿ ಸೀಮೆ, ಮುದವಡಿ ಸೀಮೆ ಮುಂತಾದ ವಿಭಾಗಗಳು ಕಂಡುಬರುತ್ತವೆ.

**ಕೃಷ್ಣದೇವರಾಯ - ಸಾಮಂತ ಭೈರವ ಭೂಪಾಲ (ಜಾವಗಲ್ಲು ಪ್ರಭುಗಳು)** : ಜಾವಗಲ್ಲು ಸೀಮೆಯನ್ನು ಆಳ್ವಿಕೆ ಮಾಡುತ್ತಿದ್ದ ಭೈರವ ಭೂಪಾಲನು ದಕ್ಷ ಆಡಳಿತಗಾರನಾಗಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದ್ದಾನೆ. ಕ್ರಿ.ಶ.೧೫೧೫ರ ತೇದಿಯುಳ್ಳ ಇವನ ಶಾಸನದಲ್ಲಿ ಕೃಷ್ಣದೇವರಾಯನ ಉಲ್ಲೇಖವಿಲ್ಲ. ಭೈರವ ಭೂಪಾಲನು ಕಟ್ಟಿಸಿದ ಕಾಲುವೆಗೆ ಸಾಳುವನ ಅಗಳೆಂದು ನಾಮಕರಣ ಮಾಡಿರುವುದನ್ನು ಗಮನಿಸಿದರೆ ಈತ ವಿಜಯನಗರ ಸಾಳುವ ಅರಸರ ಬಗೆಗೆ ಹೊಂದಿದ್ದ ಒಲವು ತಿಳಿದುಬರುತ್ತದೆ. ಚಂದ್ರವಂಶದವನಾದ ಚನ್ನ ಮಹೀಪತಿ, ಅವನ ಮಗ ತಿಮ್ಮ, ಮೊಮ್ಮಗ ರಾಜೇಂದ್ರ (ರಾಯಣ್ಣ), ಮರಿ ಮಗ ಪ್ರಸ್ತುತ ಭೈರವ ಭೂಪಾಲರ ವಂಶಾವಳಿಯನ್ನು ಶಾಸನದಲ್ಲಿ ಹೇಳಲಾಗಿದೆ. ಭೈರವ ಭೂಪಾಲನಿಗೆ 'ಹದಿಮೂರು ರಾಯರಗಂಡ'ನೆಂಬ ಬಿರುದಿತ್ತು ಇವನು ಭೈರವಸಮುದ್ರವೆಂಬ ಮಹಾತಟಾಕ, ನಂದನವನ ಹೊಸ ಕಾಲುವೆ ಕಟ್ಟಿಸಿ ಕೋಟೆ ಗೋಡೆಯನ್ನು ಭದ್ರಪಡಿಸಿ ಈ ಸೀಮೆಯ ಅಭಿವೃದ್ಧಿಗೆ ಕಾರಣನಾಗಿದ್ದಾನೆ. ಇಲ್ಲಿನ ದೇವಾಲಯಕ್ಕೆ ಇವನ ಕಾಲದಲ್ಲಿ ವಿಸ್ತರಣೆಯಾಗಿರುವುದು ಕಂಡುಬರುತ್ತದೆ.[೮೪]

**ಅಚ್ಯುತರಾಯ -ಅಮರನಾಯಕ ಬಯಕಾರ ರಾಮಪ್ಪ** : ನಮ್ಮ ಅಧ್ಯಯನ ಪ್ರದೇಶದಲ್ಲಿ ಅಚ್ಯುತರಾಯನ ಪ್ರಸಿದ್ಧ ಅಧಿಕಾರಿ ಬಯಕಾರ ರಾಮಪ್ಪನ ಎರಡು ಶಾಸನಗಳಿವೆ. ಅವನು ಹೊನ್ನವಳ್ಳಿ ಸೀಮೆಯನ್ನು ಅಚ್ಯುತರಾಯನಿಂದ ನಾಯಕತನಕ್ಕೆ ಪಡೆದು ಆಳುತ್ತಿದ್ದನು. ಇವನನ್ನು 'ವಾಗ್ಗೇಯಕಾರಿ ಕುಲತಿಲಕ'ನೆಂದು ಹಾರನಹಳ್ಳಿ ಶಾಸನ ಕರೆದಿದೆ. ಇವನ ತಂದೆ ತಿಮ್ಮಯ್ಯ. ಈ ಶಾಸನ ತುಳುವೇಂದ್ರ ತಿಮ್ಮನಿಂದ ಪ್ರಾರಂಭಿಸಿ ಈಶ್ವರ, ನರಸಿಂಹ, ಕೃಷ್ಣದೇವರಾಯ, ಅಚ್ಯುತರಾಯನವರೆಗೆ ತುಳುವ ವಂಶಾವಳಿ ನೀಡಿದೆ. ವಿಶೇಷವಾಗಿ ಅವರ ಪರಾಕ್ರಮ ಮತ್ತು ದಾನಗುಣಗಳನ್ನು ಹೊಗಳಿದೆ.[೮೫]

**ರಾಮರಾಜ (ಅಳಿಯ ರಾಮರಾಯ) - ಕೋಳಿಗುಂದದ ಪ್ರಭುಗಾವುಂಡರು** : ರಾಮರಾಯನ ಒಂದೇ ಒಂದು ಶಾಸನ ದೊರಕಿದ್ದು, ಆತನನ್ನು ಮಹಾ ರಾಜಾಧಿರಾಜನೆಂದು, ರಾಜ ಪರಮೇಶ್ವರ ವೀರ ಪ್ರತಾಪ, ಮಹಾಮಂಡಲೇಶ್ವರ ರಾಮರಾಜ ಮಹಾ ಅರಸು ಎಂದು ವರ್ಣಿಸಿದೆ. ಇವನ ಅಧೀನ ಕುಟುಂಬವಾದ ಕೋಳಿಗುಂದ ಗೌಡರ ವಂಶಾವಳಿಯನ್ನು ಹೇಳಿದೆ. ಹಿರಿಯಗೊಂಡನ ಮಗ ಚಿಕ್ಕಣಗೊಂಡ, ಅವನ ಮಗ ಹೊಳೆಯಗೊಂಡನು ಕೋಳಿಗುಂದವನ್ನು ಆಳುತ್ತಿದ್ದು, ದೇವಾಲಯವೊಂದನ್ನು ಕಟ್ಟಿಸಿದ ಉಲ್ಲೇಖವಿದೆ.[೮೬]

ಕ್ರಿ.ಶ.೧೫೮೧ರ ಶಾಸನವೊಂದು ಮಹಾರಾಜಾಧಿರಾಜ ಪರಮೇಶ್ವರ ಶ್ರೀಮನ್ಮಹಾ ಪ್ರತಾಪ ಸಾಳುವರಾಯ ದಿಗೂರ ನಿಮರಾಜಯನವರಿಗೆ ಧರ್ಮವಾಗಬೇಕೆಂದು ರಾಮಪ್ಪಯ್ಯನೆಂಬ ಅಧಿಕಾರಿ ಮಾಡಿದ ದಾನವನ್ನು ಹೇಳಿದೆ.[೮೭] ಈ ರಾಮಪಯ್ಯನಿಗೆ ಜಾವಗಲ್ಲು ಸೀಮೆಯನ್ನು ಆವುಜ (ಅಮರ?) ಮಾಗಣಿಯಾಗಿ ನೀಡಲಾಗಿತ್ತು.[೮೮] ಈ ನಿಮರಾಜಯ್ಯನ ಬಗೆಗೆ ಹೆಚ್ಚಿಗೆ ತಿಳಿದುಬಂದಿಲ್ಲ.

### ೩.೩.೫. ಇತರೆ ನಾಯಕರು

೧೬-೧೭ನೇ ಶತಮಾನದಲ್ಲಿ ಪೆನುಗೊಂಡೆಯ ವಿಜಯನಗರದ ಸಂತತಿಯವರ ಸಾಮಂತರಾಗಿದ್ದ ಚನ್ನಪಟ್ಟಣನಾಯಕರು, ಬೇಲೂರಿನ ನಾಯಕರು, ಚಿತ್ರದುರ್ಗ ನಾಯಕರು, ತರೀಕೆರೆ ಪಾಳೇಗಾರರು ಕೆಳದಿಯ ಅರಸರು, ಕಾಲಕಾಲಕ್ಕೆ ಈ ಪ್ರದೇಶದ ಮೇಲೆ ಹಿಡಿತ ಸಾಧಿಸಿ ಆಳ್ವಿಕೆ ಮಾಡಿದ್ದಾರೆ. ಬೇಲೂರು ನಾಯಕ ಬಯ್ಯಪ್ಪನಾಯಕನು ಜಾವಗಲ್ಲಿನ ವೀರಭದ್ರನಿಗೆ ದಾನ ನೀಡಿದ ಉಲ್ಲೇಖದ ಒಂದು ಶಾಸನ,[೮೯] ಚಿತ್ರದುರ್ಗದ ಪ್ರಭು ರಂಗಪ್ಪನಾಯಕರ ಒಂದು ಶಾಸನ ಲಭ್ಯವಿದೆ. ದುರ್ಗದ ರಂಗಪ್ಪ ನಾಯಕರು ಬಾಣಾವರಕ್ಕೆ ಸಲ್ಲುವ ಸೊಪ್ಪಿನಹಳ್ಳಿ ಎಂಬ ಗ್ರಾಮವೊಂದನ್ನು ತಿರುವೆಂಗಳಯ್ಯನೆಂಬವನಿಗೆ ದಾನ ನೀಡಿದ್ದು, ಅದನ್ನು ಆತ ಬೇಲೂರ ಚೆನ್ನಿಗರಾಯನಿಗೆ ಸಮರ್ಪಿಸಿದನೆಂದು ಕ್ರಿ.ಶ.೧೬೯೫ರ ಸೊಪ್ಪಿನಹಳ್ಳಿ ಶಾಸನ ದಾಖಲಿಸಿದೆ.[೯೦] ಈ ಕಾಲದಲ್ಲಿ ಬಾಣಾವರ ಸೀಮೆಯು ಒಂದನೇ ಕಸ್ತೂರಿ ರಂಗಪ್ಪನಾಯಕನ ವಶದಲ್ಲಿದ್ದಂತೆ ತೋರುತ್ತದೆ. ಇತರ ನಾಯಕರ ಶಾಸನಗಳು ಲಭ್ಯವಿಲ್ಲ.

ತರೀಕೆರೆ ಪಾಳೇಗಾರ ಮುಮ್ಮಡಿ ಹನುಮಪ್ಪನಿಗೆ ವಿಜಯನಗರ ಸಾಮ್ರಾಟ ವೆಂಕಟಪತಿರಾಯನು ಮಗರನಾಡನ್ನು ಅಮರ ಮಾಗಣೆಯಾಗಿ ನೀಡಿದ್ದನು.[೯೧] ಬಾಣಾವರ, ಗರುಡನಗಿರಿ, ಹಾರನಹಳ್ಳಿ, ಹೊಳಲಕೆರೆ ಸೀಮೆಗಳು ಮುಮ್ಮಡಿ ಹನುಮಪ್ಪನಾಯಕನ ಕಿರಿಯ ಮಗ ಚಿಕ್ಕಕೆಂಗಹನುಮಪ್ಪನ ಆಳ್ವಿಕೆಗೆ ಒಳಗಾದವು. ಈ ಚಿಕ್ಕ ಕೆಂಗಹನುಮಪ್ಪನು ಅತ್ಯಂತ ಪರಾಕ್ರಮಿಯಾಗಿದ್ದನು. ಕ್ರಿ.ಶ.೧೬೫೬ಕ್ಕೆ ಮೊದಲು ಬಿಜಾಪುರ ಸುಲ್ತಾನ ಆದಿಲ್‌ಷಾನಿಂದ ಹಸಿರು ನಿಶಾನೆ, ಹಸಿರು ಛತ್ರಿ ಹಸಿರು ಪಲ್ಲಕ್ಕಿ ಹಾಗೂ ಹಗಲ ದೀವಟಿಗೆಯ ಗೌರವ ಪಡೆದನೆಂದು ತಿಳಿದುಬರುತ್ತದೆ.[೯೨] ಇವನಿಗೆ ರಾಮಪ್ಪ ನಾಯಕ ಮತ್ತು ತಿಮ್ಮಪ್ಪ ನಾಯಕ ಎಂಬ ತಮ್ಮಂದಿರಿದ್ದು, ತಿಮ್ಮಪ್ಪನಾಯಕನು ಅರಸೀಕೆರೆಯ ಅಮರಗಿರಿ ಬೆಟ್ಟದ ಮೇಲೆ (ಮಾಲೆಕಲ್ಲು ತಿರುಪತಿ) ತಿಮ್ಮಪ್ಪನ ದೇವಾಲಯವನ್ನು ಕಟ್ಟಿಸಿದ್ದು ಬೆಟ್ಟದ ಬುಡದಲ್ಲಿ ದೊಡ್ಡದಾದ ತಿಮ್ಮಪ್ಪನಾಯಕನ ಕೆರೆಯೊಂದನ್ನು ಕಟ್ಟಿಸಿದ್ದಾನೆ. ಇವನ ಯಾವುದೇ ಶಾಸನಗಳೂ ದೊರಕಿಲ್ಲವಾದರೂ ಸ್ಥಳ ಪುರಾಣಗಳು ಇವನನ್ನು ಕೊಂಡಾಡುತ್ತವೆ.

ತರೀಕೆರೆ ಪಾಳೆಗಾರರ ಆಂತರಿಕ ಕಲಹದಿಂದಾಗಿ ಇಕ್ಕೇರಿ ಶಿವಪ್ಪನಾಯಕನ (೧೬೪೫-೬೦) ಅಧೀನಕ್ಕೂ ಈ ಪ್ರಾಂತ್ಯ ಒಳಗಾಗಿತ್ತು. ಕೆಳದಿ ಚೆನ್ನಮ್ಮರಾಣಿ ಉಂಡಿಗನಾಳನ್ನು ಮುತ್ತಿ ಅಲ್ಲಿನ ಜಟ್ಟಿಗಳನ್ನು ಮೋಸದಿಂದ ಜಯಸಿದಳೆಂದು ಐತಿಹ್ಯವಿದೆ.

### ೩.೩.೬. ಮೈಸೂರು ಒಡೆಯರು

**ಕಂಠೀರವ ನರಸರಾಜ ಒಡೆಯರ್ (೧೬೩೮-೫೯) :** ಈತ ಅತ್ಯಂತ ಸಾಹಸಿಗನಾಗಿದ್ದು ತನ್ನ ರಾಜ್ಯದ ಗಡಿಯನ್ನು ವಿಸ್ತರಿಸಿದನು. ೧೬೪೬ರ ತುರುವೆಕೆರೆ ಯುದ್ಧದ ನಂತರ ಪ್ರಸ್ತುತ ಪ್ರಾಂತ್ಯವು ಈತನ

ಆಳ್ವಿಕೆಗೆ ಒಳಪಟ್ಟಿತು.[೯೩] ಹೊಯ್ಸಳರ ಕಾಲದಿಂದಲೂ ಪ್ರಮುಖ ವಾಣಿಜ್ಯ ಕೇಂದ್ರವಾಗಿ ಬೆಳೆದಿದ್ದ ಬಾಣಾವರದಲ್ಲಿ ಈತನ ಹೆಸರಿನಲ್ಲಿ ಕಂಠೀರಾಯಪೇಟೆ ಎಂಬ ಸಂತೆಮಾಳವು ಸ್ಥಾಪಿತವಾಗಿದ್ದು, ಉಬಯ ನಾನಾ ದೇಸಿ ವ್ಯಾಪಾರಿಗಳು ದಕ್ಷಿಣ ಭಾರತದ ಮೂಲೆ ಮೂಲೆಗಳಿಂದ ಇಲ್ಲಿ ಬಂದು ವ್ಯಾಪಾರ ವಹಿವಾಟು ನಡೆಸುತ್ತಿದ್ದರು.[೯೪]

**ದೇವರಾಜ ಒಡೆಯರ್ (೧೬೫೯-೧೬೭೩) ಚಿಕ್ಕದೇವರಾಜ ಒಡೆಯರ್ (೧೬೭೩-೧೭೦೪) :** ಕ್ರಿ.ಶ.೧೬೬೦ರಲ್ಲಿ ಮೈಸೂರು ಅರಸರು ಇಲ್ಲಿ ಗಿರಿದುರ್ಗ ಒಂದನ್ನು ಕಟ್ಟಿಸಿದರೆಂದು ತಿಳಿದುಬರುತ್ತದೆ. ಸು.೧೦೫೭ ಮೀಟರ್ ಎತ್ತರದಲ್ಲಿರುವ ಈ ಗಿರಿಯ ನೆತ್ತಿಯು ರಾಜ್ಯದ ಗಡಿ ರಕ್ಷಣೆಗೆ ಕಾವಲು ನೆಲೆಯಾಗಿದ್ದು, ನೊಣಬನಗುಡ್ಡವೆಂದು ಕರೆಯುತ್ತಿದ್ದ ಈ ಗಿರಿಯು ಗರುಡನಗಿರಿ ಎಂದೇ ಪ್ರಸಿದ್ಧವಾಯಿತು. ೧೬೯೦ರಲ್ಲಿ ಚಿಕ್ಕದೇವರಾಜ ಒಡೆಯರು ಈ ಪ್ರಾಂತ್ಯವನ್ನು ಆಳುತ್ತಿದ್ದರು.[೯೫]

**ಇಮ್ಮಡಿ ಕೃಷ್ಣರಾಜ ಒಡೆಯರು (೧೭೩೪-೬೬) :** ಅಮರಗಿರಿ ಮಾಲೆಕಲ್ಲು ತಿರುಪತಿ ದೇವಾಲಯದಲ್ಲಿನ ೧೭೪೫ಕ್ಕೆ ಸೇರಿದ ಶಾಸನಗಳು ರಾಜರನ್ನು ಉಲ್ಲೇಖಿಸಿಲ್ಲವಾದರೂ ಆಗ ಈ ಪ್ರದೇಶವು ಇಮ್ಮಡಿ ಕೃಷ್ಣರಾಜ ಒಡೆಯರ ಅಧೀನದಲ್ಲಿತ್ತು. ಗರುಡನಗಿರಿ ಬಾಣಾವರ ಸೀಮೆ, ಕಣಿಕಟ್ಟೆ, ಜಾವಗಲ್ಲುಗಳ ಆಡಳಿತಕ್ಕೆ ಸೇರಿದ್ದ ವಿವಿಧ ಖಾತೆಗಳ ಅಧಿಕಾರಿಗಳು, ವಾಲೆಕಾರರು, ವಂಟ್ರಿಕಾರರು, ಸೇರೆಗಾರ್ರು, ಸೈನಿಕ ಪಡೆಯವರು ಒಟ್ಟಾಗಿ ತಿರುಪತಿ ವೆಂಕಟಾಚಲಪತಿಗೆ ದೀಪೋತ್ಸವಕ್ಕಾಗಿ ವರ್ಷಂಪ್ರತಿ ಶಾಶ್ವತ ಹೊನ್ನು ದಾನದ ಬಿನ್ನಹ ಶಾಸನಗಳನ್ನು ಮಾಡಿದ್ದಾರೆ.[೯೬] ಇವುಗಳಿಗೆ ಸ್ಥಳೀಯ ನಾಡಿಗರ ಒಪ್ಪವಿದೆ. ಈ ಶಾಸನಗಳಲ್ಲಿ ಕಂಠೀರಾಯ ಹಣದ ಉಲ್ಲೇಖ ಬಂದಿದೆ. ಅಸಮರ್ಥನಾದ ಇಮ್ಮಡಿ ಕೃಷ್ಣರಾಜರನ್ನು ಅವನ ದಳವಾಯಿಗಳು ನಂಜರಾಜ ಬಸವರಾಜರು ಅಂಕೆಯಲ್ಲಿಟ್ಟಿದ್ದರು. ಸಾಹಸಿಗನೂ, ತೀಕ್ಷ್ಣಮತಿಯೂ ಆದ ಹೈದರ್ ನಂಜರಾಜನನ್ನು ಕೆಳಗಿಳಿಸಿ ಒಡೆಯರ ಅಸಮರ್ಥತೆಯ ಲಾಭ ಪಡೆದು ಅಧಿಕಾರದ ಚುಕ್ಕಾಣಿ ಹಿಡಿದನು. ಒಡೆಯನ ಮರಣದ ನಂತರ ಸ್ವತಂತ್ರ ಆಡಳಿತಕ್ಕೆ ತೊಡಗಿದನು.

**ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ (೧೭೬೬-೧೭೯೯) :** ಕ್ರಿ.ಶ.೧೭೬೦ರ ಹೊತ್ತಿಗೆ ಪ್ರಸ್ತುತ ಪ್ರದೇಶವು ಪಾಳೆಗಾರರಿಂದ ಹೈದರನ ಕೈಸೇರಿತು. ಹೈದರ್ ಹಿರೇಕಲ್ಲು ನಾಗಪುರಿಯಲ್ಲಿ ಒಂದು ನಗರವನ್ನು ಸ್ಥಾಪಿಸಿ ಕೋಟೆ ನಿರ್ಮಿಸಿದನು. ಬಾಣಾವರದಿಂದ ಜನರನ್ನು ಎತ್ತಿಸಿ ಗರುಡನ ಗಿರಿಯಲ್ಲಿ ನೆಲಸುವಂತೆ ಮಾಡಿದ ನಾದರೂ ಹೊಸ ಸ್ಥಳದ ಅನಾರೋಗ್ಯ ವಾತಾವರಣದಿಂದಾಗಿ ಜನರು ಮತ್ತೆ ವಾಪಸ್ಸಾದರು.[೯೭] ಹೈದರ ಟಿಪ್ಪು ಕಾಲದಲ್ಲಿ ಬಾಣಾವರ ಕೋಟೆ, ಗರುಡನಗಿರಿ, ಹಾರನಹಳ್ಳಿ ಕೋಟೆಗಳು ಬಲಗೊಂಡು ಸೈನ್ಯದ ಠಾಣ್ಯವಾಗಿದ್ದವೆಂದು ತಿಳಿದುಬರುತ್ತದೆ.[೯೮] ಹಾರನಹಳ್ಳಿಯ ಕೋಡಿಮಠಕ್ಕೆ ಹೈದರ್ ಕೆಲವು ಕಾಣಿಕೆ ನೀಡಿದ್ದಾನೆ. ಕ್ರಿ.ಶ.೧೭೭೦ರಲ್ಲಿ ಚಿನಕುರುಳಿ ಯುದ್ಧದಲ್ಲಿ ಮರಾಠರ ತ್ರಿಯಂಬಕ ಮಾಮ ಹೈದರನನ್ನು ಸೋಲಿಸಿ ಗರುಡನಗಿರಿ ಕೋಟೆಯನ್ನು ವಶಪಡಿಸಿಕೊಂಡನು.[೯೯]

**ಮುಮ್ಮಡಿ ಕೃಷ್ಣರಾಜ ಒಡೆಯರು (೧೭೯೯-೧೮೩೧)** : ಹಾರನಹಳ್ಳಿಯಲ್ಲಿ ಕಂಠೀರವನರಸರಾಜ ಒಡೆಯರು ಪ್ರಾರಂಭಿಸಿದ್ದ ಪರಮಾನಂದ ವೇದಿಕೆಯ ಧಾರ್ಮಿಕ ಸಾಂಸ್ಕೃತಿಕ ಕಾರ್ಯಕ್ರಮಗಳು ನಿಂತು ಹೋಗಿದ್ದು ಅದನ್ನು ಮುಂದುವರೆಸಲು ಮುಮ್ಮಡಿ ಕೃಷ್ಣರಾಜ ವಡೆಯರು ಕ್ರಿ.ಶ.೧೮೧೭ರಲ್ಲಿ ಎರಡು ಹಳ್ಳಿಗಳನ್ನು ದಾನ ಮಾಡಿದ್ದಾರೆ.[೧೦೦] ಅಧಿಕಾರ ವಂಚಿತ, ಅತೃಪ್ತ ಸ್ವಾತಂತ್ರಪ್ರಿಯ ಪಾಳೆಗಾರರ ದಂಗೆಯನ್ನು ಅಡಗಿಸಲು ೧೮೩೧ರಲ್ಲಿ ಬ್ರಿಟೀಷರು ನೇರ ಆಡಳಿತಕ್ಕೆ ತೊಡಗಿದರು. ಒಟ್ಟಿನಲ್ಲಿ ಹೊಯ್ಸಳರ ಕಾಲದಲ್ಲಿ ಪ್ರಾಂತೀಯ ರಾಜಧಾನಿಯಾಗಿ ಉನ್ನತಿಕೆಯನ್ನು ಮೆರೆದ ಅರಸೀಕೆರೆಯ ನೀರ್ಗುಂದ, ಮಗರೆ, ಆಸಂದಿ ನಾಡಿನ ಪ್ರದೇಶಗಳು ಅವರ ಪತನದೊಂದಿಗೆ ಇಳಿಮುಖವನ್ನು ಕಂಡಿತು. ಚನ್ನಪಟ್ಟಣದ ಜಗದೇವರಾಯ, ತರೀಕೆರೆ, ಚಿಕ್ಕನಾಯಕನಹಳ್ಳಿ ಪಾಳೆಗಾರರು, ಇಕ್ಕೇರಿ ಶಿವಪ್ಪನಾಯಕ, ಸೋಮಶೇಖರನಾಯಕ, ಬಿಜಾಪುರ ಸುಲ್ತಾನರು, ಚಿತ್ರದುರ್ಗ ನಾಯಕರು, ಸಿರಾದ ನವಾಬರು, ಮೈಸೂರ ಒಡೆಯರು, ಮರಾಠರ ಮೇಲಾಟದಲ್ಲಿ ಸಿಕ್ಕಿ ಈ ಪ್ರಾಂತ್ಯ ಹಾಳಾಗಿ ಹೋಯಿತು. ಮರಾಠಿಗರ ದಾಳಿಗೆ ಬೆದರಿ ಕಪ್ಪತೆತ್ತು ಸಾಕಾಗಿದ್ದ ಮೈಸೂರರಸರು ಕಪ್ಪದ ಹೊರೆ ತೀರುವವರೆಗೆ ಒತ್ತೆ ಇಟ್ಟ ಗ್ರಾಮಗಳಲ್ಲಿ ಅರಸೀಕೆರೆಯೂ ಸೇರಿತ್ತು. ಆ ಕಾಲದಲ್ಲಿ ಇದು ಪೂರ್ಣವಾಗಿ ಸುಲಿಗೆಗೆ ಒಳಗಾಗಿ ಹಾಳೂರಾಗಿಹೋಯಿತು.[೧೦೧]

ಕ್ರಿ.ಶ.೧೮೮೨ರವರೆಗೆ ಈ ಪ್ರಾಂತ್ಯವು ಹಾರನಹಳ್ಳಿ ನಂತರ ಬಾಣಾವರವನ್ನು ತಾಲ್ಲೂಕಿನ ಮುಖ್ಯ ಕೇಂದ್ರವಾಗಿ ಹೊಂದಿದ್ದು, ೧೮೮೬ರಲ್ಲಿ ಅರಸೀಕೆರೆಯನ್ನು ತಾಲ್ಲೂಕು ಕೇಂದ್ರವಾಗಿ ಹೊಂದಿ ರಚನೆ ಯಾಯಿತು. ಮೊದಲಿನಿಂದಲೂ ಸಮುದ್ರ ತೀರವನ್ನು ಒಳನಾಡುಗಳನ್ನು ಬೆಸೆಯುವ ಮುಖ್ಯ ವ್ಯಾಪಾರಿ ಪಥದಲ್ಲಿದ್ದು ವ್ಯಾಪಾರ ಕೇಂದ್ರಗಳಾಗಿದ್ದ ಬಾಣಾವರ ಅರಸೀಕೆರೆಗಳಲ್ಲಿ ಇಂದೂ ಕೂಡ ಹೊನ್ನಾವರ ಬೆಂಗಳೂರನ್ನು ಬೆಸೆಯುವ ಹೆದ್ದಾರಿಯು ಹಾದು ಹೋಗಿದೆ. ಅರಸೀಕೆರೆಯು, ಬೆಂಗಳೂರು ಪುಣೆ ರೈಲುಮಾರ್ಗದ ಮುಖ್ಯ ಜಂಕ್ಷನ್ ಆಗಿದೆಯಾದರೂ ತನ್ನ ಹಿಂದಿನ ಸಂಪತ್ತನ್ನು ವೈಭವವನ್ನು ಮರಳಿ ಪಡೆಯಲು ಸಾಧ್ಯವಾಗಿಲ್ಲ.

**ಅಡಿಟಿಪ್ಪಣಿಗಳು**

೧. ಎ.ಕ.೧೦ (ಪರಿ) ಅರಸೀಕೆರೆ ಶಾ.ಸಂ.೫೧, ಬೆಂಡೆಕೆರೆ, ಕ್ರಿ.ಶ.೧೨೩೧

೨. ಅದೇ ಶಾ.ಸಂ.೪೪, ಅರಸೀಕೆರೆ, ಕ್ರಿ.ಶ.೧೧೮೯

೩. ಹನುಮನಾಯಕ ಇ.ದ.ಸಂ.೯-೧೯೯೪ ಪು.೬-೮ ಮತ್ತು ಸಂ.೨೦-೨೦೦೫, ಪು.೧-೩

೪. ವೆಂಕಟೇಶಮೂರ್ತಿ ಆರ್. ಇ.ದ.ಸಂ.೧೧-೧೯೯೬, ಪು.೩೭-೩೮

೫. ಎಂ.ಎ.ಆರ್. ಕ್ರಿ.ಶ.೧೯೨೪ ಪು.ಪ್ಯಾ.೬೭-೬೯, ಸಿಡ್ಲಘಟ್ಟ (ತಾ) ಕೋಲಾರ ಜಿಲ್ಲೆ

೬. ಇನ್ಸ್‌ಕ್ರಿಪ್ಷನ್ಸ್ ಆಫ್ ವೆಸ್ಟ್ರನ್ ಗಂಗಾಸ್, ಶಾಂ, ಸಂಖ್ಯೆ, ೯, ೧೩, ೧೬, ೪೨, ೬೧

೭. ಎ.ಕ.ಸಂ.೧೪, ಸಪ್ಲಿಮೆಂಟರಿ ಶಾ.ಸಂ.೧೪೦, ತಿಪಟೂರು, ಕ್ರಿ.ಶ.೯೭೫

೮. ಪರಮಶಿವಮೂರ್ತಿ ಎಸ್., ಮಗರ ಮುನ್ನೂರು ಇ.ದ.ಸಂ ೧೪-೧೯೯೯, ಪು.೨೧೮-೨೨೨

೯. ಕ.ವಿ.ವಿ.ಕೋ, ಆಸಂದಿ ಗಂಗರು ಪು.೭೨೪-೭೨೫

೧೦. ಎ.ಕ.೧೦ (ಪರಿ) ಚನ್ನರಾಯಪಟ್ಟಣ, ಶಾ.ಸಂ.೬೨, ಕಕ್ಕೀಹಳ್ಳಿ

೧೧. ಎ.ಕ.೭ (ಪರಿ) ನಾಗಮಂಗಲ ಶಾ.ಸಂ.೧೪೯, ದೇವರಹಳ್ಳಿ, ಕ್ರಿ.ಶ.೭೭೬-೭೭

೧೨. ಎ.ಕ.೧೦ (ಪರಿ) ಅರಸೀಕೆರೆ ಶಾ.ಸಂ.೨೦೩ ಗಂಡಸಿ, ಕ್ರಿ.ಶ.೨೧೬-೮೪೩

೧೩. ಕೃಷ್ಣಮೂರ್ತಿ ಎಂ.ಎಸ್.ದ ನೊಳಂಬಾಸ್, ಪು.೫೮

೧೪. ಹನುಮನಾಯಕ ಚಲುವನಹಳ್ಳಿಯ ಎರಡು ಅಪ್ರಕಟಿತ ಶಾಸನಗಳು ಇ.ದ.ಸಂ.೮, ೧೯೯೩, ಪು.೧೨

೧೫. ಎ.ಕ.೧೦ (ಪರಿ) ಅ.ಕೆ. ಶಾ.ಸಂ.೩೧೬ ಕ್ರಿ.ಶ.೯ನೇ ಶತಮಾನ

೧೬. ಎ.ಕ.೧೨ (ಪರಿ) ಕಡೂರು ಶಾ.ಸಂ.೨೩೮ ಮತ್ತು ಎ.ಕ.IV(ರೈಸ್) ಚಿ.ಮ.೧೨೯.

೧೭. ಎ.ಕ.೧೦ (ಪರಿ) ಚ.ಪ.ಶಾ.ಸಂ.೧೨೮ ಮತ್ತು ೧೦೨, ಕ್ರಿ.ಶ.೯೭೧-೭೨

೧೮. ಅದೇ, ಅ.ಕೆ.ಶಾ.ಸಂ ೨೮೪, ನೇರ್ಲಿಗೆ, ಕ್ರಿ.ಶ.೯೭೧-೭೨

೧೯. ಕೃಷ್ಣಮೂರ್ತಿ ಎಂ.ಎಸ್., ದ ನೊಳಂಬಾಸ್, ಪು.೧೨೨

೨೦. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೨೪೧, ಕರುಗುಂದ, ಕ್ರಿ.ಶ.೧೧೫೮

೨೧. ಅದೇ, ಶಾ.ಸಂ.೩೧೧, ಕೋಳಿಗುಂದ, ಕ್ರಿ.ಶ.೧೦೮೩

೨೨. ಅದೇ, ಶಾ.ಸಂ.೨೮೧, ನೇರ್ಲಿಗೆ, ಕ್ರಿ.ಶ.೧೦೮೪-೮೫

೨೩. ಅದೇ, ಚ.ಪ.ಶಾ.ಸಂ. ೭೪ ಮತ್ತು ಅ.ಕೆ.ಶಾ.ಸಂ.೧೯೦, ಬಾಗವಾಳು, ಕ್ರಿ.ಶ.೧೧೯೮

೨೪. ಅದೇ, ಅ.ಕೆ.ಶಾ.ಸಂ.೩೨೧, ಕಾಟಿಕೆರೆ, ಕ್ರಿ.ಶ.೧೧೦೦

೨೫. ಅದೇ, ಅ.ಕೆ.ಶಾ.ಸಂ.೩೮, ಅರಸೀಕೆರೆ, ಕ್ರಿ.ಶ.ಸು.೧೧೯೦,

೨೬. ಅದೇ, ಅ.ಕೆ.ಶಾ.ಸಂ.೩೨೧, ಕಾಟಿಕೆರೆ, ಕ್ರಿ.ಶ.೧೧೦೦

೨೭. ಸಕಲೇಶ್ ಮ. ಹೊಯ್ಸಳೋದಯ ಸಂಶೋಧನ, ಪು.೧೧೯-೧೨೧

೨೮. ಎ.ಕ.೮ (ಪರಿ) ಹಾಸನ ಶಾ.ಸಂ.೭೨, ಕೆಲವತ್ತಿ, ಕ್ರಿ.ಶ.೧೧೨೩-೨೪

೨೯. ಅದೇ.೧೦ (ಪರಿ), ಅ.ಕೆ.೬೩, ಕಲ್ಲುಗುಂಡಿ, ಕ್ರಿ.ಶ.೧೧೩೫

೩೦. ಅದೇ, ಅ.ಕೆ. ಶಾ.ಸಂ.೭೩, ೮೫, ಕಣಕಟ್ಟೆ, ಕ್ರಿ.ಶ.೧೧೨೯-೧೧೩೨

೩೧. ಅದೇ, ಅ.ಕೆ. ಶಾ.ಸಂ.೨೩೫, ಹಾರನಹಳ್ಳಿ, ಕ್ರಿ.ಶ.೧೧೩೮

೩೨. ಅದೇ, ಅ.ಕೆ. ಶಾ.ಸಂ.೨೪೪, ಗೋವಿಂದನಪುರ, ಕ್ರಿ.ಶ.೧೧೩೬-೩೭

೩೩. ಅದೇ, ಅ.ಕೆ. ಶಾ.ಸಂ.೨೪೬, ಉಂಡಿಗನಾಳು, ಕ್ರಿ.ಶ.೧೧೩೯

೩೪. ಅದೇ, ಅ.ಕೆ. ಶಾ.ಸಂ.೬೦, ಸೇನವಗೆರೆ, ಕ್ರಿ.ಶ.೧೧೩೪

೩೫. ಅದೇ, ಅ.ಕೆ. ಶಾ.ಸಂ.೬೧, ಗಂಜಿಗೆರೆ, ಕ್ರಿ.ಶ.೧೧೯೭-೯೮ ಎ.ಕ.೧೨ (ಪರಿ) ಕಡೂರು, ಶಾ.ಸಂ.೨೭, ೨೮, ೨೯, ೩೦, ೩೧ ಕಂಚಿಗಲ್ಲು.

೩೬. ಎ.ಕ.೧೦ (ಪರಿ), ಅ.ಕೆ. ಶಾ.ಸಂ.೫೭, ಮನಗತ್ತೂರು, ಕ್ರಿ.ಶ.೧೧೦೧

೩೭. ಅದೇ ಶಾ.ಸಂ. ೨೫೩, ದೇಶಾಣಿ, ಕ್ರಿ.ಶ.೧೧೩೯

೩೮. ಅದೇ, ಶಾ.ಸಂ.೨೪೧, ಕರುಗುಂದ, ಕ್ರಿ.ಶ.೧೧೫೮,

೩೯. ಅದೇ, ಶಾ.ಸಂ.೨೫೩, ದೇಶಾಣಿ, ಕ್ರಿ.ಶ.೧೧೩೯,

೪೦. ಅದೇ, ಶಾ.ಸಂ.೯೫, ಕಣಕಟ್ಟೆ, ಕ್ರಿ.ಶ.೧೧೪೩,

೪೧. ಅದೇ, ಚ.ಪ. ಶಾ.ಸಂ.೧೦೦, ಕ್ರಿ.ಶ.೧೧೫೩, ಅ.ಕೆ.ಶಾ.ಸಂ.೧೮೪, ಹುಲ್ಲೇಕೆರೆ, ಕ್ರಿ.ಶ.೧೧೬೨

೪೨. ಅದೇ, ಚ.ಪ. ಶಾ.ಸಂ.೭೧, ಕೆಂಬಾಳು, ಕ್ರಿ.ಶ.೧೧೬೮,

೪೩. ಅದೇ, ಚ.ಪ. ಶಾ.ಸಂ.೭೬, ಬಿದರೆ, ಕ್ರಿ.ಶ.೧೧೬೫

೪೪. ಅದೇ, ಚ.ಪ. ಶಾ.ಸಂ.೭೬, ಕ್ರಿ.ಶ.೧೧೬೫, ಶಾ.ಸಂ.೫೫ ಕ್ರಿ.ಶ.೧೧೬೮, ಕುಂದೂರು, ಅ.ಕೆ.ಸಂ.೨೬೮, ಬಂದೂರು, ಕ್ರಿ.ಶ.೧೧೬೮-೬೯

೪೫. ಅದೇ, ಅ.ಕೆ.ಶಾ.ಸಂ.೪೪, ೨೩, ೭೨, ೧೬೧, ಚ.ಪ.ಶಾ.ಸಂ.೪೦, ಎ.ಕ.೮ (ಪರಿ) ಹಾಸನ, ಶಾ.ಸಂ.೧೦೬, ಕಿತ್ತನಕೆರೆ, ಕ್ರಿ.ಶ.೧೧೭೩

೪೬. ಅದೇ, ಚ.ಪ. ಶಾ.ಸಂ. ೭೨, ಕೆಂಬಾಳು, ಕ್ರಿ.ಶ.೧೧೭೩-೧೧೨೦

೪೭. ಅದೇ, ಚ.ಪ.ಶಾ.ಸಂ.೨೩, ಸಣ್ಣೇನಹಳ್ಳಿ, ಕ್ರಿ.ಶ.೧೧೭೪, ಶಾ.ಸಂ.೧೩೩, ಅತ್ತಿಹಳ್ಳಿ, ಕ್ರಿ.ಶ.೧೧೮೩

೩೮. ಅದೇ, ಅ.ಕೆ. ಶಾ.ಸಂ.೯೬, ಹಲುಕೂರು, ಕ್ರಿ.ಶ.೧೧೭೭,

೪೯. ಅದೇ, ಅ.ಕೆ. ಶಾ.ಸಂ.೨೯೮, ೨೯೯, ೩೦೧, ಕೋಳಿಗುಂದ, ಕ್ರಿ.ಶ.೧೧೯೪-೧೧೯೭

೫೦. ಅದೇ, ಅ.ಕೆ. ಶಾ.ಸಂ., ೨೧೪, ಮುದುಡಿ, ಕ್ರಿ.ಶ.೧೧೯೫

೫೧. ಅದೇ, ಅ.ಕೆ. ಶಾ.ಸಂ.೮೪, ಎ.ಕ.ಸಂ.೧೪, (ಸಪ್ಲಿಮೆಂಟರಿ) ೬೨, ಚಿಕ್ಕನಾಯಕನಹಳ್ಳಿ

೫೨. ಅದೇ, ಅ.ಕೆ. ಶಾ.ಸಂ.೧೨೦, ಹೊಳಲ್ಕೆರೆ, ಕ್ರಿ.ಶ.೧೧೮೫

೫೩. ಎ.ಕ.೧೨ (ಪರಿ) ಕಡೂರು, ಶಾ.ಸಂ.೧೬, ಆಸಂದಿ, ಕ್ರಿ.ಶ.೧೨ನೇ ಶತಮಾನ

೫೪. ಎ.ಕ.೧೦ (ಪರಿ) ಚ.ಪ. ಶಾ.ಸಂ.೮೩, ಸಂತೆ ಶಿವರ, ಕ್ರಿ.ಶ.೧೨೨೩

೫೫. ಅದೇ, ಅ.ಕೆ. ಶಾ.ಸಂ.೨೨೭, ಮುರುಂಡಿ, ಕ್ರಿ.ಶ.೧೧೭೪

೫೬, ಎ.ಕ.೧೨ (ಪರಿ) ಕಡೂರು ಶಾ.ಸಂ.೧೦೧, ೨೦೧, ೧೯೯, ಕ್ರಿ.ಶ.೧೨೦೨

೫೭. ಎ.ಕ.೧೦ (ಪರಿ) ಚ.ಪ. ಶಾ.ಸಂ.೯೩, ೯೪, ಅಗ್ರಹಾರ ಬೆಳುಗಲಿ, ಕ್ರಿ.ಶ.೧೨೦೯

೫೮. ಅದೇ, ಅ.ಕೆ.ಶಾ.ಸಂ. ೧೩೯, ಬೊಮ್ಮೇನಹಳ್ಳಿ, ಕ್ರಿ.ಶ.೧೧೯೪

೫೯. ಅದೇ, ಅ.ಕೆ.ಶಾ.ಸಂ. ೩೧೯, ಕ್ರಿ.ಶ.೧೨೦೭, ಚ.ಪ.ಶಾ.ಸಂ, ೯೩, ೯೪, ಕ್ರಿ.ಶ.೧೨೦೯

೬೦. ಅದೇ, ಚ.ಪ.ಶಾ.ಸಂ ೪೦, ದಿಂಡಗೂರು, ಕ್ರಿ.ಶ.೧೨೨೦

೬೧. ಅದೇ, ಅ.ಕೆ.ಶಾ.ಸಂ.೨೩೨, ಹಾರನಹಳ್ಳಿ, ಕ್ರಿ.ಶ.೧೨೩೪-೧೨೩೬

೬೨. ಅದೇ, ಚ.ಪ. ಶಾ.ಸಂ.೭೦, ಕೆಂಬಾಳು, ಕ್ರಿ.ಶ.೧೨೨೩

೬೩. ಅದೇ, ಚ.ಪ. ಶಾ.ಸಂ.೪೦, ದಿಂಡಗೂರು, ಕ್ರಿ.ಶ.೧೨೨೦

೬೪. ಅದೇ, ಅ.ಕೆ.ಶಾ.ಸಂ.೨೩೨, ಹಾರನಹಳ್ಳಿ, ಕ್ರಿ.ಶ.೧೨೩೪-೧೨೩೬

೬೫. ಅದೇ

೬೬. ಅದೇ ಅ.ಕೆ. ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೬೭. ಅದೇ, ಅ.ಕೆ. ಶಾ.ಸಂ ೩೧೮ ಕ್ರಿ.ಶ.೧೨೫೮ ಹಿರಿಯೂರು ಮತ್ತು ೨೧೫, ಮುದುಡಿ, ಕ್ರಿ.ಶ.೧೨೯೪

೬೮. ಅದೇ, ಚ.ಪ.ಶಾ.ಸಂ.೨೫, ಸಣ್ಣೇನಹಳ್ಳಿ, ಕ್ರಿ.ಶ.೧೨೭೫

೬೯. ಅದೇ, ಚ.ಪ.ಶಾ.ಸಂ.೨೬ ಕ್ರಿ.ಶ.೧೨೮೯, ಶಾ.ಸಂ.೨೭, ಸಣ್ಣೇನಹಳ್ಳಿ, ಕ್ರಿ.ಶ.೧೨೮೪

೭೦. ಅದೇ ಚ.ಪ. ಶಾ.ಸಂ.೧೩೪, ಬಾಳಗಂಜಿ, ಕ್ರಿ.ಶ.೧೨೭೬

೭೧. ಅದೇ, ಅ.ಕೆ. ಶಾ.ಸಂ, ೨೮೮, ಕ್ರಿ.ಶ.೧೨೬೭, ೨೮೯, ಕ್ರಿ.ಶ.೧೨೮೭, ೨೯೦, ಮೊಸಳೆ, ಕ್ರಿ.ಶ.೧೨೮೮

೭೨. ಅದೇ, ಅ.ಕೆ. ಶಾ.ಸಂ. ೬೨, ಕಲ್ಲುಗುಂಡಿ, ಕ್ರಿ.ಶ.೧೩೩೧

೭೩. ಅದೇ, ಅ.ಕೆ.ಶಾ.ಸಂ.೧೮೯, ಆಲದಹಳ್ಳಿ, ಕ್ರಿ.ಶ.೧೩೩೮

೭೪. ಅದೇ, ಅ.ಕೆ.ಶಾ.ಸಂ, ೧೦೩, ಹಲುಕೂರು, ಕ್ರಿ.ಶ.೧೩೩೦ (?)

೭೫. ಅದೇ, ಅ.ಕೆ. ಶಾ.ಸಂ., ೧೯೪, ಬಾಗೇವಾಳು, ಕ್ರಿ.ಶ.೧೩೫೨

೭೬. ಅದೇ, ಅ.ಕೆ. ಶಾ.ಸಂ., ೧೫೩, ಕೆಲ್ಲಂಗೆರೆ, ಕ್ರಿ.ಶ.೧೩೬೭

೭೭. ಅದೇ, ಅ.ಕೆ. ಶಾ.ಸಂ.೧, ಅರಸೀಕೆರೆ, ಕ್ರಿ.ಶ.೧೩೬೮,

೭೮. ಅದೇ, ಚ.ಪ, ಶಾ.ಸಂ. ೧೩೧, ಹುಲಿಕೆರೆ, ಕ್ರಿ.ಶ.೧೩೭೮,

೭೯. ಅದೇ, ಚ.ಪ. ಶಾ.ಸಂ. ೫೯, ಮರಗೂರು, ಕ್ರಿ.ಶ.೧೩೭೮

೮೦. ಅದೇ, ಚ.ಪ. ಶಾ.ಸಂ. ೨೯, ಆನೆಕೆರೆ, ಕ್ರಿ.ಶ.೧೩೯೯,

೮೧. ಅದೇ, ಅ.ಕೆ. ಶಾ.ಸಂ. ೧೯೮, ಗಂಡಸಿ, ಕ್ರಿ.ಶ.೧೪೦೩

೮೨. ಅದೇ, ಅ.ಕೆ. ಶಾ.ಸಂ.೨೮೭, ನೇರ್ಲಿಗೆ, ಕ್ರಿ.ಶ.೧೪೨೯

೮೩. ಅದೇ, ಅ.ಕೆ. ಶಾ.ಸಂ.೨೮೦, ತಿಮ್ಮನಹಳ್ಳಿ, ಕ್ರಿ.ಶ.೧೪೩೨

೮೪. ಅದೇ, ಅ.ಕೆ. ಶಾ.ಸಂ.೨೭೩ ಜಾವಗಲ್ಲು, ಕ್ರಿ.ಶ.೧೫೧೫

೮೫. ಅದೇ, ಅ.ಕೆ. ಶಾ.ಸಂ. ೨೪೦, ಹಾರನಹಳ್ಳಿ, ಕ್ರಿ.ಶ.೧೫೩೫, ಶಾ.ಸಂ.೨೦೬, ಗಂಡಸಿ, ಕ್ರಿ.ಶ.೧೫೩೫

೮೬. ಅದೇ, ಅ.ಕೆ. ಶಾ.ಸಂ. ೨೬೧, ಸಿಂಗನಹಳ್ಳಿ, ಕ್ರಿ.ಶ.೧೫೫೫,

೮೭. ಅದೇ, ಅ.ಕೆ. ಶಾ.ಸಂ.೨೭೯, ಜಾವಗಲ್ಲು, ಕ್ರಿ.ಶ.೧೫೮೧

೮೮. ಎ.ಕ. ಸಂ.೯ (ಪರಿ) ಬೇಲೂರು ಶಾ.ಸಂ.೪೪೨, ಕ್ರಿ.ಶ.೧೫೫೯

೮೯. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೨೭೫, ಜಾವುಗಲ್ಲು, ಕ್ರಿ.ಶ.೧೬ನೇ ಶತಮಾನ

೯೦. ಅದೇ ಅ.ಕೆ.ಶಾ.ಸಂ. ೧೧೯, ಸೊಪ್ಪಿನಹಳ್ಳಿ, ಕ್ರಿ.ಶ.೧೫೯೫,

೯೧. ಅಬ್ದುಲ್ ಸತ್ತಾರ್ ಪಿ. ತರೀಕೆರೆ ಪಾಳೆಯಗಾರರು ಪು.೨೨

೯೨. ಕ.ಕೈ. ಲಕ್ಷ್ಮಣ್ ತೆಲಗಾವಿ (ಸಂ), ತರೀಕೆರೆ ಪಾಳೇಗಾರರ ಕೈಫಿಯತ್ತು, ಹರಿತಿಸಿರಿ, ಪು.೨೧೨

೯೩. ಕ.ವಿ.ವಿ.ಕೋ, ಕಂಠೀರವ ನರಸರಾಜ ಒಡೆಯರ್ I ಪು.೧೯೩

೯೪. ಎ.ಕ.೧೦ (ಪರಿ) ಅ.ಕೆ. ಶಾ.ಸಂ.೧೩೪, ಮಾಲೇಕಲ್‌ತಿರುಪತಿ, ಕ್ರಿ.ಶ.೧೭೪೪

೯೫. ಕ.ವಿ.ವಿ.ಕೋ, ಗರುಡನಗಿರಿ, ಪು.೫೭೫, ಚಿಕ್ಕದೇವರಾಜ ಒಡೆಯರ್, ಪು.೯೪೨

೯೬. ಎ.ಕ.೧೦ (ಪರಿ) ಅ.ಕೆ. ಶಾ.ಸಂ.೧೩೫, ೧೩೬, ೧೩೭, ಮಾಲೇಕಲ್‌ತಿರುಪತಿ, ಕ್ರಿ.ಶ.೧೭೪೫,

೯೭. ವಕ್ತೃ, ಪುರಾಣಿಕ ಶ್ರೀನಿವಾಸ ಭಟ್ಟ, ಬಾಣಾವರ

೯೮. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೨೩೭, ಕ.ಕೈ. ಪು.೧೮೮, ಹಾರನಹಳ್ಳಿ ಕೈಫಿಯತ್ತು.

೯೯. ಕ.ವಿ.ವಿ.ಕೋ ಟಿಪ್ಪುಸುಲ್ತಾನ್, ಪು.೭೫೭

೧೦೦. ಎ.ಕ.೧೦ (ಪರಿ) ಅ.ಕೆ. ಶಾ.ಸಂ. ೨೩೯, ಹಾರನಹಳ್ಳಿ, ಕ್ರಿ.ಶ.೧೮೧೭

೧೦೧. ಕ.ವಿ.ವಿ.ಕೋ, ಪು.೫೩

ಅಧ್ಯಾಯ ೩

# ಆರ್ಥಿಕ ವ್ಯವಸ್ಥೆ-ಸ್ಥಿತಿ ಸಂಚಲನ

೩.೧. ಕೃಷಿ ವಿಸ್ತರಣೆ

೩.೨. ಜಲಸಂಪನ್ಮೂಲ ಅಭಿವೃದ್ಧಿ -ವಿತರಣೆ

೩.೩. ಧನ ಸಂಪನ್ಮೂಲ ಕ್ರೋಢೀಕರಣ -ವಿತರಣೆ

೩

# ಆರ್ಥಿಕ ವ್ಯವಸ್ಥೆ-ಸ್ಥಿತಿ-ಸಂಚಲನ

## ಅಭಿವೃದ್ಧಿಯ ಮೊದಲ ಹೆಜ್ಜೆಗಳು

ಕಣ್ಣು ಚಾಚಿದಷ್ಟೂ ಹರಡಿಕೊಂಡು ಸಂಪದ್ಭರಿತವಾಗಿ ತಮ್ಮ ಬದುಕನ್ನು ಸುಖಮಯವಾಗಿ ಮಾಡುವ ಭೂಮಿಗೆ ಬೇಲಿಕಟ್ಟಿ ಗಡಿಮೇರೆಗಳನ್ನು ಗುರುತಿಸಿ ತಮ್ಮ ಅಧೀನ ಮಾಡಿಕೊಂಡು ಅದರ ಒಡೆಯರಾಗಿ ಹೆಚ್ಚು ಸುಖಿಯಾಗ ಹೊರಟವರು, ಮತ್ತು ಅಂತಹ ವರ್ಗದವರಿಗೆ ಪೂರಕವಾಗಿ ದುಡಿದವರ ಬದುಕೇ ಮನುಕುಲದ ಚರಿತ್ರೆ ಎಂದರೆ ಉತ್ಪ್ರೇಕ್ಷೆಯಾಗಲಾರದು. ತನ್ನ ಸಮೃದ್ಧ ಫಲವಂತಿಕೆಯಿಂದಾಗಿ ಈ ಪೃಥ್ವಿ ಸಂಪತ್ತಿನ ಆಗರವಾಗಿದೆ. ಚರಿತ್ರೆಯ ಮೊದಲ ಘಟ್ಟದಲ್ಲಿ ಅಲೆಮಾರಿಯಾಗಿದ್ದ ಮಾನವ ನೀರಿರುವ ಜಾಗಗಳಲ್ಲಿ ನೆಲೆನಿಂತಾಗ ತನ್ನ ಮೂಲಭೂತ ಅವಶ್ಯಕತೆಗಳನ್ನು ತಾನೇ ಸಿದ್ಧಪಡಿಸಿಕೊಳ್ಳುವಂತಾದುದು ಕೃಷಿ ಹಾಗೂ ಇತರ ಉತ್ಪಾದನಾ ಚಟುವಟಿಕೆಗಳಿಗೆ ಚಾಲನೆ ನೀಡಿತೆಂಬುದು ಸ್ಪಷ್ಟವಾಗಿದೆ. ವಸ್ತುಗಳ ಉತ್ಪಾದನೆಯು ಮಾನವ ಬದುಕಿಗೆ ಬುನಾದಿಯಷ್ಟೇ ಅಲ್ಲ. ಹಾಗೆ ಉತ್ಪಾದನೆಗೊಂಡ ಸಂಪತ್ತಿನ ಹಂಚಿಕೆಯಲ್ಲಾದ ಅಸಮಾನತೆಯೇ ಅವನ ಸಮಾಜದ ಶ್ರೇಣೀಕೃತ ವ್ಯವಸ್ಥೆಗೂ ಮೂಲವಾಯಿತು. ಸಮಾಜ ರಚನೆಯ ಪ್ರಮುಖ ತಳರಚನೆಯು ಆರ್ಥಿಕ ವ್ಯವಸ್ಥೆಯಾಗಿದ್ದು, ಕುಟುಂಬ ವ್ಯವಸ್ಥೆ, ಧರ್ಮ, ಕಲೆ, ಸಾಹಿತ್ಯ, ಸಂಸ್ಕೃತಿ, ಮೌಲ್ಯ ಇತ್ಯಾದಿಗಳೆಲ್ಲ ಮೇಲ್‌ರಚನೆಗಳಾಗಿರುತ್ತವೆ. ಹಾಗಾಗಿ ತಳರಚನೆಯಲ್ಲಿ ಉಂಟಾಗುವ ಸಂಚಲನ ಘರ್ಷಣೆಗಳು ಸಮಾಜದಲ್ಲಿ ಹೊಸ ವ್ಯವಸ್ಥೆಯ ಹುಟ್ಟಿಗೆ ಕಾರಣವಾಗುತ್ತವೆ.[೧] ಹಾಗಾಗಿ ಯಾವುದೇ ಪ್ರದೇಶದ ಸಾಮಾಜಿಕ-ಸಾಂಸ್ಕೃತಿಕ ಸ್ಥಿತಿ-ಸಂಚಲನದ ಅಧ್ಯಯನ ಮಾಡಲು ಹೊರಟವರು ಅಲ್ಲಿನ ಭೂಸಂಪತ್ತು ಅದರ ಒಡೆತನ, ಅಭಿವೃದ್ಧಿ, ಹಂಚಿಕೆ, ಕೃಷಿ ವಿಸ್ತರಣೆ, ಕೃಷಿಯೇತರ ಉತ್ಪಾದನೆ, ವಾಣಿಜ್ಯ, ವ್ಯವಹಾರ ಇತ್ಯಾದಿ ಅರ್ಥ ಸಂಬಂಧಿ ಪಲ್ಲಟಗಳನ್ನು ಅಗತ್ಯವಾಗಿ ಗಮನಿಸಬೇಕಾಗುತ್ತದೆ.

ಕ್ರಿ.ಶ. ೯ರಿಂದ ೧೫ನೇ ಶತಮಾನಗಳ ನಡುವಣ ಅವಧಿಯ ಸಾಮಾಜಿಕ ಆರ್ಥಿಕ ಜೀವನದಲ್ಲಿ ಕರ್ನಾಟಕವೂ ಒಳಗೊಂಡಂತೆ ಇಡೀ ದಕ್ಷಿಣ ಭಾರತದಲ್ಲಿ ಕೃಷಿ ಭೂಮಿ ಮತ್ತು ಕೃಷಿ ಉತ್ಪಾದನೆಯು ಪ್ರಮುಖವಾಗಿತ್ತು. ೧೪ನೇ ಶತಮಾನ ಹಾಗೂ ನಂತರದಲ್ಲಿ ಕರ್ನಾಟಕದಲ್ಲಿ ಬಂಡವಾಳ ಶಾಹಿ ಉತ್ಪಾದನೆಯ ಚಟುವಟಿಕೆ ಬಲಗೊಂಡು ಬಂಡವಾಳಶಾಹಿ ಬೆಳವಣಿಗೆಗಳು ಕಾಣಿಸಿಕೊಂಡಿದ್ದನ್ನು

ಊಳಿಗಮಾನ್ಯ ವ್ಯವಸ್ಥೆ ಬಂಡವಾಳ ಶಾಹಿಯಾಗಿ ಪರಿವರ್ತನೆಗೊಳ್ಳುವ ಪ್ರಕ್ರಿಯೆಯನ್ನು ವಿದ್ವಾಂಸರು ಗುರುತಿಸಿದ್ದಾರೆ.[೨]

ಪ್ರಸ್ತುತ ಅಧ್ಯಯನ ಪ್ರದೇಶದ ಶಾಸನಗಳು ರಾಜನ ಆಳ್ವಿಕೆಗೆ ಸೇರಿದ ಪ್ರದೇಶ, ಸಾಮಂತರಿಗೆ ಸೇರಿದ ಪ್ರದೇಶ, ಅಧಿಕಾರದ ವಿಕೇಂದ್ರೀಕರಣ, ಕೃಷಿ ಆಧಾರಿತ ಅರ್ಥವ್ಯವಸ್ಥೆ, ಖಾಸಗಿ ಭೂಮಾಲೀಕತ್ವ, ಭೂಮಾಲೀಕ ಮಧ್ಯವರ್ತಿಗಳು, ಯಥೇಚ್ಛವಾದ ಭೂದಾನ ನೀಡುವ ಪದ್ಧತಿ ಮುಂತಾದ ಊಳಿಗಮಾನ್ಯ ಪದ್ಧತಿಯ ಎಲ್ಲ ಲಕ್ಷಣಗಳನ್ನು ಹೇಳುವ ಮೂಲಕ ಮತ್ತು ಶ್ರೇಣೀಕೃತ ಸಾಮಾಜಿಕ ಆರ್ಥಿಕ ವ್ಯವಸ್ಥೆಯನ್ನು ಸೂಚಿಸುವುದರ ಮೂಲಕ ಈ ಪ್ರದೇಶದಲ್ಲಿದ್ದ ಊಳಿಗಮಾನ್ಯ ವ್ಯವಸ್ಥೆಯನ್ನು ದೃಢೀಕರಿಸುತ್ತವೆ. ೮-೯ನೇ ಶತಮಾನದಲ್ಲಿ ಗಂಗರು ಹಾಗೂ ನೊಳಂಬರ ಪೈಪೋಟಿಗೆ ಸಿಕ್ಕಿದ ಈ ಪ್ರದೇಶದಲ್ಲಿ ಹೆಚ್ಚಿನ ಆರ್ಥಿಕ ಪ್ರಗತಿಗೆ ಅವಕಾಶವಾಗಲಿಲ್ಲವೆಂಬುದನ್ನು ಗಮನಿಸಬಹುದು. ಯುದ್ಧಗಳಲ್ಲಿ ಹೋರಾಡಿ ಮಡಿದ ವೀರರಿಗೆ ಅರಸರು ನೀಡಿದ ಕಲ್ನಾಟ್ಟು ಭೂಮಿಗಳು ಮತ್ತು ಕೊಡಗಿ ಗ್ರಾಮಗಳಲ್ಲಿ[೩] ಪ್ರಗತಿಯ ಮೊದಲ ಹೆಜ್ಜೆಗಳನ್ನು ಗುರುತಿಸಬಹುದು. ಹೊಯ್ಸಳರು ೧೧ನೇ ಶತಮಾನದ ಅಂಚಿಗೆ ತಮ್ಮ ರಾಜ್ಯವಿಸ್ತರಣೆಗೆ ತೊಡಗುವ ಮೊದಲು ಚಿಕ್ಕಮಗಳೂರು ಜಿಲ್ಲೆ, ಹಾಸನಜಿಲ್ಲೆಯ ಭಾಗಗಳಲ್ಲಿ ಭದ್ರವಾಗಿ ಬೇರೂರಿದರು. ಈ ಪ್ರದೇಶವು ಸಂಪದ್ಭರಿತವಾಗಿದ್ದುದಲ್ಲದೆ ಇದರ ವೈಶಿಷ್ಟ್ಯವೆಂದರೆ ಒಂದು ಕಡೆಗೆ ಕರಾವಳಿ ಪ್ರದೇಶ, ಘಟ್ಟ ಪ್ರದೇಶ ಹಾಗೂ ಬಯಲುನಾಡುಗಳನ್ನು ಬೆಸೆಯುವ ಅತ್ಯಂತ ಪ್ರಮುಖವಾದ ವಾಣಿಜ್ಯ ವ್ಯಾಪಾರ ಪಥಗಳಿಂದ ಕೂಡಿದ್ದುದು. 'ಪಾಂಡ್ಯರು, ಚೋಳರು ಮತ್ತಿತರ ತಮಿಳುನಾಡು ರಾಜರುಗಳು ಮತ್ತು ವರ್ತಕರು ದಕ್ಷಿಣ ಕರ್ನಾಟಕದ ಮಲೆನಾಡಿನ ಉತ್ಪನ್ನಗಳನ್ನು ಸಂಬಾರ ವಸ್ತುಗಳನ್ನು ಪುನ್ನಾಟ ಮತ್ತು ಕೋಲಾರದ ಚಿನ್ನ, ಪಚ್ಚೆ, ರತ್ನಗಳನ್ನು ತಮ್ಮ ನಾಡಿನ ಬಂದರುಗಳ ಮೂಲಕವೇ ಹೊರದೇಶಗಳಿಗೆ ಕಳಿಸುತ್ತಿದ್ದರು."[೪] ಹಾಗಾಗಿ ಪ್ರಾಚೀನ ಕರ್ನಾಟಕದ ಒಳನಾಡಿನ ಹೆದ್ದಾರಿಗಳೊಂದಿಗೆ ಈ ಮಲೆನಾಡಿನ ಪ್ರದೇಶವನ್ನು ಬೆಸೆಯಲು ಅರಸೀಕೆರೆ, ಬಾಣಾವರ, ಜಾವಗಲ್ಲು, ಹಳೇಬೀಡು, ಬೇಲೂರು, ಮೂಡಗೆರೆ, ಅಂಗಡಿ ಪ್ರದೇಶಗಳ ವ್ಯಾಪಾರ ಮಾರ್ಗಗಳು ಅತಿ ಅವಶ್ಯಕವಾಗಿದ್ದವು. ಜೊತೆಗೆ ಫಲವತ್ತಾದ ವೈವಿಧ್ಯಮಯವಾದ ಕನ್ನೆಲ ಕೃಷಿ ವಿಸ್ತರಣೆಗೆ ಯೋಗ್ಯವಾಗಿತ್ತು. ಮಹತ್ವಾಕಾಂಕ್ಷಿಗಳಾದ ಹೊಯ್ಸಳರು ಬಲಿಷ್ಠರಾಜಕೀಯ ಶಕ್ತಿಯಾಗಿ ಬೆಳೆಯಲು ಸಂಪತ್ತಿನ ಕ್ರೋಢೀಕರಣವು ಅತಿ ಅವಶ್ಯಕವಾಗಿತ್ತು. ಈ ಎಲ್ಲ ಅಂಶಗಳನ್ನು ಗಮನಿಸಿ ಅವರು ಕೈಗೊಂಡ ಆರ್ಥಿಕ ನೀತಿಯು ಅಭಿವೃದ್ಧಿಕಾರ್ಯಗಳಿಗೆ ಅದ್ಭುತ ಚಾಲನೆ ನೀಡಿತು.

## ೩.೧. ಕೃಷಿ ವಿಸ್ತರಣೆ

ಭೂಮಿಯು ಉತ್ಪಾದನೆಯ ಮುಖ್ಯ ಮೂಲವಾಗಿದ್ದು ಇದು ಇಡೀ ಆರ್ಥಿಕ ಬದುಕಿನ ತಳಹದಿ. ವಾಣಿಜ್ಯ, ವ್ಯಾಪಾರ, ಉದ್ಯಮಗಳು ನಾಡಿನ ತೆರಿಗೆ ಇವು ಕೃಷಿ ಉತ್ಪಾದನೆಯ ಅಭಿವೃದ್ಧಿಯ,

ಸಮೃದ್ಧಿಯ ಮೇಲೆ ಅವಲಂಬಿಸಿರುತ್ತದೆ. ಹಾಗಾಗಿ ಯಾವ ಕಾರಣಕ್ಕೂ ಯಾರೂ ಕೃಷಿಕನ ಉಳುಮೆಯನ್ನು ತಡೆಯಲಾಗದು. ಅದು ತಡೆ ರಹಿತವಾಗಿ ಸಾಗುತ್ತಿರಬೇಕೆನ್ನುತ್ತಾನೆ ಕೌಟಿಲ್ಯ.[೫] ರಾಜ್ಯದ ಆದಾಯವನ್ನು ಹೆಚ್ಚಿಸುವುದಕ್ಕಾಗಿ ಮತ್ತು ಜನಸಂಖ್ಯೆಯ ಹೆಚ್ಚಳದೊಂದಿಗೆ ಜನವಸತಿ ನೆಲೆಗಳ ನಿರ್ಮಾಣಗಳಿಂದ ಕೃಷಿ ವಿಸ್ತರಣೆ ಅನಿವಾರ್ಯವಾಗಿತ್ತು. ಅದಕ್ಕಾಗಿ ವಿಸ್ತಾರವಾಗಿ ಲಭ್ಯವಿದ್ದ ಕಾಡುಹಳುವನ್ನು ಕಡಿದು ಕೃಷಿ ಭೂಮಿಯ ವಿಸ್ತರಣೆ ಮಾಡುವ ಪ್ರಕ್ರಿಯೆ ೮ ರಿಂದ ೧೪ನೇ ಶತಮಾನಗಳ ಶಾಸನಗಳಲ್ಲಿ ಮತ್ತೆ ಮತ್ತೆ ಉಲ್ಲೇಖಗೊಂಡಿವೆ.[೬] ಆಳುವ ವರ್ಗ ಅಂತಹವುಗಳನ್ನು ಪ್ರೋತ್ಸಾಹಿಸಲು ಅನೇಕ ಹೊಸ ಆರ್ಥಿಕ ನೀತಿಯನ್ನು ಅನುಸರಿಸಿರುವುದು ಕಂಡುಬರುತ್ತದೆ. ಅವುಗಳಲ್ಲಿ ಭೂಮಿ ದಾನ, ನವಗ್ರಾಮ ನಿರ್ಮಾಣ, ಕೊಡುಗೆಗಳಾಗಿ ಗ್ರಾಮಗಳನ್ನು ನೀಡುವುದು, ಮೈಜೀವಿತಕ್ಕಾಗಿ ಅಧಿಕಾರಿಗಳಿಗೆ ಸೇವಾ ವರ್ಗದವರಿಗೆ ಉಂಬಳಿಗ್ರಾಮಗಳನ್ನು ನೀಡುವುದರೊಂದಿಗೆ, ಹೊಸದಾಗಿ ಸಾಧುಗೊಳಿಸಿ ಭೂಮಿಯನ್ನು ಕೃಷಿಗೆ ಅಳವಡಿಸುವವರಿಗೆ, ಕೆರೆ-ಕಟ್ಟೆಗಳನ್ನು ನಿರ್ಮಿಸುವವರಿಗೆ ಹೊಸವಸತಿ ನೆಲೆಗಳನ್ನು ನಿರ್ಮಾಣ ಮಾಡುವವರಿಗೆ ಪ್ರಭುತ್ವವು ತೆರಿಗೆ ವಿನಾಯತಿ ನೀಡುತ್ತಿತ್ತು. ಪ್ರೋತ್ಸಾಹಕ ಕೊಡುಗೆಗಳನ್ನು ನೀಡುತ್ತಿತ್ತು.[೭] ಈ ವಿನಾಯಿತಿಗಳು ಅವರಲ್ಲಿ ಇಂಥ ಸಾಹಸ ಕಾರ್ಯಕ್ಕೆ ಧೈರ್ಯವನ್ನು ಉತ್ಸಾಹವನ್ನು ತುಂಬುತ್ತಿದ್ದವು.

### ೩.೧.೧. ಭೂಮಿದಾನ-ಸಂಪತ್ತಿನ ಹಂಚಿಕೆ

ಭೂದಾನವು ನಿಜವಾದ ಅರ್ಥದಲ್ಲಿ ಒಂದು ಆರ್ಥಿಕ ಚಟುವಟಿಕೆಯೇ ಆಗಿದ್ದರೂ ಅದನ್ನು ಧಾರ್ಮಿಕ ಚಟುವಟಿಕೆ ಎಂಬಂತೆ ನಮ್ಮ ಸಂಸ್ಕೃತಿಯಲ್ಲಿ ಬಿಂಬಿಸಲಾಗಿದೆ. ಭೂದಾನದಿಂದ ವಿಶೇಷವಾದ ಪುಣ್ಯಾರ್ಜನೆಯಾಗುತ್ತದೆಂದು ನಂಬಲಾಗಿತ್ತು.[೮] ಭೂದಾನದ ಹಿಂದಿನ ಪ್ರೇರಣೆ ಧಾರ್ಮಿಕವೆನ್ನುವುದಾದರೂ ಅದು ಉಂಟುಮಾಡಿದ ಸಾಮಾಜಿಕ ಪರಿಣಾಮ ಇಡೀ ವ್ಯವಸ್ಥೆಯಲ್ಲೇ ಬದಲಾವಣೆಗೆ ಕಾರಣವಾಯಿತು.

ಭೂದಾನಗಳನ್ನು ಧಾರ್ಮಿಕ ಕಾರಣಕ್ಕಾಗಿ ಮತ್ತು ಸೇವಾವೃತ್ತಿಯವರ ಸೇವೆಗೆ ಪ್ರತಿಫಲವಾಗಿ ನೀಡಲಾಗುತ್ತಿತ್ತು; ಧಾರ್ಮಿಕ ದಾನದಲ್ಲಿ ಬ್ರಹ್ಮಾದೇಯ ಮತ್ತು ದೇವದಾನಗಳು ಪ್ರಮುಖವಾದವು. ಬ್ರಹ್ಮಾದೇಯವು ಬ್ರಾಹ್ಮಣನಿಗೆ[೯] ಅಥವಾ ಬ್ರಾಹ್ಮಣರಿಗೆ ಅವರು ಅಧ್ಯಯನ, ಅಧ್ಯಾಪನ ಮತ್ತು ಧಾರ್ಮಿಕ ಕಾರ್ಯಗಳನ್ನು ನಿಶ್ಚಿಂತೆಯಿಂದ ನಡೆಸಿಕೊಂಡು ಹೋಗುವಂತೆ ನೀಡಿದ ಭೂಮಿದಾನವಾಗಿದೆ. ಶಾಸನಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುವ ಅಗ್ರಹಾರ ನಿರ್ಮಾಣ ಮತ್ತು ವೃತ್ತಿಗಳಾಗಿ ಅಲ್ಲಿನ ಭೂಮಿಯನ್ನು ಹಂಚಿಕೊಟ್ಟಿರುವುದನ್ನು ಬ್ರಹ್ಮಾದೇಯವೆಂದೇ ಕರೆಯಲಾಗುತ್ತದೆ. ಈ ಪ್ರದೇಶದಲ್ಲಿ ಹನ್ನೊಂದನೇ ಶತಮಾನದಿಂದ ಹದಿಮೂರನೇ ಶತಮಾನದವರೆಗೆ ಸುಮಾರು ಇಪ್ಪತ್ತಕ್ಕೂ ಮೀರಿ ಅಗ್ರಹಾರ ನಿರ್ಮಾಣ ಜೀರ್ಣೋದ್ಧಾರವಾಗಿವೆ.[೧೦] ಅದೇ ರೀತಿ ವಿಪುಲ ಸಂಖ್ಯೆಯಲ್ಲಿ ದೇವಾಲಯಗಳೂ ನಿರ್ಮಾಣಗೊಂಡು ಅಲ್ಲಿನ ಪೂಜಾ ಕೈಂಕರ್ಯ, ಉತ್ಸವಾದಿಗಳಿಗೆಂದು ಹೆಗ್ಗಡೆಗಳು, ಮಹಾಜನರು

ನಖರರು, ಸಿರಿವಂತ ವರ್ತಕರು, ಅರಸರು ನೀಡಿದ ದಾನದಿಂದ ಅಪಾರ ಭೂಮಿಯನ್ನು ಹೊಂದಿದ್ದು,[೧೧] ಇಂತಹ ದೇವಾಲಯಗಳು ಭೂಮಾಲೀಕರಂತಿದ್ದವು. ಕೆಲವು ದೇವಾಲಯಗಳಲ್ಲಿ ಹೆಚ್ಚಿನ ಸಂಖ್ಯೆಯ ಪುರವರ್ಗವಿದ್ದು[೧೨] ಅವರೆಲ್ಲರ ಜೀವಿತಗದ್ಯಾಣಗಳನ್ನು ದೇವಾಲಯದ ದೇವದಾನದ ಭೂಮಿಗಳ ಆದಾಯದಿಂದಲೇ ಭರಿಸುತ್ತಿದ್ದರು. ವಿಜಯನಗರದ ಅರಸರ ಕಾಲದಲ್ಲಿ, ಮೈಸೂರು ವಡೆಯರ ಕಾಲದಲ್ಲಿ ಹಿಂದಿನಿಂದ ನಡೆದುಕೊಂಡು ಬಂದ ಪೂರ್ವಮರ್ಯಾದೆಯ ದೇವದಾನ ಭೂಮಿಗಳನ್ನು ಮುಂದುವರೆಸಿರುವುದಲ್ಲದೆ ಹೊಸ ಭೂದಾನಗಳನ್ನು ನೀಡಿದ ಉದಾಹರಣೆಗಳಿವೆ.[೧೩] ದೇವಾಲಯ ಗಳೊಂದಿಗೆ ಮಠಕ್ಕೆ, ಮಠಪತಿ, ತಪೋದನರ ಆಹಾರದಾನಕ್ಕೆ, ವಿದ್ಯಾರ್ಥಿ ಮಾಣಿಯರಿಗೆ ವಿದ್ಯಾದಾನಕ್ಕೆ, ಅತಿಥಿ ಅಭ್ಯಾಗತರ ಸಲುವಾಗಿಯೂ ಆಹಾರದೊಂದಿಗೆ ಬೈಷಜ್ಯಕ್ಕಾಗಿಯೂ ದಾನಗಳನ್ನು ಬಿಟ್ಟಿರುವುದು ಕಂಡುಬರುತ್ತದೆ.[೧೪]

ಸೇವಾವೃತ್ತಿಯ ಭೂದಾನಗಳು ರಾಜ್ಯಾಡಳಿತದಲ್ಲಿ, ಗ್ರಾಮಾಡಳಿತದಲ್ಲಿ, ದೇವಾಲಯಗಳಲ್ಲಿ, ಅಗ್ರಹಾರದ ಮಹಾಜನರಲ್ಲಿ ವಿವಿಧ ಹಂತಗಳಲ್ಲಿ ವಿವಿಧ ರೀತಿಯಲ್ಲಿ ಸೇವಾವೃತ್ತಿಯನ್ನು ಕೈಗೊಂಡಿರುವವರಿಗೆ ಹೆಚ್ಚಿನ ಸಂದರ್ಭಗಳಲ್ಲಿ ಹಣಕ್ಕಿಂತ ಭೂಮಿದಾನವನ್ನು ನೀಡಿರುವುದನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ.[೧೫] ನೀರ್ಗುಂದ ನಾಡಿಗೆ ಸೇರಿದ ಅಗ್ರಹಾರ ಬೆಳುಗುಲಿಯಲ್ಲಿ ಕೇಶವದೇವಾಲಯ ನಿರ್ಮಿಸಿ ಆ ಗ್ರಾಮವನ್ನು ಅಗ್ರಹಾರವಾಗಿ ಮಾಡಿ ಆ ಅಗ್ರಹಾರದಲ್ಲಿ ಸೇವೆ ಸಲ್ಲಿಸುವ ದೇವಾಲಯದ ಪರಿವಾರ ವರ್ಗದ ಸೇನಬೋವ, ನಾಯಕ ಬಡ್ಡಿಯಸೆಟ್ಟಿ, ಅಕ್ಕಸಾಲಿ, ಬಡಗಿ, ಕಮ್ಮಾರ, ಅಗಸ, ಕುಂಬಾರ, ಕಮ್ಮಾರ, ಬಾರಿಕ ಎಲ್ಲರಿಗೂ ಭೂಮಿ ನೀಡಲಾಗಿದೆ.[೧೬]

ಶಾಸನಗಳಲ್ಲಿ ಕಂಡು ಬರುವ ಉಂಬಳಿ, ಕೊಡಗಿ ಮಾನ್ಯಗಳು ರಾಜರಿಂದ ತಮ್ಮ ಅಧಿಕಾರಿಗಳಿಗೆ ಮತ್ತು ತಮ್ಮ ವೀರ ಬಂಟರಿಗೆ, ವಿಶೇಷ ಪರಾಕ್ರಮ ತೋರಿದ ಯೋಧರಿಗೆ, ಕಲಾವಿದರಿಗೆ ಕೊಡುವಂತದ್ದು, ಗ್ರಾಮಗಳು ಗ್ರಾಮದಲ್ಲಿ ಸೇವೆ ಸಲ್ಲಿಸುವವರಿಗೆ ಕೊಡಮಾಡುವ ಭೂಮಿ, ಮಹಾಜನರು ತಮಗೆ ಸೇವೆ ಸಲ್ಲಿಸುವವರಿಗೆ ಕೊಡಮಾಡುವ ಭೂಮಿ ಇವುಗಳನ್ನು ಕೂಡ ಇದೇ ಗುಂಪಿಗೆ ಸೇರಿಸಬಹುದು.

### ೩.೧೨. ಭೂದಾನದ ಪರಿಣಾಮ – ಉಳಿಗಮಾನ್ಯತೆ

ಭೂದಾನಗಳ ಮೂಲಕ ಅರಸರು ಭೂಮಿಯ ಖಾಸಗಿ ಒಡೆತನಕ್ಕೆ ಅವಕಾಶ ಕಲ್ಪಿಸಿ ಅದನ್ನು ಗೌರವಿಸಿ, ಕ್ರಮಬದ್ಧಗೊಳಿಸಿದ್ದರಿಂದ ಖಾಸಗಿ ಭೂಮಿಯ ಒಡೆತನವನ್ನು ಪಡೆದ ವ್ಯಕ್ತಿಗಳು ಸಂಸ್ಥೆಗಳು ವಿಶೇಷ ಆಸಕ್ತಿಯಿಂದ ತಮ್ಮ ಒಡೆತನದ ಗ್ರಾಮಗಳ ಕೃಷಿ ಭೂಮಿಯ ಅಭಿವೃದ್ಧಿಗೆ ಅವಶ್ಯಕವಾದ ಕಾರ್ಯ ಚಟುವಟಿಕೆಗಳನ್ನು ಚುರುಕುಗೊಳಿಸಿದರು. ಇಂಥ ದಾನಭೂಮಿಗಳು ಹೆಚ್ಚಿನವು ಸರ್ವಮಾನ್ಯ

ವಾಗಿದ್ದುದರಿಂದ ಉತ್ಪಾದಿತ ಸಂಪತ್ತಿಗೆ ಅವರು ಪೂರ್ಣ ಒಡೆಯರಾಗಿರುತ್ತಿದ್ದರು. ಈ ರೀತಿ ರಾಜ್ಯದ ಸಂಪತ್ತು ದಾನಗಳ ಮೂಲಕ ವಿತರಣೆಗೊಳ್ಳುವುದು ಅಪೇಕ್ಷಣೀಯವಾದರೂ ಅದರ ಹಂಚಿಕೆಯಲ್ಲಾದ ಏರು ಪೇರು ಕೃಷಿಕ ಸಮಾಜದಲ್ಲಿ ಉಂಟು ಮಾಡಿದ ನೇತ್ಯಾತ್ಮಕ ಪರಿಣಾಮಗಳು ಮಾತ್ರ ಅಪೇಕ್ಷಣೀಯ ವಾದದ್ದಲ್ಲ. ದಾನವನ್ನು ಸ್ವೀಕರಿಸಲು ಅರ್ಹತೆಯನ್ನು ಗುರುತಿಸುವಾಗ ಶ್ರೇಣೀಕೃತ ವರ್ಣವ್ಯವಸ್ಥೆಯು ಪ್ರಧಾನವಾಗಿ ಕೆಲಸ ಮಾಡಿದೆ ಎಂಬುದು ಹಾಗೂ ಪ್ರಭು ಶಕ್ತಿ ತಮಗೆ ಬೇಕಾದಂತೆ ಸಮಾಜದಲ್ಲಿ ಊಳಿಗಮಾನ್ಯ ಪದ್ಧತಿಯನ್ನು ರೂಪಿಸಿಕೊಳ್ಳಲೂ ಇದು ಸಹಕಾರಿಯಾಯಿತು ಎಂಬುದು ಸ್ಪಷ್ಟವಿದೆ. ಈ ದಾನದ ಸಿಂಹಪಾಲು ಮಹಾಜನರಿಗೆ, ದೇವಾಲಯಗಳಿಗೆ ಸೇರಿತು. ಉಳಿದದ್ದು ಅಧಿಕಾರೀ ವರ್ಗಕ್ಕೆ ದಕ್ಕಿತು. ಒಟ್ಟಿನಲ್ಲಿ ಈ ದಾನ ಪ್ರಕ್ರಿಯೆಯು ಸಮಾಜದಲ್ಲಿ ಒಂದು ಹೊಸ ಸಿರಿವಂತ ಪ್ರಭಾವೀ ಭೂಮಾಲೀಕ ವರ್ಗವೊಂದು ರೂಪುಗೊಳ್ಳಲು ಅವಕಾಶ ಮಾಡಿಕೊಟ್ಟಿತು.

**ಆ. ಭೂಮಾಲೀಕರು ಮತ್ತು ಕೃಷಿ ಕಾರ್ಮಿಕರು :** ಕೃಷಿ ಪ್ರಧಾನ ಅರ್ಥವ್ಯವಸ್ಥೆಯಲ್ಲಿ ಭೂ ಮಾಲೀಕರು ಮತ್ತು ಕೃಷಿ ಕಾರ್ಮಿಕರು ಪರಸ್ಪರ ಹೊಂದಿರುತ್ತಿದ್ದ ಸಂಬಂಧಗಳು ಮತ್ತು ಸ್ಥಾನಮಾನಗಳನ್ನು ಅರ್ಥಮಾಡಿಕೊಳ್ಳಲು ಶಾಸನಗಳು ಹೆಚ್ಚು ಸಹಾಯಕವಾಗಿಲ್ಲ. ಭೂಮಾಲೀಕತ್ವ ಮತ್ತು ದಾನಿಗಳ ಬಗೆಗಷ್ಟೇ ದಾಖಲು ಮಾಡುವ ಉದ್ದೇಶದಿಂದ ಹುಟ್ಟಿಕೊಂಡ ಶಾಸನಗಳು ನಿರಂತರ ಸೇವೆಯಲ್ಲಿ ಮಣ್ಣಿನೊಂದಿಗೆ ಬೆಸೆದುಕೊಂಡಿರುವ ಒಕ್ಕಲು ಮಕ್ಕಳ ಬಗೆಗೆ, ಗೇಣಿದಾರರ ಬಗೆಗೆ, ಬೆಸಮಕ್ಕಳ ಬಗೆಗೆ ಹೆಚ್ಚೇನೂ ಹೇಳುವುದಿಲ್ಲ. ರೈತಾಪಿ ಜನಗಳ ಸಂಕಟ ಪರಿಪಾಟಲನ್ನು ತಿಳಿಯಲು ಶರಣರ ವಚನಗಳು,[೧೭] ಸರ್ವಜ್ಞನ ಕೆಲವು ವಚನಗಳು, ಕೀರ್ತನೆಗಳು ನೆರವಾಗುತ್ತವೆ. ಬಾಗಡೆಯ ಶಾಸನವೊಂದು[೧೮] ಸೀಮಾ ಸಂಬಂಧದಲ್ಲಿ ಪ್ರಾಣತೆತ್ತ ವೀರನ ಬಗೆಗೆ ಹೇಳುತ್ತದೆ. ಅದೇ ಗ್ರಾಮದ ಮತ್ತೊಂದು ಶಾಸನ[೧೯] ಒಡೆಯನ ಬೆಸನದಂತೆ ಹೋರಾಡಿ ಸತ್ತದ್ದನ್ನು ಹೇಳುತ್ತದೆ. ಕೃಷಿ ಭೂಮಿ ಸಂಬಂಧದ ಹೊಲಮೇರೆ ವ್ಯಾಜ್ಯಗಳಲ್ಲಿ ಒಡೆಯರ ಪರವಾಗಿ ಹೋರಾಡಿ ಮಡಿಯುವವರು ಹೆಚ್ಚಾಗಿ ಇಂಥ ಬೆಸಮಕ್ಕಳೇ ಆಗಿರುತ್ತಿದ್ದರು. ಇಂಥ ಕುಟುಂಬಕ್ಕೆ ಒಡೆಯರಿಂದ ಪರಿಹಾರಗಳು ಸಿಗುತ್ತಿದ್ದವಾದರೂ, ಇವರು ಒತ್ತಾಯ ಪೂರ್ವಕ ಬಿಟ್ಟಿ ದುಡಿಮೆ ಮಾಡಬೇಕಾಗುತ್ತಿತ್ತು. ಹಿರಿಯೂರಿನ ಒಂದು ಶಾಸನದಲ್ಲಿ[೨೦] ಅಗ್ರಹಾರವಾಗಿ ಪರಿವರ್ತನೆಗೊಂಡ ಆ ಗ್ರಾಮದ ದೇವಾಲಯದ ಅಪಾರ ಭೂಮಿಯ ಉಳಿಮೆಗಾಗಿ ಹನ್ನೆರಡು ಒಕ್ಕಲು ಕುಟುಂಬವನ್ನು ನಿಯಮಿಸಿ ಬಿಟ್ಟಿಸೋಲದಂತೆ ಸೇವೆ ಮಾಡಬೇಕೆಂಬ ನಿಬಂಧನೆಯನ್ನು ವಿಧಿಸಿರುವುದು ಕಂಡುಬರುತ್ತದೆ. ನೇರ್ಲಿಗೆ, ಹಾರನಹಳ್ಳಿಗಳ ವೈಷ್ಣವ ದೇವಾಲಯಗಳ ದೇವದಾನ ಭೂಮಿಯ ಉಳುಮೆಗೆ ಸಂಬಂಧಿಸಿದಂತೆ ಉಂಟಾದ ಮನಸ್ತಾಪಗಳ ಸುಳುಹುಗಳು ಸಿಗುತ್ತವೆ. ರೈತರನ್ನು ತಮ್ಮ ಹಿಡಿತದಲ್ಲಿಡಲು ಅನೇಕ ಪ್ರಕಾರದ ನಿರ್ಬಂಧನೆಗಳನ್ನು ವಿಧಿಸಲಾಗುತ್ತಿತ್ತೆಂಬುದು ತಿಳಿದು ಬರುತ್ತದೆ. 'ದೇವರ ನೆಲೆ ವೃತ್ತಿಗಳ ತೋಟಂಗಳ ಕೃಷಿಬ್ಯವಸಾಯ ಏತ ನೀರದ್ಯಾನವೊಳಗಾದ ಸಮಸ್ತ ಬ್ಯವಸಾಯವನೂ ತಾವೇ ಮಾಡುವರು... ಕೃಷಿ ವ್ಯವಸಾಯ ಮಾಡದಿದ್ದರಾದೆಡೆ ಅವರ ಪಡಿಜೀವಿತದ

ಲೇಯಿಕ್ಕಿ ಮಾಡಿಸುವರು" ಎಂದು ನಿಯಮ ವಿಧಿಸಲಾಗಿದೆ.[೨೧] ಸತತವಾಗಿ ದುಡಿಯುವ ವರ್ಗ ವ್ಯವಸ್ಥಿತ ಶೋಷಣೆಗೆ ಗುರಿಯಾಗಿರುವುದಕ್ಕೆ ಅರಸ ಮತ್ತು ರೈತನ ನಡುವೆ ಮಧ್ಯವರ್ತಿಗಳಾಗಿ ಬಂದ ಮಹಾಜನರು, ಪೆರ್ಗಡೆಗಳು, ಗಾವುಂಡರು, ಪ್ರಭುಗಾವುಂಡರು ಮುಂತಾದ ವರ್ಗಗಳು ಕಾರಣ.[೨೨] ಸಿರಿವಂತರಾದ ವರ್ತಕರೂ ತಮ್ಮ ಸಾಲಬಡ್ಡಿ ವ್ಯವಹಾರದಿಂದ ರೈತಾಪಿ ಜನರನ್ನು ಸಾಲಿಗರನ್ನಾಗಿ ಮಾಡಿ ಅವರ ಭೂಮಿ ಮನೆ ಇತ್ಯಾದಿಗಳನ್ನು ದಕ್ಕು ಹಾಕಿಕೊಳ್ಳುತ್ತಿದ್ದುದನ್ನು ಒಂದು ಶಾಸನದ ಸಹಾಯದಿಂದ ತಿಳಿಯಬಹುದಾಗಿದೆ.[೨೩] ಈ ಶ್ರೀಮಂತ ಪ್ರಭಾವೀ ವರ್ಗವು ಆಳರಸರೊಂದಿಗೆ ನಿಕಟವಾದ ಸಂಬಂಧವನ್ನು ಹೊಂದಿರುತ್ತಿದ್ದವು. ಅರಸರಿಗೂ ಇವರನ್ನು ಓಲೈಸುವ ಅವಶ್ಯಕತೆಯಿತ್ತು. ಇದು ಭೂಮಾಲೀಕ ವ್ಯವಸ್ಥೆಯನ್ನು ಇನ್ನಷ್ಟು ಬಲಗೊಳಿಸಿತ್ತು. ಅರಸರು, ಮಹಾಜನರು, ಅಧಿಕಾರಿವರ್ಗದ ಸಿರಿವಂತರು ಕೃಷಿಭೂಮಿಗಳ ಪರಿವರ್ತನೆಗಳನ್ನು ಬಯಸಿದಾಗ ಅಥವಾ ಗ್ರಾಮದಾನ ಮಾಡಿದಾಗ ಗ್ರಾಮಗಳನ್ನು ಅಗ್ರಹಾರಗಳನ್ನಾಗಿ ಪರಿವರ್ತಿಸುವ ಸಂದರ್ಭಗಳಲ್ಲಿ ಸ್ಥಳೀಯ ಕೃಷಿಕರು ಮತ್ತು ಆಳುಗಳು ಯಾವ ವಿರೋಧವನ್ನು ವ್ಯಕ್ತಪಡಿಸಲು ಆಗುತ್ತಿರಲಿಲ್ಲ. ಅವರು ಬಲವಂತವಾಗಿ ಮಹಾಜನಗಳ, ಒಡೆಯರ ಅಂಕೆಗೆ ಒಳಪಡುತ್ತಿದ್ದರು. ಇಂಥ ಸಂದರ್ಭಗಳಲ್ಲಿ ಉಂಟಾಗುತ್ತಿದ್ದ ವೈಮನಸ್ಯವನ್ನು ಶಾಸನಗಳು ಹೆಚ್ಚು ಹೇಳಿಲ್ಲವೆಂದ ಮಾತ್ರಕ್ಕೆ ಅವು ಇರಲಿಲ್ಲವೆಂದು ಅರ್ಥೈಸಲಾಗದು. ಹಳ್ಳಿಯ ಕೃಷಿಕರು ತಮ್ಮ ಹಳ್ಳಿಯನ್ನು ಬ್ರಾಹ್ಮಣರಿಗೆ ನೀಡುವುದನ್ನು ವಿರೋಧಿಸಿದ್ದರ ಉಲ್ಲೇಖವಿದೆ.[೨೪] ಬ್ರಾಹ್ಮಣರು ಮತ್ತು ಬ್ರಾಹ್ಮಣೇತರ ಕೃಷಿಕ ಕುಟುಂಬದ ಮಧ್ಯೆ ಕೆರೆಯಿಂದ ಕೃಷಿಗಾಗಿ ನೀರನ್ನು ಬಳಸುವ ಸಂಬಂಧವಾಗಿ ಉಂಟಾದ ಕಲಹವನ್ನು ಆಲೂರಿನ ಎರಡು ಶಾಸನಗಳು ಉಲ್ಲೇಖಿಸಿವೆ.[೨೫]

ಒಕ್ಕಲಿಗ ಮುದ್ದಣ್ಣನ ವಚನಗಳ ತುಣುಕುಗಳಲ್ಲಿ ಒಕ್ಕಲು ಮಕ್ಕಳ ತಾಪತ್ರಯ ಸಂಕಟ ತಣ್ಣನೆಯ ಆಕ್ರೋಶಗಳು ವ್ಯಕ್ತವಾಗಿವೆ.[೨೬] ಒಕ್ಕಲು ಮಕ್ಕಳ ಮೇಲೆ ಹೇರಲಾಗುತ್ತಿದ್ದ ತೆರಿಗೆಗಳು ರೈತರ ಮೇಲೆ ಒತ್ತಡ ಹೆಚ್ಚಾಗಲು ಕಾರಣವಾದದ್ದನ್ನು ಅವು ಸೂಕ್ಷ್ಮವಾಗಿ ಹೇಳಿವೆ. ಸಾಮಾನ್ಯವಾಗಿ ತೆರಿಗೆ ವಿನಾಯಿತಿಯ ಲಾಭ ಬ್ರಾಹ್ಮಣ ಮತ್ತು ಇನ್ನಿತರ ಮೇಲ್ ವರ್ಗದ ಪ್ರತಿಷ್ಠಿತರಿಗೆ ದೊರೆಯುತ್ತಿತ್ತು. ಸಾಮಾನ್ಯ ರೈತರು ತಮ್ಮ ಮನೆ, ಹೊಲ, ತೋಟ, ತಿಪ್ಪೆ, ದನಕರು, ಮದುಮೆ ಮುಂತಾದ ಆಚರಣೆಗಳಿಗೆಲ್ಲ ತೆರಿಗೆಯನ್ನು ಕೊಡುವುದಲ್ಲದೆ ತನ್ನ ಕೃಷಿ ಉಪಕರಣಗಳ ಮೇಲೂ, ತಾನು ಬೆಳೆದ ಬೆಳೆಯನ್ನು ಸಂತೆಗಳಿಗೆ ಒಯ್ದು ಮಾರಾಟ ಮಾಡುವಾಗಲೂ ತೆರಿಗೆ ಕೊಡಬೇಕಾಗಿತ್ತು. ಇದೆಲ್ಲ ಜನಸಾಮಾನ್ಯರನ್ನು ಅಸಮಾಧಾನಗೊಳಿಸುತ್ತಿತ್ತು. ಸರಿಯಾಗಿ ಪರೀಕ್ಷಿಸದೆ ತೆರಿಗೆಗಳನ್ನು ವಿಧಿಸಬಾರದು ಅರಸರ ಕಾಣಿಕೆ, ಅರುವಣ ಮುಂತಾದ ತೆರಿಗೆಗಳನ್ನು ದುರಾಸೆಯಿಂದ ಕೇಳಿದವರು ಚಾಂಡಾಳರು" ಎಂದು ಅಕ್ಕಲಕೋಟೆ ಶಾಸನದಲ್ಲಿ ಬರೆಸಲಾಗಿದೆ.[೨೭] ತೆರಿಗೆ ಪಾವತಿಸಲು ಆಗಿದಿದ್ದರೆ 'ಬಿಟ್ಟಿ' ದುಡಿಮೆಯ ಮೂಲಕ ಅದನ್ನು ಸಂದಾಯ ಮಾಡಬೇಕಾಗುತ್ತಿತ್ತು.[೨೮]

### ೩.೧.೩. ಭೂ ಒಡೆತನ

ಭೂಹಿಡುವಳಿಗೆ ಸಂಬಂಧಿಸಿದಂತೆ ಖಾಸಗಿ ಒಡೆತನವನ್ನು ಗುರುತಿಸಿ ಗೌರವಿಸಲು ಹೊಯ್ಸಳ ಅರಸರು ಸಾಕಷ್ಟು ಎಚ್ಚರಿಕೆ ತೆಗೆದುಕೊಂಡಿದ್ದರೆಂಬುದು ಅನೇಕ ಶಾಸನಗಳಲ್ಲಿ ವ್ಯಕ್ತವಾಗುತ್ತದೆ. ವಿಜಯನಗರದ ಅರಸರು ಇದನ್ನು ಮುಂದುವರೆಸಿಕೊಂಡು ಹೋದಂತೆ ತೋರುತ್ತದೆ. ಆಸ್ತಿಯ ಕ್ರಯ, ದಾನ, ಪರಿವರ್ತನೆ, ಅಡವು ಇತ್ಯಾದಿಗಳಿಗೆಲ್ಲ ಆಸ್ತಿಯ ಒಡೆತನವು ಮೂಲವಾಗಿರುತ್ತದೆ. ಈ ಒಡೆತನದ ಹಕ್ಕು ಇಲ್ಲದೆ ನಡೆಯುವ ಯಾವ ಸಂಬಂಧಿತ ಕ್ರಿಯೆಗಳಿಗೂ ಮಾನ್ಯತೆ ಇರುವುದಿಲ್ಲ. ನಿರ್ದಿಷ್ಟವಾದ ಭೂಮಿ ಮನೆ ಇತ್ಯಾದಿಗಳನ್ನು ಪರಭಾರೆ ಮಾಡುವ ಹಕ್ಕು ಒಡೆತನದಿಂದ ಮಾತ್ರ ಬರಲು ಸಾಧ್ಯ. ಈ ಭೂ ಸಂಬಂಧಿತ ಕ್ರಿಯೆಗಳೆಲ್ಲ ಒಡೆತನದ ಲಕ್ಷಣಗಳಾಗಿವೆ.[೨೯] ಇಂಥ ಭೂಸಂಬಂಧಿ ಕ್ರಿಯೆಗಳ ಮೇಲೆ ಕೃಷಿ ಆಧಾರಿತ ಆರ್ಥಿಕ ವ್ಯವಸ್ಥೆಯಲ್ಲಿ ಸೂಕ್ಷ್ಮ ಎಚ್ಚರ ಬಹಳ ಮುಖ್ಯವಾದುದು. ರಾಜಾಯವನ್ನು ರೂಢಿಸಿಕೊಳ್ಳುವಲ್ಲಿ ಭೂಮಿಯ ಮಾರಾಟ, ಅಡಮಾನ, ಉಡುಗೊರೆಗಳ ಮೂಲಕ ಪರಭಾರೆ ಮಾಡುವ ಕ್ರಿಯೆಗಳನ್ನು, ಬಿಡಿ ಬಿಡಿ ಜಮೀನುಗಳನ್ನು ಗ್ರಾಮದ ಗಡಿಗಳನ್ನು ಸೂಕ್ಷ್ಮ ವಿವರಗಳೊಂದಿಗೆ ಕರಾರುವಕ್ಕಾಗಿ ಗುರುತಿಸುವುದರ ಮೂಲಕ ಕರನಿರ್ಧಾರ ಮಾಡುವುದು ಅತಿ ಅವಶ್ಯಕವಾಗಿತ್ತು. ಹಲವಾರು ಶಾಸನಗಳು ಈ ಉದ್ದಿಶ್ಯಕ್ಕಾಗಿಯೇ ಹುಟ್ಟಿಕೊಂಡಿರುವುದು ಕಂಡುಬರುತ್ತದೆ.

ದಾಯ ವಿಭಾಗ ಎನ್ನುವ ಭಾಗದಲ್ಲಿ ವಿಜ್ಞಾನೇಶ್ವರನು ಒಡೆತನ ಮತ್ತು ಆಸ್ತಿಯ ಹಕ್ಕಿನ ಬಗೆಗೆ ಹೇಳುತ್ತಾನೆ.[೩೦] ಆಸ್ತಿಯ ಹಕ್ಕು ತಾತನಿಂದ ತಂದೆಯ ಮೂಲಕ ಮೊಮ್ಮಗನಿಗೆ ಸಹಜವಾಗಿ ಬರುತ್ತದೆ. ಇದನ್ನು ಪಿತ್ರಾರ್ಜಿತವೆನ್ನಲಾಗುತ್ತದೆ.[೩೧] ದಾನ ಮಾಡುವಾಗ, ವಿಕ್ರಯ ಮಾಡುವಾಗ ಗಂಡು ಮಕ್ಕಳು ಮಡದಿ ಬಂಧು ಬಾಂಧವರ ಒಪ್ಪಿಗೆಯ ಮೇರೆಗೆ ಸ್ವ ಇಚ್ಛೆಯಿಂದ ದಾನ ಬಿಡಲಾಗುತ್ತಿತ್ತು. ಗಂಡು ಮಕ್ಕಳಿಗೆ, ಹೆಣ್ಣು ಮಕ್ಕಳಿಗೆ ಸೋದರಿಗೆ ಆಸ್ತಿ ಹಂಚಿಕೊಟ್ಟಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ.[೩೨]

**ಕ್ರಯಪತ್ರಗಳು :** ಇವುಗಳು ವಿಶೇಷ ಒಕ್ಕಣೆಯನ್ನು ಹೊಂದಿದ್ದು, ಬಹಳ ಎಚ್ಚರಿಕೆಯಿಂದ ಬರೆಸಲಾಗುತ್ತಿತ್ತು. ಕೂತಣ ಹೆಗ್ಗಡೆಯರ ಮಗ ಬಲ್ಲಣ್ಣನವರು ವೈದ್ಯ ದೇವಪಿಳ್ಳೆಯಂಣ್ಣಂಗಳಿಗೆ ಧಾರಾ ಪೂರ್ವಕ ಮಾಡಿಕೊಟ್ಟ ಕ್ರಯಪ್ರಮಾಣ ಪತ್ರ ಶಾಸನದಲ್ಲಿ ಸಾಕ್ಷಿಗಳು "ಶ್ರೀ ಮದ್ರಾಜಗುರು ರುದ್ರ ಶಕ್ತಿ ದೇವರು, ಬಾಚಲೇಶ್ವರ ಸಿದ್ಧ ಗುರುಗಳು..." ಮುಂತಾಗಿ ಒಟ್ಟು ಹದಿನಾರು ಪ್ರಮುಖ ವ್ಯಕ್ತಿಗಳ ಒಪ್ಪವಿದೆ.[೩೩]

ಕ್ರಯದಾನ, ಭೂಮಿ ಪರಿವರ್ತನೆ, ಸಾಲಪತ್ರಕ್ಕೆ ಬದಲಾಗಿ ಭೂಮಿ ನೀಡಿರುವುದು ಇತ್ಯಾದಿಗಳು ವೈಯಕ್ತಿಕ ಚಟುವಟಿಕೆಗಳಾಗಿದ್ದರೂ ಅವುಗಳು ಗ್ರಾಮದ ಹಿರಿಯರ, ಮಹಾಜನರ, ಅಧಿಕಾರಿಗಳ, ಚೌಗಾವೆಯವರ ಸಾಕ್ಷಿಯಲ್ಲಿ ನಡೆಯುತ್ತಿದ್ದವೆಂಬುದಕ್ಕೆ ಶಾಸನಗಳು ಸಾಕ್ಷಿಯಾಗಿವೆ.[೩೪] ಮಹಾಜನರಿಗೆ, ಸ್ಥಾನಿಕರಿಗೆ ದೇವಾಲಯ ಮಠ ಮಾನ್ಯಗಳಿಗೆ ಸೇರಿದ ಭೂಮಿಗಳು, ಗೌಡುಗಳಿಗೆ ಗೌಡಿಕೆಯಾಗಿ, ವೀರರಿಗೆ ಕಲ್ನಾಡಾಗಿ, ಮೈಜೀವಿತವಾಗಿ ಕೊಟ್ಟ ಭೂಮಿಗಳು ಇತ್ಯಾದಿಗಳಲ್ಲದೆ ಸಾಮಾನ್ಯ ವ್ಯಕ್ತಿಗಳಿಗೆ ಸೇರಿದ

ಭೂಮಿಯನ್ನು (ತುರುವಳನಗದ್ದೆ) ಶಾಸನಗಳು ಉಲ್ಲೇಖಿಸುತ್ತವೆ.[೩೫] ಮಹಾಜನರಿಗೆ ಸೇರಿದ್ದ ಭೂಮಿಯನ್ನು ದೇವಾಲಯ ನಿರ್ಮಾಣಕ್ಕಾಗಿಯೋ ಅಥವಾ ಮತ್ಯಾವ ಕಾರಣಕ್ಕಾಗಿಯೋ ಬಳಸಲು ಅವರ ಒಪ್ಪಿಗೆಯನ್ನು ಅಧಿಕಾರಿಗಳು ಪಡೆಯಬೇಕಾಗುತ್ತಿತ್ತು.[೩೬] ಗೌಡಿಕೆಯನ್ನು ಕ್ರಯ ಮಾಡುವಾಗ, ಬಿಟ್ಟುಕೊಡುವಾಗ[೩೭] ಭೂಮಿ ಹಂಚಿಕೆ ಮಾಡುವಾಗ ಸಂಬಂಧಿಸಿದವರ ನಡುವೆ ಅಸಮಾಧಾನ ಜಗಳ ವೈಮನಸ್ಯಗಳು ಬಾರದಂತೆ ನೋಡಿಕೊಳ್ಳಲು, ಮನಸ್ತಾಪಗಳು ಬಂದಾಗ ಪರಿಹರಿಸಿಕೊಳ್ಳಲು ಸ್ಪಷ್ಟವಾಗಿ ಅಳತೆಗಳನ್ನು, ಸೀಮೆಗಳನ್ನು ಗಡಿಕಲ್ಲುಗಳ ಮೂಲಕ ಗುರುತಿಸಿಕೊಳ್ಳುವುದು ವ್ಯವಸ್ಥಿತವಾಗಿ ಜರುಗುತ್ತಿತ್ತು. ಅಧಿಕಾರಿಗಳನ್ನು ಭೂಮಿ ಅಳೆಯುವವರನ್ನು, ಸ್ಥಳೀಯ ಪ್ರಮುಖರನ್ನು ಮತ್ತು ನಾಡಿನ ಪ್ರತಿಷ್ಠಿತರನ್ನು ಮುಂದಿಟ್ಟುಕೊಂಡೇ ಇಂಥ ಚಟುವಟಿಕೆಗಳನ್ನು ಮಾಡುತ್ತಿದ್ದರು.[೩೮] ಮತ್ತು ಇಂಥ ಭೂಮಿಗಳ ಗಡಿಮೇರೆ ನಿಯಮ ನಿಬಂಧನೆಗಳನ್ನು ಮುರಿಯದಂತೆ ಕಾಪಾಡುವ ಜವಾಬ್ದಾರಿಯನ್ನು ಸ್ಥಳೀಯ ಅಧಿಕಾರಿಗಳಿಗೆ ಪ್ರಮುಖರಿಗೆ ವಹಿಸಲಾಗುತ್ತಿತ್ತು.[೩೯]

ದಾನ ಮಾಡುವ ಸಂದರ್ಭಗಳಲ್ಲಿ ದಾನವನ್ನು ರಾಜನ ಆಜ್ಞೆಯ ಮೇರೆಗೆ ಕೊಡಮಾಡಲಾಗುತ್ತಿತ್ತು.[೪೦] ರಾಜನಿಂದ ಕೊಡಿಸಲಾಗುತ್ತಿತ್ತು.[೪೧] ಸಿದ್ಧಾಯದ ಹಣವನ್ನು ದಾನಮಾಡುವಾಗ ರಾಜನಿಗೆ ಬಿನ್ನಹ ಮಾಡಿ ಬಿಡಲಾಗಿದೆ.[೪೨] ಖಾಸಗಿಯವರಿಂದ ತತ್ಕಾಲೋಚಿತ ಕ್ರಯಕ್ಕೆ ಭೂಮಿಕೊಂಡ ಸಂದರ್ಭಗಳಲ್ಲಿ ರಾಜನ ಉಲ್ಲೇಖ ಬರುವುದಿಲ್ಲ. ತತ್ಕಾಲೋಚಿತ ಕ್ರಯ ನಿರ್ಣಯ ಮಾಡುತ್ತಿದ್ದವರು ಯಾರು? ಉಂಡಿಗನಾಳಿನಲ್ಲಿ ೩೦೦ ಕಂಬ ಹರಳಿನ ಹೊಲಕ್ಕೆ ೧೧ ಗದ್ಯಾಣವನ್ನು ೨೫ ಕಂಬ ಬಾಳೆಯ ತೋಟಕ್ಕೆ ೭೫ ಗದ್ಯಾಣಗಳನ್ನು ಕೊಟ್ಟು ಕೊಂಡ ವಿವರಗಳಿವೆ.[೪೩] ಇಂತಹ ಇತರ ಉದಾಹರಣೆಗಳನ್ನು ನೋಡಿದಾಗ ಭೂಮಿಗಳ ಗುಣ ಮಟ್ಟಕ್ಕೆ ತಕ್ಕಂತೆ ನೀರಾವರಿ ಸೌಲಭ್ಯಕ್ಕೆ ತಕ್ಕಂತೆ ಕ್ರಯ ನಿರ್ಣಯಗೊಳ್ಳುತ್ತಿದ್ದು, ಭೂಮಿ ಸಂಬಂಧಿತ ಪೂರ್ಣ ಅರಿವಿರುತ್ತಿದ್ದ ಸ್ಥಳೀಯ ಅಧಿಕಾರಿಗಳೇ ಕ್ರಯ ನಿರ್ಣಯಿಸುತ್ತಿದ್ದಿರಬೇಕು ಎನಿಸುತ್ತದೆ. ಬಹುಷಃ ತೆರಿಗೆ ವಿಧಿಸುವವರಿಗೂ ಈ ಪೂರ್ಣಮಾಹಿತಿ ಇರುತ್ತಿದ್ದಿತು ಎಂಬುದು ಭೂಸಂಬಂಧಿ ತೆರಿಗೆಗಳನ್ನು ಗಮನಿಸಿದಾಗ ತಿಳಿಯುತ್ತದೆ. ಒಟ್ಟಿನಲ್ಲಿ ಕ್ರಯ ಇತ್ಯಾದಿ ಚಟುವಟಿಕೆಗಳು ಖಾಸಗಿಯಾಗಿ ಗುಟ್ಟಿನಲ್ಲಿ ನಡೆಯುವಂತಹದಾಗಿರಲಿಲ್ಲ. ಈ ಕ್ರಯಪತ್ರಗಳು ಕೇವಲ ತಾಮ್ರಪಟಗಳಲ್ಲಿ ಮಾತ್ರವಲ್ಲದೆ ಶಿಲಾಫಲಕಗಳಲ್ಲಿ ಕೊರೆಯಲ್ಪಟ್ಟಿರುವುದನ್ನು ಗಮನಿಸಿದಾಗ, ಇವು ಕೇವಲ ವೈಯಕ್ತಿಕ ದಾಖಲೆಗಳಷ್ಟೇ ಅಲ್ಲ ಸಾರ್ವಜನಿಕ ದಾಖಲೆಗಳೂ ಆಗಿರುತ್ತಿದ್ದು ಬಹುಷಃ ಇದರ ಒಂದು ಪ್ರತಿ ಸಂಬಂಧಪಟ್ಟ ಅಧಿಕಾರಿಯಾದ ಸೇನ ಭೋವನಲ್ಲೂ ಇರುತ್ತಿದ್ದಿತೆಂದು ಭಾವಿಸಬಹುದು. 'ಸಿವಡಿಯಲ್ಲಿ ಬರೆಸಿ' ಎಂಬ ಮಾತು ಶಾಸನಗಳಲ್ಲೇ ಬರುತ್ತದೆ.[೪೪] ಕಡಿತಗಳು ಉಂಡಿಗೆಗಳ ಉಲ್ಲೇಖ ಒಟ್ಟಾಗಿ ಬಂದಿದೆ.[೪೫]

**ಪರಿವರ್ತನಾ ಪತ್ರಗಳು** : ಭೂಮಿ ಪರಿವರ್ತನಾ ಪತ್ರಗಳು ಭೂಮಿ ತೋಟ ಮನೆ ಇತ್ಯಾದಿಗಳನ್ನು ಪರಸ್ಪರ ಒಪ್ಪಂದದ ಮೇಲೆ ಬದಲಾಯಿಸಿಕೊಂಡ ಸಂದರ್ಭದಲ್ಲಿ ಬರೆಸಲ್ಪಟ್ಟ ಪತ್ರಗಳು. ಸಾಮಾನ್ಯವಾಗಿ ಇವು ಎರಡು ಸಂದರ್ಭಗಳಲ್ಲಿ ಕಂಡುಬರುತ್ತವೆ. ಒಂದು, ದೇವದಾನದ ಭೂಮಿಗಾಗಿ ಉತ್ತಮವಾದ

ನೀರಾವರಿ ಭೂಮಿಯನ್ನು ಬಿಡಬೇಕೆಂಬ ಅಪೇಕ್ಷೆಯಿಂದ ದಾನಿಯು ನಿರ್ದಿಷ್ಟ ಜಮೀನನ್ನು ಗುರುತಿಸುತ್ತಿದ್ದನು. ಅದು ಬೇರೆ ಖಾಸಗಿ ವ್ಯಕ್ತಿ ಇಲ್ಲವೆ ಸಂಸ್ಥೆಗಳದ್ದಾಗಿದ್ದು, ಆ ಭೂಮಿಯನ್ನು ಕ್ರಯ ಮಾಡಲು ಅವರು ಇಷ್ಟಪಡದೆ ಇದ್ದ ಸಂದರ್ಭದಲ್ಲಿ ಬದಲಿ ಕೃಷಿ ಭೂಮಿಯನ್ನು ಪರಿವರ್ತನೆಯಾಗಿ ನೀಡುತ್ತಿದ್ದರು.[೪೬] ಕ್ರಿ.ಶ.೧೧೭೭ರ ಹಲುಕೂರು ಶಾಸನದಲ್ಲಿ ಕಲಿದೇವರಿಗೆ ಆನೆಕೆರೆಯ ಕೆಳಗೆ ೫ ಕೊಳಗ ಗದ್ದೆ ನೀಡಿರುವುದನ್ನು ಹೇಳಿದೆ. ಅದೇ ಶಾಸನದ ಕೊನೆಯಲ್ಲಿ ಅನಂತರದ ಕಾಲದಲ್ಲಿ 'ಸೆಟ್ಟಿಕೆರೆಯ ಬಮ್ಮೆಯ್ಯ ನಾಯಕನೂ ಹಲಕೂರ ಗವುಡು ಪ್ರಜೆಗಳೂ ಒಪ್ಪಿ ಆ ಗದ್ದೆಗೆ ಬದಲಾಗಿ ಹಿರಿಯ ಕೆರೆಯ ಕೆಳಗೆ ಪ್ರತಿ ಕ್ಷೇತ್ರವನಿರ್ಸಿದರು" ಎಂದಿದೆ.[೪೭] ಹೀಗೆ ಪ್ರತಿ ಕ್ಷೇತ್ರ ಇರಿಸುವುದರ ಕಾರಣವನ್ನು ಅಲ್ಲಿ ಹೇಳಿಲ್ಲ. ಹಲುಕೂರಿನ ಶಾಸನಗಳಿಂದ ಆ ಗ್ರಾಮಕ್ಕೆ ಹೆಚ್ಚಿನ ಆಕ್ರಮಣಗಳು ನಡೆದಿರುವುದು ಕಂಡುಬರುತ್ತದೆ. ಬಹುಶಃ ಆನೆಕೆರೆ ಅಂತಹ ಸಂದರ್ಭದಲ್ಲಿ ಹಾಳಾಗಿದ್ದು ನೀರಿನ ವ್ಯವಸ್ಥೆ ಸರಿಯಿಲ್ಲದಿರಬಹುದು. ಅಥವಾ ನೀರೋತ್ತಾಗಿ ಭೂಮಿ ಜೌಗಾಗಿರಬಹುದು. ಒಟ್ಟಿನಲ್ಲಿ ಆ ಭೂಮಿಯ ಕೃಷಿ ಸರಿಯಾಗಿ ನಡೆಯದೆ, ದಾನದ ಉದಿಶ್ಯ ಸಫಲವಾಗದೆ, ಹಿರಿಯ ಕೆರೆಯ ಕೆಳಗಿನ ಭೂಮಿಯನ್ನು ಪರಿವರ್ತನೆಯಾಗಿ ಕೊಡಲು ಇಡೀ ಗ್ರಾಮದ ಪ್ರಜೆಗಳು ಗೌಡುಗಳು, ನಾಯಕರು ಒಟ್ಟಾಗಿ ತೀರ್ಮಾನ ಮಾಡಿದ್ದಾರೆನ್ನಬಹುದು. ಮತ್ತೊಂದು ಶಾಸನದಲ್ಲಿ ಸ್ತ್ರೀಯೊಬ್ಬಳು ತನ್ನ ಭೂಮಿಯನ್ನು ಪರಿವರ್ತನೆ ಮಾಡಿಕೊಂಡು ದಾನವಿತ್ತಿದ್ದಾಳೆ.[೪೮]

ಭೂಮಿ ಪರಿವರ್ತನೆಯ ಎರಡನೆಯ ಸಂದರ್ಭ ದೇವಾಲಯದ ಭೂಮಿಗಳಿಗೆ ಇಲ್ಲವೆ ಬ್ರಹ್ಮಾದೇಯವಾದ ಅಗ್ರಹಾರದ ಕೃಷಿ ಭೂಮಿಗೆ ತೊಂದರೆ ಒದಗಿ ಬಂದಾಗ ಪರಿವರ್ತನೆ ನಡೆದಿರುವುದನ್ನು ಶಾಸನಗಳು ಹೇಳಿವೆ. ಕ್ರಿ.ಶ.೧೨೦೭ರ ಹಿರಿಯೂರಿನ ಶಾಸನ[೪೯]ದಲ್ಲಿ ಅರೆಯ ಶಂಕರ ದೇವರಿಗೆ ಕಾನಿಯ ತೆಂಕಣಕಡೆ ಬಿಟ್ಟಿದ್ದ ಹಳುಗಿನ ಗದ್ದೆ ೪೯ ಕಂಬವನ್ನು ಕಾನಿಯ ಕಟ್ಟುವಲ್ಲಿ ನಿರೊತ್ತಾದಡೆ ಪರಿವರ್ತನೆಯಾಗಿ ಆ ದೇವಾಲಯದ ಸ್ಥಾನಿಕರು ಮಹಾಜನಗಳಿಗೆ ಅದನ್ನು ಕೊಟ್ಟು ೩೬ ಕಂಬ ಭೂಮಿಯನ್ನು ಮಣಲಿಯ ಮೂಡಣ ಕಡಹಿನಲ್ಲಿ ಪಡೆದುದನ್ನು ಹೇಳಿದೆ. ಕ್ರಿ.ಶ.೧೩೭೪ರ ಶಾಸನವೊಂದು[೫೦] ಎರಡು ಪ್ರಮುಖ ಗ್ರಾಮಗಳ ಮಧ್ಯೆ ನಡೆದ ಭೂಪರಿವರ್ತನೆಯನ್ನು ಕುರಿತು ಹೇಳಿದೆ. ಹೊನ್ನವಳ್ಳಿಯ ಮಹಾಜನರು ಹಲಕೂರ ಗೌಡು ಪ್ರಜೆಗಳಿಗೆ ಹೊನ್ನವಳ್ಳಿಯ ಕಾಲುವಳ್ಳಿ ಭಗವತೀ ಘಟ್ಟದಲ್ಲಿದ್ದ ತುಳಿಕೆಯ ಹಳ್ಳಿಯ ಹೊಲಸೀಮೆಯಲ್ಲಿರುವ ೭೪ ವೆಟ್ಟಿನ ಗಳೆಯಲ್ಲಿ ಅಳೆದ ೪೩೦ ಕಂಬ ಭೂಮಿಗೆ ಬದಲಾಗಿ ಹಲಕೂರಿನ ಕಾಲುವಳ್ಳಿ ತುಳಿಕೆಯ ಹಳ್ಳಿಯ ಭೂದಿಹಾಳು ಭಗವತಿ ಘಟ್ಟದ ೪೩೦ ಕಂಬ ಭೂಮಿಯನ್ನು ಪಡೆದು ಎಲ್ಲರೂ ಒಪ್ಪಿ ಪರಿವರ್ತನ ಶಾಸನ ಬರೆಸಿಕೊಟ್ಟಿದ್ದಾರೆ. ಕ್ರಿ.ಶ.೧೨೩೨ರ ಬೆಂಡೆಕೆರೆ ಶಾಸನ[೫೧] ರಾಮೇಶ್ವರ ದೇವರ ಬ್ರಹ್ಮಪುರಿಗೆ ಬಿಟ್ಟಿದ್ದ ತೋಟದ ಬದಲಾಗಿ ಶೈವ ಸ್ಥಾನಿಕರಿಗೆ ಕೊಟ್ಟ ೧೮ ಕೈ ಅಳತೆಯ ಮನೆಯನ್ನು ಪರಿವರ್ತನೆಯಾಗಿ ಪಡೆಯಲಾದ ವಿಷಯವನ್ನು ಹೇಳಿದೆ. ಪರಿವರ್ತನೆಯ ಸಂದರ್ಭದಲ್ಲಿ

ಭೂಮಿಯ ವಿಸ್ತೀರ್ಣ ಬದಲಾಗಿರುವುದನ್ನು ಕಾಣುತ್ತೇವೆ. ಕ್ರಿ.ಶ.೧೨೫೩ರ ಅರಕೆರೆ ಶಾಸನದಲ್ಲಿ[೫೨] ಮಹಾಜನರಿಗೆ ಗದ್ದೆ ೪೪ ಕಂಬ ಬೆದ್ದಲು ೫೦ ಕಂಬಕ್ಕೆ ಬದಲಾಗಿ ಗದ್ದೆ ೩೦, ಬೆದ್ದಲು ೧೯೦ ಮೇಲುಹೊನ್ನು ಒಂದು ಗದ್ಯಾಣವನ್ನು ಪರಿವರ್ತನೆಗಾಗಿ ನೀಡಿದ ವಿಚಾರವಿದೆ. ಈ ಪರಿವರ್ತನೆಯನ್ನು ಮಹಾಜನರಿಗೆ ಸಿರಿವಂತ ವ್ಯಾಪಾರಿ ವಡ್ಡ ವ್ಯವಹಾರಿ ದಾಮೋದರ ಶೆಟ್ಟಿ ಮಾಡಿಕೊಟ್ಟಿದ್ದಾನೆ. ಒಟ್ಟಿನಲ್ಲಿ ಈ ಪರಿವರ್ತನೆಗಳು ಸೌಲಭ್ಯಾಕಾಂಕ್ಷೆಯಿಂದ ಉಭಯತ್ರರೂ ಒಪ್ಪಿ ಮಾಡಿಕೊಳ್ಳುತ್ತಿದ್ದ ವ್ಯವಸ್ಥೆ. ಇದಕ್ಕೆ ಗ್ರಾಮಸ್ಥರ, ಅಧಿಕಾರಿಗಳ ಒಪ್ಪಿಗೆ ಇರುತ್ತಿತ್ತು. ಆ ಸಂಬಂಧವಾಗಿ ಗೊಂದಲಗಳಾಗಬಾರದೆಂಬ ಕಾರಣಗಳಿಂದ ವ್ಯವಸ್ಥಿತವಾಗಿ ಪರಿವರ್ತನಾ ಪತ್ರಗಳನ್ನು ಬರೆಸಿ ಸಾರ್ವಜನಿಕರ ಗಮನಕ್ಕೆ ತರಲಾಗುತ್ತಿತ್ತು. ಈ ಶಾಸನಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ಪರಿವರ್ತನೆ ಬಯಸುವವರೆಲ್ಲರು ಹೆಚ್ಚಾಗಿ ಮೇಲ್ ವರ್ಗದ ಶ್ರೀಮಂತ ಸ್ಥಾನಮಾನ ಉಳ್ಳವರಾಗಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಈ ಪರಿವರ್ತನೆಯ ಸಂದರ್ಭಗಳಲ್ಲಿ ಸಾಮಾನ್ಯ ಕೃಷಿಕನಿಗೆ ಅದನ್ನು ವಿರೋಧಿಸುವುದು ಸಾಧ್ಯವಾಗುತ್ತಿರಲಿಲ್ಲವೆಂಬುದು ಸತ್ಯ. ಪರಿವರ್ತನೆಗಳೆಲ್ಲ ಸದುದ್ದೇಶಕ್ಕಾಗಿಯೇ ನಡೆದಿರುವಂತೆ ಶಾಸನಗಳು ಹೇಳುತ್ತವೆ. ಯಾರಿಗೂ ಅನ್ಯಾಯವಾಗದಂತೆ ಈ ಸಂದರ್ಭಗಳಲ್ಲಿ ಎಚ್ಚರವಹಿಸಲು ಚೌಗಾವೆಗಳು, ಗ್ರಾಮಸ್ಥರು, ಅಧಿಕಾರಿಗಳು ಇರುತ್ತಿದ್ದರೆಂಬುದನ್ನು ನಾವು ಗಮನಿಸಬಹುದು.

**ಸಾಲಪತ್ರಗಳು** : ಈ ಪ್ರದೇಶದ ಶಾಸನಗಳು ನೇರವಾಗಿ ಸಾಲಪತ್ರಗಳನ್ನು ಒಳಗೊಂಡಿಲ್ಲದಿದ್ದರೂ 'ಪತ್ರಸಾಲ' ಎಂಬ ಉಲ್ಲೇಖ ಕಂಡುಬಂದಿದೆ. ಸಾಲಬಡ್ಡಿ ವ್ಯವಹಾರಗಳು ನಡೆಯುತ್ತಿದ್ದುದರ ಬಗೆಗೆ ಶಾಸನಗಳಲ್ಲಿ ಅಲ್ಲಲ್ಲಿ ಉಲ್ಲೇಖ ಕಂಡುಬರುತ್ತದೆ. ದೇವಾಲಯಗಳಲ್ಲಿ ಭಕ್ತಾದಿಗಳು 'ಬೀಜಹೊನ್ನಾಗಿ' ಇಟ್ಟ ದೇವರ ಭಂಡಾರದ ಹಣವನ್ನು ಬಡ್ಡಿಗೆ ಬಿಡಲಾಗುತ್ತಿತ್ತು.[೫೩] ಕ್ರಿ.ಶ.೧೨೫೪ರ ಹುಲ್ಲೇಕೆರೆ ಶಾಸನ[೫೪] ಹೆಗ್ಗಡೆ ಚಂದ್ರಣ್ಣ ಚೆನ್ನಕೇಶವ ದೇವರಿಗೆ ಬಿಟ್ಟ ೨ ಗದ್ಯಾಣ ಬೀಜಹೊನ್ನಿಗೆ 'ಬಡ್ಡಿಹಣ ಆರರ ಸುಗ್ಗಿಯ ಅಪ್ಪುದಲು ಕೊಂಡು ಮಹಾ ಜನಂಗಳೇ ನಡೆಸುವರು' ಎಂದಿದೆ. ಸುಗ್ಗಿಯ ನಂತರ ಬಡ್ಡಿ ವಸೂಲಿಯನ್ನು ಹೇಳಿರುವುದರಿಂದ ದೇವಾಲಯದ ಬೀಜಹೊನ್ನನ್ನು ಕೃಷಿಕರಿಗೆ ಸಾಲ ನೀಡುವ ಪರಿಪಾಠವನ್ನು ಇದು ಸೂಚಿಸುತ್ತದೆ. ಅನೇಕ ಪ್ರಮುಖ ದೇವಾಲಯಗಳಲ್ಲಿ ನಿತ್ಯ ಪೂಜೆಯಿಂದ ವಿಶೇಷ ಪೂಜೆ ಆಚರಣೆಗಳಿಗೆಲ್ಲ ಭಕ್ತಾದಿಗಳು ನೀಡಿದ ದೇವರ ಭಂಡಾರದ ಬಡ್ಡಿಯ ಮೇಲೆ ನಡೆಯುವುದನ್ನು ಶಾಸನಗಳು ಹೇಳುತ್ತವೆ.[೫೫]

ದೇವಾಲಯಗಳಲ್ಲದೆ ಸಿರಿವಂತ ವ್ಯಾಪಾರಿಗಳು ಖಾಸಗಿಯಾಗಿ ಸಾಲಬಡ್ಡಿ ವ್ಯವಹಾರ ನಡೆಸುತ್ತಿದ್ದು 'ಪತ್ರಸಾಲ' ನೀಡುತ್ತಿದ್ದ ವಿಚಾರ ಪರೋಕ್ಷವಾಗಿ ಉಲ್ಲೇಖಗೊಂಡಿದೆ. ಹೀಗೆ ಸಾಲ ಕೊಡುವ ಮುನ್ನ ಸಾಲಿಗರ ಆಸ್ತಿಯ ಅಂದಾಜು ಇವರಿಗೆ ಇರುತಿದ್ದು ಸಾಲ ಹಿಂದಿರುಗಿಸಲಾಗದ ಸಂದರ್ಭದಲ್ಲಿ ಭೂಮಿಯನ್ನು, ಮನೆಯನ್ನು ಗೌಡಿಕೆಯನ್ನು ದಕ್ಕು ಹಾಕಿಕೊಳ್ಳುತ್ತಿದ್ದುದನ್ನು ಹಿರಿಯೂರಿನ ಕ್ರಿ.ಶ.೧೨೫೪ರ

ಶಾಸನದಿಂದ ಅರ್ಥಮಾಡಿಕೊಳ್ಳಬಹುದು.[೫೬] ಸಾಲ ಪತ್ರ ನಿರ್ಣಯದ ಒಕ್ಕಣೆಯೊಂದನ್ನು ಗಮನಿಸಬಹುದು. 'ಸ್ವಸ್ತಿ ಶ್ರೀಮನ್ಮಹಾ ವಡ್ಡವ್ಯವಹಾರಿ ಹಿರಿಯ ಭಂಡಿನಂಬಿಸೆಟ್ಟಿಯರಳಿಯ ಕಂಡನಂಬಿಸೆಟ್ಟಿಯರ ಕಯ್ಯಲು ಪಡುವಣ ಮುತ್ತನ ಹೊಸವೂರ ಗುಬ್ಬಿಯ ಕಲ್ಲಯ್ಯನ ಮಗ ಪೋತಗೌಡನುಂ ಆ ಕಲ್ಲಯ್ಯನ ಮಗ ಸಿಂಗಯನ ಮದವಳಿಗೆ ಚವುಡಾದೇವಿಯುಂ ಆ ಮಗ ಬಲ್ಲಯ್ಯನುಂ ಕೊಂಡ ಪತ್ರ ಸಾಲ ಗದ್ಯಾಣ ನಾನೂಱು ಹೊಂಗೆ ಆ ಕಂಡ ನಂಬಿ ಸೆಟ್ಟಿಯರನೊಡಂಬಡಿಸಿ ತಂಮ ರಿಣ ನಿರ್ಣಯವಾಗಿ ಮುಂನ ತಮಗೆ ಸರ್ವಬಾಧೆ ಪರಿಹಾರವಾಗಿರ್ದ್ದ ವುಂಬಳಿಯ ಭೂಮಿ ಗದ್ದೆ ಕಂಬ ೨೬೫ ಬೆದ್ದಲು ಕಂಬ ೩೫೦ ಆ ಮನೆ ಸೋಮನಾಥ ದೇವರಿಂ ಪಡುವಲು ತೆಂಕಣ ಬಡಗಣ ಅಗಲ ೨||೨ ಪಡುವ ಮೂಡಲು ನೀಳ ೪ ಅನ್ತು ಕಂಬ ೧೧ ಆ ಗೌಡಿಕೆಯಲುಳ್ಳ ಅಷ್ಟಭೋಗತೇಜ ಸಾಮ್ಯ ಮಾನೆಣ್ಣೆ, ತಿಪ್ಪೆಸುಂಕ ಹಡಿಯದೆಱೆ ಮೂಲೆವತ್ತ ಹಂದರಹಣಯಿಂತಿವೆಲ್ಲಸಹಿತ ತಂಮ ಸ್ತ್ರೀ ಪುತ್ರಜ್ಞಾತಿ ಸಾಮಂತ ದಾಯಾದ್ಯನುಮತಿಯಿಂ ಸ್ವರುಚಿಯಿಂ ಆ ಕಂಡನಂಬಿಸೆಟ್ಟಿಯರಿಗೆ ಧಾರಾಪೂರ್ವ್ವಕಂ ಮಾಡಿ ಕೊಟ್ಟರು" ಇದೇ ರೀತಿಯ ಇನ್ನೂ ಎರಡು 'ಸಾಲಪತ್ರ ರಿಣ ನಿರ್ಣಯ'ಗಳು ಈ ಶಾಸನದಲ್ಲಿ ಉಲ್ಲೇಖಗೊಂಡಿವೆ. ಇವು ಬಂಡವಾಳ ಹೂಡಿಕೆ, ಸಾಲ ಸೌಲಭ್ಯ, ಬಡ್ಡಿ, ಅಡಮಾನ ಇತ್ಯಾದಿ ಆರ್ಥಿಕ ಚಟುವಟಿಕೆಗಳ ಮೇಲೆ ಬೆಳಕು ಚೆಲ್ಲುತ್ತವೆ.



**ಪುದಾವಳಿ (Endowment)** : ಕ್ರಿ.ಶ.೧೨೨೩ರ ಉಂಡಿಗನಾಳಿನ ಶಾಸನ[೫೭]ದಲ್ಲಿ ನಿಂಬೇಶ್ವರ ದೇವಾಲಯದ ಸ್ಥಾನಿಕರ ಮಕ್ಕಳು ತಮ್ಮ ತಂಗಿಗೆ ಧಾರಾಪೂರ್ವಕವಾಗಿ ಪುದಾವಳಿಕೊಟ್ಟುದನ್ನು ಅದೇ ದೇವಾಲಯದಲ್ಲಿರುವ ಕೇಶವೇಶ್ವರ ದೇವ ಭೂಮಿಯನ್ನು ಸಿಂಗಯ್ಯನ ಮಗ ಮಾಚೆಯ್ಯನಿಗೆ ಪುದಾವಳಿಯಾಗಿ ಕೊಟ್ಟದನ್ನು ಹೇಳಿದೆ. ಅದನ್ನು ಸ್ಥಳೀಯ ಒಡೆಯರಾದ 'ಜಟ್ಟಿ ಚವುಂಡಗಾವುಂಡ ಮಾದಿಗವುಡ ಸಮಸ್ತ ಪ್ರಜೆಗಳು ಸಲಿಸುವರು' ಎಂದಿದೆ. ಹಾಗಾಗಿ ಭೂ ಸಂಬಂಧಿ ಆಸ್ತಿ ಸಂಬಂಧಿತ ವ್ಯವಹಾರಗಳು ಸ್ಥಳೀಯ ಅಧಿಕಾರಗಳ ಗಮನಕ್ಕೆ ಬರಲೇ ಬೇಕಾಗಿತ್ತು. ಅದು ಎಷ್ಟೇ ವೈಯಕ್ತಿಕ ವಿಚಾರವಾಗಿದ್ದರೂ ಕೂಡ.

ಇಂತಹ ಭೂಸಂಬಂಧಿ ವ್ಯವಹಾರ ಪತ್ರಗಳನ್ನುಳ್ಳ ಶಾಸನಗಳು ಭೂ ಒಡೆತನದ ಬಗೆಗೆ ಸಂಪೂರ್ಣ ಮಾಹಿತಿ ನೀಡದಿದ್ದರೂ ಕೆಲವು ಮಾಹಿತಿಗಳನ್ನು ಒಟ್ಟಾಗಿಟ್ಟು ನೋಡಿದಾಗ ಮಧ್ಯಕಾಲೀನ ಕರ್ನಾಟಕದಲ್ಲಿ ಈ ಪ್ರದೇಶದಲ್ಲಿ ಪ್ರಚಲಿತವಿದ್ದ ಮುಖ್ಯವಾದ ಭೂಸಂಬಂಧಿ ನಿಯಮಾವಳಿಗಳನ್ನು ಅರಿಯಬಹುದಾಗಿದೆ.

### ೩.೧.೪. ಅಳತೆ ಮಾಪನಗಳು

ಆರ್ಥಿಕ ಚಟುವಟಿಕೆಗಳಿಗೆ ಪೂರಕವಾಗಿ ಅಳತೆ ಮಾಪನಗಳ ವಿಶೇಷ ಬಳಕೆಯು ಬೆಳೆದು ಬಂದಿದೆ. ಬಹುಷಃ ತಾನು ಸಂಪಾದಿಸಿದ ಅಥವಾ ತನ್ನದೆಂದು ಭಾವಿಸಲಾದ ವಸ್ತು ಅಥವಾ ಪ್ರಾಣಿಗಳನ್ನು

ಅನ್ಯರೊಂದಿಗೆ ವಿನಿಮಯ ಮಾಡಿಕೊಳ್ಳುವಾಗ, ತನಗೆ ನಷ್ಟವಾಗಬಾರದೆಂಬ ಕಾರಣದಿಂದ ಪ್ರಮಾಣ ಬದ್ಧ ಅಳತೆಯ ಪದ್ಧತಿಯನ್ನು ರೂಢಿಸಿಕೊಳ್ಳುವ ಪ್ರಯತ್ನಗಳು ಪ್ರಾರಂಭವಾದಂತೆ ತೋರುತ್ತದೆ.

ಭೂಮಾಪನಕ್ಕೆ ಸಂಬಂಧಿಸಿದಂತೆ ಶಾಸನಗಳಲ್ಲಿ ಅನೇಕ ಅಳತೆಗಳ ಉಲ್ಲೇಖಗಳು ಬರುತ್ತವೆ. ಕರ್ನಾಟಕದ ಮಹಾವೀರಚಾರ್ಯ (ಕ್ರಿ.ಶ.೮೧೪-೮೭೮) ರಾಜಾದಿತ್ಯ (ಕ್ರಿ.ಶ.೧೧೯೦) ತಿಮ್ಮರಸ (೧೬ನೇ ಶತಮಾನ) ಇವರ ಗಣಿತ ಶಾಸ್ತ್ರ ಗ್ರಂಥಗಳು, ಹಾಗೂ ಸೋಮೇಶ್ವರನ ಮಾನಸೋಲ್ಲಾಸ (೧೧ನೇ ಶತಮಾನ) ಕೆಳದಿ ಬಸವರಾಜನ ಶಿವತತ್ವ ರತ್ನಾಕರ (೧೭ ನೇ ಶತಮಾನ)ದಂತಹ ಜ್ಞಾನ ಕೋಶಗಳು ತೂಕ, ಉದ್ದಳತೆ, ಪ್ರಮಾಣ ನಾಣ್ಯಮೌಲ್ಯ ಇತ್ಯಾದಿಗಳಿಗೆ ಸಂಬಂಧಿಸಿ ಹೇಳಿರುವ ಅನೇಕ ವಿಚಾರಗಳು ನಿತ್ಯ ವ್ಯವಹಾರದಲ್ಲಿ ಬಳಕೆಯಾಗುತ್ತಿದ್ದುದನ್ನು ಶಾಸನಗಳ ಉಲ್ಲೇಖಗಳು ಸಾಬೀತುಪಡಿಸುತ್ತವೆ.

ಅಳತೆಯ ನಿಖರತೆಯು ಅಳತೆಯ ಮಾಪನವನ್ನು ಎಚ್ಚರಿಕೆಯಿಂದ ಬಳಸುವ ನೈಪುಣ್ಯತೆಯನ್ನು ಆಧರಿಸಿರುತ್ತದೆ. ನಿಖರ ಅಳತೆಯ ವಿಚಾರಗಳು ಭೂಮಾಪನಕ್ಕೆ ಸಂಬಂಧಿಸಿದಂತೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಅದರಲ್ಲೂ ವಲಸಿಗರು ಹೆಚ್ಚಾಗಿ ನೆಲಸಿರುವ ಗ್ರಾಮಗಳಲ್ಲಿ ಮತ್ತು ಅವರು ಕೈಗೊಂಡ ಭೂಸಂಬಂಧಿ ಚಟುವಟಿಕೆಗಳನ್ನು ಹೇಳುವ ಶಾಸನಗಳಲ್ಲೇ ಹೆಚ್ಚಾಗಿ ಕಾಣಿಸಿಕೊಂಡಿದೆ. ಸ್ಥಳೀಯರೊಂದಿಗೆ ಭೂ ವ್ಯವಹಾರದಲ್ಲಿ ತೊಡಗಿದ ಇವರು ಯಾವುದೇ ಗೊಂದಲ ವ್ಯಾಜ್ಯಗಳಿಗೆ ಅವಕಾಶವಾಗಬಾರದೆಂಬ ಎಚ್ಚರಿಕೆಯಿಂದಲೇ ನಿಖರವಾದ ಅಳತೆಗಳನ್ನು ಬಳಸಿ ಅದನ್ನು ಶಾಸನಗಳಲ್ಲಿ ದಾಖಲು ಮಾಡಿಸಿದ್ದಾರೆ. ಇದು ಇಂದು ನಮ್ಮ ಅಧ್ಯಯನಕ್ಕೆ ಹೆಚ್ಚು ಸಹಾಯಕವಾಗಿದೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಹಿಂದೆ ಚರ್ಚಿಸಿದಂತೆ ಒಂಭತ್ತನೇ ಶತಮಾನದ ನಂತರ ವಿಶೇಷವಾಗಿ ಕೃಷಿ ವಿಸ್ತರಣೆ ಮತ್ತು ವಾಣಿಜ್ಯ ಚಟುವಟಿಕೆಗಳು ಬಿರುಸಿನಿಂದ ನಡೆದಿರುವುದು ಕಂಡುಬರುವುದರಿಂದ ಅಳತೆ, ತೂಕ, ಪ್ರಮಾಣ ಮೌಲ್ಯ ನಿರ್ಣಯಗಳು ಕರಾರುವಕ್ಕಾಗಿ ವ್ಯವಹಾರದಲ್ಲಿ ಬಳಕೆಗೆ ಬಂದಿವೆ. ಭೂದಾನ, ವಿಕ್ರಯ, ಪರಿವರ್ತನೆ ತೆರಿಗೆ ನಿರ್ಧಾರಗಳ ಸಂದರ್ಭದಲ್ಲಿ ಅಳತೆಯ ನಿಖರತೆಯು ಮುಖ್ಯವಾದುದರಿಂದ ಅಂತಹ ಶಾಸನ ದಾಖಲೆಗಳು ಅಳತೆ ಮಾನದಂಡ, ಬೆಲೆ, ತೆರಿಗೆಯ ಶೇಕಡಾವಾರು ನಿರ್ಧಾರಗಳನ್ನು ಕ್ವಚಿತ್ತಾಗಿಯಾದರೂ ಹೇಳಿವೆ. ಮತ್ತು ಕೆಲವು ದೇವಾಲಯ ಕಟ್ಟಡಗಳಲ್ಲಿ ಅಥವಾ ಸನಿಹದ ಬಂಡೆಗಳಲ್ಲಿನ ಮೇಲೆ ಇಂತಹ ಭೂಮಿಯ ಅಳತೆಗೋಲುಗಳನ್ನು ಕೆತ್ತಿ ಅವುಗಳ ನಿರ್ದಿಷ್ಟ ಅಳತೆ ಪಟ್ಟಿಯನ್ನು ಗೊತ್ತುಪಡಿಸಿವೆ.

ಪ್ರಾಚೀನ ಕಾಲದಿಂದಲೂ ಮನುಷ್ಯ ಸಾಮಾನ್ಯವಾಗಿ ಅಳತೆಗೆ ಬಳಸಿದ ಮುಖ್ಯ ಅಂಗಗಳು ಕೈಗಳು ಮತ್ತು ಕೈಯ ಭಾಗಗಳು, ಪಾದದ ಅಳತೆ ಪುರಾಷಾಳತೆ. ನಾಗವರ್ಮನು ವಿವಿಧ ದೇಹ ಪ್ರಮಾಣಾಳತೆಯನ್ನು, ಅಳತೆಯ ಹೆಸರನ್ನು ಅವುಗಳ ವ್ಯಾಖ್ಯೆಯನ್ನು ನೀಡಿದ್ದಾನೆ.[೫೮]

ಕೈಗಳನ್ನು ಬಳಸಿದ ಅಳತೆಗಳು ಶಾಸನದಲ್ಲಿ ಪದೇ ಪದೇ ಕಾಣಿಸಿಕೊಳ್ಳುತ್ತವೆ. ಅಂಗುಲ, ಗೇಣು, ಒತ್ತೋಳು, ಮಾರು, ಕೈ, ಅಳತೆಗಳನ್ನು ಕೃಷಿ ಭೂಮಿ, ಹಿತ್ತಿಲು, ಮನೆ, ತೋಟ ಮುಂತಾದುವನ್ನು ಅಳೆಯಲು ಬಳಸಲಾಗಿದೆ.

**ಅಂಗುಲ :** ಇದು ರೇಖಾ ಅಳತೆಯ ಅಥವಾ ಉದ್ದಳತೆಯ ಅತ್ಯಂತ ಚಿಕ್ಕ ಅಳತೆ. ಇದು ಕೈ ಮಧ್ಯ ಬೆರಳಿನ ಎರಡು ರೇಖೆಗಳ ಮಧ್ಯಭಾಗದ ಅಳತೆಯಾಗಿದೆ. ೬ ಬಾರ್ಲಿ ಕಾಳಿನ ಉದ್ದದ ಅಂಗುಲವು ಕನಿಷ್ಠಾಂಗುಲ, ೭ ಬಾರ್ಲಿ ಕಾಳಿನದು ಮಧ್ಯಮ, ೮ ಬಾರ್ಲಿ ಕಾಳಿನದು ಉತ್ತಮಾಂಗುಲವೆನ್ನುತ್ತಾರೆ. 'ಬಾರ್ಲಿಯನ್ನು ಉದ್ದವಾಗಿ ಜೋಡಿಸಿ ಅಂಗುಲದ ನಿರ್ದಿಷ್ಟ ಅಳತೆಯನ್ನು ಕಂಡುಕೊಂಡದ್ದು ಅಳತೆಯನ್ನು ನಿರ್ದಿಷ್ಟ ಪಡಿಸುವ ಮೊದಲ ಪ್ರಯತ್ನವೆನ್ನಬೇಕು.''[೨೯] ಹತ್ತನೇ ಶತಮಾನದಲ್ಲಿ ಭಾರತಕ್ಕೆ ಬೇಟಿಕೊಟ್ಟ ಪ್ರವಾಸಿಗ ಅಲ್ಬೆರೂನಿ ಅಳತೆ ತೂಕಗಳ ಬಗೆಗೆ ವರಾಹ ಮಿಹಿರನ ಅಳತೆಯ ವಿಚಾರಗಳನ್ನು ಹೀಗೆ ಹೇಳಿದ್ದಾನೆ. '೮ ಬಾರ್ಲಿ ಕಾಳು = ೧ ಅಂಗುಲ; ೪ ಅಂಗುಲ = ೧ ರಾಮ ಅಂದರೆ ಮುಷ್ಟಿ; ೨೪ ಅಂಗುಲಗಳು = ಹಸ್ತ ಅಂದರೆ ಗಜ; ೪ ಗಜ = ೧ ಧನು; ೪೦ ಧನು = ೧ ನಲ್ವ; ೨೫ ನಲ್ವ = ೧ಕ್ರೋಶ ಈ ಪ್ರಕಾರ ಒಂದು ಕ್ರೋಶ = ೪೦೦೦ ಗಜಗಳು'' 'ನಮ್ಮ ಮೈಲಿಗೆ ನಾಲ್ಕುಸಾವಿರ ಗಜಗಳಿರುವುದರಿಂದ ಒಂದು ಕ್ರೋಶ ಒಂದು ಮೈಲಿಗೆ ಸಮ''[೩೦]

**ಪುರುಷಾಳತೆ :** ಇದು ಒಂದು ವ್ಯಕ್ತಿ ತನ್ನೆರಡು ಕೈಗಳನ್ನು ಮೇಲೆತ್ತಿ ನಿಂತರೆ ಬರುವ ಅಳತೆ. ಇದನ್ನು ಗ್ರಾಮೀಣರು 'ಆಳುದ್ದ' ಎಂದು ಕರೆಯುತ್ತಾರೆ. ಒಬ್ಬ ಪುರುಷನ ಅಳತೆಯನ್ನು ೧೨೦ ಅಂಗುಲಗಳೆಂದು ರಾಜಾದಿತ್ಯನು (ವ್ಯವಹಾರ ಗಣಿತಂ ಆಫ್ ರಾಜಾದಿತ್ಯ (ಸಂ) ಮರಿಯಪ್ಪ ಭಟ್ಟ-೧೯೫೫) ಹೇಳಿದ್ದಾನೆ. ಇದಕ್ಕೆ ಮೊದಲು ಶುಲ್ಬ ಸೂತ್ರಗಳಲ್ಲೂ ಇದನ್ನೇ ಹೇಳಿದೆ. ಭೂಮಿಯ ಮಟ್ಟಕ್ಕಿಂತ ಕೆಳಗೆ ಅಳತೆ ಮಾಡುವಾಗ ಮತ್ತು ಮೇಲೆ ಲಂಬವಾಗಿ ಅಳತೆ ಮಾಡುವಾಗ ಈ ಪುರುಷಾಳತೆಯ ಲೆಕ್ಕವನ್ನು ಈಗಲೂ ಜನರು 'ಆರಾಳುದ್ದ ಬಾವಿ', 'ನಾಕಾಳುದ್ದ ರಥ' ಇತ್ಯಾದಿಯಾಗಿ ಬಳಸುತ್ತಾರೆ.

**ಗೇಣು :** ಹೆಬ್ಬೆರಳು ತುದಿಯಿಂದ ತೋರು ಬೆರಳಿನ ತುದಿಯವರೆಗಿನ ವಿಸ್ತರಿಸಿ ಹಿಡಿದ ಹಸ್ತದ ಅಳತೆಯನ್ನು ಗೇಣು ಎಂದು ಕರೆಯುತ್ತಾರೆ. ಇದು ಸುಮಾರು ಒಂಬತ್ತು ಇಂಚುಗಳು ಬರುತ್ತದೆ. ಶಾಸನಗಳಲ್ಲಿ ಭೂಮಿಯ ವಿಸ್ತೀರ್ಣವನ್ನು ಹೇಳಿ ಅದನ್ನು ಅಳೆಯಲು ಬಳಸಿದ 'ಗಳೆ' ಅಥವಾ 'ಗಡಿಂಬ' ದ ಉದ್ದವನ್ನು ಗೇಣುಗಳಲ್ಲಿ ಉಲ್ಲೇಖಿಸಿರುವುದನ್ನು ನೋಡಬಹುದು. ೩೨ ಗೇಣಗಳೆ ೪೦ ಗೇಣ ಕೋಲು ಎಂದು ಚಾಜೂರಿನ ಶಾಸನ ಉಲ್ಲೇಖಿಸುತ್ತದೆ.[೩೧]

**ಮಾರು ಮತ್ತು ಒತ್ತೋಳು :** ಮಾರು ಎಂಬುದು ಎರಡೂ ಕೈಗಳನ್ನು ಅಗಲವಾಗಿ ಚಾಚಿದಾಗ ಎರಡೂ ಕೈಯ್ಗಳ ಮಧ್ಯ ಬೆರಳ ತುದಿಯಿಂದ ತುದಿಯವರೆಗಿನ ಅಳತೆ. ಒತ್ತೋಳು ಎಂಬುದು ಅರ್ಧಮಾರನ್ನು

ಸೂಚಿಸುತ್ತದೆ. ಭೂಮಿಯನ್ನು ಅಳೆಯಲು ಬಳಸಿರುವ ಗಳೆಯ ಅಳತೆಯನ್ನು ಮಾರಿನ ಲೆಕ್ಕದಲ್ಲಿ ಶಾಸನಗಳು ದಾಖಲಿಸಿವೆ. ಆಯ್ದು ಮಾರು ಒತ್ತೋಳ ಗಳೆ''ಏಳು ಮಾರು ಒತ್ತೋಳಗಳೆ[೭೨] 'ಅಯ್ದು ಮಾರಗಳೆ[೭೩] ಅಯ್ದು ಮಾರುಂವೊತ್ತೋಳ ಘಳೆ[೭೪] ಎಂಬುದಾಗಿ ಶಾಸನಗಳು ಹೇಳಿವೆ.

**ಕೈ ಅಳತೆ** : ಹಿತ್ತಲು, ಕಣಗಳ ಅಳತೆ ಹೇಳುವಾಗ ಕೈಯಳತೆ' ಎಂಬ ಉಲ್ಲೇಖ ಕಂಡುಬರುತ್ತದೆ. ಕಣಕಟ್ಟೆ ಶಾಸನ.[೭೫] ೧೫ ಕೈಯ್ಯಳತೆಯ ಮನೆಯ ದಾನವನ್ನು ಹೇಳಿದೆ. ಮೊಸಳೆಯ ಶಾಸನ[೭೬] ಪಡುವಣ ಕಡೆಯ ಮನೆ ಆ ಮನೆಯ ಹಿತ್ತಿಲಕಳ ಸಹಿತ ಅಗಲ ಕೈಯಿ ೨೨ ಉದ್ದ ಕೈಯಿ ೮೦" ಎಂದು ಹೇಳಿದೆ. ೩೨ ಕೈಯಳತೆಯ ಹಾಗೂ ೧೮ ಕೈಯಳತೆಯ ಎರಡು ಮನೆಗಳನ್ನು ಬೆಂಡೆ ಕೆರೆ ಶಾಸನ[೭೭] ಹೇಳಿದೆ. ಮೊಸಳೆಯ ಮತ್ತೊಂದು ಶಾಸನ ೮ ಕೈಯಿ ಅಳತೆಯ ಮನೆಯ ನಿವೇಶನವನ್ನು ಲಿಂಗ ಮುದ್ರೆ ಕಲ್ಲನಟ್ಟು ನೀಡಿದ್ದನ್ನು ಹೇಳಿದೆ. ಇವುಗಳನ್ನೆಲ್ಲ ಗಮನಿಸಿದಾಗ ಕೈಯಳತೆ'ಯನ್ನು ಕಿರಿದಾದ ನಿವೇಶನ, ಮನೆಗಳನ್ನು ಅಳೆಯಲು ಮಾತ್ರ ಬಳಸುತ್ತಿದ್ದಂತೆ ತೋರುತ್ತದೆ. ಪ್ರಸ್ತುತ ಶಾಸನಗಳಲ್ಲಿ ಬಳಸಿರುವ ಕೈಯಿ' ಎಂಬುದನ್ನು ಸಂಸ್ಕೃತದ ಹಸ್ತ' ಎಂಬ ಅಳತೆಗೆ ಸಮ ಎಂದು ಭಾವಿಸುವುದಾದರೆ ಒಂದು ಹಸ್ತವು ಇಪತ್ತುನಾಲ್ಕು ಅಂಗುಲಕ್ಕೆ ಸಮ ೨೪ ಅಂಗುಲದ ಒಂದು ಹಸ್ತ ಅಳತೆಯನ್ನು ಒಂದು ಗಜವೆಂದು ಆಲ್ಬೆರುನಿ ಹೇಳಿದ್ದಾನೆ.[೭೮]

**ಮೆಟ್ಟು** : ಭೂಮಿಯನ್ನು ಅಳೆಯಲು ಬಳಸಿರುವ ಮತ್ತೊಂದು ಅಳತೆಮಾಪನ ಪಾದ. ಇದನ್ನು ಶಾಸನಗಳು ಮೆಟ್ಟು ಎಂದು ಕರೆದಿವೆ. ೩೨ ಮೆಟ್ಟಿನ ಗಳೆಯನ್ನು ನುಗ್ಗೇಹಳ್ಳಿ ಶಾಸನ ಮತ್ತು ಚನ್ನಾರಾಯ ಪಟ್ಟಣದ ಶಾಸನ ಹೇಳಿದೆ.[೭೯] ೩೬ ಮೆಟ್ಟಿನ ಗಳೆಯ ಉಲ್ಲೇಖವನ್ನು ಮೊಸಳೆ ಮತ್ತು ಅರಕೆರೆ ಶಾಸನಗಳು[೮೦] ದಾಖಲಿಸಿವೆ. ೪೮ ಮೆಟ್ಟಿನ ಗಳೆಯಲ್ಲಿ ಗದ್ದೆ ಬೆದ್ದಲನ್ನು ಅಳತೆ ಮಾಡಲಾಯಿತೆಂದು ಮೊಸಳೆಯ ಮತ್ತೊಂದು ಶಾಸನ[೮೧] ಹೇಳಿದೆ. ಜೆ.ಸಿ. ಪುರದ ೧೩೭೪ ಶಾಸನ ೭೪ ಮೆಟ್ಟಿನ ಗಳೆಯನ್ನು ಅಳತೆ ಮಾಡಲು ಬಳಸಿದ್ದನ್ನು ದಾಖಲಿಸಿದೆ. ಇದು ಹೊನ್ನವಳ್ಳಿ ಮತ್ತು ಹಲಕೂರಿನ ಭೂಮಿ ಪರಿವರ್ತನೆಯ ಸಂದರ್ಭದಲ್ಲಿ ಬಳಸಲಾಗಿದೆ. ಈ ಎರಡು ಗ್ರಾಮಗಳು ಮಗರೆ ನಾಡಿನಲ್ಲಿದ್ದವು. ಈ ೭೪ ಮೆಟ್ಟಿನ ಗಳೆ ಈ ಪ್ರಾಂತ್ಯದಲ್ಲಿ ಒಪ್ಪಿತ ಅಳತೆ ಮಾಪನವಾಗಿದ್ದಂತೆ ತೋರುತ್ತದೆ. ಈ ಶಾಸನಗಳನ್ನು ಗಮನಿಸಿದಾಗ ಈ ಪ್ರದೇಶದಲ್ಲಿ ೩೨ ಮೆಟ್ಟಿನ ಗಳೆಯಿಂದ ಹಿಡಿದು ೭೪ ಮೆಟ್ಟಿನ ಗಳೆಯವರೆಗೆ ಭೂ ಅಳತೆಯ ಘಳೆಗಳನ್ನು ಬಳಸುತ್ತಿದ್ದುದು ಸ್ಪಷ್ಟವಾಗುತ್ತದೆ.

**ಅಳತೆ ಕೋಲು** : ಭೂಮಿಯ ಅಳತೆ ಕೋಲುಗಳನ್ನು ಗಳೆ, ಘಳೆ, ಗಡಿಂಬ, ಗಳೆಯ ಗಡಿಂಬ, ಗಡಿಬ ಎಂದು ಕರೆದಿರುವುದನ್ನು ಕಾಣುತ್ತೇವೆ. ಜಾಜೂರಿನ ಶಾಸನ[೮೨] ೪೦ ಗೇಣ ಕೋಲು' ಎಂದೇ ಕರೆದಿದೆ. ಇವು ಬಹಳ ಗಟ್ಟಿಯಾಗಿದ್ದು ಅನೇಕ ವರ್ಷಗಳು ಲೊಡ್ಡಾಗದೆ ಉಳಿಯುತ್ತವೆ ಮತ್ತು ಒಣಗಿದ ನಂತರ

ಹಗುರವಾಗುವುದರಿಂದ ಅಳತೆ ಮಾಡಲು ಸುಲಭವಾಗಿರುತ್ತಿತ್ತೆಂದು ಭಾವಿಸಬಹುದು. ಆದರೆ ೨೪ ಮೆಟ್ಟುಗಳ ಗಳೆಯ ಕೋಲನ್ನು ಬಳಸುತ್ತಿದ್ದುದು ಆಶ್ಚರ್ಯ ಉಂಟು ಮಾಡುತ್ತದೆ. ಇಷ್ಟು ಉದ್ದದ ಗಳುವನ್ನು ಸಂಭಾಳಿಸುವುದು ಕಷ್ಟ. ಹಾಗಾಗಿ ಬಹುಶಃ ಈ ಅಳತೆಯ ಮಾಪನವು ಕೋಲಾಗದೆ ಹಗ್ಗ ಅಥವಾ ಸರಪಣಿಯಾಗಿರಬಹುದೆ? ಕೆಲವು ಶಾಸನಗಳು ಗಳೆಯಗಡಿಂಬ, ಮುವತ್ತಮೂರುಗೇಣ ಬಾಚಿವಿಡಿ[೨೪] ಎಂದೂ ಬಳಸಿವೆ. ಈ ಗಳೆಯ ಗಡಿಂಬ ಮತ್ತು ಬಾಚಿವಿಡಿಗಳು ಬೇರೆ ಬೇರೆ ಸ್ವರೂಪದ ಅಳತೆ ಮಾಪನಗಳಾಗಿರಬಹುದು. 'ಬಾಚಿವಿಡಿ' ಎಂಬ ಪದವನ್ನು ಗಮನಿಸಿದಾಗ ಬಹುಶಃ ನಿರ್ದಿಷ್ಟ ಅಳತೆಯ ಹಗ್ಗ ಅಥವಾ ಸರಪಳಿಗೆ ಅಳೆಯಲು ಸುಲಭವಾಗುವಂತೆ ಅಂಚುಗಳಲ್ಲಿ ಬಾಚಿಯ ಆಕಾರದ ಹಿಡಿಕೆಗಳನ್ನು ಹಾಕಿದ್ದಿರಬಹುದೆಂದು ಊಹಿಸಬಹುದು. (ಅಳೆಯುವ ಟೇಪಿನ ಅಂಚಿನಲ್ಲಿ ಈಗಲೂ ಲೋಹದ ಅಂಚು ಕಟ್ಟಿರುವುದನ್ನು ಗಮನಿಸಬಹುದು) ಪ್ರಾಚೀನ ಕಾಲದಲ್ಲಿ ಭೂಮಿಯನ್ನು ಅಳೆಯಲು ಹಗ್ಗವನ್ನು ಬಳಸುತ್ತಿದ್ದರೆನ್ನುವುದಕ್ಕೆ ಆಧಾರಗಳಿವೆ. ಕೌಟಿಲ್ಯನು 'ರಜ್ಜುಗ್ರಾಹಕ' ಎಂಬ ಅಧಿಕಾರಿಯನ್ನು ಹೆಸರಿಸುತ್ತಾನೆ. ಇವನು ಭೂಮಿಯನ್ನು ಹಗ್ಗದಿಂದ ಅಳೆಯುವ ಅಧಿಕಾರಿ' ಎಂದು ಅರ್ಥೈಸಲಾಗಿದೆ.[೨೫]

ಕ್ಷೇತ್ರ ಫಲದ ಅಳತೆಯನ್ನು ಎಷ್ಟು ನಿಖರವಾಗಿ ಶಾಸನದಲ್ಲಿ ಹೇಳಿದೆ ಎಂಬುದಕ್ಕೊಂದು ಉದಾಹರಣೆಯನ್ನು ನೋಡಬಹುದು. 'ಅಯಿದು ಮಾರ ಘಳೆಯಲು ತೆಂಕಣ ಭುಜೆ ೫, ಬಡಗಣ ಭು ೮ ಮೂಡಣ ಭುಜೆ ೧೬ ಪಡುವಣ ಭುಜೆ ೧೪'' ಎಂದು ಕೋಳಿಗುಂದದ ೧೨೩೪ರ ಶಾಸನ[೨೬] ಕ್ಷೇತ್ರ ಫಲದ ನಾಲ್ಕು ಪಾರ್ಶ್ವಗಳನ್ನು ನಿಖರವಾಗಿ ನೀಡಿದೆ.

ಅಳತೆಕೋಲುಗಳು ದೈಹಿಕ ಅಂಗ ನಿರ್ದೇಶಿತ ಅಳತೆಗಳೊಂದಿಗೆ ಉಲ್ಲೇಖಗೊಳ್ಳುವುದರ ಜೊತೆಗೆ ಅಂಕಿಗಳನ್ನು ಊರಿನ ಹೆಸರುಗಳನ್ನು ಅದನ್ನು ಬಳಕೆಗೆ ತಂದ ವ್ಯಕ್ತಿಗಳ ಹೆಸರು ಅಥವಾ ಬಿರುದು, ಪುಣ್ಯ ಕ್ಷೇತ್ರ ಅಥವಾ ದೇವರ ಹೆಸರು ಇತ್ಯಾದಿಗಳನ್ನು ಸೇರಿಸಿಕೊಂಡು ಬಳಕೆಯಾಗುವುದರಿಂದ ಸಾಂಸ್ಕೃತಿಕ ಅಧ್ಯಯನಕ್ಕೆ ನೆರವಾಗುತ್ತವೆ. ಅರಕೆರೆಯ ಶಾಸನವೊಂದು[೨೭] ಊರಗಡಿಂಬ'ದಲ್ಲಿ ಭೂಮಿ ಅಳತೆ ಮಾಡಿದ್ದನ್ನು ಹೇಳಿದೆ. ಹೆಸರೇ ಸೂಚಿಸುವಂತೆ ಇದು ಆ ಊರಿನಲ್ಲಿ ಬಳಕೆಯಾಗುತ್ತಿದ್ದ ಅಳತೆಗೋಲಾಗಿರಬೇಕು. ಈ ಗ್ರಾಮದ ಸುತ್ತಮುತ್ತಲ ಗ್ರಾಮಗಳಲ್ಲೂ ೩೬ ಮೆಟ್ಟಿನ ಗಳೆಯನ್ನೇ ಬಳಸಿದ್ದರೂ ಅದನ್ನು ಊರಗಡಿಂಬವೆಂದು ಕರೆದಿಲ್ಲ.

ನಾಕಿರಾಜ ಹೆಗ್ಗಡೆ ಎಂಬ ಅಧಿಕಾರಿಯು ಮುರುಹಿಂಡಿಯಲ್ಲಿ ಕೆರೆ, ದೇವಾಲಯ ಕಟ್ಟಿಸಿ ಭೂದಾನ ಮಾಡಿದ್ದಾನೆ.[೨೮] ಆ ಭೂಮಿಯನ್ನು ಅಳೆಯಲು ಬಳಸಿದ ಗಳೆಯ ಹೆಸರು ''ನಾ''ದಿಂದ ಪ್ರಾರಂಭವಾಗುತ್ತದೆ. ಶಾಸನ ಪಾಠ ಹಾಳಾಗಿರುವುದರಿಂದ ಪೂರ್ಣ ಹೆಸರು ತಿಳಿಯುವುದಿಲ್ಲ. 'ಕೆಜೆಯ ಕೆಳಗೆ ಗದ್ದೆ ಸಲಗೆಯೆಂಟು ಆ ಕೆಜೆಯ ಬಡಗ ತೆಂಕಲಾಗಿ ನಾ...ಗಳೆಯಲು ಬೆದ್ದಲು ಮತ್ತರೆಂಟು ........ಆ

ಗಳೆಯಲು ಬೆದ್ದಲ್ಮುತ್ತರೆರಡು..." ಇಲ್ಲಿ ಬಹುಷಃ ನಾ ಎಂಬುದು ನಾಕಿ ರಾಜನ ಹೆಸರಿನಿಂದಲೇ ಗುರುತಿಸಲ್ಪಟ್ಟ ಗಳೆಯಿರಬೇಕೆಂದು ಊಹಿಸಲು ಅವಕಾಶವಿದೆ.

ಗಂಡಸಿ ಗ್ರಾಮದ ಕೆರೆಯ ಕೋಡಿಯ ಪಾಳು ಕಲ್ಲೇಶ್ವರ ಗುಡಿಯ ಹಿಂಭಾಗದ ಸಹಜ ಹಾಸು ಬಂಡೆಯ ಮೇಲಿನ ಒಂದು ಶಾಸನವು[೭೯] ಗಂಡಸಿ, ಹುರಿಗಿಲವಾಡಿ ತೊಪ್ಪಿಗೆಯ ಪ್ರಮುಖ ಗೌಡುಗಳು, ನಾಯಕರು, ಸೆಟ್ಟಿಗಳು ಸೇರಿ ಒಂದು ನಿರ್ದಿಷ್ಟ ಅಳತೆಯ ಗಳೆಯ ಗಡಿಂಬವನ್ನು ಭೂಮಾಪನಕ್ಕಾಗಿ ನಿರ್ಧರಿಸಿ ಅದನ್ನು ಆ ಶಾಸನವಿರುವ ಬಂಡೆಯ ಹಿಂಭಾಗದಲ್ಲೇ ಕೆತ್ತಿಸಿ, 'ಈ ಗಳೆಯ ಕುಂದೆ ಕಟ್ಟಿದಡೆ' ಪಾಪವೆಂದು ಎಚ್ಚರಿಸಿದ್ದಾರೆ. ಈ ಗಳೆಯಗಡಿಬ'ವನ್ನು ನಿಖರ ಅಳತೆಗಳೊಂದಿಗೆ ಕೊರೆಸಿದ್ದಾರೆ. ಇದನ್ನು ಸ್ಥಳೀಯರು ಏಣಿ ಚಿತ್ರ ಎಂದು ಕರೆಯುತ್ತಾರೆ. ಇದರ ಒಟ್ಟು ಉದ್ದ ೨೫೦ ಇಂಚುಗಳಿದ್ದು ಅಗಲ ೮ ಇಂಚಿದೆ. ೧೪.೭ ಇಂಚುಗಳ ಅಳತೆಯಲ್ಲಿ ಇದನ್ನು ೧೭ ಭಾಗವಾಗಿ ವಿಭಜಿಸಿ ಗುರುತು ಮಾಡಿದ್ದಾರೆ. ಅಲ್ಲದೆ ೩ನೆಯ, ಏಳನೆಯ ಹತ್ತನೆಯ ಹದಿನಾಲ್ಕನೆಯ ಗೀಟು ಭಿನ್ನವಾಗಿ ಕಾಣುವಂತೆ ತ್ರಿಶೂಲ ಚಿನ್ಹೆಯನ್ನು ಕೊರೆದಿದ್ದಾರೆ. ಈ ಮೂರು-ನಾಲ್ಕು, ಮೂರು ನಾಲ್ಕು ಮನೆಗಳ ವಿಭಾಗಗಳು ಕ್ರಮವಾಗಿ ೪೪.೧ ಸೆಂಟಿಮೀಟರ್, ೫೮.೮ ಸೆಂಟಿ ಮೀಟರ್‌ನಂತೆ ಗುರುತಿಸಲಾಗಿದೆ.




ಇದು ಭಿನ್ನ ಭಿನ್ನವಾದ ಅಳತೆಗಳ ಗಳೆಗಳನ್ನು ಒಂದೇ ಗಳೆಯಗಡಿಂಬದ ರೇಖಾ ಚಿತ್ರದಲ್ಲಿ ಬಿತ್ತರಿಸಿರುವಂತೆ ತೋರುತ್ತದೆ. ಇತರ ಶಾಸನಗಳಲ್ಲಿ ಕಂಡುಬರುವಂತೆ ಗದ್ದೆ ಬೆದ್ದಲು ತೋಟ ಮನೆ ಇತ್ಯಾದಿಗಳನ್ನು ಅಳೆಯಲು ಬೇರೆ ಬೇರೆ ಅಳತೆಯ ಕೋಲನ್ನು ಇದು ಸೂಚಿಸುತ್ತಿದೆ ಎಂದು ಅರ್ಥಮಾಡಿಕೊಳ್ಳಬಹುದು. ಬಹುಷ ಈ ಅಳತೆಗಳು ಸುತ್ತ ಮುತ್ತಿನ ಪ್ರದೇಶದಲ್ಲೆಲ್ಲಾ ಚಾಲ್ತಿಗೆ ಬಂದಿರಬೇಕು ಶಾಸನದಲ್ಲಿ ಮೂರು ಗ್ರಾಮದ ಪ್ರಮುಖರ ಉಲ್ಲೇಖವಿದೆ.

ಈ ಗಳೆಯ ಗಡಿಂಬದ ಮೇಲ್ಭಾಗದಲ್ಲಿ ಇರುವ ಮತ್ತೊಂದು ಅಳತೆಯ ರೇಖೆಯು ಮೂರು ಚಿನ್ಹೆಗಳಿಂದ ಗುರುತಿಸಲ್ಪಟ್ಟಿದ್ದು, ಇದು ೩೯೦-೩೬೦=೭೫೦ ಇಂಚುಗಳಿದ್ದು ಏಣಿಗುರುತಿನ ಅಳತೆಯ ಮೂರು ಪಟ್ಟು ಇದೆ. ಎಂದು ನನ್ನ ಗಮನಕ್ಕೆ ಬರದ ಮತ್ತೊಂದು ವಿಚಾರವನ್ನು ಡಾ.ಜಗದೀಶ್ ಅವರು ಗುರುತಿಸಿದ್ದಾರೆ.[೮೦]




ಹಡಪದ ಬೊಮ್ಮಯ್ಯನೆಂಬ ವ್ಯಕ್ತಿ ಬಾಗವಾಳಿನಲ್ಲಿ ಕೆರೆಕಟ್ಟಿಸಿ ತೂಬನ್ನು ಮಾಡಿಸಿದ್ದಕ್ಕೆ ಅವನಿಗೆ ಕೆರೆ ಕೊಡಗಿ ನೀಡುವಾಗ 'ನಿಜಗಂಬದಲ್ಲಿ ಬೆದ್ದಲು ಕಂಬ ೩೦ (ಮೂವತ್ತ)ನೂ ಕಲ್ಲನಟ್ಟು ಕೊಟ್ಟರು"

ಎಂದು ಹೇಳಿದೆ[೮೧] 'ನಿಜಗಂಬ' ಎಂಬುದು ಭೂಮಿಯನ್ನು ಅಳೆಯಲು ಬಳಸಿದ ಗಳೆ ಎಂಬುದು ಇಲ್ಲಿ ಸ್ಪಷ್ಟವಾಗಿದೆ.

### ೩.೧೫. ಮತ್ತರು ಮತ್ತು ಕಂಬ

ಭೂಮಿ ಅಳತೆಯನ್ನು ಮತ್ತರು ಮತ್ತು ಕಂಬಗಳಲ್ಲಿ ಶಾಸನಗಳು ಹೆಚ್ಚಾಗಿ ದಾಖಲಿಸಿವೆ. ಇವುಗಳನ್ನು ಆಧುನಿಕ ಅಳತೆಗೆ ಪರಿವರ್ತಿಸುವ ಪ್ರಯತ್ನವನ್ನು ಅನೇಕ ವಿದ್ವಾಂಸರು ತಮಗೆ ದೊರೆತ ಶಾಸನಗಳನ್ನು ಆಧರಿಸಿ ಮಾಡಿದ್ದಾರೆ. ಆದರೆ ಇವರಲ್ಲಿ ಭಿನ್ನತೆಯಿದೆ. ಇದಕ್ಕೆ ಕಾರಣ ಈ ಭೂ ಅಳತೆ ಮಾಪನಗಳು ಒಂದು ಭೂಮಿಯಿಂದ ಮತ್ತೊಂದಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತಿದ್ದುದೇ ಆಗಿದೆ. ಮಣ್ಣಿನ ಫಲವತ್ತತೆ ನೀರಾವರಿ ವ್ಯವಸ್ಥೆ ಹೊಲ, ಗದ್ದೆ ತೋಟ, ಮಣ್ಣಿನ ಗುಣ ಇವೆಲ್ಲವನ್ನು ಆಧರಿಸಿ ಅಳತೆಯನ್ನು, ಕ್ರಯವನ್ನು, ತೆರಿಗೆಯನ್ನು ನಿಗಧಿಪಡಿಸಲಾಗುತ್ತಿತ್ತು.[೮೨] ಕೃಷಿಯೋಗ್ಯ ಭೂಮಿಯು ಎರೆ ಮತ್ತರು, ಕೆಂಗಾಡು ಮತ್ತರ್[೮೩] ಕರೇ ಮಣ್ಣು ಭೂಮಿ[೮೪] 'ಮಗರ ವೆಡಂಗನ ಗದ್ದೆ'[೮೫], ಗಂಗ ಮತ್ತರ್ ಇತ್ಯಾದಿ ಹೆಸರಿನಲ್ಲಿ ಕರೆಯಲ್ಪಟ್ಟಿವೆ. 'ಮಗರವೆಡಂಗ' ಬಿರುದಿನ ಅರಸನ ಹೆಸರಿನಿಂದ ಕೊಡಮಾಡಲ್ಪಟ್ಟ ಗದ್ದೆಯೋ ಅಥವಾ ಆ ಹೆಸರಿನ ಅಳತೆ ಗೋಲಿನಿಂದ ಅಳೆದದ್ದೋ ಇರಬೇಕು. ಇನ್ನು ಗಂಗ ಮತ್ತರ್ ಎಂಬುದು ಗಂಗನ ಗಳೆಯಿಂದ ಅಳೆಯಲ್ಪಟ್ಟ ಗಂಗವಾಡಿ ಆಡಳಿತ ವಿಭಾಗದಲ್ಲಿ ಕಂಡುಬರುವ ಕೃಷಿ ಭೂಮಿಯಾಗಿದೆ. ಮತ್ತರಿನ ಅಳತೆ ಹೆಚ್ಚಾಗಿ ಬೆದ್ದಲನ್ನು ಹೇಳುವಾಗ, ಕಂಬದ ಅಳತೆ ಗದ್ದೆ ತೋಟವನ್ನು ಹೇಳುವಾಗ ಕಾಣಿಸುತ್ತದೆ. 'ಮತ್ತರಿಗಿಂತ ಹಾದ ಕಡಿಮೆ ಅದಕ್ಕಿಂತ ಕಮ್ಮ ಕಡಿಮೆ ಅಳತೆಯಾಗಿದೆ ೧ ಮತ್ತರು ೪ ಹಾದ ೧ ಹಾದ = ೧೨೫ ಕಮ್ಮ ಇರಬಹುದೆಂದು ಶಾಸನಗಳ ಆಧಾರದ ಮೇಲೆ ಡಾ.ಜಗದೀಶ್ ಅವರು ತೀರ್ಮಾನಿಸುತ್ತಾರೆ.[೮೬]

ಬೆಂಡೆ ಕೆರೆ ಶಾಸನವು[೮೭] ಗದ್ದೆ ತೋಟಕ್ಕೆ ೫ ಮಾರುಗಳೆಯನ್ನು ಬೆದ್ದಲೆಗೆ ೭ ಮಾರುಗಳೆಯನ್ನು ಹೇಳಿದೆ ಈ ಎರಡರ ಅಳತೆಯನ್ನು ತುಲನಾತ್ಮಕವಾಗಿ ನೋಡಿದಾಗ ಉದ್ದ x ಅಗಲ ೫ x ೫=೨೫, ೭x ೭=೪೯ ಚದುರಗಳೆ ಬರುವುದರಿಂದ ಸುಮಾರು ೨೫ಕ್ಕೆ ೫೦ ಅಂದರೆ ಒಂದಕ್ಕೆ ಎರಡು ಪಟ್ಟು ವ್ಯತ್ಯಾಸ ಕಾಣುತ್ತದೆ. ಒಂದು ಗದ್ದೆ ಅಳತೆಗೆ ಎರಡು ಬೆದ್ದಲು ಅಳತೆ ಕಂಡುಬರುತ್ತದೆ. ಸಹಜವಾಗಿ ಇದು ನೀರಾವರಿ ಮತ್ತು ಉತ್ಪತ್ತಿಗೆ ಅನುಗುಣವಾಗಿ ಮಾಡಿಕೊಂಡಿರುವ ವ್ಯತ್ಯಾಸಗಳಾಗಿವೆ.

ಹಿರಿಯೂರಿನ ಒಂದು ಶಾಸನವು[೮೮] ಮನೆಯ ಅಳತೆಯನ್ನು ಉದ್ದ ಮತ್ತು ಅಗಲಗಳೆರಡನ್ನು ಹೇಳಿ ಒಟ್ಟು ವಿಸ್ತೀರ್ಣವನ್ನು ಕಂಬಗಳಲ್ಲಿ ಹೇಳಿದೆ. ಇದು ಕಂಬ ಒಂದರ ಲೆಕ್ಕವನ್ನು ತಿಳಿಯಲು ಸಹಾಯಕವಾಗುತ್ತದೆ. ಪಡುವ ಮೂಡಲು ನೀಳ ೪ ತೆಂಕ ಬಡಗಣ ಅಗಲ ೨||೨ ಅನ್ನು ಕಂಬ ೧೧'' ಎಂದಿದೆ. ಮತ್ತೊಂದು ಮನೆಯ ಅಳತೆ 'ತೆಂಕ ಬಡಗಣ ೨ ಪಡುವಣ ಮೂಡಣ ನೀಳ ೮ ಅನ್ನು ಕಂಬ ೨೫' ಎಂದಿದೆ. ಅಂದರೆ ಉದ್ದ x ಅಗಲ = ಚದುರ

(೧) ೨.೨ x ೪ = ೮.೮ = ೧೧ ಕಂಬ

೮.೮ ÷ ೧೧ = ೦.೮ = ೧ ಕಂಬ




(೨) ೩ x ೮ = ೨೪ = ೨೫ ಕಂಬ

೨೪ ÷ ೨೫ = ೦.೯೬ = ೧ ಕಂಬ




ಮೇಲಿನ ಲೆಕ್ಕಾಚಾರದಂತೆ ಒಂದು ಕಂಬದ ವಿಸ್ತೀರ್ಣ ಒಂದು ಚದುರಗಳೆಗಿಂತ ಸ್ವಲ್ಪ ಕಡಿಮೆ ಬರುತ್ತದೆ. ಇದೆಲ್ಲವನ್ನು ಐದು ಮಾರು ಒತ್ತೋಳ ಗಳೆಯಲ್ಲಿ ಅಳೆಯಲಾಗಿದೆ. ಒಂದು ಮಾರಿಗೆ ೧೫೦ ಸೆಂಟಿ ಮೀಟರಿನಂತೆ ಈ ಗಳೆಯ ಉದ್ದಳತೆ ಸು.೮.೨೫ ಮೀಟರು ಆಗುತ್ತದೆ.

ಇಷ್ಟೆಲ್ಲ ನಿಖರವಾಗಿ ಅಳತೆಗಳನ್ನು ಕಂಡುಕೊಳ್ಳುವ ಪ್ರಯತ್ನಗಳನ್ನು ಮಾಡಿದರೂ ಇವೆಲ್ಲವೂ ಸಾರ್ವತ್ರಿಕ ಅಳತೆಗಳೆಂದು ಪರಿಗಣಿಸುವುದು ತಪ್ಪಾಗುತ್ತದೆ. ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಅನೇಕ ಭೂಮಾಪನ ಅಳತೆಗಳಿದ್ದವು. ಇವುಗಳಿಂದ ಅಳೆದ ಭೂಮಿಯ ಅಳತೆಯು ಆಯಾಯ ಪ್ರಾಂತಗಳಲ್ಲಿ ಬಳಸುವ ಅಳತೆಗಳಾಗಿರುತ್ತಿದ್ದು, ಸ್ಥಳೀಯವಾಗಿ ಒಪ್ಪಿತವಾಗಿರುತ್ತಿದ್ದವು. ಪ್ರಾದೇಶಿಕ ದೃಷ್ಟಿಯಿಂದ ಕಾಲದ ದೃಷ್ಟಿಯಿಂದ ಇವುಗಳ ವ್ಯಾಪ್ತಿ ವ್ಯಾತ್ಯಾಸವಾಗಿರುತ್ತಿತ್ತು ಆದರೂ ನಮ್ಮ ಪೂರ್ವಿಕರು ಕರಾರುವಕ್ಕಾಗಿ ತಮ್ಮ ತಮ್ಮ ಪ್ರದೇಶಗಳಲ್ಲಿ ಅಳತೆ ಪದ್ಧತಿಯನ್ನು ಉಳಿಸಿಕೊಳ್ಳುವ ಸಲುವಾಗಿ ಅವುಗಳನ್ನು ಶಾಶ್ವತವಾದ ಬಂಡೆಗಳ ಮೇಲೆ ದೇವಾಲಯ ಕಟ್ಟಡಗಳಲ್ಲಿ ಕೊರೆಸುತ್ತಿದ್ದರು. ಶಾಸ್ತ್ರಕಾರರು ಗ್ರಂಥಗಳಲ್ಲಿ ಬರೆದಿಡುತ್ತಿದ್ದರು.

### ೩.೧.೬. ಪ್ರಮಾಣ ಮತ್ತು ತೂಕ

ಪ್ರಮಾಣ ಮತ್ತು ತೂಕಗಳ ಬಗೆಗೆ ಶಾಸನಗಳು ಕ್ವಚಿತ್ತಾಗಿ ಉಲ್ಲೇಖಿಸುತ್ತವೆ. ಭೂಮಿಯ ಅಳತೆಯನ್ನು ಹೇಳುವಾಗ ಬಿತ್ತನೆ ಬೀಜದ ಪ್ರಮಾಣದಲ್ಲಿ ಹೇಳುವುದೂ ಹೆಚ್ಚು ಕಂಡುಬರುತ್ತದೆ. ರಾಜಾದಿತ್ಯನು ಕೊಳಗ ಬಳ್ಳ ಮಾನ ಸಲಗೆ ಗಿದ್ದ ಎಂಬ ಅಳತೆಗಳನ್ನು ಹೇಳಿದ್ದಾನೆ. ಗಿದ್ದ ಚಿಕ್ಕ ಅಳತೆಯಾಗಿದ್ದು, ಗಿದ್ದದಿಂದ ಪ್ರಾರಂಭಿಸಿ ಕೊಳಗದವರೆಗೆ ಇವು ನಾಲ್ಕುಪಟ್ಟು ಅಳತೆಯಲ್ಲಿ ಹೆಚ್ಚುತ್ತಾ ಹೋಗುತ್ತವೆ.

**ಕೊಳಗ** : ಒಂದು ಶಾಸನವು[೪೯] 'ದೇವರ ಅಂಗಭೋಗಕ್ಕೆ ನಿವೇದ್ಯಕ್ಕೆ... ಪ್ರಜೆಗಳು ದೇವಗೊಳಗ ಧರ್ಮಗೊಳಗವನ್ನು ಬಿಟ್ಟರು' ಎಂದಿದೆ. ಮುದುಡಿಯ ಒಂದು ಶಾಸನ[೫೦] 'ಬೀರಯ್ಯನ ಕೊಳಗ'ದ ಉಲ್ಲೇಖ ಮಾಡುತ್ತದೆ. ಈ ಬೀರಯ್ಯ ದೈವವೋ ಅಥವಾ ಸ್ಥಳೀಯ ಪ್ರಚಲಿತ ವ್ಯಕ್ತಿಯೋ ಇದ್ದಿರಬೇಕು. ಈ ಕೊಳಗ ಆ ಹೆಸರಿನಲ್ಲಿ ಚಾಲ್ತಿಯಲ್ಲಿದ್ದಂತೆ ತೋರುತ್ತದೆ. ಇದೇ ರೀತಿ ಗಂಗ

ಕೊಳಗವೂ ಈ ಪ್ರದೇಶದಲ್ಲಿ ಚಾಲ್ತಿಯಲ್ಲಿತ್ತು. ಕೊಳಗದಲ್ಲಿ ೩ ಸೇರಿನಿಂದ ೪ ಸೇರಿನವರೆಗೆ ವ್ಯತ್ಯಾಸಗಳಿರುವುದನ್ನು ರೈತರು ಹೇಳುತ್ತಾರೆ. ರಾಜಾದಿತ್ಯ ನಾಲ್ಕು ಬಳ್ಳಕ್ಕೆ ಒಂದು ಕೊಳಗವೆನ್ನುತ್ತಾನೆ.

**ಸಲಗೆ-ಖಂಡುಗ** : ಇವೆರಡೂ ಒಂದೇ ಪ್ರಮಾಣಾಳತೆಗಳೆಂದು ಹೇಳಬಹುದು. ಖಂಡುಗ ಮತ್ತು ಸಲಗೆ ಒಂದೇ ಶಾಸನದಲ್ಲಿ ಎಲ್ಲಿಯೂ ಬಳಕೆಯಾಗಿಲ್ಲ. ಈ ವಿಚಾರವನ್ನು ಕರುಗುಂದ ಶಾಸನದಿಂದ ಸ್ಪಷ್ಟ ಪಡಿಸಿಕೊಳ್ಳಬಹುದು.[೯೧] 'ಕರಿಯ ಕೆಱೆಯ ಗದ್ದೆ ಕೊಳಗಂ ಮೂವತ್ತು. ಅರಕೆಱೆಯ ಗದ್ದೆ ಕೊಳಗ ಹತ್ತು ಹೂವಿನ ಕೆರೆಯಲಿ ಗದ್ದೆ ಕೊಳಗ ಅಯ್ದು ಅನ್ತು ಬೆದ್ದಲು ಸಲಗೆ ೧" ಎನ್ನುತ್ತದೆ. ಈ ಪ್ರಕಾರ ೩೦+೧೦+೫=೪೫ ಕೊಳಗ=೨ ಸಲಗೆ ೫ ಕೊಳಗಕ್ಕೆ ಸಮ. ಇದೇ ಶಾಸನದಲ್ಲಿ 'ಹುಣಿಸೆ ಕೈಯ ಕೊಳಗ ೧೫ ಹಾಳ ಮೇಗಣಕೆಯ ಕೊಳಗ ೫ ಅನ್ತು ಬೆದ್ದಲು ಸಲಗೆ ೧" ಎನ್ನುತ್ತದೆ. ಅಂದರೆ ೧೫+೫=೨೦ ಕೊಳಗ=೧ ಸಲಗೆ ಎಂಬುದು ಸ್ಪಷ್ಟವಾಗುತ್ತದೆ. ಇವತ್ತಿಗೂ ಈ ಪ್ರದೇಶದಲ್ಲಿ ಒಂದು ಖಂಡುಗಕ್ಕೆ ೨೦ ಕೊಳಗ ಎಂದು ಹೇಳುತ್ತಾರೆ. ಹಾಗಾಗಿ ಸಲಗೆ ಎಂಬುದು ಖಂಡುಗದ ಮತ್ತೊಂದು ಹೆಸರು. ಅವೆರಡರ ಪ್ರಮಾಣಾಳತೆ ಒಂದೇ ಎಂದು ಹೇಳಬಹುದು.

ಬಂದೂರಿನ ಒಂದು ಶಾಸನದಿಂದ[೯೨] ಒಂದು ಸಲಗೆ ಬೀಜ ಬಿತ್ತುವ ಅಳತೆಯ ಭೂಮಿಯ ವಿಸ್ತೀರ್ಣವನ್ನು ಗುರುತಿಸಿಕೊಳ್ಳಬಹುದು. ಶಾಸನ ಸ್ಪಷ್ಟವಾಗಿ ೩೩ ಗೇಣ ಬಾಚಿವಿಡಿಯಿಂದ ಅಳೆದ ೪೦ ಕಂಬಕ್ಕೆ ಒಂದು ಸಲಗೆ ಎನ್ನುತ್ತದೆ. ಒಂದು ಗೇಣಿಗೆ ೦.೨೩ ಸೆ.ಮೀ.ನಂತೆ ೩೩ ಗೇಣ ಗಳೆಯ ಉದ್ದ ೭.೫೯ ಮೀಟರಾಗುತ್ತದೆ ಮತ್ತೊಂದು ಶಾಸನ[೯೩] "ಸಲಗೆ ಹದಿನಾರಕ್ಕಂ ಕಂಬವೆಂಟುನೂಱು" ಎಂದು ಹೇಳಿದೆ. ಈ ಪ್ರಕಾರ ೮೦೦÷೧೬=೫೦ ಒಂದು ಸಲಗೆ ಬೀಜ ಬಿತ್ತಲು ೫೦ ಕಂಬ ಭೂಮಿಯು ಬೇಕಾಗುತ್ತದೆ. ಬಿತ್ತು ಬೀಜ ಯಾವುದೆಂಬುದರ ಮೇಲೆ ಇದು ಅವಲಂಬಿಸಿದಂತೆ ತೋರುತ್ತದೆ.

**ಬಳ್ಳ** : ಇದು ಕೊಳಗದ ನಾಲ್ಕನೇ ಒಂದು ಭಾಗ ಇದು ಸೇರು ಎಂದೂ ಕರೆಯಲ್ಪಡುತ್ತದೆ. ಅರಸೀಕೆರೆ ಶಾಸನ[೯೪] 'ದವಸದ ಹೇರೊಂದಕ್ಕೆ ಬಳ್ಳ ೧'ರ ಲೆಕ್ಕದಲ್ಲಿ ತೆರಿಗೆಯನ್ನು ಹೇಳಿದೆ. ಬಾಣಾವರದ ಶಾಸನವೊಂದು[೯೫] 'ಧಾನ್ಯಕ್ಕೆ... ಬತ್ತ ಬಳ್ಳ ೧' ಎನ್ನುವ ಲೆಕ್ಕದಲ್ಲಿ ತೆರಿಗೆಯನ್ನು ವಿಧಿಸಿದೆ. ಇದು ಧವಸ ಧಾನ್ಯ ಅಳೆಯಲು ಬಳಸುತ್ತಿದ್ದ ಪ್ರಚಲಿತವಾದ ಅಳತೆಯಾಗಿತ್ತು.

**ಮಾನ** : ಇದು ಬಳ್ಳದ ಕಾಲು ಭಾಗವಾಗಿದ್ದು, ಪಾವು ಎಂದು ಗುರುತಿಸುತ್ತಾರೆ. ಶಾಸನಗಳಲ್ಲಿ ದೇವರಿಗೆ ಮಾನೆಣ್ಣೆಗೆ ಗಾಣ[೯೬] ಮಾನೆಣ್ಣೆಗೆ ಎತ್ತುಗಾಣ[೯೭] ಕೈಗಾಣಗಳನ್ನು ಬಿಟ್ಟ ವಿವರಗಳಲ್ಲಿ ಮಾನದ ಉಲ್ಲೇಖ ತಪ್ಪದೆ ಬರುತ್ತದೆ. ಮಾನೆಣ್ಣೆಯ ಆಯವನ್ನು ಕೆರೆಕೋಡಿಯ ಧರ್ಮಕ್ಕೆ ಬಿಡಲಾಗಿದೆ.[೯೮]

**ಸೊಂಟಿಗೆ** : ಇದು ಮಾನದ ಕಾಲು ಭಾಗ ಚಟಾಕು ಎನ್ನುತ್ತಾರೆ. ಒಂದು ಕೊಡ ಎಣ್ಣೆಗೆ ಒಂದು ಸೊಂಟಿಗೆ ತೆರಿಗೆ ವಿಧಿಸಿದ್ದನ್ನು ಒಂದು ಶಾಸನ ಹೇಳಿದೆ.[೯೯] 'ತೈಲಿಗರು ದೇವರ ನಂದಾದೀವಿಗೆಯೂ ಎಣ್ಣೆಗೆ

ಸೊಂಟಿಗೆಯ ಬಿಟ್ಟರು' ಎಂದು ಕಣಕಟ್ಟೆ ಶಾಸನ[೧೦೦] ಹೇಳಿದೆ. ಮೇಲಿನ ಉದಾಹರಣೆಗಳಿಂದ ಬಹುಷಃ ಈ ಮಾನ ಮತ್ತು ಸೊಂಟಿಗೆಯಂತಹ ಚಿಕ್ಕ ಅಳತೆಗಳು ಹೆಚ್ಚಾಗಿ ತೈಲಿಗರಲ್ಲಿ ಬಳಕೆಯಾದಂತೆ ಕಂಡುಬರುತ್ತದೆ.

**ಮಳವೆ :** ಇದು ಬಟ್ಟೆಯನ್ನು ಅಳೆಯಲು ಬಳಸುವ ಅಳತೆ ಸೀರೆಯ ಮೊಳವೆಯ ಮೇಲಿನ ಆಯವನ್ನು ಕೆರೆ ಕೋಡಿ ಧರ್ಮಕ್ಕೆ ಬಿಟ್ಟಿದ್ದನ್ನು ಒಂದು ಶಾಸನ[೧೦೧] ಹೇಳಿದೆ. ಮತ್ತೊಂದು ಶಾಸನ[೧೦೨] 'ಸಂತೆಗೆ ಬಂದ ಪೆಳಿಯ ಮಳವೆ ೧ಕ್ಕೆ ಹಾಗ ಎರಡು, ಬಲೆ, ಮೆಳಸು, ಅರಿಸಿಣದ ಮಣವೆಗಳ್ಗೆ ಹಾಗ ೧ ಎನ್ನುತ್ತದೆ. ಇಲ್ಲಿ ಪೆಳಿಯಮಳವೆ ಎಂಬುದು ಬಹುಶಃ ಪೆರಿಯಮಳವೆ ಇರಬಹುದು. ಮೆಳಸು ಅರಿಸಿಣ ಇವುಗಳನ್ನು ಗುಡ್ಡೆ ಮಾಡಿ ಮಾರುತ್ತಿದ್ದುದರಿಂದ ಮಳವೆ ಎಂಬುದು ಕೇವಲ ಬಟ್ಟೆಯನ್ನು ಅಳೆಯುವ ಅಳತೆ ಎನ್ನಲು ಸಾಧ್ಯವಿಲ್ಲ. ಇದು ನಿರ್ದಿಷ್ಟ ಅಳತೆಯ ಗುಡ್ಡೆ ಅಥವಾ 'ಗಂಟು' ಆಗಿರಬಹುದು.

**ಸೆಡೆ :** ಇದು ವಿಶೇಷವಾಗಿ ಅಕ್ಕಿಯ ಜೊತೆಗೆ ಶಾಸನಗಳಲ್ಲಿ ಕಾಣಿಸಿಕೊಂಡಿದೆ. 'ಸಂತೆಯಲ್ಸೆಡೆಯಕ್ಕಿ ೧ಕ್ಕೆ ಸೊಂಟಿಗೆ ಒಂದು" ಎಂದು ಆಯವನ್ನು ಹೇಳಿದೆ[೧೦೩] ಸಮಸ್ತ 'ನಖರಂಗಗಳು ಕೊಟ್ಟ ಸೆಡೆಯಕ್ಕಿ' ದಾನವನ್ನು ಮತ್ತೊಂದು ಶಾಸನದಲ್ಲಿ ಕಾಣಬಹುದು. ಒಟ್ಟಿನಲ್ಲಿ ಇದು ಒಂದು ಅಳತೆ ಮಾನ. ಈ ಎಲ್ಲ ಅಳತೆ ತೂಕ ಮಾಪನದ ಉದಾಹರಣೆಗಳು ಆ ಕಾಲದ ಆರ್ಥಿಕ ಚಟುವಟಿಕೆಗಳು, ಪ್ರಗತಿಯ ಬಗೆಗೆ ಬೆಳಕು ಚೆಲ್ಲುತ್ತವೆ.

### ೩.೧.೭. ವಲಯದ ಕಟ್ಟು

ಭೂಮಾಪನ ಮಾಡುವ ಕೆಲಸದ ಜೊತೆಗೆ ಅವುಗಳ ವಲಯದ ಕಟ್ಟನ್ನು ಗುರುತಿಸಿ ಗಡಿಕಲ್ಲುಗಳನ್ನು ನೆಡುವುದು ಭೂಮಿ ನಿರ್ವಹಣೆಯಲ್ಲಿ ಮುಖ್ಯವಾದ ಕೆಲಸ. ಭೂಮಿದಾನವಿರಲಿ ವಿಕ್ರಯವಿರಲಿ ಪರಿವರ್ತನೆಯಿರಲಿ ಕರಾರುವಕ್ಕಾದ ಅಳತೆಯೊಂದಿಗೆ ಕಲ್ಲನ್ನು ನೆಡುವ ಕೆಲಸ ನಡೆಯುತ್ತಿದ್ದುದನ್ನು ಶಾಸನಗಳು ಹೇಳಿವೆ. 'ಅಶೇಷ ಮಹಾಜನಂಗಳು ತಾವೇ ಬಿಜಯಂ ಗೆಯ್ದು..... ಅಳೆದು ಕಲ್ಲ ನಟ್ಟು ಕೊಟ್ಟಗದ್ದೆ''[೧೦೪] 'ಕಂಬ ಮುವ್ವತ್ತನ್ನು ಕಲ್ಲನಟ್ಟು ಕೊಟ್ಟರು'.[೧೦೫] ಈ ರೀತಿ ಅಳತೆ ಮಾಡಿ ಗಡಿ ಮೇರೆಗಳನ್ನು ನಿರ್ಧರಿಸುವುದಕ್ಕೆಂದೇ ಸರ್ಕಾರಿ ಅಧಿಕಾರಿಗಳು ಇರುತ್ತಿದ್ದರು. ಅವರಿಗೆ ಈ ಕೆಲಸ ಮಾಡಲು ಶುಲ್ಕ ನೀಡಬೇಕಾಗಿತ್ತು.[೧೦೬] ಚಿಕ್ಕ ಗಂಡಸಿಯನ್ನು ಅಗ್ರಹಾರವಾಗಿ ಮಾಡಿ ಬ್ರಾಹ್ಮಣರಿಗೆ ವೃತ್ತಿಗಳಾಗಿ ವಿಂಗಡಿಸಿ ಕೊಟ್ಟ ಶಾಸನ[೧೦೭]ವನ್ನು ೧೫೩೫ ಫೆಬ್ರವರಿ ೨೭ ರಂದು ತಾಮ್ರಶಾಸನದಲ್ಲಿ ಬರೆಸಿ ನೀಡಲಾಗಿದೆ. ಈ ಶಾಸನದಲ್ಲಿ ಹೇಳಿರುವ ದಾನದ ವಿವರಗಳನ್ನು ಆಧರಿಸಿ ಚಿಕ್ಕ ಗಂಡಸಿಯ ವೃತ್ತಿಮಂತನಾದ ಇಮ್ಮಡಿ ಸಂಗಯ್ಯನ ಮಗ ಗವುರಂಣನೆಂಬುವವನು 'ವಳಯದಕಟ್ಟ'ನು ಹಾಕಿ ಶಿಲಾ ಶಾಸನವನ್ನು ಬರಸಿದನೆಂದು ಮತ್ತೊಂದು ಶಾಸನ ಹೇಳುತ್ತದೆ.[೧೦೮] ಈ ಶಾಸನವು ೨೦೬ನೇ ಶಾಸನದ

ಮುಂದುವರೆದ ಭಾಗವಾಗಿದ್ದು ಆ ಶಾಸನದಲ್ಲಿ ದಾನ ಗ್ರಾಮದ ಚತುಸ್ಸೀಮೆಯ ವಿವರಾದಿಗಳನ್ನು ನಿಖರವಾಗಿ ವಿಸ್ತಾರವಾಗಿ ಹೇಳಿದೆ. ಬಹುಶಃ ಈ ವಲಯದ ಕಟ್ಟು ಹಾಕಿಸುವುದೆಂದರೆ ಗಡಿ ಮೇರೆಗಲ್ಲುಗಳನ್ನು ನೆಡಿಸುವುದು, ಭೂಮಿ ಅಳತೆ ಮಾಡಿಸಿ ಹಂಚಿ ಹೊಲಮೇರೆಗಳನ್ನು ಗುರುತಿಸುವ ಕ್ರಿಯೆಯೇ ಆಗಿದೆ. ಗೌವುರಣ್ಣ ಅಂತಹ ಕೆಲಸಕ್ಕಾಗಿ ದಾನಿಯಿಂದ ನೇಮಿಸಲ್ಪಟ್ಟವನೆಂಬುದು ಸ್ಪಷ್ಟವಾಗುತ್ತದೆ.

ಕೆಲವು ಶಾಸನಗಳು ದಾನ ಭೂಮಿಯ ಉಂಬಳಿ ಗ್ರಾಮಗಳ ಸೀಮಾ ವಿವರಗಳನ್ನು ಅಲ್ಲಿನ ಸ್ಥಿರವಾದ ಪ್ರಾಕೃತಿಕ ಗುರುತುಗಳನ್ನು ಬಳಸಿ ಎಷ್ಟು ಕರಾರುವಕ್ಕಾಗಿ ನೀಡಿರುತ್ತವೆಂದರೆ ಇವತ್ತಿಗೂ ನಾವು ಅವುಗಳನ್ನು ಗುರುತಿಸಿಕೊಳ್ಳಬಹುದು. ಹಳ್ಳ ದಿಣ್ಣೆ, ಮೊರಡಿ, ಬೆಟ್ಟ, ನೀರಿನ ತೆವರುಗಳು ಒಡ್ಡುಗಳೂ ಕೆರೆ ಇತ್ಯಾದಿಗಳನ್ನು ಹೇಳುತ್ತ ನಾಲ್ಕು ದಿಕ್ಕನ್ನೂ, ಕೆಲವು ಎಂಟೂ ದಿಕ್ಕುಗಳನ್ನು ಗುರುತಿಸಿವೆ.[೧೦೯]

ಗಡಿ ಕಾಳಗಗಳು, ಹೊಲಮೇರೆಯ ಕಾಳಗ ಸೀಮಾ ಸಂಬಂಧಿ ಯುದ್ಧಗಳನ್ನು ಹೇಳುವ ಶಾಸನಗಳು ಈ ಪ್ರದೇಶದಲ್ಲಿ ಹೆಚ್ಚಿವೆ. ಇದಕ್ಕೆ ಕಾರಣ ಎಷ್ಟೇ ಕರಾರುವಕ್ಕಾದ ಅಳತೆ, ಗಡಿಕಲ್ಲುಗಳು ಇದ್ದರೂ ಅತಿಯಾದ ಕೃಷಿ ವಿಸ್ತರಣ ಚಟುವಟಿಕೆ ಜನ ಸಾಂದ್ರತೆ ಹೆಚ್ಚಿ ಒತ್ತೊತ್ತಾಗಿ ಹಂಚಲಾದ ಭಿನ್ನ ಭಿನ್ನ ಧರ್ಮ ಜಾತಿಗಳವರ ಭೂಮಿಗಳು, ಒತ್ತೊತ್ತಾಗಿ ಬೆಳೆದ ಗ್ರಾಮಗಳು ಭಿನ್ನ ಭಿನ್ನ ಆಡಳಿತ ವಿಭಾಗಗಳಿಗೆ ಸೇರಿದ ಗ್ರಾಮಗಳ ಹೊಲ ಮೇರೆಗಳಲ್ಲಿ ಸ್ಪಷ್ಟತೆ ಇಲ್ಲದಿರುವುದು, ಒತ್ತುವರಿ, ಆಕ್ರಮಣಶೀಲತೆ, ದುರಾಸೆ ಎಲ್ಲವೂ ಸೇರಿಕೊಂಡಿರುತ್ತದೆ. ಇವು ವ್ಯಕ್ತಿ ವ್ಯಕ್ತಿಗಳ ನಡುವೆ, ಸಂಸ್ಥೆಗಳ ನಡುವೆ, ಸೀಮೆಗಳ, ಗ್ರಾಮಗಳ ನಡುವೆ ಅಸಮಾಧಾನಕ್ಕೆ ಎಡೆಕೊಟ್ಟು ಕಾಳಗಗಳಾಗಿ ವ್ಯಕ್ತಿಗಳ ಸಾವಿಗೂ ಕಾರಣವಾಗಿರುವುದುಂಟು.[೧೧೦] ಕೆಲವು ಬಾರಿ ಇವು ಗಡಿಗಳನ್ನು ಪುನಃ ಸ್ಪಷ್ಟ ಪಡಿಸಿಕೊಳ್ಳುವುದರಲ್ಲಿ ಮುಕ್ತಾಯವಾಗುತ್ತವೆ. ಸ್ಥಳೀಯ ಊರ ಸಭೆಗಳು, ಚೌಗಾವೆಯವರು ಸೇರಿ ಕೆಲವು ತೀರ್ಮಾನ ತೆಗೆದುಕೊಂಡು, ಅಳತೆಗಳನ್ನು, ಮೇರೆಗಳನ್ನು ದಾಖಲೆಗಳನ್ನು ಪುನರ್ ಪರಿಶೀಲಿಸಿ ನ್ಯಾಯ ತೀರ್ಮಾನ ತೆಗೆದುಕೊಳ್ಳುತ್ತಿದ್ದರು.

ಈ ಗಡಿ ಕಲ್ಲುಗಳನ್ನು ದಾನ ಪಡೆದವರ ಧರ್ಮಕ್ಕೆ ತಕ್ಕಂತೆ ಅವರ ಲಾಂಚನಗಳನ್ನು ಗುರುತಿಸಿ, ಇಲ್ಲವೆ ಕೊರೆಸಿ ನೆಡಿಸಲಾಗುತ್ತಿತ್ತು. ಲಿಂಗಮುದ್ರೆಕಲ್ಲು, ವಾಮನ ಮುದ್ರೆಕಲ್ಲು, ಶಂಖ ಚಕ್ರದ ಕಲ್ಲು ಮುಕ್ಕೊಡೆ ಕಲ್ಲು ಇತ್ಯಾದಿಯಾಗಿ ಶೈವ ವೈಷ್ಣವ, ಜೈನ ಧರ್ಮಗಳನ್ನು ಸೂಚಿಸುವ ಚಿನ್ಹೆಗಳನ್ನು ಇವು ಒಳಗೊಂಡಿರುತ್ತವೆ. ಇವುಗಳನ್ನು ಕೀಳುವುದಾಗಲಿ ಒಡೆಯುವುದಾಗಲಿ ಪಾಪ ಹಾಗೂ ಶಿಕ್ಷಾರ್ಹ ಅಪರಾಧವೆಂದು ಕಾನೂನು ಮಾಡಲಾಗಿತ್ತು.[೧೧೧]

ಕಣಕಟ್ಟೆಯ ಕಮತೇಶ್ವರ ದೇವಾಲಯದ ಭೂಮಿಗೆ ಸಂಬಂಧಿಸಿದಂತೆ 'ಹೆಚ್ಚು ಕುಂದುಂಟೆಂದು' ಅಲ್ಲಿನ ಸ್ಥಾನಿಕರಿಗೂ ಮಹಾಜನರಿಗೂ ವಿವಾದನಡೆದಾಗ ಮಹಾವಡ್ಡವ್ಯವಹಾರಿ ಪೊಂನಚ್ಚಸೆಟ್ಟಿ,

ಹುಳಿಯೆರದ ನಾಡಪ್ರಭು, ಚವುಗಾವೆಯ ಗೌಡುಗಳು ಆವೂರ ಪ್ರಜೆಗಳು ನೆರದು ಆ ಸ್ಥಳವನ್ನು ನೋಡಿ ಅನಾದಿ ತೊಡಗಿ ದೇವದಾನವಲ್ಲ ಎಂದು ತಿಳಿದು ನೋಡಿ ಯಿದನ್ನು ವಿವಾದಿಸುವುದು ಮರ್ಯಾದೆಯಲ್ಲ ವೆಂದು ಬದ್ಧಿ ಹೇಳಿ ನ್ಯಾಯ ತೀರ್ಮಾನಿಸಿದ ಘಟನೆ.[೧೧೨] ಭೂಸಂಬಂಧಿ ವಿಚಾರಗಳಿಗೆ ನೀಡುತ್ತಿದ್ದ ಪ್ರಾಮುಖ್ಯತೆ ಕಾಳಜಿಗಳನ್ನು ವ್ಯಕ್ತಪಡಿಸುತ್ತದೆ.

## ೩.೨. ಜಲ ಸಂಪನ್ಮೂಲ-ಅಭಿವೃದ್ಧಿ ವಿತರಣೆ

ನೀರಿನೊಂದಿಗಿನ ಮಾನವನ ಸಂಬಂಧ ವಿಶಿಷ್ಟವಾದದ್ದು. ನೀರು ಅವನ ಬದುಕಿನಲ್ಲಿ ಕೇವಲ ಅವಶ್ಯಕ ದ್ರವ್ಯವಾಗಿ ಉಳಿಯಲಿಲ್ಲ. ಅದು ಅವನ ಭಾವ ಪ್ರಪಂಚದಲ್ಲಿ ವಿಶಿಷ್ಟವಾದ ಸ್ಥಾನ ಪಡೆಯಿತು. ದೈವತ್ವಕ್ಕೇರಿತು. ಸಾಮಾಜಿಕ, ಆರ್ಥಿಕ, ಧಾರ್ಮಿಕ ಸಾಂಸ್ಕೃತಿಕ ವಲಯದಲ್ಲಿ ಮಹತ್ವದ ಸ್ಥಾನ ಪಡೆಯಿತು.

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಗ್ರಾಮಗಳು ತಮ್ಮ ಮುಖ್ಯ ಆದಾಯದ ಕೃಷಿಯ ಅಭಿವೃದ್ಧಿಯ ದೃಷ್ಟಿಯಿಂದ ಕೆರೆ, ಕಟ್ಟೆ, ಬಾವಿ ಕಾಲುವೆ ಅಣೆಕಟ್ಟುಗಳ ನಿರ್ಮಾಣಕಾರ್ಯಕ್ಕೆ ಸ್ವಯಂ ಪ್ರೇರಣೆಯಿಂದ ಮುಂದಾಗುತ್ತಿದ್ದವು. ಮತ್ತು ಉತ್ತಮವಾದ ವ್ಯವಸ್ಥಿತವಾದ ನಿರ್ಮಾಣ ನಿರ್ವಹಣೆ, ನೀರಿನ ಹಂಚಿಕೆಯಿಂದ ಶಾಂತಿಯುತವಾದ ಸಹಬಾಳ್ವೆಗೆ ಅವಕಾಶ ಮಾಡಿಕೊಟ್ಟಿದ್ದವು. ಸಮುದಾಯದ ಹಿತದೃಷ್ಟಿಯಿಂದ ಧಾರ್ಮಿಕ ಪ್ರಜ್ಞೆಯಿಂದ ಇವುಗಳ ನಿರ್ಮಾಣ, ನಿರ್ವಹಣೆಯನ್ನು ಶ್ರದ್ಧೆಯಿಂದ ಕೈಗೊಳ್ಳಲಾಗುತ್ತಿತ್ತು. ಅದೊಂದು ಸಾಮಾಜಿಕ ಜವಾಬ್ದಾರಿಯಾಗಿತ್ತು. ನಿರ್ಮಾತೃವಿನ ಧರ್ಮ ಪ್ರಜ್ಞೆ ಯೊಂದಿಗೆ ಅವನಿಗೆ ನೀಡಲಾಗುತ್ತಿದ್ದ ಅನೇಕ ದಾನ ದತ್ತಿಗಳು ಉಂಬಳಿಗಳು, ತೆರಿಗೆ ವಿನಾಯಿತಿಗಳು ಇಂತಹ ಕೆಲಸಗಳಲ್ಲಿ ತೊಡಗಲು ಸ್ಫೂರ್ತಿಯನ್ನು ನೀಡುತ್ತಿದ್ದವು.

ಹಿಂದೆ ಪ್ರತಿಯೊಂದು ಗ್ರಾಮವೂ ತನ್ನ ನೀರಿನ ಅವಶ್ಯಕತೆಯನ್ನು ಪೂರೈಸಿಕೊಳ್ಳುವ ಸಾಮರ್ಥ್ಯ ಪಡೆದಿತ್ತು ಎಂದರೆ ಆಶ್ಚರ್ಯಪಡಬೇಕಾಗಿಲ್ಲ. ಪ್ರಸ್ತುತ ಅಧ್ಯಯನದ ತಾಲ್ಲೂಕು ಕೇಂದ್ರ ಅರಸೀಕೆರೆಗೆ ೨೮ ಕಿ.ಮೀ. ದೂರದಲ್ಲಿ ತಿಮ್ಮನ ಹಳ್ಳಿಯ ಹತ್ತಿರ ವೇದಾವತಿ ನದಿಗೆ ಹಿರೇಕಟ್ಟೆ ವಡ್ಡು ಎನ್ನುವ ಕಟ್ಟೆ ಕಟ್ಟಲಾಗಿದೆ. ಇದನ್ನು ಬಿಟ್ಟರೆ ಇಲ್ಲಿ ಮಳೆ ನೀರನ್ನೇ ಅವಲಂಬಿಸಿದ್ದು, ಬೆಟ್ಟಗುಡ್ಡಗಳ ಮೇಲೆ ಬಿದ್ದ ನೀರನ್ನು ಸಂಗ್ರಹಿಸಲು ಕೆರೆ ಕಟ್ಟೆ ಭಾವಿಗಳನ್ನು ಅಸಂಖ್ಯವಾಗಿ ನಿರ್ಮಿಸಿದ್ದಾರೆ. ಇಲ್ಲಿನ ಶಾಸನಗಳಲ್ಲಿ ಸುಮಾರು ೧೧೫ಕ್ಕೂ ಹೆಚ್ಚು ಕೆರೆಗಳೂ ೩೦ಕ್ಕೂ ಹೆಚ್ಚು ಘಟ್ಟ, ಹಳ್ಳ, ಕೊಳಗಳು ಉಲ್ಲೇಖಗೊಂಡಿವೆ. ಅನೇಕ ದೊಡ್ಡ ಕೆರೆಗಳು ಇಂದಿಗೂ ಉಳಿದುಕೊಂಡು ಬಂದಿದ್ದು ತೋಟದ ಬಾವಿಗಳು ಊರೊಳಗಿನ ನೆಲ ಬಾವಿ ಸೇದುವ ಬಾವಿಗಳು, ಕಲ್ಯಾಣಿಗಳು ಪ್ರತಿ ಹಳ್ಳಿಯಲ್ಲೂ ಕಂಡುಬರುತ್ತವೆ. ಇಂದು ಇವೆಲ್ಲವೂ ಬಳಸಲು ಯೋಗ್ಯವಾಗಿಲ್ಲದೆ ಹಾಳಾಗಿರಬಹುದಾದರೂ ಹಿಂದೆ ಗ್ರಾಮಗಳು ಹೇಗೆ ಸ್ವಯಂ ನೀರಾವರಿ ವ್ಯವಸ್ಥೆ ಮಾಡಿಕೊಂಡಿದ್ದವೆಂಬುದನ್ನು ಅರಿಯಲು ಸಹಾಯಕವಾಗಿವೆ.

ಚಲುವನಹಳ್ಳಿ, ಅರಕೆರೆ, ನೇರಲಿಗೆ, ಮಾವಿನಕೆರೆ, ಕಲ್ಗುಂಡಿ ಚಲ್ಲಾಪುರ ಕೆಲ್ಲಂಗೆರೆ ಗಂಡಸಿ ಕಣೆಕಟ್ಟೆ ಸೋಮಶೆಟ್ಟಿ ಹಳ್ಳಿಗಳಲ್ಲಿ ಗಂಗರ ಕಾಲದ ಶಾಸನಗಳು ದೊರಕಿದ್ದು ಹೊಯ್ಸಳರ ಪೂರ್ವದಲ್ಲೇ ಈ ಪ್ರದೇಶಗಳಲ್ಲಿ ಕೆರೆಕಟ್ಟೆಗಳ ನಿರ್ಮಾಣವಾಗಿದ್ದು ಕೃಷಿಗೆ ಚಾಲನೆ ದೊರಕಿತ್ತು ಎಂಬುದು ಸ್ಪಷ್ಟವಾಗುತ್ತದೆ. ಮುಂದೆ ವಿನಯಾದಿತ್ಯ ಮತ್ತು ಎರೆಯಂಗರ ಕಾಲದ ಶಾಸನಗಳ ದಾನಗಳನ್ನು ಹೇಳುವಾಗ ಹೊಸದಾಗಿ ನಿರ್ಮಾಣಗೊಂಡ ಕೆರೆಗಳೊಂದಿಗೆ ಅನೇಕ ಹಳೆಯ ಕೆರೆಕಟ್ಟೆಗಳ ಉಲ್ಲೇಖ ಮಾಡುತ್ತವೆ.[೧೧೩] ವಿನಯಾದಿತ್ಯನಿಂದ ಪ್ರಾರಂಭಿಸಿ ಕೆರೆ ನಿರ್ಮಾಣ ಸಂಖ್ಯೆ ಹೆಚ್ಚುತ್ತಾ ಹೋಗಿ ಇಮ್ಮಡಿ ವೀರಬಲ್ಲಾಳನ ಕಾಲದಲ್ಲಿ ಈ ಪ್ರದೇಶದಲ್ಲಿ ಅದು ಗರಿಷ್ಠ ಸಂಖ್ಯೆಯನ್ನು ತಲುಪಿತು. ಇಮ್ಮಡಿ ನರಸಿಂಹನ ನಂತರದಲ್ಲಿ ಸ್ವಲ್ಪ ಕಡಿಮೆಯಾಗಿ ಹಳೆಯ ಕೆರೆಗಳ ನಿರ್ವಹಣೆಯ ಕಡೆಗೆ ಹೆಚ್ಚಿನ ಗಮನ ನೀಡಿರುವುದು ಕಂಡುಬರುತ್ತದೆ. ವಿಜಯನಗರದ ಅರಸರ ಕಾಲದಲ್ಲಿ ಮತ್ತೆ ಕೆರೆ ನಿರ್ಮಾಣ ನಿರ್ವಹಣೆಗೆ ಹೆಚ್ಚಿನ ಚಾಲನೆ ದೊರೆತಂತೆ ಕಂಡುಬರುತ್ತದೆ. ಸ್ಥಳೀಯ ಪಾಳೇಗಾರರು ಹೊಸಕೆರೆ ಕಟ್ಟುವುದಿರಲಿ ಇರುವ ಎಲ್ಲಾ ಕೆರೆಗಳ ನಿರ್ವಹಣೆ ಮಾಡಿಕೊಂಡು ಹೋದರೆ ಸಾಕಿತ್ತು. ಕೆಲವು ಊರುಗಳಲ್ಲಿ ನಾಲ್ಕು ಐದು ಕೆರೆಗಳಿದ್ದವು.[೧೧೪] ಒಟ್ಟಿನಲ್ಲಿ ೧೧ ರಿಂದ ೧೬ನೇ ಶತಮಾನದಲ್ಲಿ ನಿರ್ಮಾಣವಾದ ಕೆಲವು ಪ್ರಮುಖ ಕೆರೆಗಳು ಈಗಲೂ ಅನೇಕ ಹೆಕ್ಟೇರ್ ಭೂಮಿಗೆ ನೀರುಣಿಸುತ್ತಿರುವುದು ಅವುಗಳ ನಿರ್ವಹಣಾ ಕಾರ್ಯ ಕಾಲ ಕಾಲಕ್ಕೆ ನಡೆದುಕೊಂಡು ಬಂದಿತ್ತು ಎಂಬುದನ್ನು ಸೂಚಿಸುತ್ತದೆ.

### ೩.೨.೧ ಕೆರೆ ಕಟ್ಟೆ ಬಾವಿಗಳ ನಿರ್ಮಾಣ ಕಾರ್ಯ ಮತ್ತು ತಂತ್ರಜ್ಞಾನ

**ಕೆರೆ ಕಾಮಗಾರಿ ಮತ್ತು ಕೆರೆ ಕೊಡಗಿಗಳು :** ಕೆರೆಯೊಂದನ್ನು ನಿರ್ಮಿಸಬೇಕೆಂಬ ವಿಚಾರ ಬಂದಾಗ ಆ ಕಾರ್ಯಕ್ಕೆ ಅನುಭವಿಗಳನ್ನು ತೊಡಗಿಸಲಾಗುತ್ತಿತ್ತು. ಅವರು ಭೌಗೋಳಿಕ ಪರಿಸ್ಥಿತಿಯನ್ನು ಜಲಾನಯನ ಪ್ರದೇಶಗಳನ್ನು ಅಧ್ಯಯನ ಮಾಡಿ ಸೂಕ್ತ ಭೂಮಿಯನ್ನು ಆಯ್ಕೆ ಮಾಡುತ್ತಿದ್ದರು. ತಂತ್ರಜ್ಞರು ಕೂಪದರ್ಶಕರು ಕೆರೆಗೆ ಹರಿದು ಬರುವ ನೀರಿನ ಪ್ರಮಾಣ ಜಲಾನಯನ ಪ್ರದೇಶಗಳನ್ನೆಲ್ಲ ಗಮನದಲ್ಲಿಟ್ಟುಕೊಂಡು ಹೇಗೆ ಕೆರೆ ನಿರ್ಮಿಸಬೇಕೆಂದು, ಬಾವಿಗಳನ್ನು ನಿರ್ಮಿಸುವಾಗ ಜಲದ ಕಿಂಡಿಗಳನ್ನು ಹೇಗೆ ಕಂಡುಹಿಡಿಯಬೇಕೆಂದು ಲೋಕೋಪಕಾರದಲ್ಲಿನ 'ಉದಕಾರ್ಗಳ' ಎಂಬ ಅಧ್ಯಾಯ ಬಹಳ ಉಪಯುಕ್ತ ಮಾಹಿತಿಯನ್ನು ನೀಡುತ್ತದೆ. ಪೊರುಮಾಮಿಲ್ಲ ಶಾಸನವು[೧೧೫] ಕೆರೆ ನಿರ್ಮಾಣಕ್ಕೆ ಅವಶ್ಯಕವಾದ ಮಾಹಿತಿ ನೀಡಿದೆ. ಪರಾಶರರ ಕೃಷಿ ಸೂಕ್ತಿ, ಕಾಟಿಲ್ಯನ ಅರ್ಥಶಾಸ್ತ್ರ, ವಿಜ್ಞಾನೇಶ್ವರನ ಮಿತಾಕ್ಷರ, ನಾಗವರ್ಮನ ಅಭಿಧಾನ ವಸ್ತುಕೋಶ ಮಂಗರಾಜನ ಜಲಸಂಗ್ರಹಣೆ, ಕೆರೆ ನಿರ್ಮಾಣ ನಿರ್ವಹಣೆ, ಮಳೆ ಇತ್ಯಾದಿ ವಿಚಾರಗಳನ್ನು ಹೇಳಿವೆ. ಕೆರೆ ನಿರ್ಮಿಸುವ ಜವಾಬ್ದಾರಿ ಹೊರುತ್ತಿದ್ದ ತಂತ್ರಜ್ಞರಿಗೆ ಇವುಗಳ ವಿಚಾರ ಚೆನ್ನಾಗಿ ತಿಳಿದಿರಲೇ ಬೇಕಾಗಿತ್ತು. ರಾಮಾಯಣದಿಂದ ತಿಳಿದುಬರುವಂತೆ ಸುಗ್ರೀವನ ರಾಜ್ಯದಲ್ಲಿ ನಳ ಸೇತುವೆ ನಿರ್ಮಾಣದ ವಿಶೇಷ ತಂತ್ರಜ್ಞಾನವನ್ನು ಬಲ್ಲವನಾಗಿದ್ದ.

ಕಾಟಿಕೆರೆಯ ಒಂದು ಶಾಸನವು[೧೧೬] ಎರೆಯಂಗ ಮಹಾರಾಜನ ಪಟ್ಟದರಸಿ ಮಹಾದೇವಿಯ ಅಧಿಕಾರಿಗಳಾದ ಕಾಡುವಿಟ್ಟೆಯು ಸೋಚಿದೆಯಬ್ಬೆಯು ರಾಮಾನ್ಮತದಿಂದ ನಳಂ ಸೇತುವಂ ಕಟ್ಟುವಂತೆ' ರಾಣಿಯ ಆಜ್ಞೆಯಂತೆ ಕೆರೆಯನ್ನು ಕಟ್ಟಿಸಿದರು. ಎಂದಿದೆ. ಇಲ್ಲಿ ಸೊಚಿದೆಯಬ್ಬೆ ಎಂಬ ಸ್ತ್ರೀಯ ಹೆಸರು ಉಲ್ಲೇಖಗೊಂಡಿರುವುದು ವಿಶೇಷವಾಗಿದೆ. ಅರಸೀಕೆರೆಯನ್ನು ಕಟ್ಟಿ ತೂಬನಿಟ್ಟವರು ಸರಸ್ವತಿ ಗಣದಾಸಿಗಳೆಂದು ಪ್ರಸಿದ್ಧರಾದ ಕೇತೋಜ ಮತ್ತು ಪುಲಿಗೆರೆಯ ಏಚೋಜರು. ಈ ಓಜರು ಈ ಕಾರ್ಯದಲ್ಲಿ ಪರಿಣತರೆಂಬುದರಲ್ಲಿ ಅನುಮಾನವಿಲ್ಲ. ಇಂದಿಗೂ ಈ ಕೆರೆ ಸುಭದ್ರವಾಗಿದೆ.[೧೧೭]

ಕಾಳಾಮುಖರಲ್ಲಿ ದೇವಸ್ಥಾನಗಳನ್ನು ಕೆರೆಗಳನ್ನು ನಿರ್ಮಿಸುವ 'ವಾಸ್ತು'ವನ್ನು ಬಲ್ಲ ಶಿಲ್ಪಿಗಳೂ ಕೆಲವರು ಇದ್ದಂತೆ ತೋರುತ್ತದೆ. ಧರ್ಮರಾಸಿ ಎಂಬ ಕಾಳಾಮುಖ ಪಂಡಿತನನ್ನು ಕುರಾದಹಳ್ಳಿ ಹೊಯ್ಸಳ ವಿನಯಾದಿತ್ಯನ ಶಾಸನ[೧೧೮] ವಿಶೇಷವಾಗಿ ವರ್ಣಿಸಿದೆ. "...ಕೆರೆಯಂ ಕಟ್ಟಿದ ಪೆಂಪು... ದೇಗುಲಮ ನೆತ್ತಿದ ಪೆಂಪು ಸಮಸ್ತ ಧಾತ್ರಿಯೊಳ್ಪೆರರನದೇಕೆ ಪೇಳ್ವೊಗರ್ದಪ್ಪೆ ಪೊಗಳಿಂ ಸಲೆ ಧರ್ಮರಾಸಿಯಂ" ಈ ವರ್ಣನೆಯಿಂದ ಗುರುವೂ ತಪಸ್ವಿಯೂ ಆಗಿದ್ದ ಈತ ಕೆರೆ ಮತ್ತು ದೇವಾಲಯ ನಿರ್ಮಾಣದ ತಂತ್ರಜ್ಞನೂ ಆಗಿದ್ದನೆಂಬುದು ತಿಳಿದುಬರುತ್ತದೆ. ವಚನಕಾರ ಸಿದ್ಧರಾಮನು ದೇವಾಲಯ ಕೆರೆ ಕಟ್ಟುವುದರಲ್ಲಿ ಪ್ರಸಿದ್ಧನಾಗಿದ್ದನು.[೧೧೯]

ಕೆರೆಯ ಅಂಗಳದಲ್ಲಿ ಅಗೆದ ಮಣ್ಣನ್ನು ಏರಿಯ ನಿರ್ಮಾಣಕ್ಕೆ ಬಳಸಿಕೊಂಡು, ಗಟ್ಟಿಯಾದ ಏರಿಯನ್ನು ನಿರ್ಮಿಸಿ ಅದರ ಒಳಮುಖದಲ್ಲಿ ಕಲ್ಲುವಾಡವನ್ನು ಕಟ್ಟುವುದು, ತೂಬು ಕೂರಿಸುವುದು ಕೋಡಿ ತಿದ್ದುವುದು ಕಾಲುವೆಗಳನ್ನು ನಿರ್ಮಿಸುವುದು ತಾಂತ್ರಿಕ ಪರಿಣತಿಯನ್ನು ಬೇಡುತ್ತದೆ. ಈ ಪ್ರತಿಯೊಂದು ಕೆಲಸಕ್ಕೂ ಆಯಾಕಾರ್ಯದ ಪರಿಣತರನ್ನು ಮುಖ್ಯತಂತ್ರಜ್ಞ ನಿಯಮಿಸುತ್ತಿದ್ದನಾದ್ದರಿಂದ ಕೆರೆ ನಿರ್ಮಾಣದ ಕಾರ್ಯವನ್ನು ಅವನಿಗೆ ನಿಮಾತೃಗಳು ವಹಿಸಿಕೊಡುತ್ತಿದ್ದರು. ಧರ್ಮದಾಸಿ ಎಂಬುವವನಿಗೆ ಅರಸೀಕೆರೆಯ ಸಮಸ್ತ ನಖರಗಳು, ಸಾವಿರೊಕ್ಕಲು ಈ ಕೆಲಸವನ್ನು ನಿಯೋಗಿಸಿರುವುದು ಕಂಡುಬರುತ್ತದೆ.[೧೨೦]

**ಕೆರೆಕೊಡಗಿಗಳು :** ಗೀಜಿ ಹಳ್ಳಿಯ ಒಂದು ಶಾಸನದಲ್ಲಿ[೧೨೧] ಕೆರೆ ನಿರ್ಮಾಣ ಕಾಮಗಾರಿಯಲ್ಲಿ ಮತ್ತು ಅದರ ನಿರ್ವಹಣೆಗೆ ಸಹಾಯಕರಾಗುವವರೆಲ್ಲರಿಗೂ ನಿರ್ಮಾತೃ ತನಗೆ ದೊರೆತ ಕೆರೆ ಕೊಡಗಿ ಭೂಮಿಯನ್ನು ಹಂಚಿಕೊಟ್ಟಿದ್ದಾನೆ. ಅವರು ಬ್ರಹ್ಮಚಾರಿ ಚಾಮಣ ಭಟ್ಟರಿಗೆ ಒಂದು ಸಲಗೆ, ಐದು ಕೊಳಗ ಭೂಮಿ ಉಳಿದವರೆಲ್ಲರಿಗೂ ಐದು ಕೊಳಗ ಭೂಮಿಯಂತೆ ಹಂಚಿಕೊಟ್ಟಿದ್ದಾನೆ. ಅವರು ಕೇಶವ ಭಟ್ಟನ ಮಾಚೆಯ್ಯ, ನೀರಯ್ಯ (ನೀರುಗಂಟಿ) ಬಲದೇವ ಕೊಂಗಳಿ ನಾಡೈಯ್ಯ, ಚಿಮ್ಮಯ್ಯಂ ಮುಂತಾದವರಿಗೆ ನೀಡಲಾಗಿದೆ. ಕಲುಕುಟಿಗ ಮಾದೋಜನಿಗೆ ಐದು ಕೊಳಗವಾದರೆ ಕಲುಕುಟಿಗ ಮಾಚೋಜನಿಗೆ ಹತ್ತು ಕೊಳಗ ನೀಡಲಾಗಿದೆ. ಈ ವ್ಯತ್ಯಾಸ ಬಹುಷಃ ಅವರ ನೈಪುಣ್ಯತೆ ಮತ್ತು

ಕಾರ್ಯದಕ್ಷತೆ ಮತ್ತು ಕೈಗೊಂಡ ಕಾಮಗಾರಿ ಯಾವುದು ಎಂಬುದರ ಮೇಲೆ ಆಧರಿಸಿರುವಂತೆ ಭಾವಿಸಬಹುದು. ಕೋಡಿ ಕಟ್ಟಿಸಿದವರಿಗೆ ಒಂದು ಸಲಗೆ ಹತ್ತು ಕೊಳಗ ಗದ್ದೆ ಭೂಮಿಯಾದರೆ ಕೆರೆ ಕಟ್ಟಿದ ಬೋಳೋಜನ ಮಗ ಮಂಡಲಾಚಾರಿಗೆ ಇನ್ನೂರು ಕಂಬ ಬೆದ್ದಲೆ ನೀಡಲಾಗಿದೆ.[೨೨] ತೂಬನ್ನು ಮಾಡಿಸಿದವರಿಗೆ, ಕೋಡಿ ತಿದ್ದಿಸಿದವರಿಗೆ ಪ್ರತ್ಯೇಕವಾಗಿ ಕೊಡಗಿಗಳನ್ನು ನೀಡಲಾಗಿದೆ.[೨೩] ವಡಗೆರೆಹಳ್ಳಿಯಲ್ಲಿ ಕೆರೆಯನ್ನು ಕಟ್ಟಿಸಿ ತಟಾಕ ಪ್ರತಿಷ್ಠೆ ಮಾಡಿದ ಕೂಸದಲ್ಲಯ್ಯನಿಗೆ ಸುತ್ತಮುತ್ತಲ ಹಳ್ಳಿಯ ಅನೇಕ ಗೌಡರು ನೆರೆದು ಕೆರೆಕೊಡಗಿ' ಕೊಟ್ಟಿದ್ದಾರೆ. ಒಂದು ಕೆರೆಯ ನೀರಿನ ಉಪಯೋಗ ಅನೇಕ ಹಳ್ಳಿಗಳಿಗಾದಾಗ ಬಹುಷ ಈ ರೀತಿ ಆ ಹಳ್ಳಿಗಳವರು ಒಮ್ಮತದಿಂದ ಕೆರೆ ಕೊಡಗಿ ಬಿಡುತ್ತಿದ್ದರು ಎನ್ನಬಹುದು. ಇಂಥದ್ದೇ ಉದಾಹರಣೆ ಗೀಜಿ ಹಳ್ಳಿಯ ಮತ್ತೊಂದು ಶಾಸನದಲ್ಲಿದೆ [೨೪] ಕೆರೆ ಕೊಡಗಿಯ ಅನೇಕ ಶಾಸನಗಳ ಪಟ್ಟಿಯನ್ನು ಕೊಡುತ್ತಾ ಹೋಗಬಹುದು.[೨೫] ಕೆಲವು ಶಾಸನಗಳಲ್ಲಿ ಬಿತ್ತು ವಟ್ಟವಾಗಿ ಭೂಮಿ ನೀಡಿದ ವಿವರವಿದೆ.[೨೬]

**ಕೆರೆಗಳ ರೂಪರಚನೆ** : ಕೆರೆಗಳನ್ನು ಶಾಸನಗಳು ಕೆರೆ, ಕಟ್ಟೆ ಅಥವಾ ಘಟ್ಟ ತಟಾಕ ಸಮುದ್ರ ಮುಂತಾಗಿ ಕರೆದಿವೆ.[೨೭] ಹಿರಿಯಕೆರೆ (ಅಣಿಕ್ಕೂ ಹೆಚ್ಚು ಶಾಸನಗಳಲ್ಲಿ ಉಲ್ಲೇಖವಾಗಿದೆ) ಚಿಕ್ಕಕೆರೆ, ಕನ್ನೆಗೆರೆ[೨೮] ಎಂಬ ಪದಗಳೂ ಕಂಡುಬರುತ್ತವೆ. ಕೆರೆಗಳ ರೂಪ ರಚನೆಯು ಭೌಗೋಳಿಕ ಪರಿಸ್ಥಿತಿ ಮತ್ತು ನಿರ್ಮಾಣವಾಗಬೇಕಾದ ಸ್ಥಳದ ಮೇಲೆ ಅವಲಂಬಿಸಿರುತ್ತದೆ. ಮಳೆಗಾಲದಲ್ಲಿ ದೊರೆಯುವ ನೀರಿನ ಮೊತ್ತವನ್ನು ಗಮನದಲ್ಲಿಟ್ಟು ಮಳೆ ನೀರಿನಿಂದ ಒಡೆದು ಹೋಗದಂತೆ ಏರಿಯ ಆಕಾರವನ್ನು ನಿರ್ಮಿಸಲಾಗುತ್ತಿತ್ತು. ಕೋಟೆಯ ಹೊರಗೆ ಅಗಳಿಗೆ ನೀರುಹರಿಸಲು ಸುಲಭವಾಗುವಂತೆ ಕೆರೆಗಳನ್ನು ನಿರ್ಮಿಸಲಾಗಿದೆ. (ಕೋಳಿಗುಂದ, ಕಿತ್ತನ ಕೆರೆ) ಮತ್ತೆ ಕೆಲವು ಗ್ರಾಮಗಳಲ್ಲಿ ಊರ ಮುಂಭಾಗದಲ್ಲಿ ವಿಶಾಲವಾದ ತೋಪು ಕಲ್ಯಾಣಿಗಳಿದ್ದು ಅವುಗಳ ಬದಿಗೆ ಕೆರೆಗಳಿವೆ. ಮತ್ತೆ ಕೆಲವು ಕಡೆ ಕೋಟೆ ಗೋಡೆಗೆ ಹೊಂದಿಕೊಂಡು ಗೋಡೆ ಇಲ್ಲದ ಭಾಗದಲ್ಲಿ ಅದೇ ರಕ್ಷಾಕೋಟೆಗಳಂತೆ, ಅರ್ಧವರ್ತುಲಾಕಾರದಲ್ಲಿ ಸುತ್ತುವರೆದಿವೆ. ಮತ್ತೆ ಕೆಲವು ಕಡೆ 'U' ಮಾದರಿಯಲ್ಲಿ ಬಳುಕಿದ ಕೆರೆಗಳಿವೆ. (ನೀರ್ಗುಂದ ಶಂಕರನಹಳ್ಳಿ) ಮತ್ತೆ ಕೆಲವು, ಗ್ರಾಮದಿಂದ ತುಸು ದೂರವಾದರೂ ಜಲಾನಯನ ಪ್ರದೇಶವನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಸ್ತಾರವಾದ ಅಂಗಳದೊಂದಿಗೆ ರಚನೆಗೊಂಡಿವೆ.

**ಕುಡಿಯುವ ನೀರಿನ ವ್ಯವಸ್ಥೆ** : ಕೆರೆಗಳ ಸಮೀಪದಲ್ಲೇ ನೆರಳೀಯುವ ತೋಪುಗಳು, ಕಲ್ಯಾಣಿಗಳು ಕಂಡುಬರುತ್ತವೆ. ಅನೇಕ ಶಾಸನಗಳು ಕೊಳಗಳನ್ನು[೨೯] ಘಟ್ಟಗಳನ್ನು[೩೦] ಉಲ್ಲೇಖಿಸುತ್ತವೆ. ಅಗ್ರಹಾರ ಗಳಲ್ಲಿ, ಮುಖ್ಯ ಆಡಳಿತ ಸ್ಥಳಗಳಾಗಿದ್ದ ಗ್ರಾಮಗಳಲ್ಲಿ ಈಗಲೂ ಒಂದೋ ಎರಡೋ ಕಲ್ಲು ಕಟ್ಟುವಾಡ ಸೋಪಾನಗಳುಳ್ಳ ಕೊಳಗಳನ್ನು ಕಾಣಬಹುದು. ಇದಲ್ಲದೆ ಗ್ರಾಮರಚನೆಯಲ್ಲಿ ಪ್ರತಿ ಕೇರಿಗೂ ಬಾವಿಗಳು

ಕಂಡುಬರುತ್ತವೆ. ಕೆಲವು ಅಗ್ರಹಾರಗಳಾಗಿದ್ದ ಗ್ರಾಮಗಳಲ್ಲಿ ಪ್ರತಿ ಮನೆಗೂ ಒಂದೊಂದು ಬಾವಿಗಳು ಕಂಡುಬರುತ್ತವೆ. ಕೆಲವು ದೊಡ್ಡ ಮನೆಗಳಲ್ಲಿ ಮನೆಯ ಒಳಗೂ ಬಾವಿಗಳಿದ್ದು ಇಂದಿಗೂ ಬಳಕೆಯಾಗುತ್ತಿವೆ. ಕೋಟೆಯ ಅಗಳಿಗೆ ಸಮೀಪವಾಗಿ ಹಿತ್ತಿಲು ಮತ್ತು ಭಾವಿಗಳ ನಿರ್ಮಾಣವಾಗಿರುತ್ತದೆ. ಕಾರಣ ಸದಾ ನೀರು ತುಂಬಿರುವ ಅಗಳಿನಿಂದಾಗಿ ಕೋಟೆಯ ಒಳಗಿನ ಈ ಬಾವಿಗಳಲ್ಲಿ ನೆಲಮಟ್ಟದಲ್ಲೇ ನೀರು ದೊರೆಯುತ್ತಿತ್ತೆಂಬುದು, ಅಂದಿನ ಜನರ ತಂತ್ರಜ್ಞಾನದ ಬಗೆಗೆ ಅಚ್ಚರಿ ಮೂಡಿಸುತ್ತದೆ. ಈಗ ಕೋಟೆಗಳು ಅಗಳುಗಳೂ ಮಾಯವಾಗಿ ಊರೊಳಗಿನ ಬಾವಿಗಳು ಬತ್ತಿರುವುದನ್ನು ಕಾಣಬಹುದು. ಕೆರೆಗಳು ಹೂಳು ತುಂಬಿ ಹಾಳಾಗಿರುವುದರಿಂದ ನೀರು ನಿಲ್ಲದೆ ಅಕ್ಕಪಕ್ಕದ ಕಲ್ಯಾಣಿಗಳೂ ಬತ್ತಿವೆ. ಹಾಗಾಗಿ ಕುಡಿಯುವ ನೀರಿನ ವ್ಯವಸ್ಥೆ ಕುಸಿದಿದೆ.

**ತೋಟ ಗದ್ದೆ ಬೆದ್ದಲು - ನೀರಾವರಿ ವ್ಯವಸ್ಥೆ :** ಬಾವಿಗಳು ಗ್ರಾಮೀಣರ ದಿನನಿತ್ಯದ ಚಟುವಟಿಕೆಗಳಿಗೆ ಕುಡಿಯುವ ನೀರಿಗೆ ಉತ್ತಮ ವ್ಯವಸ್ಥೆಗಳಾಗಿದ್ದಂತೆ, ತೋಟದ ಬೆಳೆಗೆ ಬಾವಿ, ಏತ ನೀರಾವರಿ ಹೆಚ್ಚು ಸೂಕ್ತವಾದ ಮತ್ತು ಪ್ರಚಲಿತವಾದ ವ್ಯವಸ್ಥೆಯಾಗಿತ್ತು. ಶೇಕಡ ೯೦ರಷ್ಟು ತೋಟಗಳಲ್ಲಿ ಒಂದು ಬಾವಿ ಇದ್ದೇ ಇರುತ್ತಿತ್ತು. ಎರಡು ಬಾವಿಗಳು ಇರುವ ತೋಟಗಳೂ ಉಂಟು. ಹೂವಿನ ಹಣ್ಣಿನ ತೋಟಗಳು, ಎಲೆ, ಅಡಿಕೆ ತೆಂಗು ಮಾವಿನ ಮರಗಳ ಗದ್ದೆ[೧೩೧] ತೋಟಗಳನ್ನು ಅನೇಕ ಶಾಸನಗಳು ಉಲ್ಲೇಖಿಸುತ್ತವೆ. ಗೀಜಿಹಳ್ಳಿಯ ಒಂದು ಶಾಸನ[೧೩೨] ಶಂಭು ಮೇಳೇಶ್ವರ ದೇವರ ಹೂದೋಟಕ್ಕಾಗಿ ೨೫ ಕಂಬ ಭೂಮಿಯನ್ನು ಬಿಟ್ಟಿದ್ದು ಆ ಹೂತೋಟವನ್ನು 'ಸಾಕುವಂತಾಗಿ' ಮಾಲಕಾರ ಬೂವನಿಗೆ ೪ ಕಂಬ ಭೂಮಿಯನ್ನು ನೀಡಲಾದುದನ್ನು ಹೇಳಿದೆ. ೧೦ ಕಂಬ ಭೂಮಿಯನ್ನು ಹೂವಿನ ತೋಟಕ್ಕೆ ಬಿಟ್ಟುದನ್ನು ಮತ್ತೊಂದು ಶಾಸನ ಹೇಳಿದೆ.[೧೩೩] ತಳಿರೂರಿನಲ್ಲಿ ಚೆನ್ನಕೇಶವ ದೇವರಿಗೆ ೪೦ ಕಂಬ ಹೂವಿನ ತೋಟ ಬಿಡಲಾಗಿತ್ತು.[೧೩೪] ಚಿಕ್ಕ ಗವುಡನೆಂಬುವವನು ಚಿಕ್ಕ ಕೆರೆಯ ನೀರನ್ನು ಬಳಸಿಕೊಂಡು ಒಂದು ಹೂವಿನ ತೋಟವನ್ನು ಬೆಳಸಿದ್ದನು.[೧೩೫] ದರ್ಮೇಶ್ವರ ದೇವರಿಗೆ ಬಲ್ಲಾಳೇಶ್ವರ ತೋಟವೆಂಬ ಹೆಸರಿನ ದೇವರ ತೋಟವೊಂದಿತ್ತು ಮತ್ತು ೫೦ ಕಂಬ ಭೂಮಿಯನ್ನು ಕಣಿಗನ ಕೆರೆಯ ನೀರನ್ನು ಬಳಸಿಕೊಂಡು ಒಂದು ಹೂವಿನ ತೋಟವನ್ನು ಬೆಳೆಸಲಾಗಿತ್ತು.[೧೩೬]

ವಿಳ್ಯೆಯದೆಲೆ ಅಡಿಕೆಗೆ ಅಪಾರ ಬೇಡಿಕೆ ಇದ್ದಕಾಲವಾದ್ದರಿಂದ ಶಾಸನಗಳಲ್ಲಿ ಎಲೆ ತೋಟಗಳ ಅಡಕೆ ತೋಟಗಳ ಉಲ್ಲೇಖ ಅವುಗಳ ಮಾರಾಟದ ಮೇಲಿನ ತೆರಿಗೆಯ ವಿವರಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಅನೇಕ ಖಾಸಗಿ ಎಲೆಯ ತೋಟಗಳಿದ್ದು ಅವುಗಳಲ್ಲಿ ಕೆಲವು ಗುಳಿಗಳನ್ನು ದೇವರಿಗೆ ಬಿಡುತ್ತಿದ್ದುದನ್ನು ಒಂದು ಶಾಸನ "ಕೇತಯ್ಯನ ಎಲೆಯ ತೋಟದೊಳಗೆ ದೇವರಿಗೆ ನಡೆವ ಎಲೆಯಗುಳಿ ಇನ್ನೂರು" ಎಂದು ಹೇಳಿದೆ.[೧೩೭] ಎಲೆತೋಟವನ್ನು ಪೂರ್ಣವಾಗಿ ದೇವರಿಗೆ ಬಿಟ್ಟುದನ್ನು ಶಾನೆಗೆರೆ ಶಾಸನ[೧೩೮] ಹೇಳಿದೆ. ಸೂಳೆಕೆರೆಯಲ್ಲಿ[೧೩೯] ಮೂಲಸ್ಥಾನ ದೇವರಿಗೆ ೪೦೦ ಅಡಿಕೆ ಮರಗಳನ್ನು ಬಿಡಲಾಗಿದೆ.

ಹಲಕೂರಿನಲ್ಲಿ ಕಲಿದೇವರಿಗೆ ದೇವರ ಮುಂದಣಕೆರೆಯ ಕೆಳಗೆ ತೋಟ ಸ್ಥಳವನ್ನು ೬೦೦ ಅಡಕೆಯ ಮರವನ್ನು ದಾನ ಬಿಡಲಾಗಿದೆ.[೧೪೦]

ಈ ತೋಟಗಳ ಕ್ರಯ ವಿಚಾರವನ್ನು ಹೇಳುವ ಶಾಸನಗಳಿಂದ ಅವುಗಳಿಗೆ ಉತ್ತಮ ಬೆಲೆಯಿರುತಿದ್ದು, ಅವುಗಳಿಗೇ ಪ್ರತ್ಯೇಕ ಅಳತೆ ಕೋಲುಗಳಿದ್ದುದನ್ನು ತಿಳಿಯಬಹುದು.[೧೪೧] ವಡ್ಡ ವ್ಯವಹಾರಿಯೊಬ್ಬ ಬೇರೆ ಬೇರೆ ವ್ಯಕ್ತಿಗಳಿಂದ ೧೫ ಕಂಬ ಅಡಿಕೆ ತೋಟವನ್ನು ೨೦ ಮತ್ತು ೨೧ ಕಂಬಗಳ ಮತ್ತೆರಡು ತೋಟಗಳನ್ನು ಅವುಗಳಿಗೆ ಸಂಬಂಧಿಸಿದ ಬಾವಿಗಳೊಂದಿಗೆ ಕ್ರಯಕ್ಕೆ ಕೊಂಡು ದೇವರಿಗೆ ಬಿಟ್ಟಿದ್ದಾನೆ.[೧೪೨] ಒಂದು ತೋಟಕ್ಕೆ ಸುಮಾರು ಎಷ್ಟು ಮರಗಳಿರುತ್ತಿದ್ದವು ಎಂಬುದನ್ನು ಒಂದು ಶಾಸನ ಹೇಳಿದೆ.[೧೪೩] ೩೪ ಕಂಬಗಳ ತೋಟದ ಸ್ಥಳ ಒಂದರಲ್ಲಿ ೫೦೦ ಮರಗಳೂ, ೪೦ ಕಂಬದ ತೋಟಸ್ಥಳ ಒಂದರಲ್ಲಿ ೬೦೦ ಮರಗಳೂ ಇರಲು ಸಾಧ್ಯವಿತ್ತು.

ತೋಟದ ತೆರಿಗೆ ತೋಟದ ಬೆಳೆಗಳ ಮೇಲಿನ ತೆರಿಗೆಯ ವಿವರಗಳನ್ನು[೧೪೪] ಗಮನಿಸಿದಾಗ ಮತ್ತು ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ತೋಟದ ನೀರಾವರಿ ವ್ಯವಸ್ಥೆಗೆ ಗಮನ ನೀಡಲಾಗಿದ್ದುದರಿಂದ ಈ ಪ್ರದೇಶ ಎಷ್ಟು ಸಂಪತ್ಭರಿತವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ನದಿ ನೀರಿಲ್ಲದ ಇಲ್ಲಿ ಕೆರೆ ಬಾವಿಗಳೇ ಸಂಪತ್ತಿನ ಮೂಲವಾಗಿದ್ದವೆಂದರೆ ಅತಿಶಯೋಕ್ತಿಯಲ್ಲ. ಇಂದಿಗೂ ತೆಂಗು, ಅಡಿಕೆ ಇಲ್ಲಿನ ಪ್ರಮುಖ ವಾಣಿಜ್ಯ ಬೆಳೆಯಾಗಿದೆ. ೨೦೦೦ ದ ಗಣತಿಯ ಪ್ರಕಾರ ಇಡೀ ಹಾಸನ ಜಿಲ್ಲೆಯಲ್ಲಿನ ಹಣ್ಣಿನ ಅತಿ ಹೆಚ್ಚು ಇಳುವರಿ ಅರಸೀಕೆರೆ ತಾಲ್ಲೂಕಿನದೆಂಬುದು ಗಮನಾರ್ಹವಿಚಾರ.[೧೪೫]

ನೀರಾವರಿ ಚೆನ್ನಾಗಿರುವ ಕೆರೆಗಳ ಮೊದಲೇರಿಯ ಗದ್ದೆಗಳಲ್ಲಿ ಬತ್ತ, ಕಬ್ಬು, ಬಾಳೆಯ ತೋಟಗಳು ವಿಪುಲವಾಗಿರುತ್ತಿದ್ದವು.[೧೪೬] ಕೆರೆಗಳಿಂದ ಸ್ವಲ್ಪ ದೂರವಾದ ನೀರಾವರಿ ಕಡಿಮೆ ಇರುವ ಭೂಮಿಯಲ್ಲಿ ಹೊಲಗಳನ್ನು ಮಾಡಿ ದ್ವಿದಳ ದಾನ್ಯಗಳು ಕಿರಾಣಿಯನ್ನು ಬೆಳೆಯುತ್ತಿದ್ದರು. ಒಟ್ಟಿನಲ್ಲಿ ಕೆರೆ ಕಟ್ಟೆ ಬಾವಿಗಳು ಒಂದು ಪ್ರದೇಶದ ಜನರ ಸುಖೀ ಜೀವನದಲ್ಲಿ, ಆರ್ಥಿಕ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರವಹಿಸುತ್ತವೆ.

### ೩.೨.೨. ಕೆರೆಗಳ ನಿರ್ಮಾಣ-ಪ್ರೇರಣೆ, ಸಂದರ್ಭ, ನಿರ್ಮಾತೃ, ನಾಮಕರಣ

ಪ್ರಮುಖವಾಗಿ ಧಾರ್ಮಿಕ ಮತ್ತು ಲೌಕಿಕ ಎರಡೂ ಪ್ರೇರಣೆಗಳು ಕೆರೆಗಳ ನಿರ್ಮಾಣಕ್ಕೆ ಸ್ಫೂರ್ತಿ ನೀಡಿರುವುದು ಕಂಡುಬರುತ್ತದೆ.

**ಅ. ಧಾರ್ಮಿಕ ಪ್ರೇರಣೆ**

**ಭೂತ ದಯೆ ಧರ್ಮೋಪಾರ್ಜನೆ :** ಸಕಲ ಜೀವ ಜಂತು, ಸಸ್ಯ ಸಂಕುಲಕ್ಕೆ ಅವಶ್ಯವಾದ ನೀರನ್ನು ಒದಗಿಸಿಕೊಡುವ ಬೂತದಯೆ, ನಾವು ಮಾಡುವ ದಾನ ಧರ್ಮಗಳು ಎಲ್ಲ ಜೀವ ಸಂಕುಲದ

ಉಪಯೋಗಕ್ಕೆ ಒದಗುವಂತದ್ದಾಗಬೇಕೆಂಬ ಪ್ರೇರಣೆ ಕೆರೆ, ಬಾವಿ, ನಿರ್ಮಾಣಕ್ಕೆ ಸ್ಫೂರ್ತಿ. ಕಲಿದೇವರ ತೊತ್ತು ಮಾದಗೌಡನ ಮಗ ಯಡವನಹಳ್ಳಿಯ ಕೇತಗೌಡನು ಸಮಸ್ತ ಜನಕಾಶ್ರಯವಾಗಿ ಕೆರೆಯನ್ನು ಕಟ್ಟಿಸುತ್ತಾನೆ.[೧೪೭] ಮಾರಜೀಯನೆಂಬ ಸ್ಥಾನಿಕಗುರು ಧರ್ಮೋಪಾರ್ಜನೆಯನ್ನು ನೆನೆದು ಕೆರೆಯನ್ನು ಕಟ್ಟಿಸಿದ್ದಾನೆ.[೧೪೮]

**ಪರೋಕ್ಷ ವಿನಯ ಪುಣ್ಯಪ್ರಾಪ್ತಿ :** ತಮ್ಮ ಪ್ರೀತಿಪಾತ್ರರಾದವರ ಶ್ರೇಯಸ್ಸಿಗಾಗಿ, ಪುಣ್ಯಪ್ರಾಪ್ತಿಗಾಗಿ ಕೆರೆಗಳನ್ನು ಕಟ್ಟಿಸಿರುವುದಕ್ಕೆ ಹೆಚ್ಚು ಉದಾಹರಣೆಗಳು ಸಿಕ್ಕುತ್ತವೆ. ಅಗಲಿದ ತಂದೆ ತಾಯಿಗಳ ಮೇಲಿನ ಭಕ್ತಿ ಪ್ರೇಮಗಳಿಂದ ಮಕ್ಕಳು ಅವರ ಹೆಸರಿನಲ್ಲಿ ಪರೋಕ್ಷ ವಿನಯಕ್ಕೆಂದು ಕೆರೆ ನಿರ್ಮಿಸಿದ್ದಾರೆ. ಅದರಿಂದ, ಮಡಿದವರ ಆತ್ಮಕ್ಕೆ ಶಾಂತಿಯೂ ಸದ್ಗತಿಯೂ ದೊರೆಯುವುದೆಂಬ ನಂಬಿಕೆಯಿದೆ. ಘಂಟೆಯ ಸಿಂಗಯ್ಯ ತನ್ನ ತಂದೆ ಮಾಚಿದೇವನ ಹೆಸರಿನಲ್ಲಿ ಮಾಚ ಸಮುದ್ರವೆಂಬ ಕೆರೆಯನ್ನು ಕಟ್ಟಿಸಿದ್ದನು.[೧೪೯] ಗಂಡಸಿ ಸ್ಥಳದ ಅಧಿಕಾರಿ ಬಾಯಂಣನು ತನ್ನ ತಾಯಿಯ ಹೆಸರಿನಲ್ಲಿ ಮಂಗ ಸಮುದ್ರಕೆರೆಯನ್ನು ಕಟ್ಟಿಸಿದ್ದಾನೆ.[೧೫೦] ಹೊನ್ನವಳ್ಳಿ ಸೀಮೆಯ ಅಮರನಾಯಕ ಬಯಕಾರ ರಾಮಪ್ಪನು ತನ್ನ ತಾಯಿ ಲಕ್ಕರಸಮ್ಮನಿಗೆ ಪುಣ್ಯಲೋಕ ಪ್ರಾಪ್ತಿಯಾಗಬೇಕೆಂದು ಲಕ್ಕ ಸಮುದ್ರವೆಂಬ ಕೆರೆಯನ್ನು ಕಟ್ಟಿಸಿ ಚಿಕ್ಕಗಂಡಸಿ ಗ್ರಾಮವನ್ನು ಬ್ರಾಹ್ಮಣರಿಗೆ ದಾನ ಮಾಡಿದ್ದಾನೆ.[೧೫೧] ಈತ ತನ್ನ ಮಡದಿ ಮಕ್ಕಳು ತಂದೆ ತಾಯಿ ಬಂಧು ಬಳಗದವರೆಲ್ಲರ ಹೆಸರಿನಲ್ಲಿ ಹಂಪೆಯ ಸುತ್ತಮುತ್ತ ೧೬ ಕೆರೆಗಳನ್ನು ಕಟ್ಟಿಸಿದ್ದಾನೆ.[೧೫೨]

ತಂದೆ ಮಗನ ಶ್ರೇಯಸ್ಸಿಗಾಗಿ ಕೆರೆ ನಿರ್ಮಿಸಿರುವುದು ಉಂಟು. 'ತನುಜಂಗೆ ಶುಭಾರ್ಥ'ವಾಗಿ ಕಲ್ಲನ ಕೆರೆಯನ್ನು ಬಾಣಾವರದ ಚೆಟ್ಟಪ್ಪಶೆಟ್ಟಿ ನಿರ್ಮಿಸಿದ್ದಾನೆ.[೧೫೩] ಮಗನ ಮೇಲಿನ ಮಮತೆ ಇಲ್ಲಿ ಪ್ರೇರಣೆಯಾಗಿದೆ.

### ಆ. ರಾಜಕೀಯ ಪ್ರೇರಣೆ

ಧಾರ್ಮಿಕ ಮನೋಭಾವದ ಜೊತೆಗೆ ಕೆರೆನಿರ್ಮಾಣದ ಹಿಂದೆ ರಾಜಕೀಯ ಉದ್ದೇಶವು ಪ್ರಧಾನ ಪಾತ್ರವಹಿಸಿರುವುದನ್ನು ಗಮನಿಸದೆ ಇರಲಾಗದು. ತಮ್ಮ ಆಧಿಪತ್ಯಕ್ಕೆ ಒಳಪಟ್ಟ ಪ್ರದೇಶಗಳ ಸಂಪತ್ತಿನ ಅಭಿವೃದ್ಧಿಯ ಉದ್ದೇಶದೊಂದಿಗೆ ಸ್ಥಳೀಯರ ಪ್ರೀತಿಗೆ ಪಾತ್ರವಾಗುವುದಕ್ಕಾಗಿ ದೊರೆಗಳು, ಸ್ಥಳೀಯ ಆಡಳಿತಗಾರರು ಕೆರೆ ಕಟ್ಟೆಗಳ ನಿರ್ಮಾಣಕ್ಕೆ ಮುಂದಾಗುತ್ತಿದ್ದರು. ಈ ಪ್ರದೇಶದಲ್ಲಿ ಅರಸರು, ರಾಣಿಯರು, ಸಾಮಂತರು ಅಧಿಕಾರಿಗಳು ಕೆರೆ ನಿರ್ಮಿಸಿರುವ ಅನೇಕ ದಾಖಲೆಗಳು ದೊರಕುತ್ತವೆ.

**ಅರಸರು ರಾಣಿಯರು :** ಅರಕೆರೆ, ಹೊನ್ನರಸನ ಕೆರೆ[೧೫೪] ಎಂಬ ಕೆರೆಗಳು ಹೊಯ್ಸಳ ಪೂರ್ವ ಕಾಲದಲ್ಲೇ ಬಹುಷಃ ಗಂಗರಸರಿಂದ ನಿರ್ಮಾಣವಾದಂತೆ ಕಂಡುಬರುತ್ತದೆ. ಹೋಚನ ಕೆರೆ, ಹೊಯ್ಸಳ ಘಟ್ಟ ಎಂಬ ಕೆರೆಗಳು ಹೊಯ್ಸಳ ಅರಸರಿಂದ ಅಥವಾ ಅವರ ಹೆಸರಿನಲ್ಲಿ ಕ್ರಿ.ಶ.೧೧೩೬-೩೭ಕ್ಕೆ ಮೊದಲೇ ನಿರ್ಮಾಣವಾಗಿವೆ.[೧೫೫]

ಕ್ರಿ.ಶ.೧೧೦೦-೦೧ರಲ್ಲಿ ಎರೆಯಂಗ 'ಪೊಯ್ಸಳನ ಪಟ್ಟದರಸಿ' ಮಹಾದೇವಿಯು 'ಕಟ್ಟಿಸಿದಳ್ಮುತ್ತನ ಪೊಸವೂರ ಕೆರೆಯನಧಿಕೋತ್ಸವದಿಂ' ಎಂದು ಶಾಸನ ಹೇಳುತ್ತದೆ.[೧೫೬] ಶಾಸನೋಲ್ಲೇಖಿತವಾದ ಮುತ್ತನ ಹೊಸವೂರು ಎಂಬ ಎರಡು ಅವಳಿಗ್ರಾಮಗಳು ಚಿಕ್ಕಮುತ್ತನ ಹೊಸವೂರು ಹಿರಿಯ ಮುತ್ತನ ಹೊಸವೂರು (ಈಗಿನ ಚಿಕ್ಕೂರು, ಹಿರಿಯೂರು)ಗಳ ಮಧ್ಯೆ ದೊಡ್ಡದಾದ ಸುಂದರವಾದ ಕೆರೆಯೊಂದಿದ್ದು ಅದು ಸುತ್ತಿನ ಮೂರು ಗ್ರಾಮಗಳಿಗೆ ನೀರನ್ನು ಒದಗಿಸುತ್ತದೆ. ಮುತ್ತನ ಹೊಸವೂರು ಮತ್ತು ರಾಜವೂರಿನ (ಜಾಜೂರು) ಹೊಲಮೇರೆಯಲ್ಲಿ 'ಚಿಕ್ಕಮರಸಿಯಕೆರೆ' ಇದ್ದ ಉಲ್ಲೇಖವಿದ್ದು,[೧೫೭] ಎರೆಯಂಗನ ಚಿಕ್ಕರಾಣಿ ಈ ಮಹಾದೇವಿಯಿಂದಲೇ ಈಕೆರೆ ನಿರ್ಮಾಣವಾದುದಾಗಿರಬೇಕು. ಅರಸೀಕೆರೆ ಹಾಗೂ ಹಾರನಹಳ್ಳಿಗಳಲ್ಲಿ 'ದೇವಿಗೆರೆ' ಎಂಬ ಹೆಸರಿನ ಕೆರೆಗಳಿದ್ದು, ಇವು ಹೊಯ್ಸಳ ರಾಣಿಯರ (ಅಕ್ಕತಂಗಿಯರ) ಕೆರೆ ಎಂಬ ಪ್ರತೀತಿಯಿದೆ. (ಈ ಪ್ರದೇಶದಲ್ಲಿ ಹೊಯ್ಸಳ ರಾಣಿಯರೇ ಹೆಚ್ಚಾಗಿ ಆಡಳಿತ ನಡೆಸಿದ್ದಾರೆ.)

**ಸಾಮಂತರು ಗಾವುಂಡರು :** ಸಾಮಂತರು, ಪ್ರಭುಗಾವುಂಡರು ಪ್ರಜೆಗಳೊಂದಿಗೆ ನೇರಸಂಪರ್ಕ ಹೊಂದಿರುತ್ತಿದ್ದು ತಮ್ಮ ಆಡಳಿತ ಪ್ರದೇಶದ ಅಭಿವೃದ್ಧಿ ಸೌಖ್ಯಕ್ಕಾಗಿ ದುಡಿಯುತ್ತಿದ್ದರು. ಆ ಮೂಲಕ ಪ್ರಜಾಪ್ರೇಮ ಅರಸರ ಮೆಚ್ಚುಗೆಗೆ ಪಾತ್ರರಾಗುತ್ತಿದ್ದರು. ಅವರ ಅಭಿವೃದ್ಧಿ ಕಾರ್ಯಗಳಲ್ಲಿ ನೀರಾವರಿ ವ್ಯವಸ್ಥೆ ಪ್ರಮುಖವಾದುದು. ಸಾಮಂತ ಮಹಾಪ್ರಭು ಚಾಮಗಾವುಣ್ಡನು ಒಂದು ಹೊಸ ಗ್ರಾಮ ನಿರ್ಮಿಸಿ ಅದಳಗಟ್ಟವೆಂಬ ಕೆರೆಯನ್ನು ಕಟ್ಟಿಸಿದ್ದಾನೆ.[೧೫೮] ಜಾವಗಲ್ಲ ಮಹಾಪ್ರಭು ಭೈರವರಸನು ಬಯಿರ ಸಮುದ್ರವನ್ನು ಕಟ್ಟಿಸಿರುವುದಲ್ಲದೆ ಇತರ ಸಣ್ಣ ಕೆರೆಗಳನ್ನು ಪೂರ್ಣ ತಟಾಕಗಳಾಗಿ ಮಾಡಿಸಿದ್ದಾನೆ.[೧೫೯] ಹಲುಕೂರ ಮಹಾಪ್ರಭುಗಳು ಕೆರೆಗಳನ್ನು ಕಟ್ಟಿಸುವುದರಲ್ಲಿ ಪ್ರಸಿದ್ಧರೆಂದು ಒಂದು ಶಾಸನ[೧೬೦] ಹೊಗಳಿದೆ. ಅದಕ್ಕೆ ಸಾಕ್ಷಿಯಾಗಿ ಆ ಗ್ರಾಮದಲ್ಲಿ ಆರು ಕೆರೆಗಳನ್ನು ಶಾಸನಗಳು ಉಲ್ಲೇಖಿಸಿವೆ.

**ಮಹಾಪ್ರಧಾನರು ಹೆಗ್ಗಡೆಗಳ ಕುಟುಂಬ :** ಉತ್ತಮ ಅಧಿಕಾರಸ್ಥಾನಮಾನ ಆರ್ಥಿಕ ಸುಸ್ಥಿತಿಯನ್ನು ಪಡೆದಿದ್ದ ಮಹಾಪ್ರಧಾನರು ಅವರ ಕುಟುಂಬದವರೂ ಕೆರೆ ನಿರ್ಮಾಣದಲ್ಲಿ ಆಸಕ್ತಿ ತೋರಿದ್ದಾರೆ. ಮಹಾಮಂಡಳೇಶ್ವರ ಹೊಯ್ಸಳನ ಮಹಾಪ್ರಧಾನಿ ಸನ್ಧಿವಿಗ್ರಹಿ ಚಾವುಣ್ಡರಾಜನ ಮಕ್ಕಳು 'ರಾಯಘಟ್ಟ'ವನ್ನು ಕಟ್ಟಿಸಿದ್ದಾರೆ.[೧೬೧] ವೀರ ಬಲ್ಲಾಳನ ಪಿರಿಯರಸಿ ಪಟ್ಟಮಹಾದೇವಿಯಾದ ಉಮಾದೇವಿಯ ರಾಜ್ಯ ಸಮುದ್ಧರಣನಾದ ಶ್ರೀಮನ್ಮಹಾ ಪ್ರಧಾನ ಕುಮಾರ ಪಂಡಿತಯ್ಯ ದಣ್ನಾಯಕರ ಮಗ ಬಿಟ್ಟಯ್ಯ ಕನ್ನೆಗೆರೆಯೊಂದನ್ನು ಕಟ್ಟಿಸಿದ್ದಾನೆ.[೧೬೨] ಎರೆಯಂಗನ ಮನೆ ಮೊನೆಯ ಅಧಿಕಾರಿ ಕಚ್ಚೆಪೆರ್ಗಡೆ, 'ಅರಸಿಯ ಕೆರೆ'ಯನ್ನು ಚೆನ್ನಾಳ್ವರಸಿಯ ಕೆರೆಯಲ್ಲಿ ನಿರ್ಮಿಸಿದ್ದಾನೆ.[೧೬೩]

**ಪಸಾಯ್ತರು ತಂತ್ರಪಾಲರು :** ಮಹಾಪಸಾಯ್ತರಾದ ಅನೇಕ ಅಧಿಕಾರಿಗಳೂ ಕೆರೆ ನಿರ್ಮಿಸಿದ್ದಾರೆ. ಪಟ್ಟದ ಇಭದಾರುಕವಂಶದ ಪಸಾಯ್ತ ಹಿರಿಯ ಕಾಟೆಯ ಮಾವಂತನ ಸೋದರರು ಹೊಸದಾಗಿ ಮುದುಡಿಯಲ್ಲಿ

ಕೆರೆಯನ್ನು ಕಟ್ಟಿಸಿ ಆ ಕೆರೆಯ ಕೆಳಗೆ ಗದ್ದೆಗಳನ್ನು ಮಾಡಿದ್ದನ್ನು ಹೇಳಿದೆ. ಇದು ಈ ಮಾವಟಿಗರ ಪ್ರಗತಿ ಪರ ದೃಷ್ಟಿಗೆ ಸಾಕ್ಷಿಯಾಗಿದೆ.[೧೬೪] ಮಹಾ ಸಾಮಂತ ಚಳುಕೆಯ ನಾಯಕನ ತಂತ್ರಪಾಲ ಮಹಾದೇವನು ಗಂಜಿಗೆರೆಯಲ್ಲಿ ಒಂದು ಕೆರೆಯನ್ನು ಕಟ್ಟಿಸಿದ್ದಾನೆ.[೧೬೫] ಹೀಗೆ ಅಧಿಕಾರಿಗಳು, ಸಾಮಂತರು ತಮ್ಮ ತಮ್ಮ ಆಳ್ವಿಕೆಯ ಕ್ಷೇತ್ರದ ಅಭಿವೃದ್ಧಿಗೆ ಹೆಚ್ಚಿನ ಗಮನ ನೀಡಿದ್ದು ಕೆರೆ ನಿರ್ಮಾಣದ ಮಹತ್ವವನ್ನು ಅರಿತಿದ್ದರು. ಶಾಂತಿ, ಸಮೃದ್ಧಿ, ಆರ್ಥಿಕಾಭಿವೃದ್ಧಿ ರಾಜಕೀಯ ಯಶಸ್ಸಿನ ಮೆಟ್ಟಿಲೆಂಬ ಅರಿವು ಅವರಿಗಿತ್ತು.

**೯. ಸಮಾಜೋ ಆರ್ಥಿಕ ಪ್ರೇರಣೆಗಳು**

ಅಧ್ಯಯನದ ದೃಷ್ಟಿಯಿಂದ ಕೆರೆಕಟ್ಟೆ ನಿರ್ಮಾಣದ ಹಿಂದಿನ ಪ್ರೇರಣೆ, ಸಂದರ್ಭಗಳನ್ನು ಬಿಡಿಬಿಡಿಯಾಗಿ ನೋಡುತ್ತಿದ್ದರೂ ಅವು ಒಂದರೊಳಗೊಂದು ಅಂತರ್ಗತವಾಗಿರುವಂತೆ ತೋರುತ್ತವೆ. ಪ್ರೇರಣೆಗಳನ್ನು ಶಾಸನಗಳು ಅನೇಕ ಬಾರಿ ಘೋಷಿಸುತ್ತವಾದರೂ ಘೋಷಿತ ಉದ್ದಿಶ್ಯ ಮತ್ತು ಗಮ್ಯಗಳೊಂದಿಗೆ ಇತರ ಅನುಕ್ತ ಅಪೇಕ್ಷೆಗಳೂ ಹೆಣೆದುಕೊಂಡಿರುತ್ತವೆಂಬುದನ್ನು ಕಂಡುಕೊಳ್ಳಬಹುದು.

**ವ್ಯಾಪಾರೀ ವರ್ಗ ಮತ್ತು ಕೆರೆ ನಿರ್ಮಾಣ :** ಆಳರಸರು ಅಧಿಕಾರಿಗಳ ನಂತರ ವ್ಯಾಪಾರಿಗಳು ವರ್ತಕ ಸಂಘಗಳು ಕೆರೆ ನಿರ್ಮಾಣಕ್ಕೆ ಕೊಟ್ಟ ಕೊಡುಗೆ ಅಪಾರವಾಗಿದೆ. ಸೆಟ್ಟಿಗಳ ಹೆಸರಿನ ಗ್ರಾಮಗಳು, ಕೆರೆಗಳು ಅನೇಕ.[೧೬೬] ಅರಸೀಕೆರೆ, ಬೆಂಡೆಕೆರೆ, ಅರಕೆರೆ, ಹಿರಿಯೂರು, ಕೊಂಡಂಬಾಗಿಲು, ಬಾಣಾವರ, ಕಳಿಕಟ್ಟೆ, ಕೆಲ್ಲಂಗೆರೆ, ಶಂಕರಶೆಟ್ಟಿ ಹಳ್ಳಿ, ಸೋಮಶೆಟ್ಟಿ ಹಳ್ಳಿ ಈ ಗ್ರಾಮಗಳಲ್ಲಿ ಶೆಟ್ಟಿಗಳು ಮತ್ತು ಅವರ ಸಂಘ ಅಥವಾ ಕೊತ್ತಳಿಗಳು ಕೆರೆ ನಿರ್ಮಾಣ ನಿರ್ವಹಣೆಗೆ ವಿಶೇಷ ಗಮನ ನೀಡಿದ್ದಾರೆ. ಇವರಲ್ಲಿ ಅತ್ಯಂತ ಪ್ರಸಿದ್ಧನಾದ ಬಾಣಾವರದ ಚಟ್ಟಪಸೆಟ್ಟಿಯು ಇಲ್ಲಿ ಅನೇಕ ಕೆರೆಗಳನ್ನು ಹೊಸದಾಗಿ ಕಟ್ಟಿಸಿದ್ದಲ್ಲದೆ ಮುತ್ತನ ಹೊಸವೂರ ಕಡೆಯ ಎರಡು ಕೆರೆಗಳನ್ನು ವಿಸ್ತರಿಸಿದ್ದಾನೆ. ದೋರ ಸಮುದ್ರದ ರುದ್ರದೆಸೆಯಲ್ಲಿ ಒಂದು ಕೆರೆಯನ್ನು ಕಟ್ಟಿಸಿದ್ದನಂತೆ. ಬಾಣವರದಲ್ಲಿ ಅತ್ಯಂತ ಕೃಶವಾಗಿದ್ದ ಕೆರೆಯನ್ನು ದೊಡ್ಡದಾಗಿ ಮಾಡಿಸಿದ್ದಾನೆ. ತೂಬುಗಳನ್ನಿಡಿಸಿದ್ದಾನೆ. ಜೊತೆಗೆ ಬೊಮ್ಮಚ್ಚಿ ಘಟವನ್ನು 'ಕಿರಿದಂ ಪರಿದೆನಲ್' ಕಟ್ಟಿಸಿದ್ದಾನೆ. ಮಾವಿನಕೆರೆ ಎಂಬ ಮತ್ತೊಂದು ಕೆರೆಯನ್ನು ಕಟ್ಟಿಸಿದನೆಂದು ಶಾಸನ ದಾಖಲಿಸಿದೆ. ಈ ಕೆರೆಗಳ ಕಾರಣದಿಂದಲೇ ಬಾಣಾವರ ಮುಂದೆ ಪ್ರಸಿದ್ಧ ಪಟ್ಟಣವಾಗಿ ಬೆಳೆಯಿತೆಂದರೆ ಅತಿಶಯೋಕ್ತಿಯಲ್ಲ.[೧೬೭] ಎಕ್ಕಲಸೆಟ್ಟಿ ಮತ್ತು ಕಲ್ಲಸೆಟ್ಟಿ ಎಂಬ ವ್ಯಾಪಾರಿಗಳು ಗೀಜಿಹಳ್ಳಿಯಲ್ಲಿ 'ಎಕ್ಕಲ ಸಮುದ್ರ'ವೆಂಬ ಕೆರೆ ಕಟ್ಟಿಸಿದ್ದಾರೆ.[೧೬೮] ಕಳಿಕಟ್ಟೆಯಲ್ಲಿಯ ಎಲ್ಲಾ ಜಗತಿ ಕೊತ್ತಳಿಗಳು ಸೇರಿ ಕೆರೆ ನಿರ್ಮಿಸಿದ್ದಾರೆ.[೧೬೯]

ಈ ವ್ಯಾಪಾರಿವರ್ಗ ಧನಾರ್ಜನೆಯೊಂದಿಗೆ ಧರ್ಮಾರ್ಜನೆಯನ್ನು ಹಾಗು ಸೌಖ್ಯವನ್ನು ಪಡೆಯಲು ತಾವು ವ್ಯಾಪಾರ ವಹಿವಾಟು ನಡೆಸುವ ಗ್ರಾಮ ಪಟ್ಟಣಗಳಲ್ಲಿ ಸಂತೆ ಮಾಳಗಳಲ್ಲಿ ಬಂದು ಹೋಗುವ

ವ್ಯಾಪಾರಿಗಳು ಗ್ರಾಹಕರಿಗೆ ನೀರಿನ ಸಮಸ್ಯೆಯಾಗದಂತೆ ಕೆರೆ ನಿರ್ಮಿಸುವುದು ಛತ್ರವನ್ನು ಅರವಟ್ಟಿಗೆಗಳನ್ನು ಅರವೆಗಳನ್ನಿಡಿಸುವ ಕಾರ್ಯವನ್ನು ಮಾಡಿದ್ದಾರೆ. ಇವರ ವ್ಯವಹಾರಿಕ ಚತುರತೆಯನ್ನಲ್ಲದೆ ಇದು ಅವರ ಸಾಮಾಜಿಕ ಕಾಳಜಿಗೂ ಉದಾಹರಣೆಯಾಗುತ್ತದೆ.

**ಹೊಸ ವಸತಿ ನೆಲೆಗಳೊಂದಿಗೆ ಕೆರೆನಿರ್ಮಾಣ** : ನಾನಾ ಕಾರಣಗಳಿಗಾಗಿ ಹೊಸ ಗ್ರಾಮಗಳು, ಅಗ್ರಹಾರಗಳು ಸ್ಥಾಪಿತವಾಗುತ್ತವೆ. ಅಂತಹ ಸಂದರ್ಭಗಳಲ್ಲಿ ಅಲ್ಲಿನ ಸಾಮಾಜಿಕ ಅವಶ್ಯಕ ತುರ್ತಿನಿಂದ ಕೆರೆಗಳ ನಿರ್ಮಾಣವಾಗುತ್ತದೆ. ಹೊಸ ಗ್ರಾಮವಾಸಿಗಳ ಕುಡಿಯುವ ನೀರಿನ ವ್ಯವಸ್ಥೆ ಮತ್ತು ಅವರ ಜೀವಿತಕ್ಕೆ ಆಧಾರವಾದ ಕೃಷಿ ಭೂಮಿಗಳ ನಿರ್ಮಾಣದೊಂದಿಗೆ ಕೆರೆ ನಿರ್ಮಾಣಕ್ಕೆ ಮೊದಲ ಆದ್ಯತೆಯಿರುತ್ತದೆ. ಹಾಗಾಗಿ ಶಾಸನಗಳಲ್ಲಿ ಗ್ರಾಮ, ಅಗ್ರಹಾರ ನಿರ್ಮಾಣದೊಂದಿಗೆ ಕೆರೆ ನಿರ್ಮಾಣ ಒಟ್ಟಿಗೆ ಕಾಣಿಸಿಕೊಳ್ಳುತ್ತದೆ. ಘಂಟೆಯ ಸಿಂಗಯ್ಯನೆಂಬ ವೀರಯೋಧನು ತನ್ನ ಹೆಸರಿನಲ್ಲಿ ಸಿಂಗಯ್ಯನ ಹಳ್ಳಿಯನ್ನು ಮಾಡಿ ಒಂದು ಕೆರೆಯನ್ನು ನಿರ್ಮಿಸಿದ್ದಾನೆ.[೧೭೦] ಕುಮಾರ ಪಂಡಿತಯ್ಯ ದಂಡನಾಯಕರ ಮಗ ಬಿಟ್ಟಯ್ಯನು ತನ್ನ ಹೆಸರಿನಲ್ಲಿ ಊರನ್ನು ಬಿಟ್ಟಿ, ಸಮುದ್ರವೆಂಬ ಕೆರೆಯನ್ನು ನಿರ್ಮಿಸಿದ್ದಾನೆ.[೧೭೧] ಬಾಯಣ್ಣನೆಂಬ ಅಧಿಕಾರಿ ಹಿರಿಯಗಂಡಸಿ ಸ್ಥಳದಲ್ಲಿ ಮಂಗಾಪುರವೆಂಬ ಗ್ರಾಮವನ್ನು ಮಂಗಸಮುದ್ರವೆಂಬ ಕೆರೆಯನ್ನೂ ಕಟ್ಟಿಸಿದ್ದಾನೆ.[೧೭೨] ಚಿಕ್ಕಗಂಡಸಿಯನ್ನು ಧರ್ಮಗ್ರಾಮವೆಂದು ಬ್ರಾಹ್ಮಣರಿಗೆ ದಾನ ನೀಡುವಾಗ ಕೆರೆಯೊಂದನ್ನು ನಿರ್ಮಿಸಲಾಗಿದೆ.[೧೭೩] ಕೋಳಿಗುಂದದ ಹೆಗ್ಗಡೆ ಮಾದಿ ಗೌಡನಿಗೆ ಅಲ್ಲಿನ ಪ್ರಭುಗಳು ಹಳ್ಳಿಯ ಮಾಡೆಂದು ಕೊಟ್ಟರೆ 'ತರಗನುಡಿಗಿ ಕನ್ನೆಗೆಜೆಯಂ ಕಟ್ಟಿಸಿ' ಊರನ್ನು ಮಾಡಿಸಿದ್ದಾನೆ.[೧೭೪] ಈ ಉದಾಹರಣೆಯಲ್ಲಿ ಕಾಡನ್ನು ಕಡಿದು ಕೃಷಿಯೋಗ್ಯವಾಗಿಯೂ ವಸತಿಯೋಗ್ಯವಾಗಿಯೂ ಸಂಪೂರ್ಣ ಪರಿವರ್ತಿಸಿರುವುದು ಆ ಕಾಲದಲ್ಲಿ ನಡೆಯುತ್ತಿದ್ದ ಅಭಿವೃದ್ಧಿ ಚಟುವಟಿಕೆಗಳ ಮೇಲೆ ಬೆಳಕು ಚೆಲ್ಲುತ್ತದೆ.

ಗ್ರಾಮ ಸ್ಥಾಪನೆಯಂತೆ ಅಗ್ರಹಾರ ನಿರ್ಮಾಣದ ಸಂದರ್ಭದಲ್ಲೂ ಅವಶ್ಯವಾಗಿ ಕೆರೆ ಕಟ್ಟೆಗಳ ನಿರ್ಮಾಣ ಮಾಡಲಾಗಿದೆ. ಮಹಾ ಪ್ರಧಾನ ಸರ್ವಾಧಿಕಾರಿ ಬೂಚಿರಾಜ ಹುಲ್ಲೇಕೆರೆಯನ್ನು ಸೋಮನಾಥಪುರವೆಂಬ ಹೆಸರಿನಲ್ಲಿ ಅಗ್ರಹಾರವಾಗಿ ಪರಿವರ್ತಿಸಿ ಬೂಚಿ ಸಮುದ್ರವೆಂಬ ಕೆರೆಯನ್ನು ನಿರ್ಮಿಸಿದ್ದಾನೆ. ಮಹಾಜನರು ತಮ್ಮ ಅಗ್ರಹಾರಗಳ ವೃತ್ತಿಗಳಿಗೆ ಅವಶ್ಯಕವಾದ ನೀರಾವರಿ ವ್ಯವಸ್ಥೆಯನ್ನು ಮಾಡಿಕೊಳ್ಳಲು ಸ್ಥಳೀಯ ಗೌವುಡುಗಳಿಗೆ ಕೆರೆ ನಿರ್ಮಾಣ ಮಾಡುವಂತೆ ಪ್ರೋತ್ಸಾಹಿಸುತ್ತಿದ್ದರು. ಪ್ರತಿಫಲವಾಗಿ ಅವರಿಗೆ ಕೆರೆ ಕೊಡುಗೆಗಳನ್ನು ನೀಡುತ್ತಿದ್ದರು. ಕೋಳಿಗುಂದದ ಭಟ್ಟೋಪಾಧ್ಯಾಯರುಗಳಾದ ಏಳು ಜನ ಪಂಡಿತರು ತಮ್ಮ ಏಳು ವೃತ್ತಿಯಿದ್ದ ಬಿದಿರಹಳ್ಳಿಯಲ್ಲಿ ಬಂಟಗವುಡ, ಮಾರಗವುಡರು ಕನ್ನೆಗೆರೆಯನ್ನು ಕಟ್ಟಿಕೊಟ್ಟಿದ್ದಕ್ಕಾಗಿ 'ಅವರು ಮೆಚ್ಚಿದ ತಾವಿನಲಿ' ಕೆರೆಕೊಡಗಿ ಭೂಮಿಯನ್ನು ನೀಡಿದ್ದಾರೆ. ಆ ಕೆರೆಯ ನೀರನ್ನು ಬಳಸಿ ಹೊಸ ಕೃಷಿ ಭೂಮಿಗಳನ್ನು ರೂಢಿಸಿಕೊಂಡು ಭತ್ತ ಭಾಗವನ್ನು ಮಹಾಜನರಿಗೆ ತಲುಪಿಸಬಹುದೆಂಬುದಕ್ಕೂ ಅವಕಾಶ ಮಾಡಿಕೊಟ್ಟಿದ್ದಾರೆ.[೧೭೫] ಇದೇ ರೀತಿ ಹಿರಿಯ

ಗಂಡಸಿಯ ಮಹಾಜನಗಳು ಕನ್ನೆಗೆರೆಯನ್ನು ಕಟ್ಟಿಸಿಕೊಟ್ಟು ತಮ್ಮೂರ ಗೌಡ ಕಂಬೆಯ ನಾಯಕನಿಗೆ ಕೆರೆಕೊಡಗಿ ನೀಡಿದ್ದಾರೆ. ಈ ಉದಾಹರಣೆಗಳಲ್ಲಿ ಕೆರೆ ನಿರ್ಮಾಣವೆಂಬುದು ಯಾವುದೇ ಧಾರ್ಮಿಕ ಬಣ್ಣ ಪಡೆಯದೇ ಆರ್ಥಿಕ ಚಟುವಟಿಕೆಯೆಂಬಂತೆ ದಾಖಲುಗೊಂಡಿದೆ.

**ದೇವಾಲಯಗಳೊಂದಿಗೆ ಕೆರೆನಿರ್ಮಾಣ :** ಕೆರೆ ಕಟ್ಟೆ ಕಲ್ಯಾಣಗಳ ನಿರ್ಮಾಣವು ದೇವಾಲಯ ನಿರ್ಮಾಣದೊಂದಿಗೆ ಥಳುಕು ಹಾಕಿಕೊಂಡಂತೆ ಕಂಡುಬರುತ್ತದೆ. ದೇವಾಲಯವೊಂದನ್ನು ಸ್ಥಾಪಿಸಿ ಆ ದೇವಾಲಯ, ಮಠ ಅಥವಾ ಬಸದಿ ಇತ್ಯಾದಿಗಳಲ್ಲಿನ ಪೂಜಾ ಕೈಂಕರ್ಯಕ್ಕೆ ಅತಿಥಿ ಅಭ್ಯಾಗತರ ಭಕ್ತಾದಿಗಳ ಬಳಕೆಗೆ ನೀರಿನ ವ್ಯವಸ್ಥೆ ಅನಿವಾರ್ಯವಾಗಿ ಆಗಲೇಬೇಕು. ದೇವಾಲಯಗಳಿಗಾಗಿ ಭೂದಾನವನ್ನು ತಪ್ಪದೆ ನೀಡಲಾಗುತ್ತಿದ್ದುದರಿಂದ ಆ ಹೊಲಗದ್ದೆ, ಹೂವಿನತೋಟ, ಅಡಕೆ, ಬಾಳೆಯ ತೋಟಗಳಿಗೆ ನೀರು ಹಾಯಿಸಲು ಕೆರೆಗಳ ಅವಶ್ಯಕತೆ ತೀವ್ರವಾಗಿತ್ತು. ಕಣಿಕಟ್ಟೆಯಲ್ಲಿ ಚಟ್ಟ ಬೋವನೆಂಬುವವನು ನೀಲೇಶ್ವರ ದೇವಾಲಯ ಕಟ್ಟಿಸಿ ಲಿಂಗಪ್ರತಿಷ್ಠೆ ಮಾಡಿ ಕೆರೆಯನ್ನು ಕಟ್ಟಿಸಿದ್ದಾನೆ.[೧೭೬] ಕುರುವಂಕದ ಸೇನಬೋವ ಬಿಟ್ಟೆಯಣ್ಣ ಬೀರೇಶ್ವರ ದೇವಾಲಯ ಕಟ್ಟಿಸಿ ಲಿಂಗಪ್ರತಿಷ್ಠೆ ಮಾಡಿ ಕೆರೆಯನ್ನು ಕಟ್ಟಿಸಿದ್ದಾನೆ.[೧೭೭] ಕಳಿಕಟ್ಟೆಯಲ್ಲಿ ಎಲ್ಲಾ ಜಗತಿ ಕೊತ್ತಳಿಗಳೂ ಸೇರಿ ಜಗತೀಶ್ವರ ದೇವಾಲಯವನ್ನು ಒಂದು ಕೆರೆಯನ್ನೂ ನಿರ್ಮಿಸಿದ್ದಾರೆ.[೧೭೮] ಅರಸೀಕೆರೆಯ ಸಮಸ್ತ ನಖರರೂ ಸಾಯಿರೊಕ್ಕಲೂ ಧರ್ಮೇಶ್ವರ ದೇವಾಲಯವನ್ನು, ಕೆರೆಯನ್ನು ಕಟ್ಟಿಸುವಂತೆ ಧರ್ಮರಾಸಿ ಪಂಡಿತರಿಗೆ ನಿಯೋಗಿಸಿದುದನ್ನು ಒಂದು ಶಾಸನ ಹೇಳಿದೆ.[೧೭೯] ಹೊಳಲ ಗಾವುಂಡನು ಕಲಿಲವಾಡಿಯಲ್ಲಿ ಕನ್ನೆಗೆರೆಯನ್ನು ಕಟ್ಟಿಸಿ ಕೆರೆಯ ಕೆಳಗೆ ಶಿವಾಲಯವನ್ನು ಎತ್ತಿಸಿದ್ದಾನೆ.[೧೮೦] ತಳಲೂರಿನಲ್ಲಿ ಹೆಗ್ಗಡೆ ಶಂಕರಣ್ಣನ ಚೆನ್ನಶಂಕರದೇವಾಲಯ ನಿರ್ಮಿಸಿದರೆ ಅವನ ಮಗಳು ಗೌರೀದೇವಿ ಸುಂದರ ತಟಾಕವನ್ನು ಕಟ್ಟಿಸಿದ್ದಾಳೆ.[೧೮೧]

ಅನೇಕ ಗ್ರಾಮಗಳಲ್ಲಿ ಕೆರೆಗಳ ಕೋಡಿಗೆ ಹೊಂದಿಕೊಂಡಂತೆ, ಏರಿಗೆ ಹೊಂದಿಕೊಂಡಂತೆ ದೇವಾಲಯಗಳಿರುವುದನ್ನು ಇಂದಿಗೂ ನೋಡಬಹುದು. (ಅರಸೀಕೆರೆ, ಮೊಸಳೆ, ಗಂಡಸಿ, ಅರಕೆರೆ, ಹಿರಿಯೂರು, ಕಾಟಿಕೆರೆ, ಮುರುಂಡಿ ಇತ್ಯಾದಿ) 'ಹಿರಿಯ ಕೆರೆಗೆ ತಂದ ಕಾಲುವೆಗೆ ರಕ್ಷಣಾರ್ಥವಾಗಿ ಊರ ಮುಂದೆ ಹನುಮಂತ ದೇವರನ್ನು ಪ್ರತಿಷ್ಠೆ ಮಾಡಲಾಯಿತೆಂದು ಗಂಡಸಿ ಶಾಸನ ಹೇಳಿದೆ[೧೮೨] ಈ ರಕ್ಷಣಾ ವ್ಯವಸ್ಥೆ ದೈವ ಕಾಪಾಡುವುದೆಂಬ ನಂಬಿಕೆಯೊಂದಿಗೆ ಕೆರೆಗಳನ್ನು ಹಾಳು ಮಾಡಬಹುದಾದ ದುಷ್ಟಶಕ್ತಿಗಳಲ್ಲಿ ಆಕ್ರಮಣಕಾರಿಗಳಲ್ಲಿ ದೈವಭಕ್ತಿ ಭಯವನ್ನು ಇಡುವ ಮೂಲಕ ಒಂದು ನೈತಿಕ ಜವಾಬ್ದಾರಿಯನ್ನು ಉದ್ದೀಪಿಸುವುದೇ ಆಗಿತ್ತು ಎನ್ನಬಹುದು.

**ಶ್ರೇಣೀಕೃತ ಸಮಾಜ ಮತ್ತು ಕೆರೆ ನಿರ್ಮಾಣ :** ಪವಿತ್ರ ಅಪವಿತ್ರ ಶುಭ ಅಶುಭ ಇತ್ಯಾದಿ ಪರಿಕಲ್ಪನೆಗಳು ಶ್ರೇಣೀಕೃತ ಸಮಾಜಕ್ಕೆ ಅಂಟಿಕೊಂಡಂಥವು. ಜೀವನಾವಶ್ಯಕವಾದ ನೀರಿಗೂ ಈ ಶ್ರೇಣೀಕೃತ ಸಮಾಜದ

ಎಲ್ಲ ಚಹರೆಗಳೂ ಇವೆ. ದೇವಾಲಯಗಳಿಗೆ ಹಾಗೂ ಮೇಲುಜಾತಿಯವರಿಗೆ ಮೀಸಲಾದ ಕೆರೆ ಕಟ್ಟೆ ಕಲ್ಯಾಣಿಗಳನ್ನು ಬಳಸಲು ಅಸ್ಪೃಶ್ಯರಿಗೆ ಅವಕಾಶವಿರಲಿಲ್ಲ. ಅಂಥವುಗಳ ನೀರಿನ ಬಗೆಗೆ ಪವಿತ್ರ ಭಾವನೆ ಇರುತ್ತಿತ್ತು. ಸಾವಿನ ಸೂತಕದವರು ದೇವಾಲಯದ ಕೆರೆಯ ನೀರಿಗೆ ಇಳಿಯಲಾಗಲೆಂದು ಒಂದು ಶಾಸನದಲ್ಲಿ ಕಟ್ಟುವಿಧಿಸಲಾಗಿದೆ.[೧೮೩] ಇಂಥ ಕೆರೆ ಕಟ್ಟೆಗಳಲ್ಲಿ ಗುಡಿಗೆರೆ, ಅರುಹ ಘಟ್ಟ, ಪಾರಿಸಘಟ್ಟ, ನಾರಣಘಟ್ಟ ಮಧುಸೂಧನಕೆರೆ, ತಮ್ಮಡಿ ಕೆರೆ, ಸವಣನಹಳ್ಳ ಇತ್ಯಾದಿ ಹೆಸರಿನಿಂದ ಕರೆಯಲಾಗಿದೆ.[೧೮೪] ಇವುಗಳು ಆಯಾಯ ದೇವಾಲಯಗಳಿಗೆ ಮೀಸಲಾದ ಕೆರೆಗಳು.

ಬೇರೆ ಬೇರೆ ಜಾತಿ ಜನಾಂಗಗಳ ಬಳಕೆಗೆಂದೇ ಕೆಲವು ಪ್ರತ್ಯೇಕ ಕೆರೆಗಳಿದ್ದಂತೆ ತೋರುತ್ತದೆ. ಅಸಗನಕೆರೆ, ಬಿಲ್ಲಕೆರೆ ಇತ್ಯಾದಿ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ.[೧೮೫] ಹೊಲಗಟ್ಟ, ಹೊಲೆಗಟ್ಟ[೧೮೬] ಇವುಗಳು ಬಹುಶಃ ಸಣ್ಣ ಹಳ್ಳಗಳಾಗಿರುತ್ತಿದ್ದು, ಅಸ್ಪೃಶ್ಯರ ಬಳಕೆಗಾಗಿ ಇದ್ದಂತೆ ತೋರುತ್ತದೆ. ಶ್ರೇಣೀಕೃತ ಸಮಾಜದಲ್ಲಿ ತಳಗಿನವರು ಕೆರೆನಿರ್ಮಾಣಗಳಂತಹ ಕಾರ್ಯದಲ್ಲಿ ತೊಡಗಲು ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿ, ಕಟ್ಟುಪಾಡುಗಳು ಅಡ್ಡಬರುತ್ತಿದ್ದವೆಂದು ಹೇಳಬಹುದು.

**ಈ. ಕೀರ್ತಿಯ ಹಂಬಲ ಮತ್ತು ಕೆರೆಗಳ ನಿರ್ಮಾಣ, ನಾಮಕರಣ**

ತನ್ನ ಹೆಸರು ತನ್ನ ವಂಶದ ಹೆಸರು ಶಾಶ್ವತವಾಗಿ ಉಳಿಯಬೇಕೆಂಬ ಹಂಬಲವು ಶಾಶ್ವತವಾಗಿ ನಿಲ್ಲಬಲ್ಲಂತಹ, ಕೆಲಸಗಳನ್ನು ಮಾಡಲು ಮಾನವನಿಗೆ ಸದಾ ಪ್ರೇರಣೆಯಾಗಿರುತ್ತದೆ. ಅಂತಹ ಕಾರ್ಯಗಳಲ್ಲಿ ದೇವಾಲಯ ನಿರ್ಮಾಣ ಕೆರೆ ಕಟ್ಟೆ ನಿರ್ಮಾಣ ಪ್ರಮುಖವಾದುವು.

**ಬಿರುದು ದಿಗ್ವಿಜಯ ಸೂಚಕ ಹೆಸರು :** ಪ್ರಮುಖ ಘಟನೆಗಳು ಹಾಗೂ, ತಮ್ಮ ಸಾಧನೆ ಸಿದ್ಧಿಗಳ ಸ್ಮರಣಾರ್ಥವಾಗಿ ವಿಶೇಷ ಹೆಸರಿನೊಂದಿಗೆ ಕೆರೆಗಳನ್ನು ಕಟ್ಟಿಸಿದ್ದಾರೆ. ಬೆಂಕೊಂಡ ಮಹಾದೇವನ ಕೆರೆ, ಕೀರ್ತಿಜಲಧಿ ಮೂರುರಾಯಬಸವ ಶಂಕರಶೆಟ್ಟಿನಾಯಕರ ಕೆರೆ. ಈ ಕೆರೆಗಳ ಹೆಸರಷ್ಟೇ ಉಲ್ಲೇಖಗೊಂಡಿದ್ದು, ಇವುಗಳನ್ನು ಯಾರು, ಯಾವಾಗ ನಿರ್ಮಿಸಿದರೆಂಬುದು ತಿಳಿಯುವುದಿಲ್ಲ. ನಿರ್ಮಾತೃವಿನ ಬಿರುದು ಅಥವಾ ದಿಗ್ವಿಜಯ ಸೂಚಕವೆಂಬಂತೆ ಇವು ತೋರುತ್ತವೆ.[೧೮೭]

**ವ್ಯಕ್ತಿ ಮೂಲ ಹೆಸರು :** ಹೆಚ್ಚಾಗಿ ಕೆರೆಗಳಿಗೆ ನಿರ್ಮಾತೃವಿನ ಅಥವಾ ಯಾರಿಗಾಗಿ ನಿರ್ಮಿಸಲ್ಪಟ್ಟಿತೊ ಆ ವ್ಯಕ್ತಿಯ ಹೆಸರನ್ನಿಡುವ ಮೂಲಕ ಅವರನ್ನು ಅಮರರನ್ನಾಗಿಸುವ ಪ್ರಯತ್ನ ಮಾಡಲಾಗಿದೆ. ಭೈರಸಮುದ್ರ, ಬೂಚಸಮುದ್ರ, ಕೆರೆಗಳು ಭೈರವರಸ ಬೂಚಿರಾಜರು ನಿರ್ಮಿಸಿದ್ದಾಗಿವೆ.[೧೮೮] ಇಂತಹ ಅನೇಕ ಉದಾಹರಣೆ ನೀಡಬಹುದು.

**ನಿಸರ್ಗ ಮತ್ತು ಪ್ರಾಣಿಜನ್ಯ ಹೆಸರು :** ಈ ಪ್ರದೇಶದಲ್ಲಿ ಅನೇಕ ನಿಸರ್ಗ ಹಾಗೂ ಪ್ರಾಣಿ ಮೂಲದ ಹೆಸರುಗಳುಳ್ಳ ಕೆರೆಗಳು ಕಂಡುಬರುತ್ತವೆ. ಅರಳಿಕೆರೆ ಮಣಲಕಡಹು ವಡಗೆರೆ ಕಲ್ಲಗುಂಡಿ[೧೮೯] ಇವುಗಳು

ಕೆರೆಗಳ ಪ್ರಾಕೃತಿಕ ಲಕ್ಷಣಗಳನ್ನು ಹೇಳಿದರೆ ಮತ್ತೆ ಕೆಲವು ಪ್ರಾಣಿಗಳೊಂದಿಗೆ ಸಂಬಂಧವನ್ನು ಸೂಚಿಸುತ್ತವೆ. ಕರಡಿಕೆರೆ, ಹುಲ್ಲೇಕೆರೆ, ಆನೆಕೆರೆ ಇತ್ಯಾದಿಗಳನ್ನು ಗಮನಿಸಬಹುದು.[೧೯೦]

ಕೆರೆಗಳಿಗಷ್ಟೇ ಅಲ್ಲದೆ ಕೋಡಿ ತೂಬು, ಕಾಲುವೆಗಳಿಗೂ ನಾಮಕರಣ ಮಾಡಲಾಗುತ್ತಿತ್ತು. ಅಥವಾ ಹೆಸರು ಪ್ರಾಕೃತಿಕ ಕಾರಣಕ್ಕೆ ತಾನೇ ಅಂಟಿಕೊಳ್ಳುತ್ತಿತ್ತು. ಕಲ್ಲಕಡುಹು ನವಿಲದೊಣೆಯ ತುಂಬು ಸಾಳುವನಅಗಳು ಇತ್ಯಾದಿ ಹೆಸರುಗಳನ್ನು ನೋಡಬಹುದು.[೧೯೧]

### ೩.೨.೩. ಕೆರೆಗಳ ನಿರ್ವಹಣೆ

ಕೆರೆಗಳ ನಿರ್ಮಾಣದ ಉದ್ದೇಶ ಸಫಲವಾಗಬೇಕಾದರೆ, ಸಮರ್ಪಕವಾಗಿ ಬಳಸಿಕೊಳ್ಳಲು, ಉಳಿಸಿಕೊಳ್ಳಲು ವ್ಯವಸ್ಥಿತವಾದ ನಿರ್ವಹಣೆ ಅಗತ್ಯ. ಅದಕ್ಕಾಗಿ ನಿರ್ವಾಹಕರ ಅವಶ್ಯಕತೆಯಿರುತ್ತದೆ. ಈ ಕಾರ್ಯಕ್ಕಾಗಿ ಹತ್ತಾರು ದಾನಿಗಳು, ಶ್ರೇಣಿಗಳು, ಗ್ರಾಮ ಸಭೆಗಳು, ನಿರ್ಮಾತೃಗಳು ಧಾರಾಳವಾಗಿ ದಾನ ಬಿಟ್ಟಿದ್ದಾರೆ. ಹಾಗೆ ಮಾಡಿದ್ದರಿಂದಲೇ ನಮ್ಮಲ್ಲಿ ಸಾವಿರಾರು ಕೆರೆಗಳು ಇನ್ನೂ ಜೀವಂತವಾಗಿವೆ. ಕೃಷಿಕರ ಜೀವನಾಧಾರವಾಗಿವೆ.

ಕೆರೆಗಳ ನಿರ್ಮಾಣ ಪುಣ್ಯವೆಂಬ ನಂಬಿಕೆಯಂತೆಯೇ ಅದನ್ನು ಹಾಳುಗೆಡಹುವುದು ಪಾಪಕ್ಕೆ ಕಾರಣವೆಂಬ ನಂಬಿಕೆಯೂ ಇತ್ತು ಜೊತೆಗೆ ಅಂತಹ ದುಷ್ಟರಿಗೆ ಶಿಕ್ಷೆಯನ್ನು ವಿಧಿಸಲಾಗುತ್ತದೆಂಬ ಭೀತಿಯೂ ಇತ್ತು. ಅರ್ಥಶಾಸ್ತ್ರವು ಅಂಥವರನ್ನು ನೀರಿನಲ್ಲಿ ಮುಳುಗಿಸಿ ಕೊಲ್ಲಬೇಕೆಂದು ಹೇಳಿ ಕೆರೆಗಳನ್ನು ಅಲಕ್ಷಿಸಿದವರಿಗೆ ದಂಡವಿಧಿಸುವಂತೆ ಹೇಳಿದೆ.[೧೯೨] ಶಾಸನಗಳೂ ಕೆರೆಗಳನ್ನು ಕುರಿತು ಶಾಪಾಶಯಗಳನ್ನು ಹೇಳಿವೆ.

ಕೆರೆಗಳ ಒಡೆತನ ಉಸ್ತುವಾರಿಯನ್ನು ನಿರ್ಮಾತೃವಿಗೆ ಅಥವಾ ದಾನಿಗೆ ಅಥವಾ ಗ್ರಾಮದ ಮಹಾಜನಗಳಿಗೆ ಅಥವಾ ದೇವಾಲಯ ಆಡಳಿತ ವರ್ಗಕ್ಕೆ, ಗ್ರಾಮಸಭೆಗಳಿಗೆ ವಹಿಸಿಕೊಡಲಾಗುತ್ತಿತ್ತು. ಕೆರೆಗಳನ್ನು ಸುಸ್ಥಿತಿಯಲ್ಲಿಡುವ ಜವಾಬ್ದಾರಿಯೂ ಅವರದೇ ಆಗಿರುತ್ತಿತ್ತು. ಈ ನಿಟ್ಟಿನಲ್ಲಿ ಸ್ಥಳೀಯ ಸಂಘ ಸಂಸ್ಥೆಗಳು, ಮಹಾಜನರು, ಗ್ರಾಮಸಭೆಗಳು ನಾಳ್ಪ್ರಭುಗಳು ಕೆರೆ ಉಸ್ತುವಾರಿಗೆಂದೇ ನೀರುಗಂಟಿಗಳನ್ನು, ಏರಿಗಣಕರನ್ನು, ಕೆರೆಬಂಡಿಯವರನ್ನು ನೇಮಿಸಿ ಅವರಿಗೆ ಉಂಬಳಿಗಳನ್ನು ಬಿಡುತ್ತಿದ್ದರು.

**ಅ. ಕೆರೆಯಂಗಳ - ನಿರ್ವಹಣೆ :** ಹೂಳೆತ್ತುವ ಕಾರ್ಯ ಕೆರೆ ನಿರ್ವಹಣೆಯಲ್ಲಿ ಅತ್ಯಂತ ಮಹತ್ವದ್ದು. ಕೆರೆಯ ತಳದಲ್ಲಿ ಹೂಳು ಶೇಖರಣೆಯಾಗದಂತೆ ಹಾಗೂ ನೆರೆಯ ಹಾವಳಿಯಿಂದ ಕೆರೆಯಲ್ಲಿ ಅನಾವಶ್ಯಕ ವಸ್ತುಗಳು ಸೇರಿ ಕೆರೆಯಂಗಳದಲ್ಲಿನ ನೀರಿನ ಮಟ್ಟವನ್ನು ಕಡಿಮೆ ಮಾಡದಂತೆ ನೋಡಿಕೊಳ್ಳಬೇಕಾಗುತ್ತದೆ. ಇದಕ್ಕಾಗಿ ಕೆರೆಗಳ ಸುತ್ತಮುತ್ತ ತೋಟಗಳನ್ನು, ತೋಪುಗಳನ್ನು, ನಂದನವನಗಳಿಗಾಗಿ ಜಾಗ ಮಾಡಿ ಗಿಡ ಮರಗಳನ್ನು ಬೆಳೆಸುತ್ತಿದ್ದರು. ಅವು ಮಣ್ಣು ಕೊಚ್ಚಿ ಹೋಗದಂತೆ ತಡೆಯುತ್ತಿದ್ದವು. ಕೆರೆ

ಕಟ್ಟಿಸಿದುದರೊಂದಿಗೆ ನಂದನವನಕ್ಕೆ ಕ್ಷೇತ್ರ ಪ್ರತಿಷ್ಠೆ ಮಾಡಿದುದನ್ನು ಜಾಗಲ್ಲು ಶಾಸನ ಹೇಳಿದೆ. ಜೊತೆಗೆ ಕೆರೆಯ ಕೋಡಿಯ ಪರ್ಯಂತರ ಹೊಸದಾಗಿ ಕಾಲುವೆಯನ್ನು ಕಟ್ಟಿಸಿ ಅದರ ಅಕ್ಕಪಕ್ಕಗಳಲ್ಲಿ ತೋಟಗಳನ್ನು ನಿರ್ಮಿಸಿ ಫಲಪೂರ್ಣವನ್ನಾಗಿ ಮಾಡಿದುದನ್ನು ಹೇಳಿದೆ. ಇಂತಹ ಕಾಲುವೆ ಅಥವಾ ಕಡಹುಗಳಲ್ಲಿಯೂ ಹೂಳು ಶೇಖರವಾಗದಂತೆ ಕಲ್ಲವಡ್ಡನ್ನು ನಿರ್ಮಿಸುತ್ತಿದ್ದರು. ಅಂತಹವನ್ನು ಕಲ್ಲಕಡಹುಗಳೆಂದು ಶಾಸನಗಳು ಕರೆದಿವೆ.[೧೯೩] ದೇವಾಲಯಗಳಿಗೆ ಬಿಡಲಾದ ತೋಟಗಳ ವ್ಯವಸಾಯದ ಗುತ್ತಿಗೆ ಹಿಡಿದವರು, ಆ ತೋಟಗಳ 'ಕ್ರಿಷಿ ಬ್ಯವಸಾಯ ಏತ ನೀರಧ್ಯಾನ ವೊಳಗಾದ ಸಮಸ್ತ ಬ್ಯವಸಾಯವನ್ನು" ತಾವೇ ಮಾಡಬೇಕೆಂದು ಇಲ್ಲದಿದ್ದರೆ ಅವರ ಪಡಿ ಜೀವಿತದಲೆ ಯಿಕ್ಕಿ' ಮಾಡಿಸಬೇಕಾಗುತ್ತದೆಂದು ಒಂದು ಶಾಸನದಲ್ಲಿ[೧೯೪] ನಿಬಂಧನೆ ಮಾಡಿರುವುದು ಕೃಷಿ ಭೂಮಿಗಳೊಂದಿಗೆ ಅದರ ನೀರಾವರಿ ವ್ಯವಸ್ಥೆಯನ್ನು ಸುಸ್ಥಿತಿಯಲ್ಲಿಡುವ ಜವಾಬ್ದಾರಿಯನ್ನು ಹೇಗೆ ವ್ಯವಸ್ಥಿತವಾಗಿ ನಿರ್ವಹಿಸುವಂತೆ ಸಂಸ್ಥೆಗಳು ಎಚ್ಚರವಹಿಸುತ್ತಿದ್ದವು ಎಂಬುದನ್ನು ಸೂಚಿಸುತ್ತದೆ.

ಅಗ್ರಹಾರ ಕೆಲ್ಲಂಗೆರೆಯ ದೇವಪ್ಪನವರ ಮಗ ನೋಟದ ಚಂದಪ್ಪನು ಕೆರೆಯ ಬಂಡಿಯನ್ನು ಬಂಡಿ ನಡೆಸುವುದಕ್ಕೆ ಧಾರೆ ಎರದು ಕೊಟ್ಟರೆ ಅಲ್ಲಿನ ಮಹಾಜನಗಳು ಬಂಡಿ ನಡೆಸುವ ಆಳ ಜೀವಿತಕ್ಕೆ ಪುರಾಣದ ಗದ್ದೆ ಮತ್ತು ಮಠದ ಗದ್ದೆ ಒಂದು ಖಂಡುಗ ಹತ್ತು ಕೊಳಗ ಬೆದ್ದಲನ್ನು ನೀಡಿದ್ದಾರೆ.[೧೯೫] ಕೆಲ್ಲಂಗೆರೆ ಮತ್ತು ಅದರ ಕಾಲುವಳ್ಳಿಗಳಲ್ಲಿನ ಎತ್ತು ಕೋಣಗಳ ಗುಗ್ಗರಿಗೆ ಹತ್ತು ಬಂಡಿಗೆ ಅಲ್ಲಿನ ಕೆಲವು ಆಯವನ್ನು ಬಿಡಲಾಗಿದೆ. ಸುಮಾರು ೭೩ ವರ್ಷಗಳ ನಂತರ ಅಲ್ಲಿನ ಮಹಾಜನಗಳು ಸರ್ವೇಕಮತ್ಯರಾಗಿ ಕೆರೆಯ ಬಂಡಿಯ ಕೋಣ ಹೆರೆಯೆಣ್ಣೆ, ಆಳ ಜೀವಿತ, ಹಾರೆ ಗುದ್ದಲಿ ಮುಂತಾದ ಹೂಳೆತ್ತಲು ನೆರವಾಗುವ ಅವಶ್ಯಕ ಸಾಮಗ್ರಿಗಳಿಗೆಲ್ಲಾ ಬಂಡಿಯವನಿಗೆ ಮತ್ತು ಕೋಣಗಳಿಗೆ ಜೀವಿತ ಕಲ್ಪಿಸಿಕೊಟ್ಟಿರುವ ವಿಚಾರ ಹೇಳಿರುವುದು, ಈ ಕಾರ್ಯಕ್ಕಾಗಿ ವ್ಯಾಪಾರಿ ಕೇಂದ್ರವಾಗಿದ್ದ ಕೆಲ್ಲಂಗೆರೆಯ ಅಡಿಕೆಯ ಹೇರು, ಎಲೆಯ ಹೇರು, ಕಿತ್ತುಳೆಯ ಹಣ್ಣಿನ ಹೇರಿಗೆ ವಿಧಿಸಲಾಗಿದ್ದ ತೆರಿಯ ಮೊತ್ತವನ್ನು ಕೆರೆ ಬಂಡಿಗೆ ಬಿಡಲಾಗಿದೆ ಎಂಬುದು ವಿಶೇಷವಾಗಿದೆ.[೧೯೬] ಈ ಶಾಸನಗಳಿಂದ ಕೆರೆ ಬಂಡಿಯ ಕೊಡುಗೆಗಳನ್ನು ಪಡೆದ ವ್ಯಕ್ತಿಗಳು ಹೂಳೆತ್ತುವ ಕಾರ್ಯಕ್ಕೆ ಬಳಸುವ ವಿವಿಧ ವಸ್ತುಗಳ ಪಟ್ಟಿಯು ತಿಳಿದು ಬರುತ್ತದೆ.

ವಿಜಯನಗರದ ಅರಸ ವೀರ ಪ್ರತಾಪದೇವರಾಯನ ಕಾಲದಲ್ಲಿ ಕೆರೆಬಂಡಿಗೆ ಏರ್ಪಾಡು ಮಾಡಿದ ಎರಡು ಉದಾಹರಣೆಗಳು ನೇರ್ಲಿಗೆ ಮತ್ತು ತಿಮ್ಮನ ಹಳ್ಳಿಯ ಶಾಸನಗಳಲ್ಲಿವೆ.[೧೯೭] ಈ ಎರಡೂ ಜಮೀನುಗಳ ಪಕ್ಕದಲ್ಲೇ ಕಾಲುವೆಯಿದ್ದು, ಉತ್ತಮ ನೀರಾವರಿ ಜಮೀನುಗಳನ್ನೇ ಇಂಥಹ ಉಂಬಳಿಗಳಾಗಿ ನೀಡಲಾಗುತ್ತಿತ್ತು. "ಈ ಭೂಮಿಯನು ತೋಟ ಗದ್ದೆಯ ಮಾಡಿಕೊಂಡು ಕೆರೆಯ ಬಂಡಿಯನು ನಡೆಸಿ ಬಹಿರಿ" ಎಂದು ಶಾಸನ ಉಂಬಳಿ ಪಡೆದವರಿಗೆ ನಿರ್ದೇಶನ ನೀಡಿರುವುದು ಗಮನಾರ್ಹವಾಗಿದೆ.[೧೯೮] ಮತ್ತೊಂದು ಶಾಸನವು[೧೯೯] ಅರಸೀಕೆರೆಯ ಹಿರಿಯ ಕೆರೆಯ ಬಂಡಿಯ ಆಳ ಜೀವಿತಕ್ಕೆ ಮತ್ತು ಎತ್ತಿನ

ಆಹಾರಕ್ಕೆ ನಾಲ್ಕು ಕೊಳಗ ಭೂಮಿಯನ್ನು ಹಿರಿಯಂಣ ಎಂಬುವವನಿಗೆ ಒಂದು ಗದ್ಯಾಣವನ್ನು, ವರುಷಂ ಪ್ರತಿಯಾಗಿ ಫಲ ನೂರು ಒಟ್ಟು ಗದ್ಯಾಣ ನೂರ ಇಪ್ಪತ್ತನ್ನು ಆಚಂದ್ರಾರ್ಕ ತಾರಂಬರಂ ನಡೆಸುವಂತಾಗಿ ದತ್ತಿ ಬಿಡಲಾಗಿದೆ. ಇಲ್ಲಿ ಗಮನಿಸಬೇಕಾದದ್ದು ಕೆರೆ ನಿರ್ವಹಣೆಗೆ ವಿಶೇಷವಾಗಿ ಉಂಬಳಿ ಜಮೀನಿಗಿಂತ ಹಣದ ರೂಪದಲ್ಲಿ ಕೊಡಗಿ ನೀಡಿರುವುದು. ಭಂಡಾರವಾಡವಾಗಿದ್ದ ರಾಜಧಾನಿ ಅರಸೀಕೆರೆಯಲ್ಲಿ ವ್ಯಾಪಾರ ವಹಿವಾಟು ಹೆಚ್ಚಿದ್ದು, ಹಣಕಾಸಿನ ಕೊರತೆಯಿರಲಿಲ್ಲ. ಆದರೆ ಕೆರೆಯ ಬದಿಯ ಉತ್ತಮ ಜಮೀನುಗಳ ಕೊರತೆಯಿತ್ತು. ಅಲ್ಲಿನ ಶಾಸನಗಳನ್ನು ಗಮನಿಸಿದಾಗ ಅಪಾರವಾದ ದೇವಾಲಯಗಳಿಂದ ತುಂಬಿದ್ದು, ಉತ್ತಮ ಕೃಷಿಭೂಮಿಯ ಹೆಚ್ಚಿನ ಭಾಗ ಅವುಗಳಿಗೆ ಸೇರಿದುದಾಗಿತ್ತು. ಜೊತೆಗೆ ಇಲ್ಲಿ ಕೊಡಗಿ ವ್ಯವಸ್ಥೆ ನೇರವಾಗಿ ಅರಸರಿಂದ ನಡೆದಿದೆ. ಅದೇ ರೀತಿ ತಳಿಲೂರ ಕೆರೆಬಂಡಿಗೆ ೧೧ ಗದ್ಯಾಣಗಳನ್ನು ಬಿಡಲಾಗಿದೆ.[೧೯೯]

**ಆ. ಏರಿ-ನಿರ್ವಹಣೆ :** ದುರಸ್ತಿ ಕಾರ್ಯಗಳು ಕೆರೆ ಕಾಳಜಿ ನಿರ್ವಹಣೆಯಲ್ಲಿ ಬಹಳ ಮುಖ್ಯ. ಏನೆಲ್ಲ ಮುನ್ನೆಚ್ಚರಿಕೆ, ತಂತ್ರಜ್ಞಾನಗಳನ್ನು ಬಳಸಿ ಕೆರೆಗಳ ನಿರ್ಮಾಣ ಮಾಡಿದ್ದರೂ ಸಹ ನೆರೆಯ ಹಾವಳಿಗಳಿಂದ ಕೆರೆಯ ಏರಿಗಳು ಒಡೆದು ಹೋಗುತ್ತಿದ್ದವು. ಏರಿಗಳ ದುರಸ್ತಿಕಾಮಗಾರಿಗಳಿಗಾಗಿ, ತೂಬು, ಕೋಡಿಗಳ ದುರಸ್ತಿಗಾಗಿ ಅವಶ್ಯಕತೆಗೆ ತಕ್ಕಂತೆ ಹೊಸ ತೂಬುಗಳು ಮತ್ತು ಕಾಲುವೆಗಳನ್ನು ಜೋಡಿಸುವುದು ಕೋಡಿಗಳನ್ನು ತಿದ್ದುವುದು ಕಾಲಕಾಲಕ್ಕೆ ನಡೆಯುತ್ತಿದ್ದವೆಂಬುದನ್ನು ಶಾಸನಗಳ ಆಧಾರದಿಂದ ತಿಳಿಯಬಹುದು.

ಏರಿಗಳು ಒಡೆಯಲು ಮುಖ್ಯ ಕಾರಣ ಅವುಗಳ ತಡೆ ಶಕ್ತಿಯನ್ನು ಮೀರಿ ಕೆರೆಯಂಗಳದಲ್ಲಿ ನೀರು ಸಂಗ್ರಹವಾಗುವುದು. ಇದನ್ನು ತಡೆಯಲು ಎರಡು ರೀತಿಯಲ್ಲಿ ನಮ್ಮ ಪೂರ್ವಿಕರು ಪ್ರಯತ್ನಿಸಿದ್ದಾರೆ. ಒಂದು ಇರುವ ಕೆರೆಯ ಅಂಗಳವನ್ನು ವಿಸ್ತರಿಸಿ ಅವುಗಳ ಏರಿಗಳನ್ನು ಮತ್ತಷ್ಟು ಬಂದೋಬಸ್ತು ಮಾಡಿಸುವುದು. ಎರಡನೆಯದಾಗಿ ಇಂತಹ ವಡಗೆರೆಗಳ ಅಂದರೆ ಪದೇ ಪದೇ ಒಡೆಯುತ್ತಿದ್ದ ಕೆರೆಗಳ ಸಮೀಪದಲ್ಲಿಯೇ ಮತ್ತೊಂದು ಕೆರೆಯನ್ನು ನಿರ್ಮಿಸಿ ಹೆಚ್ಚಿನ ನೀರು ಹರಿದು ಅಲ್ಲಿ ಶೇಖರಗೊಳ್ಳುವಂತೆ ಕೋಡಿಗಳನ್ನು ತಿದ್ದುವುದು. ಏರಿಗಳು ಒಡೆಯದಂತೆ ತಡೆಯಲು ಏರಿಯ ಹೊರಪಾರ್ಶ್ವಗಳಲ್ಲಿ ಗಿಡಮರಗಳನ್ನು ಬೆಳೆಸುತ್ತಿದ್ದರು. 'ಬಾಚಿ ಸೆಟ್ಟಿಯು ಬೊಮ್ಮಗೆ ಏರಿಯ ಮೇಲಣ ಸಸಿಯನಿಕ್ಕಿ ಸಾಕುವಂತಾಗಿ' ಉಂಬಳಿ ನೀಡಲಾಗಿದೆ.[೨೦೦] ಮೊಸಳೆ ಎಂಬ ಗ್ರಾಮ ಕಾಲುವಳ್ಳಿ ಮಲ್ಲಯನಹಳ್ಳಿಯ ಬಳ್ಳೆಯ ಕೆರೆಯು ಒಡೆದುದರಿಂದ ಅಲ್ಲಿನ ಕೇಶವ ದೇವಾಲಯವು ಹಾಳಾಗಿದ್ದು, ದೇವಾಲಯದ ಜೀರ್ಣೋದ್ಧಾರದೊಂದಿಗೆ ಬಳ್ಳೆಯ ಕೆರೆಯ ಒಡವನ್ನು ಕಟ್ಟಿಸಲಾಯಿತೆಂದು ಒಂದು ಶಾಸನ ಹೇಳಿದೆ[೨೦೧] ಹಿರಿಯ ಹಿರೆವಾಳಹಳ್ಳಿಯ ವಡಗೆರೆಯೊಂದರ ಪಶ್ಚಿಮದಿಕ್ಕಿಗೆ ಕೆರೆಯನ್ನು ಕಟ್ಟಿಸಿ ತಟಾಕ ಪ್ರತಿಷ್ಠೆ ಮಾಡಿಸಿದವನಿಗೆ ಸುತ್ತಮುತ್ತಿನ ಊರುಗಳ ಮುಖ್ಯಸ್ಥರು ಕೃತಜ್ಞತೆಯಿಂದ ಅವನ ವಂಶಪಾರಂಪರ್ಯವಾಗಿ

ಸಲ್ಲುವಂತೆ ಎಂಟು ಸಲಗೆ ಭೂಮಿಯನ್ನು ಕೊಟ್ಟ ಉದಾಹರಣೆಯಿದೆ[೨೦೨]. ಪದೇ ಪದೇ ಒಡೆದು ಅಪಾರ ಹಾನಿಯುಂಟಾಗುತ್ತಿದ್ದುದಕ್ಕೆ ಶಾಶ್ವತ ಪರಿಹಾರ ಮಾಡುವುದು. ಪುರಸ್ಕಾರ ಯೋಗ್ಯವೇ ಸರಿ. ಏರಿಗಳು ಒಡೆಯಲು ಪ್ರಾಕೃತಿಕ ಕಾರಣಗಳಲ್ಲದೆ ರಾಜಕೀಯ ಆಕ್ರಮಣ ದ್ವೇಷಾಸೂಯೆಗಳು ಕಾರಣವಾಗಿರುತ್ತವೆ.

**ಇ. ಕೆರೆಗಳ ಜಾಲ :** ಒಂದು ಗ್ರಾಮದ ಪರಿಸರಕ್ಕೆ ಸೇರುವ ಕೆರೆ ಕಟ್ಟೆಗಳು ಮತ್ತು ಅಕ್ಕಪಕ್ಕದ ಗ್ರಾಮಗಳ ಭೂಮಿಯ ಮಟ್ಟ ಮತ್ತು ನೀರಿನ ಕೆಳಮುಖ ಹರಿವನ್ನು ಗಮನಿಸಿ ಸರಪಳಿಯಂತೆ ಕೆರೆಗಳ ಜಾಲವನ್ನೇ ನಮ್ಮ ಪೂರ್ವಿಕರು ನಿರ್ಮಿಸಿರುವುದನ್ನು ಗಮನಿಸಬಹುದು. ಇಂತಹ ವಿಶಿಷ್ಟ ತಂತ್ರವು ಕೆರೆಯು ತುಂಬಿ ಕೋಡಿ ಬಿದ್ದು ಹರಿಯುವ ನೀರು ಮತ್ತೊಂದರಲ್ಲಿ ಶೇಖರಗೊಳ್ಳುವುದಕ್ಕೆ ಮಳೆಯ ನೀರನ್ನು ಗರಿಷ್ಠ ಪ್ರಮಾಣದಲ್ಲಿ ಹಿಡಿದಿಡಲು ಸಹಾಯಕವಾಗುತ್ತಿತ್ತು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಭೂಮಿಯ ಮಟ್ಟ ದಕ್ಷಿಣದಿಂದ ಉತ್ತರಕ್ಕೆ ತಗ್ಗಾಗಿದ್ದು ಇಂತಹ ಕೆರೆಯ ಜಾಲಕ್ಕೆ ಸಹಾಯಕವಾಗಿದೆ. ಶಾಸನದಲ್ಲಿ ಉಕ್ತವಾಗಿರುವ ಕೆಲವು ಗ್ರಾಮಗಳ ಉದಾಹರಣೆಯನ್ನು ಇಲ್ಲಿ ನೋಡಬಹುದು. ದೇಸಾಣಿ ಒಂದು ಗುಡ್ಡದ ಬುಡದಲ್ಲಿ ಬೆಳೆದಿರುವ ಗ್ರಾಮ. ಇಲ್ಲಿನ ಒಂದು ಶಾಸನ,[೨೦೩] ಹೆಗ್ಗಡೆಯ ಕೆರೆಯೊಳಗಣ ಕಿರುಕೆರೆಯನ್ನು ಹೇಳಿದೆ. ಬಂದೂರಿನ ಒಂದು ಶಾಸನ[೨೦೪] ಹಿರಿಯ ಕೆರೆಯ ಕೆಳಗೆ ಇನ್ನೊಂದು ಪಾರಿಸಗಟ್ಟದ ಕೆರೆಯನ್ನು ಉಲ್ಲೇಖಿಸಿದೆ. ಈ ಶಾಸನಗಳಲ್ಲಿ ದೊಡ್ಡ ಕೆರೆಗಳ ಕೆಳಗೆ ಕಿರುಗೆರೆಗಳೂ ಒಳಗೆರೆಗಳೂ ಇರುತ್ತಿದ್ದುದನ್ನು ಹೇಳಿವೆ. ಮುತ್ತನ ಹೊಸ ಊರಿನ ಪರಿಸರದಲ್ಲಿ (ಹಿರಿಯೂರು) ಹಿರಿಯಕೆರೆ, ಹಿರಿಯಕಟ್ಟ, ಕಡಬಗಟ್ಟ, ಚಟ್ಟನ ಕೆರೆ, ಕರಿಯಬಮ್ಮಚ್ಚನ ಕೆರೆ, ಹಿರಿಯ ಹಳ್ಳ, ತಮ್ಮಡಿಯ ಕೆರೆ, ಎಳಗಂದಿಹಳ್ಳ, ಅಂಕಾಡೆಯಕೆರೆ ಗೂಳಿಗನಹಳ್ಳ, ಒಡಗೆರೆಸ್ಥಳ, ದಾನಿಯಕೆರೆ, ಸವಣನಹಳ್ಳ ಹೀಗೆ ೧೩ ಕೆರೆ ಕುಂಟೆಗಳಿದ್ದುದನ್ನು ಅಲ್ಲಿನ ಶಾಸನೋಲ್ಲೇಖದಿಂದ ತಿಳಿಯಬಹುದು.[೨೦೫] ಅರಸೀಕೆರೆ, ಕಣಿಕಟ್ಟೆ, ಜೆಸಿಪುರದ ಶಾಸನಗಳಿಂದ ಅಲ್ಲಿ ಐದಕ್ಕಿಂತಲೂ ಹೆಚ್ಚು ಕೆರೆಗಳಿದ್ದುದು ತಿಳಿಯುತ್ತದೆ.

**ಈ. ತೂಬು, ಕೋಡಿಗಳ ನಿರ್ವಹಣೆ :** ಕೆರೆಯ ಸುತ್ತ ಜಮೀನುಗಳ ಅಭಿವೃದ್ಧಿಯಾದಂತೆ ಕಾಲಕಾಲಕ್ಕೆ ಹೊಸ ತೂಬುಗಳನ್ನು ಜೋಡಿಸಿರುವುದನ್ನು ಕಾಣಬಹುದು. ಪೂರ್ಣ ಕೆರೆ ವೆಚ್ಚವನ್ನು ಭರಿಸಲಾಗದವರು ಕೇವಲ ತೂಬನ್ನು ನಿಲ್ಲಿಸುವ ಕೆಲಸ ಮಾಡಿಸಿದ್ದಾರೆ.[೨೦೬] ಮತ್ತೆ ಕೆಲವರು ಕಾಲಕಾಲಕ್ಕೆ ಹಳೆಯ ತೂಬುಗಳು ನಿರುಪಯೋಗವಾಗದಂತೆ ಜೀರ್ಣೋದ್ಧಾರ ಮಾಡಿಸಿದ್ದಾರೆ.[೨೦೭] ಎರೆಯಂಗನ ಕಾಲದಿಂದ ಇಮ್ಮಡಿ ವೀರ ನರಸಿಂಹನ ಕಾಲದವರೆಗೆ ಅರಸೀಕೆರೆಯನ್ನು ಕಾಲಕಾಲಕ್ಕೆ ಜೀರ್ಣೋದ್ಧಾರ ಮಾಡಿಸಿ, ತೂಬುಗಳನ್ನು ಕಟ್ಟಿಸಿ ಕೋಡಿಗಳನ್ನು ತಿದ್ದಿಸಿ ಕೆರೆ ಬಂಡಿಗಳನ್ನಿಡಿಸಿ ಕೆರೆಯನ್ನು ಸುಸ್ಥಿತಿಯಲ್ಲಿಡಲು ಕೈಗೊಂಡಿರುವ ಕಾರ್ಯಗಳು ಮೆಚ್ಚುವಂತಹದು ಈ ಕೆರೆಗೆ ನಾಲ್ಕು ತೂಬುಗಳಿದ್ದು, ಆ ತೂಬುಗಳ ಮೇಲೆ ಆರು ಶಾಸನಗಳಿವೆ. ಅರಸೀಕೆರೆಯವಳೇ ಆದ ವೀರಬಲ್ಲಾಳನ ಪಟ್ಟದರಸಿ ಉಮಾದೇವಿ ಕೆರೆಯ

ಕೋಡಿಯ ಧರ್ಮಕ್ಕೆಂದು ಅರಸೀಕೆರೆಯ ಸಮಸ್ತ ತಿಪ್ಪೆಸುಂಕ, ಆಲೆವೆತ್ತ, ಮಾನೆಣ್ಣೆ, ಹಂದರವಣ, ಪೊಡೆಮೆಳಸು, ಅರಿಸಿನ, ಅಡಕೆಯ ಹೇರು, ಸೀರೆಯ ಮಳವೆ, ಯೆಲೆಯ ಹೇರಿನ ಆಯಗಳನ್ನೆಲ್ಲಾ ಬಿಟ್ಟಿದ್ದಾಳೆ.[೨೦೮] ದಕ್ಷಿಣ ಅಯ್ಯಾವಳೆ ಎನಿಸಿ ಪ್ರಸಿದ್ಧ ವ್ಯಾಪಾರೀ ಪಟ್ಟಣವಾಗಿದ್ದ ಅರಸೀಕೆರೆಯ ಈ ಸರಕುಗಳ ಮೇಲಿನ ಆಯ ಖಂಡಿತವಾಗಿಯೂ ದೊಡ್ಡ ಮೊತ್ತವೇ ಆಗಿತ್ತೆನ್ನಬಹುದು. ಕೆಲವು ಕೆರೆಗಳಿಗೆ ಕೋಡಿಗಳು ಒಂದಕ್ಕಿಂತ ಹೆಚ್ಚಿದ್ದು, ಬೇರೆ ಬೇರೆ ದಿಕ್ಕಿನಲ್ಲಿ ಇದ್ದಂತೆ ತೋರುತ್ತದೆ.[೨೦೯] ಕೋಡಿಗಳಿಗೆ ಹೊಂದಿಕೊಂಡಂತೆ ಕಾಲುವೆಗಳನ್ನು ಕೆಲವು ಕೆರೆಗಳ ಬದಿಯಲ್ಲಿ ಕಾಣಬಹುದು. ಕಲ್ಲಕಡಹಿನ ಕೋಡಿ[೨೧೦]ಯ ಉಲ್ಲೇಖ, ಹಳೆಯ ಚಿಕ್ಕ ಕೆರೆಯೊಂದಕ್ಕೆ ಕಾಲುವೆಯನ್ನು ಹೊಸದಾಗಿ ತೆಗೆಸಿ ಕೆರೆಯನ್ನು ದೊಡ್ಡದು ಮಾಡಿ ದೃಢವಾಗುವಂತೆ ಮಾಡಿದ ಉಲ್ಲೇಖದೊಂದಿಗೆ ಹೊಸದಾಗಿ ಕಟ್ಟಿಸಿದ ಕೆರೆಯ ಕೋಡಿಯ ಪರ್ಯಂತ ಹೊಸದಾಗಿ ಕಾಲುವೆಯನ್ನು ಕಟ್ಟಿಸಿದ ಉಲ್ಲೇಖಗಳು[೨೧೧] ಇವೆಲ್ಲವೂ ನಮ್ಮ ಪೂರ್ವಜರು ಜೀವ ದ್ರವ್ಯವಾದ ನೀರಿನ ಸಂರಕ್ಷಣೆ ಸದ್ಬಳಕೆಗೆ ತೆಗೆದುಕೊಳ್ಳುತ್ತಿದ್ದ ಕಾಳಜಿಗೆ ಸಾಕ್ಷಿಯಾಗಿವೆ.

**ಉ. ನೀರಿನ ಹಂಚಿಕೆ ಸಮಸ್ಯೆ - ಸಮಾಧಾನಗಳು :** ಗ್ರಾಮಸ್ಥರು ಕೃಷಿಕರು ತಮ್ಮ ತಮ್ಮ ಅವಶ್ಯಕತೆಗಳಿಗೆ ತಕ್ಕಂತೆ ಕುಡಿಯುವ ನೀರಿಗಾಗಿ, ಗದ್ದೆ ತೋಟಗಳಿಗಾಗಿ ಬಾವಿಗಳನ್ನು ತಮ್ಮ ಖಾಸಗಿ ಜಮೀನುಗಳಲ್ಲಿ ನಿರ್ಮಿಸಿಕೊಳ್ಳುವುದಕ್ಕೆ ತೊಂದರೆಯಿರಲಿಲ್ಲ. ಹಾಗೂ ಅಂತಹುದರ ನೀರಿನ ಒಡೆತನ ಸಂಪೂರ್ಣವಾಗಿ ಅವರಿಗೇ ಸೇರಿದ್ದು ಹಂಚಿಕೆಯ ಸಮಸ್ಯೆ ಒದಗುತ್ತಿರಲಿಲ್ಲ. ಆದರೆ ಊರೊಟ್ಟಿನ ಬಾವಿ ಕಲ್ಯಾಣಿಗಳು, ದೇವಾಲಯದ ಪುಷ್ಕರಣಿಗಳ ಕೆರೆಗಳ ನೀರನ್ನು ಬಳಸುವುದರ ಬಗೆಗೆ ಮತ್ತು ಅಂತಹವುಗಳನ್ನು ನಿರ್ಮಿಸುವುದರ ಬಗೆಗೆ ಸಮಸ್ಯೆಗಳು ವಿವಾದಗಳು ವ್ಯಾಜ್ಯಗಳು ಇಂದಿನಂತೆ ಅಂದೂ ಖಂಡಿತವಾಗಿಯೂ ಇರುತ್ತಿದ್ದವು. ಅವುಗಳ ಬಗೆಗೆ ಶಾಸನಗಳು ಹೆಚ್ಚಾಗಿ ಹೇಳದಿದ್ದರೂ ಕೆಲವು ಶಾಸನಗಳ ಬೆಳಕಿನಿಂದ ಆ ರೀತಿ ಒದಗಿದ ಸಮಸ್ಯೆಗಳನ್ನು ನಮ್ಮ ಪೂರ್ವಿಕರು ಯಾವ ರೀತಿ ಪರಿಹರಿಸಿಕೊಳ್ಳುತ್ತಿದ್ದರೆಂಬುದನ್ನು ಅರಿಯಬಹುದು.

**೧. ಸ್ಥಳದ ಸಮಸ್ಯೆ :** ಕೆರೆ ಕಟ್ಟೆಗಳನ್ನು ನಿರ್ಮಿಸಲು ಸೂಕ್ತವಾದ ಲಕ್ಷಣಗಳುಳ್ಳ ಸ್ಥಳವು ದಾನಿಗಳಿಗೆ ಸೇರಿದ್ದರೆ ಅಥವಾ ಗ್ರಾಮಕ್ಕೆ ಸೇರಿದ್ದರೆ ಸ್ವಯಿಚ್ಛೆಯಿಂದ ಮತ್ತು ಗ್ರಾಮಸ್ಥರ ಒಪ್ಪಿಗೆಯಿಂದ ಅದನ್ನು ನಿರ್ಮಾಣಕ್ಕೆ ನೀಡಲಾಗುತ್ತಿತ್ತು. ಹಾಗಿಲ್ಲದಿದ್ದರೆ ಅಂಥಸ್ಥಳದ ಒಡೆಯರಿಂದ ಅದನ್ನು ಕ್ರಯಮಾಡಲಾಗುತ್ತಿತ್ತು.[೨೧೨] ಅಥವಾ ಅಂಥವರಿಗೆ ಬದಲೀ ನೀರಾವರೀ ಭೂಮಿಯನ್ನು ಕೊಡಮಾಡಲಾಗುತ್ತಿತ್ತು. ಈ ಒಪ್ಪಂದಗಳು ಮೊದಲೇ ಆಗಬೇಕಿತ್ತು.

**೨. ನೀರೊತ್ತಾಗುವ ಸಮಸ್ಯೆ :** ಕೆರೆ ಕೋಡಿ ಕಾಲುವೆ ನಿರ್ಮಾಣದಿಂದ ನೀರೊತ್ತಾಗಿ ಮನೆ, ಗದ್ದೆ, ತೋಟಗಳಲ್ಲಿ ಜೌಗಾಗಿ ಇಲ್ಲವೆ ನೀರಿನ ಹರಿವಿನಿಂದಾಗಿ ಉಂಟಾಗುತ್ತಿದ್ದ ಇತರ ಸಮಸ್ಯೆಗಳ ಸಂದರ್ಭದಲ್ಲಿಯೂ ಭೂಮಿ ಪರಿವರ್ತನೆ ನಡೆದು ಸಮಸ್ಯೆ ಬಗೆಹರಿಸಲಾಗಿದೆ.[೨೧೩]

**೩. ಫಲಾಭವಿಗಳ ಸಮಸ್ಯೆ :** ಕೆರೆಯ ನೀರಿನ ಫಲಾನುಭವಿಗಳಲ್ಲಿ ಆಧ್ಯತೆಯ ಸಮಸ್ಯೆಯು ಗ್ರಾಮಸ್ಥರೆಲ್ಲರ ಒಪ್ಪಿಗೆಯ ಮೇಲೆ ನಿರ್ಣಯವಾಗುತ್ತಿತ್ತು. ಶಾಸನಗಳನ್ನು ಗಮನಿಸಿದಾಗ ಸಹಜವಾಗಿ ದೇವಾಲಯದ ಭೂಮಿಗಳಿಗೆ ಮೊದಲ ಆಧ್ಯತೆಯಿರುತ್ತಿತ್ತು. ಮತ್ತು ಕೆರೆ ನಿರ್ಮಾತೃಗಳು ನಿರ್ಮಾಣ ಹಾಗೂ ನಿರ್ವಹಣ ಕಾಮಗಾರಿಗಳಿಗಾಗಿ ಶ್ರಮಿಸುವವರಿಗೆ, ದಾನಿಗಳಿಗೆ ನಂತರದ ಪ್ರಧಾನ್ಯತೆಯಿರುತ್ತಿದ್ದು ಕೆರೆಯ ಕೆಳಗಣ 'ಮೊದಲೇರಿಯ ಭೂಮಿ' ಇವರ ಪಾಲಾಗುತ್ತಿತ್ತು.[೨೧೪] ಭೂದಾನ ಮಾಡಲು ಬಯಸುವವರಿಂದ ಇಂತಹ ಭೂಮಿಗಳಿಗೆ ಹೆಚ್ಚು ಬೇಡಿಕೆ ಇರುತ್ತಿತ್ತು ಇಂಥವುಗಳನ್ನು ಕೊಂಡು ದಾನ ನೀಡಿರುವ ಅನೇಕ ಉದಾಹರಣೆಗಳಿವೆ.

**೪. ನೀರಿನ ಹಂಚಿಕೆಯ ಸಮಸ್ಯೆ :** ಕೆರೆಯ ನೀರನ್ನು ಊರಿನ ಜಮೀನುಗಳಿಗೆ ಹಾಯಿಸಿಕೊಳ್ಳುವುದರಲ್ಲಿ ಯಾವುದೇ ರೀತಿಯ ಅನ್ಯಾಯವಾಗದಂತೆ ನೋಡಿಕೊಳ್ಳಲು ನೀರುಗಂಟಿಗಳ ನೇಮಕವಾಗುತ್ತಿತ್ತು. ಪ್ರತಿಯೊಬ್ಬ ಫಲಾನುಭವಿಗೂ ದೊರಕುವಂತೆ ನೀರಿನಹಂಚಿಕೆ ಮಾಡುವುದು, ಬೆಳೆಯ ಅವಶ್ಯಕತೆಗೆ ತಕ್ಕಂತೆ ಸಕಾಲದಲ್ಲಿ ತೂಬೆತ್ತಿ ನಿಗದಿತವಾಗಿ ನೀರು ಹರಿಸುವುದು ಇತ್ಯಾದಿ ಕಾರ್ಯಗಳನ್ನು ನಿರ್ವಂಚನೆಯಿಂದ ಮಾಡುವುದು ಇವನ ಕರ್ತವ್ಯವಾಗಿತ್ತು. ಆ ಸೇವೆಗಾಗಿ ಅವನಿಗೆ ಉತ್ತಮ ಭೂಮಿ ಉಂಬಳಿಯಿರುತ್ತಿದ್ದುದಲ್ಲದೆ ಫಲಾನುಭವಿಗಳಿಂದ ವರ್ಷಾವರ್ತಿ ಸುಗ್ಗಿಯಕಾಲದಲ್ಲಿ ಧವಸಧಾನ್ಯ ಹುಲ್ಲು ಎಲ್ಲವೂ ನಿಗದಿತ ಪ್ರಮಾಣದಲ್ಲಿ ದೊರಕುತ್ತಿದ್ದವು. ನೀರುಗಂಟಿಗಳು ದೃಢಕಾಯರಾದ ಒಳ್ಳೆ ಈಜುಗಾರರಾಗಿರಬೇಕಾಗಿತ್ತು. ಈ ನೀರುಗಂಟಿಗಳು ಈಗಲೂ ಕೆಲವು ಗ್ರಾಮಗಳಲ್ಲಿದ್ದಾರೆ.[೨೧೫] ಗೀಜಿಹಳ್ಳಿಯ ಶಾಸನವೊಂದು ನೀರುಗಂಟಿಯನ್ನು 'ನೀರಯ್ಯ'ನೆಂದು ಕರೆದಿದೆ. ಅವನಿಗೆ ಐದುಕೊಳಗ ಭೂಮಿಯನ್ನು ಕೆರೆಯ ಕೆಳಗೆ ನೀಡಲಾಗಿದೆ.[೨೧೬]

ಕೆಲವು ಕೆರೆಗಳು ಎರಡು ಮೂರು ಗ್ರಾಮಗಳಿಗೆ ಉಪಯೋಗವಾಗುವಂತಹ ಸ್ಥಳಗಳಲ್ಲಿ ನಿರ್ಮಾಣಗೊಂಡಾಗ ಸಮಸ್ಯೆಗಳು ಏಳುತ್ತಿದ್ದವು. ನೀರಿನ ಹಂಚಿಕೆಗೆ ಸಂಬಂಧಿಸಿದಂತೆ ಆ ಗ್ರಾಮ ಪ್ರಮುಖರ ಮಧ್ಯೆ ನಿಖರವಾದ ಒಪ್ಪಂದಗಳಾಗಿರುತ್ತಿದ್ದವು. ಕೆರೆ ನಿರ್ಮಾಣ ಮತ್ತು ಕೆರೆ ಕೊಡುಗಿ ಭೂಮಿಗಳನ್ನು ನೀಡುವಾಗ ಅಂಥ ಗ್ರಾಮಮುಖ್ಯರು ಏಕಮತ್ಯವಾಗಿ ತೀರ್ಮಾನ ಮಾಡುತ್ತಿದ್ದರು.[೨೧೭]

ಕೆಲವು ಗ್ರಾಮಗಳು ಅಗ್ರಹಾರಗಳಾಗಿ ಪರಿವರ್ತನೆಗೊಂಡಾಗ, ಮಹಾಜನರ ಬ್ರಹ್ಮದೇಯ ಭೂಮಿಗಳಿಗೆ ನೀರಿನ ವ್ಯವಸ್ಥೆಯನ್ನು ಅಗ್ರಹಾರದ ನಿಮಾತೃಗಳೇ ಮಾಡಿಕೊಡುತ್ತಿದ್ದರು. ಇಲ್ಲದಿದ್ದರೆ ಮಹಾಜನಗಳೇ ಕೊಡುಗೆಗಳನ್ನು ಕೊಟ್ಟು, ಗಾವುಂಡರಿಂದ ಇಲ್ಲವೆ ಖಾಸಗಿ ವ್ಯಕ್ತಿಗಳಿಂದ ಮಾಡಿಸಿಕೊಳ್ಳುತ್ತಿದ್ದರು. ಆದರೂ ಕೆಲವೊಮ್ಮೆ ಸಮಸ್ಯೆಗಳು ಉದ್ಭವಿಸುತ್ತಿದ್ದವು. ಉದಾಹರಣೆಗೆ ತಳಲೂರು ಅಗ್ರಹಾರದ ನೀರಿನ ವ್ಯಾಜ್ಯವನ್ನು ನೋಡಬಹುದು. ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ ಇದನ್ನು

ಅಗ್ರಹಾರವಾಗಿ ಪರಿವರ್ತಿಸಿ ೬೨ ಮಹಾಜನರಿಗೆ ನೀಡಲಾಯಿತು.[೨೧೮] ಇಲ್ಲಿ ಮಧುಸೂಧನ ದೇವಾಲಯವನ್ನೂ ಒಂದು ಕೆರೆಯನ್ನು ನಿರ್ಮಿಸಿ ಕೆರೆಯ ಕೆಳಗೆ ದೇವರಿಗೆ ಪರಿವಾರ ವರ್ಗದವರಿಗೆ ಭೂಮಿದಾನ ಮಾಡಲಾಯಿತು. ೧೧೫೭-೫೮ರಲ್ಲಿ ಇಲ್ಲಿ ನಾರಣೇಶ್ವರ ದೇವಾಲಯವನ್ನು ನಿರ್ಮಿಸಿ ನಾರಣಘಟ್ಟವೆಂಬ ದೊಡ್ಡ ಕೆರೆಯನ್ನು ಕಟ್ಟಲಾಯಿತು.[೨೧೯] ತಳಲೂರಿನಲ್ಲಿ ಸುಮಾರು ಐದಕ್ಕೂ ಹೆಚ್ಚು ಶಿವನ ದೇವಸ್ಥಾನಗಳು ಇದ್ದುದನ್ನು ಶಾಸನಗಳಿಂದ ತಿಳಿಯಬಹುದು. ನಾರಣಘಟ್ಟದ ನೀರು ಅಲ್ಲಿನ ಶೈವ ಸ್ಥಾನಗಳ ಭೂಮಿಗಳಿಗೆ ನೀರುಣಿಸುತ್ತಿದ್ದಂತೆ ತೋರುತ್ತದೆ. ಮಧುಸೂಧನ ದೇವಾಲಯದ ಕೆರೆ ಚಿಕ್ಕದಾದುದರಿಂದ ಸಾಕಷ್ಟು ನೀರಿನ ವ್ಯವಸ್ಥೆಯಿಲ್ಲದೆ ಆ ಕೆರೆಯ ಕೆಳಗಿನ ವೃತ್ತಿಗಳ ಕೃಷಿ ನಡೆಯದೆ ನಷ್ಟವಾಗಿ ಸಿದ್ದಾಯ ತೆರಲೂ ಸಾಧ್ಯವಾಗದೆ ಇದ್ದುದರಿಂದ ಆ ಭೂಮಿಗಳಿಗೆ ನಾರಣಘಟ್ಟದ ನೀರನ್ನು ಒದಗಿಸಬೇಕೆಂಬ ಬೇಡಿಕೆ ವೈಷ್ಣವರಿಂದ ಬಂದಿದೆ. ಆದರೆ ಇದಕ್ಕೆ ಶೈವ ಸ್ಥಾನದ ಒಪ್ಪಿಗೆ ಇರಲಿಲ್ಲ. 'ನಾರಣಘಟ್ಟದ ಕೆರೆಯ ತುಂಬಿನ ಪಂಥದ ನೀರ ಚಿಕ್ಕ ಕೆರೆಯಗದ್ದೆಗೆ ಹರಿಸಬೇಕೆಂದವ ಶಿವದ್ರೋಹಿ ಮುವತ್ತಿಛಾಯಿರಕ್ಕೆ ಬಹಿಷ್ಕೃತರು" ಎಂದು 'ಸಮಯಶಾಸನ' ಬರೆಸಿದ್ದಾರೆ.[೨೨೦] ಮತ್ತು ನಷ್ಟಿಯ ವೃತ್ತಿಗಳ ಬಗೆಗೆ ಅತ್ಯಂತ ಕಟ್ಟುನಿಟ್ಟಿನ ನಿಬಂಧನೆ ಮಾಡಿದ್ದಾರೆ. ಈ ಗ್ರಾಮದಲ್ಲಿ ನಿಧಾನವಾಗಿ ವೈಷ್ಣವರು ಪ್ರಾಬಲ್ಯ ಪಡೆಯುವವರೆಗೆ ಈ ನಾರಣಘಟ್ಟದ ನೀರಿನ ಪಂಥದ ಶಾಸನ ನಿಯಮಗಳು ಚಾಲ್ತಿಯಲ್ಲಿದ್ದವು. ೮೦ ವರ್ಷಗಳ ನಂತರ ೧೨೭೧ರಲ್ಲಿ ಮಧುಸೂಧನ ದೇವರ ಚಿಕ್ಕಕೆರೆಯ ಗದ್ದೆಗೆ ಆ ಕೆರೆಯ ನೀರಲ್ಲದೆ ನಾರಣಘಟ್ಟದ ನೀರನ್ನು ಬಳಸಿಕೊಳ್ಳಲು ಅವಕಾಶ ನೀಡಬೇಕೆಂದು ತೀರ್ಮಾನಿಸಿ ಶಾಸನ ಬರೆಸಲಾಗಿದೆ. ಆ ಮೊದಲಿದ್ದ 'ನೀರಪಂಥ'ವಿಲ್ಲವೆಂದೂ ಒಡಂಬಡಿಸಿಕೊಟ್ಟು ಆ ವೃತ್ತಿಗಳ ಮಹಾಜನರು ಬಳಸಿದ ವೃತ್ತಿಗಳೋಪಾದಿಯ ನೀರ ಸಮಕ್ಕೆ ೧ ಗದ್ಯಾಣದಂತೆ ವರ್ಷಂಪ್ರತಿ ನಿರ್ದಿಷ್ಟವಾಗಿ ಸಲ್ಲಿಸಬೇಕೆಂದು ಹೊಸ ಒಡಂಬಡಿಕೆಯು ಮತ್ತೊಂದು ಶಾಸನದಲ್ಲಿದೆ.[೨೨೧] ಅಂದರೆ ಈ ನೀರಿನ ಹಂಚಿಕೆಗೆ ಸಂಬಂಧಿಸಿದ ನೀರಪಂಥ ಒಂದು ಅಗ್ರಹಾರದಲ್ಲಿ ೮೦ ವರ್ಷಗಳು ಕಟ್ಟು ನಿಟ್ಟಾಗಿ ಪಾಲಿಸಲ್ಪಟ್ಟಿರುವುದನ್ನೂ ಅಷ್ಟು ವರ್ಷಗಳೂ ಆ ಚಿಕ್ಕ ಕೆರೆಯ ಭೂಮಿಯ ಕೃಷಿಗೆ ಆಗಿರಬಹುದಾದ ನಷ್ಟವನ್ನು ಊಹಿಸಬಹುದು. ಆ ಅವಧಿಯಲ್ಲಿ ನೀರಿಗಾಗಿ ಮತ್ಯಾವ ಏರ್ಪಾಟು ಮಾಡಲೂ ಸಾಧ್ಯವಾಗಿಲ್ಲವಾದ್ದರಿಂದ ವೈಷ್ಣವರು ಪ್ರಬಲರಾದ ಮೇಲೆ ಅನಿವಾರ್ಯವಾಗಿ ಬಹುಶಃ ಒತ್ತಾಯ ಪೂರ್ವಕವಾಗಿ ಈ ಹೊಸ ಒಡಂಬಡಿಕೆಯನ್ನು ಮಾಡಲಾಗಿದೆ ಎನ್ನಬಹುದು.

ಇಂತಹ ಉದಾಹರಣೆಗಳಿಂದ ನೀರಿನ ಸಮಸ್ಯೆಯೊಂದಿಗೆ ಥಳುಕು ಹಾಕಿಕೊಳ್ಳುವ ಆರ್ಥಿಕ, ಧಾರ್ಮಿಕ ಶಕ್ತಿರಾಜಕಾರಣವನ್ನು ನಾವು ಗುರುತಿಸಬೇಕಾಗುತ್ತದೆ. ನೆನೆಗುದಿಗೆ ಬಿದ್ದರುವ ಇಂದಿನ ನೀರಿನ ಹಂಚಿಕೆಯ ಸಮಸ್ಯೆಗಳು ಇದಕ್ಕಿಂತ ಬೇರೆಯಾಗಿಲ್ಲವೆಂಬುದು ಸತ್ಯ. ಈ ಎಲ್ಲ ಸಮಸ್ಯೆಗಳ

ಮಧ್ಯದಲ್ಲೂ ಉತ್ತಮ ನೀರಾವರಿ ವ್ಯವಸ್ಥೆ ಹೊಂದಿದ್ದರಿಂದ ಈ ಪ್ರದೇಶ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯವಾಯಿತು.

## ೩.೩. ಧನ ಸಂಪನ್ಮೂಲ-ಕ್ರೋಢೀಕರಣ ವಿತರಣೆ

ರಾಜ್ಯದ ಆದಾಯದ ಮೂಲಗಳಲ್ಲಿ ತೆರಿಗೆಯದು ಮೊದಲ ಸ್ಥಾನ. ತೆರಿಗೆಗಳನ್ನು ಅನೇಕ ಮೂಲಗಳಿಂದ ಸಂಗ್ರಹಿಸಲಾಗುತ್ತಿತ್ತು. ಅವುಗಳೆಂದರೆ ಭೂತೆರಿಗೆ, ಆಸ್ತಿ ತೆರಿಗೆ, ವೃತ್ತಿ ತೆರಿಗೆ, ವಾಣಿಜ್ಯ ಸುಂಕ, ಉದ್ದಿಮೆಗಳ ಮೇಲಿನ ತೆರಿಗೆ, ಇತರ ಸಾಮಾಜಿಕ ತೆರಿಗೆಗಳು, ಇದಲ್ಲದೆ ರಾಜ್ಯಕ್ಕೆ ಹಣ ಸಂದಾಯವಾಗುತ್ತಿದ್ದ ಇತರ ಮೂಲಗಳೆಂದರೆ ಕಾಣಿಕೆಗಳು ದಂಡ, ಶುಲ್ಕಗಳು, ಜೊತೆಗೆ ಅಪುತ್ರಕ ಆಸ್ತಿಗಳು, ರಾಜನ ವೈಯಕ್ತಿಕ ಆಸ್ತಿ ಹಾಗೂ ಮುಟ್ಟುಗೋಲು ಹಾಕಿಕೊಂಡ ಆಸ್ತಿ, ಶತೃ ರಾಜರನ್ನು ಸೋಲಿಸಿ ಸೂರೆ ಮಾಡಿ ತರುತ್ತಿದ್ದ ವಸ್ತು, ವಾಹನಾದಿ ಐಶ್ವರ್ಯ ಇವೆಲ್ಲ ಆದಾಯಗಳೇ ಶಾಸನಗಳಲ್ಲಿ ಕಂಡುಬರುವ ತೆರಿಗೆಗಳ ಬಾಹುಳ್ಯ ಮತ್ತು ವೈವಿಧ್ಯತೆಗಳು ಅಚ್ಚರಿ ಮೂಡಿಸುತ್ತವೆ.

### ೩.೩.೧. ಸಾರ್ವಜನಿಕ ಆಯವ್ಯಯ

**೧. ಭೂಕಂದಾಯ :** ರಾಜ್ಯದ ಅರ್ಥವ್ಯವಸ್ಥೆಯಲ್ಲಿ ಭೂಮಿ ಪ್ರಮುಖ ಪಾತ್ರ ವಹಿಸುತ್ತಿದ್ದುದರಿಂದ ರಾಜಾಯದಲ್ಲಿ ಭೂಕಂದಾಯದ ಮೊತ್ತ ದೊಡ್ಡದಾಗಿರುತ್ತಿತ್ತು. ತೆರಿಗೆಯನ್ನು ಹಣ ಇಲ್ಲವೇ ವಸ್ತು ರೂಪದಲ್ಲಿ ಸಂಗ್ರಹಿಸಲಾಗುತ್ತಿತ್ತು. ಸಿದ್ಧಾಯ ಪ್ರಧಾನವಾದ ಭೂತೆರಿಗೆಯಾಗಿತ್ತು.

ಕೃಷಿ ಸಲಕರಣೆಯ ಮೇಲೂ ತೆರಿಗೆ ವಿಧಿಸಲಾಗುತ್ತಿತ್ತು. 'ಆರಂಭಕಾರರ ಯೇರು ಒಂದಕ್ಕೆ ಒಂದು ಹಣ" ವಿಧಿಸಿದ್ದನ್ನು ಒಂದು ಶಾಸನ ಹೇಳಿದೆ.[೨೨೨] ಕಳವತ್ತ ಮೂಲೆವತ್ತ[೨೨೩] ಇವು ಸುಗ್ಗಿಯ ಕಾಲದಲ್ಲಿ ಕಣದ ರಾಸಿಯಲ್ಲಿ ನೀಡಬೇಕಾದ ನಿಗದಿತ ದಾನ್ಯ ರೂಪದ ತೆರಿಗೆಯಾಗಿತ್ತು.

**೨. ವೃತ್ತಿ ತೆರಿಗೆಗಳು :** ನಾನಾ ರೀತಿಯ ವೃತ್ತಿಗಳ ಮೇಲೆ ತೆರಿಗೆ ವಿಧಿಸಲಾಗುತ್ತಿತ್ತು. ಬಡಗಿ ಕಮ್ಮಾರ ಅಕ್ಕಸಾಲಿಗ, ಕಂಚುಗಾರ ಮತ್ತು ಶಿಲ್ಪಿಗಳ ಮೇಲಿನ ತೆರಿಗೆಯನ್ನು ಶಾಸನಗಳು ಹೇಳಿವೆ.[೨೨೪] ಮಗ್ಗದವರ ಮೇಲೆ ವಿಧಿಸುತ್ತಿದ್ದ ತೆರಿಗೆಗಳು ಮೇಲಿಂದ ಮೇಲೆ ಈ ಪ್ರದೇಶದಲ್ಲಿ ಉಲ್ಲೇಖಗೊಂಡಿವೆ.[೨೨೫] ಈ ಪ್ರದೇಶದಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುವ ತೆರಿಗೆ ತೈಲಿಗರ ತೈಲೋದ್ಯಮಕ್ಕೆ ಸಂಬಂಧಿಸಿದ್ದು,[೨೨೬] ಇವರಲ್ಲದೆ ಅಗಸರು ಉಬ್ಬೆಗಳ ಲೆಕ್ಕದಲ್ಲಿ, ಚಿಪ್ಪಿಗರು ಅಂಗಡಿ ಲೆಕ್ಕದಲ್ಲಿ, ಬೆಸ್ತರು ದೀವರು ಬಲೆ ಮತ್ತು ಅಂಗಡಿ ಲೆಕ್ಕದಲ್ಲಿ, ಕುಂಬಾರರು ತಿಗರಿಯ ಲೆಕ್ಕದಲ್ಲಿ, ಮುಚ್ಚಿಗರು ಅಂಗಡಿ ಲೆಕ್ಕದಲ್ಲಿ ತೆರಿಗೆ ನೀಡುತ್ತಿದ್ದರು.[೨೨೭] ವೇಶ್ಯಾ ವೃತ್ತಿಯವರು ಕೂಡ ಸೂಳೆದೆರೆ, ಕನ್ನಡಿವಣಗಳನ್ನು ನೀಡುತ್ತಿದ್ದರು.

**೩. ಮಾರಾಟ ತೆರಿಗೆಗಳು ಅಥವಾ ವಾಣಿಜ್ಯ ತೆರಿಗೆಗಳ ಉಲ್ಲೇಖ :** ಸಂತೆಗೆ, ಪೇಟೆಗೆ ಬರುವ ಒಳವಾರು, ಹೊರವಾರು, ಸರಕುಗಳ ಮೇಲೆ, ತಲೆ ಹೊರೆ, ಕಾಲ್ನಡೆಗಳು ಅಂದರೆ ಎತ್ತು ಕತ್ತೆ ಇತ್ಯಾದಿಗಳ ಮೇಲೆ,

ಬಂಡಿಗಳ ಮೇಲೆ ಪೇಟೆಯ ಅಂಗಡಿಗಳ ಮೇಲೆ ಸಂತೆಗಳಲ್ಲಿನ ಮಾರಟ ಸರಕಿನ ಮೆಳವೆಗಳು, ಹೇರುಗಳ ಮೇಲೆ, ಮಾರಾಟವಾಗುವ ಪ್ರಾಣಿಗಳ ಮೇಲೆ ಉಪ್ಪಿನಿಂದ ಹಿಡಿದು ವಜ್ರ ವೈಡೂರ್ಯದ ಮಾರಾಟದವರೆಗೆ ತೆರಿಗೆ ವಿಧಿಸಲಾಗುತ್ತಿತ್ತು. ಉಪ್ಪಿನ ಮೊಳೆ, ಸೀರೆಯ ಮಳವೆ, ದವಸದ ಹೇರೊಂದಕ್ಕೆ ಬಳ್ಳ ೧ ತೆರಿಗೆ, ಸಂತೆಯಲ್ಲೆಡೆಯಕ್ಕಿ, ಎಣ್ಣೆಯ ಕೊಡ ಒಂದಕ್ಕೆ ಸೊಂಟಿಗೆ ೧ [೨೨೮] ಮಾರ್ಗದ ಕುರಿ, ಸ್ಥಳದಲ್ಲಿ ಮಾರಿದ ಕುರಿ ೧೦೦ ಕ್ಕೆ ದುಗ್ಗಾಣಿ ೧, ಮುಚ್ಚಿಗರ ಅಂಗಡಿ, ಡೀವರ ಅಂಗಡಿ, ಪಾಂಚಾಲರ ಅಂಗಡಿ, ಚಿಪ್ಪಿಗರ ಅಂಗಡಿ, ಜವಳಿ ಅಂಗಡಿ, ಚಿನುವಾರರ ಅಂಗಡಿ, ಪರದರ ಎತ್ತು ನಡೆ ಒಂದಕ್ಕೆ ಅಡ್ಡ ೧. ಹೀಗೆ ವ್ಯಾಪಾರಿಗಳಲ್ಲದೆ ಗುತ್ತಿಗೆ ಹಿಡಿದು ವ್ಯಾಪಾರ ಮಾಡುವ ಕಾರುಕರೂ ತೆರಿಗೆ ಪಾವತಿಸುತ್ತಿದ್ದರು.[೨೨೯]

**೪. ಸಾಮಾಜಿಕ ತೆರಿಗೆಗಳಲ್ಲಿ :** ಶುಭಕಾರ್ಯಗಳು ನಡೆದಾಗ ತೆರಬೇಕಾದ ಕಾಣಿಕೆಗಳು, ತಪ್ಪು ಮಾಡಿದವರಿಂದ ವಸೂಲಿ ಮಾಡುತ್ತಿದ್ದ ದಂಡ ಶುಲ್ಕಗಳು, ಯುದ್ಧ ಸಂದರ್ಭದ ಕಟಕ ಸೇಸೆಗಳು, ದಾನ ಕ್ರಯ ಮುಂತಾದ ಸಂದರ್ಭದಲ್ಲಿ ನೀಡುವ ಅಗ್ರಪೂಜೆ ಗದ್ಯಾಣ, ಪಾದ ಪೂಜಾಗದ್ಯಾಣಗಳು, ಮದುವೆಯ ಉತ್ಸವ ಸಂದರ್ಭದ ಹಂದರವಣ ಅಥವಾ ಮದುವೆದೆರೆಗಳು, ಅನೇಕ ಬಗೆಯ ಸಣ್ಣಪುಟ್ಟ ಸುಂಕಗಳು ವಿಧಿಸಲ್ಪಟ್ಟಿದ್ದವು. ಇವುಗಳನ್ನೆಲ್ಲ ಸಂಗ್ರಹಿಸಲು ವ್ಯವಸ್ಥಿತವಾದ ಏರ್ಪಾಟು ಇರುತ್ತಿತ್ತು. ಅರಸನಿಂದ ನೇಮಿಸಲ್ಪಟ್ಟ ತೆರಿಗೆ ಅಧಿಕಾರಿಗಳು ಸುಂಕಹೆಗ್ಗಡೆಗಳು, ಅವುಗಳನ್ನು ಶೇಖರಿಸಿಡಲು ಸುಂಕವಾಡಗಳು[೨೩೦] ಭಂಡಾರ ವಾಡಗಳು[೨೩೧] ಇರುತ್ತಿದ್ದವು. ಇಂಥಹ ಭಂಡಾರವಾಡದ ಮುಖ್ಯ ಅಧಿಕಾರಿಗಳು ಇರುತ್ತಿದ್ದರು.[೨೩೨]

ಒಟ್ಟಿನಲ್ಲಿ ತೆರಿಗೆಯಿಂದ ಸಾಮಾನ್ಯನಂತೂ ತಪ್ಪಿಸಿಕೊಳ್ಳಲು ಸಾಧ್ಯವಿರುತ್ತಿರಲಿಲ್ಲ. ಬ್ರಹ್ಮಾದೇಯ, ದೇವದಾನಗಳಿಗೆ ಕರಮಾನ್ಯವಾಗಿರುತ್ತಿದ್ದವು. ತೆರಿಗೆ ಸಂಗ್ರಹಿಸುವವರು ಬಡವನ ಸಮಸ್ಯೆಗಳಿಗೆ ಸ್ಪಂದಿಸುತ್ತಿರಲಿಲ್ಲವೆಂಬುದು ಸತ್ಯ.[೨೩೩]

ಅರಸೊತ್ತಿಗೆಗಳು ಬದಲಾದಾಗ, ಭೂಮಿಗಳು ಹಸ್ತಾಂತರವಾದಾಗ ತೆರಿಗೆಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳು ಕಂಡುಬಂದರೂ ಹೆಚ್ಚಿನವು ಹಳೆಯ ರೀತಿಯಲ್ಲಿಯೇ ಪೂರ್ವಮರ್ಯಾದೆಯನ್ನು [೨೩೪] ಮುಂದುವರಿಸಿಕೊಂಡು ಹೋಗುವ ವಿಚಾರಗಳು ಶಾಸನಗಳಲ್ಲಿ ಉಕ್ತವಾಗುತ್ತವೆ. ಈ ಪ್ರದೇಶದಲ್ಲಿ ೬೫ ಬಗೆಯ ತೆರಿಗೆಗಳು ಕಂಡುಬಂದಿದ್ದು, ಅನೇಕ ತೆರಿಗೆಗಳ ಅರ್ಥ ತಿಳಿಯುವುದಿಲ್ಲ.

ಶಾಸನಗಳು ಆದಾಯ ಮೂಲವನ್ನು ತಿಳಿಸುವಂತೆ ವ್ಯಯದ ವಿಚಾರಗಳನ್ನು ಅಷ್ಟಾಗಿ ತಿಳಿಸುವುದಿಲ್ಲ. ರಾಜ್ಯದ ರಕ್ಷಣೆ, ಸೈನ್ಯ ಸಂರಕ್ಷಣೆ ತರಬೇತಿ, ನೀರಾವರಿಗಾಗಿ ಕೆರೆ ಕಟ್ಟೆ, ಕಾಲುವೆ ನಿರ್ಮಾಣ, ಧರ್ಮಕಾರ್ಯಗಳು ಶ್ರೇಷ್ಠ ಕಟ್ಟಡ ದೇವಾಲಯ ಕೋಟೆ ನಿರ್ಮಾಣಗಳು. ಕವಿ, ಕಲಾವಿದ, ಪಂಡಿತರು ಸಾಂಸ್ಕೃತಿಕ ಕಾರ್ಯಕ್ರಮ ಉತ್ಸವಾದಿಗಳಿಗೆಂದು ಸಾಕಷ್ಟು ಹಣ ವ್ಯಯವಾಗುತ್ತಿತ್ತೆಂಬುದು ತಿಳಿದ ವಿಚಾರಗಳೇ. ರಾಜನ ಅರಮನೆಯ ಪರಿವಾರ, ಸಂಬಳ ಉಂಬಳಿ ಇತ್ಯಾದಿ ವೈಭವಗಳೆಲ್ಲ ಕಣ್ಮರೆಯಾಗಿ

ಹೋಗಿದ್ದರೂ ಇಂದು ಅವರು ನಿರ್ಮಿಸಿದ ಸುಂದರ ದೇವಾಲಯಗಳು ಅವರ ಸಂಪತ್ತನ್ನು ಅದರ ವಿನಿಯೋಗವನ್ನು ಕುರಿತು ಬೆಳಕು ಚೆಲ್ಲುತ್ತವೆ.

### ೩.೩.೨. ನಾಣ್ಯಗಳು-ಠಂಕಸಾಲೆ-ಕಮ್ಮಟದ ಅಧಿಕಾರಿಗಳು

ವಸ್ತು ವಿನಿಮಯ ಪದ್ಧತಿಯ ಜೊತೆಗೆ ನಾಣ್ಯ ಚಲಾವಣೆಯಾಗುತ್ತಿದ್ದುದರ ಬಗ್ಗೆ, ಉತ್ಖನನದಿಂದ ದೊರೆತಿರುವ ವಿವಿಧ ಬಗೆಯ, ಕಾಲದ ಮೌಲ್ಯದ ನಾಣ್ಯಗಳು, ಶಾಸಲೊಲ್ಲೇಖಿತ ನಾಣ್ಯಗಳ ವ್ಯವಹಾರ, ಠಂಕ ಸಾಲೆಗಳು, ಕಾವ್ಯಗಳಲ್ಲಿ ಶಾಸ್ತ್ರ ಕೃತಿಗಳಲ್ಲಿ ನಾಣ್ಯಗಳ ಚಲಾವಣೆ ಮೌಲ್ಯಗಳ ಬಗೆಗೆ ಸಾಕಷ್ಟು ವಿವರಗಳು ದೊರಕಿವೆ. ವಿದ್ವಾಂಸರು ಆ ಬಗೆಗೆ ಈಗಾಗಲೇ ಅಧ್ಯಯನಗಳನ್ನು ಕೈಗೊಂಡಿದ್ದಾರೆ.[೨೩೫]

ಭೂಮಿವಿಕ್ರಯ ಸಂದರ್ಭಗಳಲ್ಲಿ, ಸಂತೆ ಶಾಸನಗಳ ತೆರಿಗೆ ಹಾಗೂ ಇತರೆ ತೆರಿಗೆ ವಿವರಗಳಲ್ಲಿ, ದೇವಾಲಯಗಳಿಗೆ ಭಕ್ತಾದಿಗಳು ನೀಡಿದ ಬೀಜಹೊನ್ನು ಕಾಣಿಕೆ ವಿವರಗಳಲ್ಲಿ ವಿವಿಧ ಮೌಲ್ಯದ ನಾಣ್ಯಗಳ ಹೆಸರುಗಳು ಅವುಗಳ ಪ್ರಭೇದಗಳು ತಿಳಿದುಬರುತ್ತವೆ. ಗದ್ಯಾಣ, ಪಟ್ಟತೂಕಗದ್ಯಾಣ, ನಿಷ್ಕ, ವರಹ, ಪಣ, ಅಡ್ಡ, ಹಾಗ, ವೀಸ, ಬೇಳೆ, ತಾರ, ಕಾಣೆ, ದುಗ್ಗಾಣಿ ಇವುಗಳ ಉಲ್ಲೇಖಗಳು ಕಂಡುಬಂದಿವೆ. ಅದೇ ರೀತಿ ಪ್ರಾಸಂಗಿಕವಾಗಿ ಕಮ್ಮಟದ ಅಧಿಕಾರಿಗಳ ಕಮ್ಮಟದ ಓಜರ ವಿಚಾರಗಳನ್ನು ಕಾಣಬಹುದು.

ನಾಣ್ಯಗಳನ್ನು ಮುದ್ರಿಸುವ ಸ್ಥಳಗಳನ್ನು ಕಮ್ಮಟ ಎಂದೂ ಠಂಕಸಾಲೆಗಳೆಂದೂ ಕರೆಯುತ್ತಿದ್ದರು. ಇಮ್ಮಡಿ ವೀರಬಲ್ಲಾಳನ ಪಾದಪದ್ಮೋಪ ಜೀವಿಯಾದ ಚಟ್ಟಪ್ಪಸೆಟ್ಟಿ ಎಂಬ ಪ್ರಸಿದ್ಧ ವ್ಯಾಪಾರಿಯನ್ನು 'ಕಮ್ಮಟದ ಚಟ್ಟಿಸೆಟ್ಟಿ' ಎಂದು ಶಾಸನ ಕರೆದಿದೆ.[೨೩೬] ಈತ ಮತ್ತು ಇವನ ಸೋದರ ದಾಸಿ ಸೆಟ್ಟಿಯರು ಒಳನಾಡು ಮತ್ತು ಹೊರನಾಡಿನ ಅತ್ಯಂತ ಪ್ರಸಿದ್ಧ ವ್ಯಾಪರಿಗಳಾಗಿದ್ದರು. ಮುತ್ತುಗಳು, ಆನೆ ಕುದುರೆಗಳನ್ನು ಬಹಿತ್ರದಿಂದ ತಂದು ಮಾರಾಟಮಾಡುತ್ತಿದ ಚಟ್ಟಪಸೆಟ್ಟಿ ಅರಸನಿಗೆ ಆಪ್ತನಾಗಿದ್ದು, ಕಮ್ಮಟದ ಆಧಿಕಾರಿಯಾಗಿದ್ದನೆಂದು ಹೇಳಿರುವುದರಿಂದ ಅವನ ವಾಸಸ್ಥಳವಾದ ಬಾಣಾವರದಲ್ಲಿ ಒಂದು ಠಂಕಸಾಲೆ ಇದ್ದಿರಬಹುದಾದ ಸಾಧ್ಯತೆಗಳನ್ನು ತಳ್ಳಿಹಾಕಲಾಗದು.* ಅತಿ ಹೆಚ್ಚು ಬೆಲೆ ಬಾಳುವ ಚಿನ್ನದ ನಾಣ್ಯಗಳನ್ನು ನಿಖರವಾಗಿಯೂ ನಿರ್ದಿಷ್ಟವಾಗಿಯೂ ಟಂಕಿಸ ಬೇಕಾಗುತ್ತಿದ್ದುದರಿಂದ ಇದು ಅತ್ಯಂತ ಗುರುತರವಾದ ಹೊಣೆಗಾರಿಕೆಯಾಗಿರುತ್ತಿತ್ತು. ಹಾಗಾಗಿ ನಂಬಿಕೆಗೆ ಅರ್ಹರಾದವರೂ, ಚಿನ್ನಬೆಳ್ಳಿ ತೂಕಾದಿಗಳಲ್ಲಿ ಪರಿಣತರು ಆದವರಿಗೆ ಇಂತಹ ಕೆಲಸಗಳನ್ನು ವಹಿಸಿಕೊಡಬೇಕಾಗುತ್ತಿತ್ತು. ಅತ್ಯಂತ ಸಿರಿವಂತನಾದ ಈ ಚಟ್ಟಿಸೆಟ್ಟಿ ಅಂತಹ ಒಬ್ಬ ಶ್ರೀಮಂತನಾಗಿದ್ದ. 'ಸರಕಾರದಿಂದ ಪರವಾನಗಿ ಪಡೆದ

---

* ಅಂಗೈ ಅಗಲದ ಪುಟ್ಟ ತೆಂಗಿನಹೋಳಿಗೆಗಳನ್ನು ಬಾಣಾವರದ ಬಿಲ್ಲೆ ಎಂದು ಕರೆಯುವ ವಾಡಿಕೆ ಹಾಸನ ಜಿಲ್ಲೆಯಲ್ಲಿದೆ. ಅರಿಸಿಣ ಬಣ್ಣದ ದುಂಡಾದ ಈ ಹೋಳಿಗೆಗಳು ಬಾಣಾವರದ ಕಮ್ಮಟದಲ್ಲಿ ಠಂಕಿಸಲಾಗುತ್ತಿದ್ದ ಬಂಗಾರದ ನಾಣ್ಯವನ್ನು ಹೋಲುತ್ತಿದ್ದಿರಬಹುದಾದ ಕಾರಣ ಆ ಹೆಸರು ಬಂದಿರಬಹುದು.

ಖಾಸಗಿ ವ್ಯಕ್ತಿ ಸಂಸ್ಥೆಗಳು ಇಂತಹ ಕಾರ್ಯವನ್ನು ನಿರ್ವಹಿಸುತ್ತಿದ್ದವು."[೨೩೭] ಕಮ್ಮಟದ ಬಸವಣ್ಣನೆಂಬುವವನ ಉಲ್ಲೇಖ ಈ ಪ್ರದೇಶದಲ್ಲಿ ಕಂಡುಬಂದಿದೆ.

ಅರಸೀಕೆರೆಯ ೧೧೮೯ರ ಶಾಸನವೊಂದರಲ್ಲಿ[೨೩೮] ಉಲ್ಲೇಖವಾಗಿರುವ ಅರಸೀಕೆರೆಯ ರಾಜ್ಯಾಧ್ಯಕ್ಷರಲ್ಲಿ ಒಬ್ಬನಾದ ಕೇತಮಲ್ಲನೆಂಬ ಅಧಿಕಾರಿಯು ಕೇನೆಕಾರ ಎಂದರೆ ಟಂಕಸಾಲೆಯ ಗುತ್ತಿಗೆದಾರನಾಗಿದ್ದಿರ ಬಹುದೆಂದೂ ಅರಸೀಕೆರೆಯಲ್ಲಿ ಬಹುಶಃ ಒಂದು ಕಮ್ಮಟವಿದ್ದಿರಲೇ ಬೇಕೆಂದು ಎಸ್.ಶೆಟ್ಟರ್ ಅವರು ಊಹಿಸಿದ್ದಾರೆ.[೨೩೯] ಇದಕ್ಕೆ ಪುಷ್ಟಿಕೊಡುವಂತೆ ಈ ಶಾಸನದಲ್ಲಿ ಅಕ್ಕಸಾಲೆ ಬಿಟ್ಟಿಯೋಜ ಮಾಚೋಜರು ತಮಗೆ ನಡೆವ ಹಾರಿಕಾಯವನ್ನು ದೇವರಿಗೆ ಬಿಟ್ಟಿದ್ದಾರೆ. ಬಹುಶಃ ಇವರು ಕೇತಮಲ್ಲನ ಕಮ್ಮಟದಲ್ಲಿನ ಓಜರಿರಬೇಕು. 'ತಮಗೆ ನಡೆವ ಹಾರಿಕಾಯ" ಎಂಬುದು ಅವರ ನಿಯಮಿತ ಆದಾಯವೆಂಬುದು ಸ್ಪಷ್ಟವಾಗಿದೆ. ನೋಟದ ಚಂದಪ್ಪನೆಂಬ ಅಧಿಕಾರಿ ಕೆಲ್ಲಂಗೆರೆಯ ಕೆರೆಯ ಬಂಡಿಗೂ ಬಂಡಿನಡೆಸುವ ಆಳ ಜೀವಿತಕ್ಕೂ ದಾನ ನೀಡಿದ್ದಾನೆ.[೨೪೦] ನೋಟವಣ ಎಂಬುದು ನಾಣ್ಯ ಪರೀಕ್ಷಕರು ಕೊಡಬೇಕಾದ ಕರ[೨೪೧]. ಅಂದರೆ ನಾಣ್ಯಗಳ ತೂಕ ಚಿನ್ನ ಬೆಳ್ಳಿ ಇತ್ಯಾದಿಗಳ ಶುದ್ಧತೆಯನ್ನು ಪರೀಕ್ಷಿಸಲೆಂದೇ ಪ್ರತ್ಯೇಕ ನಿಷ್ಣಾತ ಓಜರು ಇರುತ್ತಿದ್ದರು. ಹಾರಿಕಾಯ ಎಂಬುದು ಈ ನೋಟವಣದ ಮತ್ತೊಂದು ಹೆಸರಾಗಿದೆ. ಪಾರ್ ಎಂದರೆ ಲಕ್ಷಿಸು, ನೋಡು ಎಂಬ ಅರ್ಥವಿದೆ.[೨೪೨] ಪಾರ್ >ಹಾರ್ ಆಗಿದ್ದು, ಹಾರಿಕ ಎಂಬುದು ಲಕ್ಷಿಸುವವ, ಪರೀಕ್ಷಕ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ ಎಂದು ಹೇಳಬಹುದು. ನೋಟವಣ ಅಥವಾ ಹಾರಿಕಾಯ ಕಮ್ಮಟದ ಅಕ್ಕಸಾಲಿಗರೇ ನೀಡುತ್ತಿದ್ದ ಪ್ರತ್ಯೇಕ ಕರವೆಂದು ಹೇಳಬಹುದು.

ಕಣೆಕಟ್ಟೆಯ ಒಂದು ಶಾಸನ[೨೪೩] ಬಮ್ಮೋಜ ಮಾಚೋಜರು ಕಮಠೇಶ್ವರ ದೇವರ ಲಿಂಗ ಪ್ರತಿಷ್ಠೆಯನ್ನು ಮಾಡಿಸಿ ದಾನಗಳನ್ನು ನೀಡಿದ್ದನ್ನು ಹೇಳಿದೆ. ಈ ಓಜರು ಕಮ್ಮಟದ ಅಕ್ಕಸಾಲಿಗಳಿರಬಹುದೆಂದು ತೋರುತ್ತದೆ. ಭಂಡಾರವಾಡವಾಗಿದ್ದ ಹಲಕೂರಿನಲ್ಲೂ ಒಂದು ಕಮಠೇಶ್ವರ ದೇವಸ್ಥಾನವಿದ್ದಿತು.[೨೪೪] ಕಮ್ಮಟದ ಓಜುಗಳ ಪ್ರತ್ಯೇಕ ಶ್ರೇಣಿಯಿದ್ದು, ಅವರ ಶ್ರೇಣಿ ಕಟ್ಟಿಸುವ ದೇವಾಲಯಗಳನ್ನು ಕಮಠೇಶ್ವರ ದೇವಾಲಯಗಳೆಂದು ಕರೆಯುತ್ತಾರೆ.[೨೪೫]

**ಅಡಿಟಿಪ್ಪಣಿಗಳು**

೧. ಪ್ರೊ.ಕೆ.ಎಸ್.ಶರ್ಮ, ಮಾರ್ಕ್ಸ್-ಮಾರ್ಕ್ಸವಾದ : ಕಾರ್ಲ್‌ಮಾರ್ಕ್ಸ್ ಎಂಗೆಲ್ಸ್ ಮುನ್ನುಡಿ

೨. ಬರ್ಟನ್ ಸ್ಟೈನ್ ಪೆಸೆಂಟ್ ಸ್ಟೇಟ್ ಅಂಡ್ ಸೊಸೈಟಿ ಇನ್ ಮಿಡೀವಲ್ ಸೌತ್ ಇಂಡಿಯಾ, ಕ್ರಿ.ಶ.೧೯೫೦

೩. ಎ.ಕ.೧೦ (ಪರಿ)ಅ.ಕೆ.ಶಾ.ಸಂ.೩೧೬ ಅರಕೆರೆ ೨೮೪, ನೇರ್ಲಿಗೆ ಕ್ರಿ.ಶ.೯೭೧-೭೨-

೪. ಎಸ್.ಜಯಪ್ಪಗೌಡ, ಕರ್ನಾಟಕದ ಕಡಲಾಚೆಯ ಸಂಪರ್ಕಗಳು ಪು.೭೩

೫. ಆರ್.ಶಾಮಾಶಾಸ್ತ್ರಿ, ಕೌಟಿಲ್ಯನ ಅರ್ಥಶಾಸ್ತ್ರ, ಪು.೪೭

೬. ಎ.ಕ.೧೦ ಅ.ಕೆ.ಶಾ.ಸಂ.೨೬೨, ಮಾದನಹಳ್ಳಿ, ೨೧೮ ಹಿರಿಯೂರು

೭. ಎ.ಕ.೯.ಬೆಲೂರು ಶಾ.ಸಂ.೪೩೮ ಕ್ರಿ.ಶ.೧೧೮೯ ಎ.ಕ.೧೦.ಅ.ಕೆ.ಶಾ.ಸಂ.೧೯೬

೮. ಪಿ.ವಿ.ಕಾಣೆ, ಹಿಸ್ಟರಿ ಆಫ್ ಧರ್ಮಶಾಸ್ತ್ರ HI, ಪು.೮೩೭

೯. ಎ.ಕ.೧೦.ಅ.ಕೆ.ಶಾ.ಸಂ.೨೩೯, ಕ್ರಿ.ಶ.೧೮೧೭, ಹಾರನಹಳ್ಳಿ, ಶಾ.ಸಂ.೨೨೮, ಮುರುಂಡಿ ಕ್ರಿ.ಶ.೧೪ನೇ ಶತಮಾನ

೧೦. ಅದೇ, ಶಾ.ಸಂ.೧೪೯, ೧೬೮, ೧೮೪, ೧೯೭, ೨೮೫, ೫೧, ೨೨೭, ೧೧೩

೧೧. ಅದೇ, ಶಾ.ಸಂ.೨೩, ೭, ೩೧, ೨೩೨, ೨೩೪, ೩೧೭, ೩೧೮, ೩೧೪

೧೨. ಅದೇ, ಚ.ಪ.೯೪, ೧೨೦.ಅ.ಕೆ.೩೧೮, ಹಿರಿಯೂರು, ೩೧೪ ಅರಕೆರೆ

೧೩. ಅದೇ, ಅ.ಕೆ.೨೩೯, ೨೦೬, ೧೯೨, ೧೯೩, ೨೭೮

೧೪. ಅದೇ ಅ.ಕೆ.ಶಾ.ಸಂ.೭೩ ಕ್ರಿ.ಶ.೧೧೨೯, ೨೨೭, ಕ್ರಿ.ಶ.೧೧೭೪, ೮೮ ಕ್ರಿ.ಶ.೧೧೮೯, ೧೨೧ ಕ್ರಿ.ಶ.೧೧೮೯, ೧೨೮ ಕ್ರಿ.ಶ.೧೧೯೬

೧೫. ಅದೇ ಅ.ಕೆ.ಶಾ.ಸಂ.೨೧೩ ಕ್ರಿ.ಶ.೧೨೩೯ ಬಾಗಡೆ, ನೀರ್ಗುಂದ ಸ್ವಂತ ಅನುಬಂಧ ಶಾ.ಸಂ.೧, ೨

೧೬. ಅದೇ, ಚ.ಪ.ಶಾ.ಸಂ.೯೪, ಅಗ್ರಹಾರ, ಬೆಳುಗಲಿ, ಕ್ರಿ.ಶ.೧೨೦೯

೧೭. ಒಕ್ಕಲಿಗ ಮುದ್ದಣ್ಣನ ವಚನ, ೯, ೧೦, ಸಂಕೀರ್ಣವಚನಗಳು, ಸಂ.೧, ಪು.೬೭೦-೬೭೫

೧೮. ಎ.ಕ.೧೦.ಅ.ಕೆ.ಶಾ.ಸಂ.೨೧೩, ಕ್ರಿ.ಶ.೧೨೩೯, ಬಾಗಡೆ

೧೯. ಸ್ವಂತ ಅನುಬಂಧ ಶಾ.ಸಂ.೧೦, ಭಾಗೇಶಪುರ, ಕ್ರಿ.ಶ.೧೧೯೯

೨೦. ಅದೇ ಅ.ಕೆ.ಶಾ.ಸಂ.೩೧೮, ಹಿರಿಯೂರು, ಕ್ರಿ.ಶ.೧೨೫೮

೨೧. ಅದೇ ಅ.ಕೆ.ಶಾ.ಸಂ.೨೩೩, ಹಾರನಹಳ್ಳಿ, ಕ್ರಿ.ಶ.೧೨೬೫

೨೨. ಡಾ.ಕೆ.ಮೋಹನಕೃಷ್ಣ ರೈ, ಪ್ರಭುತ್ವ ಮತ್ತು ಜನತೆ

೨೩. ಎ.ಕ.೧೦.ಅ.ಕೆ.ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೨೪. ಎಂ.ಎ.ಆರ್.೧೯೩೬, ನಂ.೧೯, ಪು.೮೪, ಕ್ರಿ.ಶ.೧೨೫೧

೨೫. ಎ.ಕ.೮. (ಪರಿ), ಆಲೂರು ಶಾ.ಸಂ.೧೦, ಹೊಲಹಳ್ಳಿ; ಶಾ.ಸಂ.೧೧ ಮಡಬಲು, ಕ್ರಿ.ಶ.೧೨೧೧

೨೬. 'ಚಿತ್ರಗುಪ್ತರೆಂಬ ಕರಣಿಕರ ಸಂಪುಟಕೆ ಬರಿಸದೆ, ಯಮರಾಜನೆಂಬ ಅರಸಿಗೆ ಕೋರನಿಕ್ಕದೆ ಸುಖಿಯಾಗಿಪ್ಪ ಒಕ್ಕಲ ಮಗನ ತೋರಿ ಬದುಕಿಸಯ್ಯ ಜೀವಧನದೊಡೆಯ" 'ಮೂರಡಿ ಮಣ್ಣಿಗೆ ಆರು ಹೊನ್ನತ್ತೆತ್ತು ಮೀರಿ ಹದಿಕೆಯ ಬೇಡೆನೆಂದು ಈ ಗ್ರಾಮದವರ ಮುಂದಿಟ್ಟು" 'ಗುತ್ತಿಗೆ ಕಾರಂಗೆ ಮತ್ತೆ ಕುಳವುಂಟೆ" ಸಂಕೀರ್ಣವಚನ ಸಂಪುಟ

೨೭. ಎ.ಇ.xxiii ಪು.೭೪, ಅಕ್ಕಲಕೋಟೆ

೨೮. ಪ್ರಾಚೀನ ಕರ್ನಾಟಕದಲ್ಲಿ ಬಿಟ್ಟಿ(ಉಚಿತ ಸೇವೆ) ಪ್ರಚಲಿತವಿತ್ತೆ? ಡಾ.ವಿಠ್ಠಲ ಪೋತದಾರ ಇ.ದ.ಸಂ.೧೪, ಪು.೨೩೪

೨೯. ಯು.ಎನ್.ಗೋಪಾಲ್, ದಿ ಅಗ್ರೇರಿಯನ್ ಸಿಸ್ಟಮ್, ಪು.೮೯

೩೦. ಮಿತಾಕ್ಷರ II, 114(ಅನು), ಪು.೯೮೩

೩೧. ಎ.ಕ.೧೦.ಅ.ಕೆ.ಶಾ.ಸಂ.೨೪೫, ಹೊಸಕಲ್ಯಾಡಿ, ಕ್ರಿ.ಶ.೧೨೧೪

೩೨. ಅದೇ ಅ.ಕೆ.ಶಾಸಂ.೩೧೮, ಹಿರಿಯೂರು, ಕ್ರಿ.ಶ.೧೨೫೮, ೨೪೭, ಉಂಡಿಗನಾಳು, ಕ್ರಿ.ಶ.೧೨೨೩

೩೩. ಅದೇ ಅ.ಕೆ.ಶಾ.ಸಂ.೨೮೯, ಮೊಸಳೆ, ಕ್ರಿ.ಶ.೧೨೮೭

೩೪. ಅದೇ ಶಾ.ಸಂ.೮೯, ಕ್ರಿ.ಶ.೧೨೭೪, ಕಣಿಕಟ್ಟೆ ೧೮೬ ಕ್ರಿ.ಶ.೧೩೩೮, ಆಲದಹಳ್ಳಿ, ೩೧೭, ಹಿರಿಯೂರು, ಕ್ರಿ.ಶ.೧೨೫೮

೩೫. ಅದೇ ಶಾ.ಸಂ.೩೧೫, ಅರಕೆರೆ, ಕ್ರಿ.ಶ.೧೨೫೩

೩೬. ಅದೇ, ಶಾ.ಸಂ.೨೩೨, ಹಾರನಹಳ್ಳಿ, ಕ್ರಿ.ಶ.೧೨೩೪

೩೭. ಅದೇ ಶಾ.ಸಂ.೩೧೭, ಕ್ರಿ.ಶ.೧೨೫೪, ಹಿರಿಯೂರು, ೨೮೯, ಮೊಸಳೆ, ಕ್ರಿ.ಶ.೧೨೮೭,

೩೮. ಅದೇ ಶಾ.ಸಂ.೨೦೭, ಕ್ರಿ.ಶ.೧೫೩೫, ಚಿಕ್ಕಗಂಡಸಿ, ೧೮೯, ಬಾಗಾವಾಳು, ಕ್ರಿ.ಶ.೧೩೩೮

೩೯. ಅದೇ ಶಾ.ಸಂ.೨೪೭, ಕ್ರಿ.ಶ.೧೨೨೩, ಉಂಡಿಗನಾಳು, ೨೨೩, ಗೀಜಿಹಳ್ಳಿ, ಕ್ರಿ.ಶ.೧೨-೧೩ನೇ ಶತಮಾನ

೪೦. ಅದೇ ಶಾ.ಸಂ.೮೮, ಕಣಕಟ್ಟೆ, ಕ್ರಿ.ಶ.೧೧೮೯

೪೧. ಅದೇ ಶಾ.ಸಂ.೧೨೪, ನಾಗವೇದಿ, ಕ್ರಿ.ಶ.೧೨೮೯

೪೨. ಅದೇ ಶಾ.ಸಂ.೧೬೧, ತಳಿರೂರು, ಕ್ರಿ.ಶ.೧೧೯೧

೪೩. ಅದೇ, ಶಾ.ಸಂ.೧೬೧, ಕ್ರಿ.ಶ.೧೨೩೮, ೨೪೮ ಉಂಡಿಗನಾಳು, ಕ್ರಿ.ಶ.೧೨೭೬

೪೪. ಅದೇ ಶಾ.ಸಂ.೩೧, ಅರಸೀಕೆರೆ, ಕ್ರಿ.ಶ.೧೨೧೯

೪೫. ಅದೇ ಶಾ.ಸಂ.೨೪೫, ಹೊಸಕಲ್ಯಾಡಿ, ೧೬೮, ೧೬೧, ತಳಲೂರು, ಕ್ರಿ.ಶ.೧೨೦೦

೪೬. ಅದೇ ಶಾ.ಸಂ.೩೧೫, ಅರಕೆರೆ, ಕ್ರಿ.ಶ.೧೨೩೪ ೩೧೭, ಹಿರಿಯೂರು, ಕ್ರಿ.ಸ.೧೨೫೪

೪೭. ಅದೇ ಶಾ.ಸರ್.೯೬, ಜೆ.ಸಿ.ಪುರ, ಕ್ರಿ.ಶ.೧೧೭೭

೪೮. ಅದೇ ಶಾ.ಸಂ.೧೭೪, ರೋಡಿಹಳ್ಳಿ, ಕ್ರಿ.ಶ.೧೧೫೮

೪೯. ಅದೇ, ಶಾ.ಸಂ.೩೧೯, ಹಿರಿಯೂರು, ಕ್ರಿ.ಶ.೧೨೦೭

೫೦. ಅದೇ, ಶಾ.ಸರ್.೯೬, ಜೆ.ಸಿ.ಪುರ, ಕ್ರಿ.ಶ.೧೧೭೭

೫೧. ಅದೇ ಶಾ.ಸಂ.೫೨, ಬೆಂಡೆಕೆರೆ, ಕ್ರಿ.ಶ.೧೨೩೨

೫೨. ಅದೇ ಶಾ.ಸಂ.೩೧೫, ಅರಕೆರೆ, ಕ್ರಿ.ಶ.೧೨೫೩

೫೩. ಅದೇ, ಶಾ.ಸಂ.೧೬೬, ತಳಲೂರು, ಕ್ರಿ.ಶ.೧೨೨೦

೫೪. ಅದೇ ಶಾ.ಸಂ.೧೮೬, ಹುಲ್ಲೇಕೆರೆ, ಕ್ರಿ.ಶ.೧೨೫೪

೫೫. ಅದೇ, ಶಾ.ಸಂ.೨೧೬, ಕ್ರಿ.ಶ.೧೨೨೭, ಮುದುಡಿ, ೨೪ ಕ್ರಿ.ಶ.೧೨೩ ಅರಸೀಕೆರೆ ೧೨೯, ಹಿರೇಕಲ್ಲುಬೆಟ್ಟ, ಕ್ರಿ.ಶ.೧೧೭೪

೫೬. ಅದೇ ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೫೭. ಅದೇ ಶಾ.ಸಂ.೨೪೭, ಉಂಡಿಗನಾಳು, ಕ್ರಿ.ಶ.೧೨೨೩

೫೮. ಅಭಿದಾನವಸ್ತುಕೋಶ (ಸಂ), ಎ.ವೆಂಕಟರಾವ್ ಮತ್ತು ಎಚ್.ಶೇಷ ಅಯ್ಯಂಗಾರ್, ೧೯೩೩

೫೯. ಡಾ.ಜಗದೀಶ್, ಮೆಜರ್‌ಮೆಂಟ್ ಸಿಸ್ಟಮ್ ಇನ್ ಕರ್ನಾಟಕ

೬೦. ಪ್ರವಾಸಿ ಕಂಡ ಇಂಡಿಯಾ, ಸಂ.೧, ಪು.೩೫೪

೬೧. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೩೩, ಕ್ರಿ.ಶ.೧೧೮೪, ಅರಸೀಕೆರೆ ೪೭, ಜಾಜೂರು, ಕ್ರಿ.ಶ.ಸು.೧೨೦೦

೬೨. ಅದೇ ಶಾ.ಸಂ.೫೨, ಬೆಂಡೆಕೆರೆ, ಕ್ರಿ.ಶ.೧೨೩೨

೬೩. ಅದೇ ಶಾ.ಸಂ.೩೧೨, ಕೋಳಿಗುಂದ, ಕ್ರಿ.ಶ.೧೨೩೪

೬೪. ಅದೇ ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೬೫. ಅದೇ ಶಾ.ಸಂ.೮೧, ಕಣಕಟ್ಟೆ, ಕ್ರಿ.ಶ.೧೩೪೦

೬೬. ಅದೇ ಶಾ.ಸಂ.೨೯೪, ಮೊಸಳೆ, ಕ್ರಿ.ಶ.೧೨೮೯

೬೭. ಅದೇ, ಶಾ.ಸಂ.೫೨, ಬೆಂಡೆಕೆರೆ, ಕ್ರಿ.ಶ.೧೨೩೨

೬೮. ಪ್ರವಾಸಿ ಕಂಡ ಇಂಡಿಯಾ, ಸಂ.೧, ಪು.೨೫೪

೬೯. ಎ.ಕ.೧೦ (ಪರಿ)ಚ.ಪ.ಶಾ.ಸಂ.೧೧೨, ಕ್ರಿ.ಶ.೧೨೫೨, ೧೧೧, ನುಗ್ಗೇಹಳ್ಳಿ, ಕ್ರಿ.ಶ.೧೨೫೩

೭೦. ಅದೇ, ಅ.ಕೆ.ಶಾ.ಸಂ.೨೯೪, ಕ್ರಿ.ಶ.೧೨೮೯, ಮೊಸಳೆ, ೩೧೪, ಅರೆಕೆರೆ, ಕ್ರಿ.ಶ.೧೨೩೩

೭೧. ಅದೇ, ಶಾ.ಸಂ.೨೯೨, ಮೊಸಳೆ, ಕ್ರಿ.ಶ.೧೨೮೮

೭೨. ಅದೇ ಶಾ.ಸಂ.೯೮, ಜೆ.ಸಿ.ಪುರ, ಕ್ರಿ.ಶ.೧೩೭೪

೭೩. ಅದೇ, ಶಾ.ಸಂ.೪೭, ಜಾಜೂರು, ಕ್ರಿ.ಶ.೧೨-೧೩ನೇ ಶತಮಾನ

೭೪. ಅದೇ, ಶಾ.ಸಂ.೨೬೮, ಕ್ರಿ.ಶ.೧೧೬೮-೬೯, ಬಂದೂರು, ಎ.ಕ.೮ ಹಾಸನ, ಕಿತ್ತನಕೆರೆ, ಶಾ.ಸಂ.೧೦೬

೭೫. ಮೇರೆಗಲ್ಲುಗಳು, ವಿಠಲ ಪೋತದಾರ, ಇ.ದ.ಸಂ.೯, ಪು.೧೨೬

೭೬. ಎ.ಕ.೧೦ (ಪರಿ)ಅ.ಕೆ.ಶಾ.ಸಂ.೩೧೨, ಕೋಳಿಗುಂದ, ಕ್ರಿ.ಶ.೧೨೩೪

೭೭. ಅದೇ, ಶಾ.ಸಂ.೩೧೪, ಅರಕೆರೆ, ಕ್ರಿ.ಶ.೧೨೩೩

೭೮. ಅದೇ, ಶಾ.ಸಂ.೨೨೭, ಮುರುಂಡಿ, ಕ್ರಿ.ಶ.೧೧೭೪

೭೯. ಅದೇ, ಶಾ.ಸಂ.೨೦೦, ಗಂಡಸಿ, ಕ್ರಿ.ಶ.೧೨೩೦

೮೦. ಡಾ.ಜಗದೀಶ, ಪೂರ್ವೋಕ್ತ

೮೧. ಎ.ಕ.೧೦ (ಪರಿ)ಅ.ಕೆ.ಶಾ.ಸಂ.೧೯೫, ಬಾಗಾವಾಳು, ಕ್ರಿ.ಶ.೧೩೩೮

೮೨. ಅದೇ, ಶಾ.ಸಂ.೫೨, ಕ್ರಿ.ಶ.೧೨೩೨, ಬೆಂಡೆಕೆರೆ, ೨೪೮, ಉಂಡಿಗನಾಳು, ಕ್ರಿ.ಶ.೧೨೭೬

೮೩. ಅದೇ, ಶಾ.ಸಂ.೨೭೭, ದ್ಯಾಮೇನಹಳ್ಳಿ, ಕ್ರಿ.ಶ.೧೧೮೯

೮೪. ಅದೇ, ಶಾ.ಸಂ.೨೯೧, ಮೊಸಳೆ, ಕ್ರಿ.ಶ.೧೨೮೮

೮೫. ಅದೇ, ಶಾ.ಸಂ.೯೨, ಕಣಕಟ್ಟೆ, ಕ್ರಿ.ಶ.೧೧೫೧

೮೬. ಡಾ.ಜಗದೀಶ, ಪೂರ್ವೋಕ್ತ

೮೭. ಎ.ಕ.೧೦ಪರಿ ಅ.ಕೆ.ಶಾ.ಸಂ.೫೨, ಬೆಂಡೆಕೆರೆ, ಕ್ರಿ.ಶ.೧೨೩೨

೮೮. ಅದೇ, ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೮೯. ಅದೇ, ಶಾ.ಸಂ.೧೮೨, ಯಡವನಹಳ್ಳಿ, ಕ್ರಿ.ಶ.೧೧೭೭

೯೦. ಅದೇ, ಶಾ.ಸಂ.೨೧೪, ಮುದುಡಿ, ಕ್ರಿ.ಶ.೧೧೯೫

೯೧. ಅದೇ, ಶಾ.ಸಂ.೨೪೨, ಕರುಗುಂದ, ಕ್ರಿ.ಶ.೧೧೬೨

೯೨. ಅದೇ, ಶಾ.ಸಂ.೨೬೮, ಬಂದೂರು, ಕ್ರಿ.ಶ.೧೧೬೮-೬೯

೯೩. ಅದೇ, ಶಾ.ಸಂ.೧೩೯, ಬೊಮ್ಮೇನಹಳ್ಳಿ, ಕ್ರಿ.ಶ.೧೧೬೪

೯೪. ಅದೇ, ಶಾ.ಸಂ.೨೩, ಅರಸೀಕೆರೆ, ಕ್ರಿ.ಶ.೧೧೭೩

೯೫. ಅದೇ, ಶಾ.ಸಂ.೫೫, ಬಾಣಾವರ, ಕ್ರಿ.ಶ.೧೧೮೭

೯೬. ಅದೇ, ಶಾ.ಸಂ.೬೩, ಕಲ್ಗುಂಡಿ, ಕ್ರಿ.ಶ.೧೧೩೫

೯೭. ಅದೇ, ಶಾ.ಸಂ.೨೩, ಅರಸೀಕೆರೆ, ಕ್ರಿ.ಶ.೧೧೭೩

೯೮. ಅದೇ, ಶಾ.ಸಂ.೩೬, ಅರಸೀಕೆರೆ, ಕ್ರಿ.ಶ.೧೧೯೦

೯೯. ಅದೇ ಶಾ.ಸಂ.೨೩, ಅರಸೀಕೆರೆ, ಕ್ರಿ.ಶ.೧೧೭೩

೧೦೦. ಅದೇ, ಶಾ.ಸಂ.೯೫, ಕಣಕಟ್ಟೆ, ಕ್ರಿ.ಶ.೧೧೪೩

೧೦೧. ಅದೇ ಶಾ.ಸಂ.೩೬, ಅರಸೀಕೆರೆ, ಕ್ರಿ.ಶ.೧೧೯೦

೧೦೨. ಅದೇ, ಶಾ.ಸಂ.೨೩, ಅರಸೀಕೆರೆ, ಕ್ರಿ.ಶ.೧೧೭೩

೧೦೩. ಅದೇ,

೧೦೪. ಅದೇ, ಶಾ.ಸಂ.೨೩೨, ಹಾರನಹಳ್ಳಿ, ಕ್ರಿ.ಶ.೧೨೩೬

೧೦೫. ಅದೇ, ಶಾ.ಸಂ.೧೯೫, ಬಾಗಾವಾಳು, ಕ್ರಿ.ಶ.೧೩೩೮

೧೦೬. ಎ.ಕ.೩ (ರೈಸ್) ತಿ.ನರಸೀಪುರ, ಸಂ.೨೭, ಎ.ಕ.೫ (ರೈಸ್) ಬೇಲೂರು ೮೬

೧೦೭. ಎ.ಕ.೧೦ (ಪರಿ) ಅ.ಕೆ.೨೪೦, ಹಾರನಹಳ್ಳಿ, ಕ್ರಿ.ಶ.೧೫೩೫

೧೦೮. ಅದೇ ಶಾ.ಸಂ.೨೦೭, ಚಿಕ್ಕಗಂಡಸಿ, ಕ್ರಿ.ಶ.೧೫೩೫

೧೦೯. ಅದೇ ಶಾ.ಸಂ.೨೨೭, ಮುರುಂಡಿ, ಕ್ರಿ.ಶ.೧೧೭೪

೧೧೦. ಅದೇ, ಶಾ.ಸಂ.೨೧೩, ಕ್ರಿ.ಶ.೧೨೩೯, ಬಾಗಡೆ, ಸ್ವಂತ ಅನುಬಂಧ ಸಂಖ್ಯೆ ೯, ೧೦

೧೧೧. ಕೌಟಿಲ್ಯನ ಅರ್ಥಶಾಸ್ತ್ರ iii-೯

೧೧೨. ಎ.ಕ.೧೦. (ಪರಿ) ಅ.ಕೆ.೮೬, ಕಣಕಟ್ಟೆ, ಕ್ರಿ.ಶ.೧೨೭೪

೧೧೩. ಅದೇ, ಶಾ.ಸಂ.೩೧೧, ೧೯೦, ೩೨೧, ೩೨೪, ಕೋಳಿಗುಂದ, ಬಾಗವಾಳು, ಕಾಟಿಕೆರೆ

೧೧೪. ಅದೇ, ಶಾ.ಸಂ.೯೬, ೨೫೪, ೨೩, ೫೫, ಹಲುಕೂರು, ಕುರಾದಹಳ್ಳಿ, ಅರಸೀಕೆರೆ, ಬಾಣಾವರ

೧೧೫. ಎ.ಇ.ಸಂ.xiv, ಪು.೧೦೮-೦೯

೧೧೬. ಎ.ಕ. (ಪರಿ) ಅ.ಕೆ.೩೨೧, ಕಾಟಿಕೆರೆ, ಕ್ರಿ.ಶ.೧೧೦೦

೧೧೭. ಅದೇ, ಶಾ.ಸಂ.೩೮, ಅರಸೀಕೆರೆ, ಕ್ರಿ.ಶ.೧೧೯೦

೧೧೮. ಅದೇ, ಶಾ.ಸಂ.೧೧೮, ಕುರಾದಹಳ್ಳಿ, ಕ್ರಿ.ಶ.೧೧ನೇ ಶತಮಾನ

೧೧೯. ರಾಘವಾಂಕ, ಸಿದ್ಧರಾಮ ಚಾರಿತ್ರ್ಯ, ಸಿದ್ಧರಾಮನ ಕೆರೆ ನಿರ್ಮಾಣ ಪ್ರಸಂಗ

೧೨೦. ಎ.ಕ.೧೦ (ಪಿರ) ಅ.ಕೆ.೩೨೫, ಅರಸೀಕೆರೆ, ಕ್ರಿ.ಶ.೧೧೮೧

೧೨೧. ಅದೇ ಶಾ.ಸಂ.೨೨೪, ಗೀಜಿಹಳ್ಳಿ, ಕ್ರಿ.ಶ.೧೨-೧೩ನೇ ಶತಮಾನ

೧೨೨. ಅದೇ, ಶಾ.ಸಂ.೯೧, ಬಾಗಾವಾಳು, ಕ್ರಿ.ಶ.೧೨೧೮

೧೨೩. ಅದೇ, ಶಾ.ಸಂ.೫೪ ಬೆಂಡೆಕೆರೆ, ೧೨ನೇ ಶತಮಾನ

೧೨೪. ಅದೇ, ಶಾ.ಸಂ.೨೨೨, ಗೀಜಿಹಳ್ಳಿ, ಕ್ರಿ.ಶ.೧೨೦೦

೧೨೫. ಅದೇ, ಶಾ.ಸಂ.೯೫, ೯೭, ೭೨, ೨೨೨, ಬಾಗಾವಾಳು, ಗಂಡಸಿ, ಕಣಕಟ್ಟೆ, ಗೀಜಿಹಳ್ಳಿ

೧೨೬. ಅದೇ, ಶಾ.ಸಂ.೩೨೨, ಕಾಟಿಕೆರೆ, ಕ್ರಿ.ಶ.೧೨ನೇ ಶತಮಾನ,

೧೨೭. ಅದೇ, ಶಾ.ಸಂ.೫೯, ೫೭, ೨೫೫, ೨೬೮, ೨೭೩, ೨೦೬, ೭೨

೧೨೮. ಅದೇ, ಶಾ.ಸಂ.೧೬೫, ೯೭, ೩೮, ೧೮೪, ೨೪೫

೧೨೯. ಅದೇ, ಶಾ.ಸಂ.೫೫, ೫೯, ೬೭, ೭೨

೧೩೦. ಅದೇ, ಶಾ.ಸಂ.೫೭, ೨೪೧, ೩೧೨, ೨೧೪, ೧೬೩, ೧೬೫

೧೩೧. ಅದೇ, ಶಾ.ಸಂ.೮೫, ಕಣಕಟ್ಟೆ, ಕ್ರಿ.ಶ.೧೧೩೨

೧೩೨. ಅದೇ, ಶಾ.ಸಂ.೨೨೪, ಗೀಜಿಹಳ್ಳಿ, ಕ್ರಿ.ಶ.೧೨೧೩

೧೩೩. ಅದೇ, ಶಾ.ಸಂ.೫೨, ಬೆಂಡೆಕೆರೆ, ಕ್ರಿ.ಶ.೧೧೮೯

೧೩೪. ಅದೇ, ಶಾ.ಸಂ.೧೬೧, ತಳಲೂರು, ಕ್ರಿ.ಶ.೧೧೯೧

೧೩೫. ಅದೇ, ಶಾ.ಸಂ.೧೭೪, ಕೋಡಿಹಳ್ಳಿ, ಕ್ರಿ.ಶ.೧೧೫೮

೧೩೬. ಅದೇ, ಶಾ.ಸಂ.೩೨೬, ಅರಸೀಕೆರೆ, ಕ್ರಿ.ಶ.೧೨೯೨

೧೩೭. ಅದೇ, ಶಾ.ಸಂ.೩೯, ಅರಸೀಕೆರೆ, ಕ್ರಿ.ಶ.೧೧೮೩

೧೩೮. ಅದೇ, ಶಾ.ಸಂ.೬೦, ಶಾನೆಗೆರೆ, ಕ್ರಿ.ಶ.೧೧೩೪

೧೩೯. ಅದೇ, ಶಾ.ಸಂ.೧೪೦, ಸೂಳೆಕೆರೆ, ಕ್ರಿ.ಶ.೧೧೫೯

೧೪೦. ಅದೇ, ಶಾ.ಸಂ.೯೬, ಜೆ.ಸಿ.ಪುರ, ಕ್ರಿ.ಶ.೧೧೭೭

೧೪೧. ಅದೇ, ಶಾ.ಸಂ.೫೨, ಬೆಂಡೆಕೆರೆ, ಕ್ರಿ.ಶ.೧೨೩೨

೧೪೨. ಅದೇ, ಶಾ.ಸಂ.೩೧೪, ಅರಕೆರೆ, ಕ್ರಿ.ಶ.೧೨೩೩

೧೪೩. ಅದೇ, ಶಾ.ಸಂ.೧೩೯, ಬೊಮ್ಮೇನಹಳ್ಳಿ, ಕ್ರಿ.ಶ.೧೧೯೪

೧೪೪. ಅದೇ, ಶಾ.ಸಂ.೨೩, ೪೨, ೯೬, ೩೬, ೨೮೬

೧೪೫. ಅಂಕಿ-ಅಂಶಗಳ ವಿಭಾಗದ ಕಿರು ಹೊತ್ತಿಗೆ, ಕರ್ನಾಟಕ ಸರ್ಕಾರ, ಕ್ರಿ.ಶ.೨೦೦೦

೧೪೬. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೨೪೮, ಉಂಡಿಗನಾಳು, ಕ್ರಿ.ಶ.೧೨೭೮

೧೪೭. ಅದೇ, ಶಾ.ಸಂ.೧೮೨, ಯಡವನಹಳ್ಳಿ, ಕ್ರಿ.ಶ.೧೧೭೭

೧೪೮. ಅದೇ, ಶಾ.ಸಂ.೩೧೯, ಹಿರಿಯೂರು, ಕ್ರಿ.ಶ.೧೨೦೭

೧೪೯. ಅದೇ, ಶಾ.ಸಂ.೧೧೮, ಹೊನ್ನಕಟ್ಟೆ, ಕ್ರಿ.ಶ.೧೨೧೪

೧೫೦. ಅದೇ, ಶಾ.ಸಂ.೧೯೮, ಗಂಡಸಿ, ಕ್ರಿ.ಶ.೧೪೦೩

೧೫೧. ಅದೇ, ಶಾ.ಸಂ.೨೦೬, ೨೪೦, ಚಿಕ್ಕಗಂಡಸಿ, ಹಾರನಹಳ್ಳಿ, ಕ್ರಿ.ಶ.೧೫೩೫,

೧೫೨. ಸಿ.ಎಸ್.ವಾಸುದೇವನ್, ಹಂಪಿ ಪರಿಸರದ ಕೆರೆಗಳು, ಪು.೬೬-೭೧

೧೫೩. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೫೫, ಬಾಣಾವರ, ಕ್ರಿ.ಶ.೧೧೮೭

೧೫೪. ಅದೇ, ಶಾ.ಸಂ.೨೪೪, ಗೋವಿಂದಪುರ, ಕ್ರಿ.ಶ.೧೧೩೬-೩೭

೧೫೫. ಅದೇ,

೧೫೬. ಅದೇ ಶಾ.ಸಂ.೩೨೧, ಕಾಟಿಕೆರೆ, ಕ್ರಿ.ಶ.೧೧೦೦

೧೫೭. ಅದೇ, ಶಾ.ಸಂ.೫೨, ಬೆಂಡೆಕೆರೆ, ಕ್ರಿ.ಶ.೧೨೩೨

೧೫೮. ಅದೇ, ಶಾ.ಸಂ.೫೭, ಮನಕತ್ತೂರು, ಕ್ರಿ.ಶ.೧೧೦೧

೧೫೯. ಅದೇ, ಶಾ.ಸಂ.೨೭೩, ಜಾವಗಲ್ಲು, ಕ್ರಿ.ಶ.೧೫೧೫

೧೬೦. ಅದೇ, ಶಾ.ಸಂ.೯೬, ಜೆ.ಸಿ.ಪುರ, ಕ್ರಿ.ಶ.೧೧೭೭

೧೬೧. ಅದೇ, ಶಾ.ಸಂ.೨೫೫, ಕುರಾದಹಳ್ಳಿ, ಕ್ರಿ.ಶ.೧೧ನೇ ಶತಮಾನ

೧೬೨. ಅದೇ, ಶಾ.ಸಂ.೭೨, ಕಣಕಟ್ಟೆ, ಕ್ರಿ.ಶ.೧೨೦೩

೧೬೩. ಅದೇ, ಶಾ.ಸಂ.೩೮, ಅರಸೀಕೆರೆ, ಕ್ರಿ.ಶ.೧೧೯೦

೧೬೪. ಅದೇ, ಶಾ.ಸಂ.೨೧೪, ಮುದುಡಿ, ಕ್ರಿ.ಶ.೧೧೯೫

೧೬೫. ಅದೇ, ಶಾ.ಸಂ.೬೨, ಗಂಜಿಕೆರೆ, ಕ್ರಿ.ಶ.೧೧೯೭

೧೬೭. ಅದೇ, ಶಾ.ಸಂ.೫೫, ಬಾಣಾವರ, ಕ್ರಿ.ಶ.೧೧೮೭

೧೬೮. ಅದೇ, ಶಾ.ಸಂ.೨೨೬, ಗೀಜಿಹಳ್ಳಿ, ಕ್ರಿ.ಶ.೧೨೨೭

೧೬೯. ಅದೇ, ಶಾ.ಸಂ.೮೮, ಕಣಕಟ್ಟೆ, ಕ್ರಿ.ಶ.೧೧೮೯

೧೭೦. ಅದೇ, ಶಾ.ಸಂ.೧೧೮, ಹೊನ್ನಕಟ್ಟೆ, ಕ್ರಿ.ಶ.೧೨೧೪

೧೭೧. ಅದೇ, ಶಾ.ಸಂ.೭೨, ಕಣಕಟ್ಟೆ, ಕ್ರಿ.ಶ.೧೨೦೮

೧೭೨. ಅದೇ, ಶಾ.ಸಂ.೧೯೮, ಗಂಡಸಿ, ಕ್ರಿ.ಶ.೧೪೦೩

೧೭೩. ಅದೇ, ಶಾ.ಸಂ.೨೦೬, ಚಿಕ್ಕಗಂಡಸಿ, ಕ್ರಿ.ಶ.೧೫೩೫

೧೭೪. ಅದೇ, ಶಾ.ಸಂ.೨೬೨, ಮಾದನಹಳ್ಳಿ, ಕ್ರಿ.ಶ.೧೧೯೬

೧೭೫. ಅದೇ, ಶಾ.ಸಂ.೩೧೨, ಕೋಳಿಗುಂದ, ಕ್ರಿ.ಶ.೧೨೩೪

೧೭೬. ಅದೇ, ಶಾ.ಸಂ.೮೬, ಕಣಕಟ್ಟೆ, ಕ್ರಿ.ಶ.೧೧೫೩ ೫೪

೧೭೭. ಅದೇ, ಶಾ.ಸಂ.೫೯, ಕುರುವಂಕ, ಕ್ರಿ.ಶ.೧೧೮೬

೧೭೮. ಅದೇ, ಶಾ.ಸಂ.೮೮, ಕಣಕಟ್ಟೆ, ಕ್ರಿ.ಶ.೧೨೨೦

೧೭೯. ಅದೇ, ಶಾ.ಸಂ.೩೨೫, ಅರಸೀಕೆರೆ, ಕ್ರಿ.ಶ.೧೧೮೧

೧೮೦. ಅದೇ, ಶಾ.ಸಂ.೨೪೫, ಹೊಸಕಲ್ಯಾಡಿ, ಕ್ರಿ.ಶ.೧೨೧೪

೧೮೧. ಅದೇ, ಶಾ.ಸಂ.೧೬೧, ತಳಲೂರು, ಕ್ರಿ.ಶ.೧೧೮೫

೧೮೨. ಅದೇ, ಶಾ.ಸಂ.೧೯೮, ಗಂಡಸಿ, ಕ್ರಿ.ಶ.೧೪೦೩

೧೮೩. ಅದೇ, ಶಾ.ಸಂ.೧೮೨, ಯಡವನಹಳ್ಳಿ, ಕ್ರಿ.ಶ.೧೧೭೭

೧೮೪. ಅದೇ, ಶಾ.ಸಂ.೬, ೨೪೧, ೨೬೮, ೧೬೧, ೨೫೪, ೩೧೮

೧೮೫. ಅದೇ, ಶಾ.ಸಂ.೧೨೮, ರಾಮಪುರ, ಕ್ರಿ.ಶ.೧೧೯೬

೧೮೬. ಅದೇ, ಶಾ.ಸಂ.೧೨೯, ಹಿರೇಕಲ್ಲುಬೆಟ್ಟ, ಕ್ರಿ.ಶ.೧೧೭೪

೧೮೭. ಅದೇ, ಶಾ.ಸಂ.೨೮೦, ತಿಮ್ಮನಹಳ್ಳಿ, ಕ್ರಿ.ಶ.೧೪೩೨

೧೮೮. ಅದೇ, ಶಾ.ಸಂ.೨೭೩, ಕ್ರಿ.ಶ.೧೫೧೫, ೧೮೪, ಜಾವಗಲ್ಲು, ಹುಲ್ಲೇಕೆರೆ, ಕ್ರಿ.ಶ.೧೧೬೨

೧೮೯. ಅದೇ, ಶಾ.ಸಂ.೨೫೪, ೩೧೪, ೧೯೬, ೩೧೭, ೬೨

೧೯೦. ಅದೇ, ಶಾ.ಸಂ.೫೫, ೧೮೪, ೨೧೪

೧೯೧. ಅದೇ, ಶಾ.ಸಂ.೨೧೪, ೪೦, ೨೭೩,

೧೯೨. ಕೌಟಿಲ್ಯನ ಅರ್ಥಶಾಸ್ತ್ರ i, ೩೫ iii ೯೩೨

೧೯೩. ಎ.ಕ.೧೦ (ಪರಿ)೧೦ ಅ.ಕೆ.ಶಾ.ಸಂ.೨೧೪, ಮುದುಡಿ, ಕ್ರಿ.ಶ.೧೧೯೫

೧೯೪. ಅದೇ, ೨೩೩, ಹಾರನಹಳ್ಳಿ, ಕ್ರಿ.ಶ.೧೨೬೫

೧೯೫. ಅದೇ, ೧೫೦, ಕೆಲ್ಲಂಗೆರೆ, ಕ್ರಿ.ಶ.೧೨೯೪

೧೯೬. ಅದೇ, ೧೫೩, ಕೆಲ್ಲಂಗೆರೆ, ಕ್ರಿ.ಶ.೧೨೬೭

೧೯೭. ಅದೇ, ಶಾ.ಸಂ.೨೮೫, ಕ್ರಿ.ಶ.೧೪೨೯, ೨೮೦, ತಿಮ್ಮನಹಳ್ಳಿ, ಕ್ರಿ.ಶ.೧೪೩೨

೧೯೮. ಅದೇ, ಶಾ.ಸಂ.೩೭, ಅರಸೀಕೆರೆ, ಕ್ರಿ.ಶ.೧೨೨೩

೧೯೯. ಅದೇ, ಶಾ.ಸಂ.೧೬೬, ತಳಲೂರು, ಕ್ರಿ.ಶ.೧೨೨೦

೨೦೦. ಅದೇ, ಶಾ.ಸಂ.೨೨೪, ಗೀಜಿಹಳ್ಳಿ, ಕ್ರಿ.ಶ.೧೨-೧೩ನೇ ಶತಮಾನ

೨೦೧. ಅದೇ, ಶಾ.ಸಂ.೨೮೮, ಮೊಸಳೆ, ಕ್ರಿ.ಶ.೧೨೮೭

೨೦೨. ಅದೇ, ಶಾ.ಸಂ.೧೯೬, ವಡಗರಹಳ್ಳಿ, ಕ್ರಿ.ಶ.೧೧೯೬

೨೦೩. ಅದೇ, ಶಾ.ಸಂ.೨೫೩, ದೇಶಾಣಿ, ಕ್ರಿ.ಶ.೧೧೩೯

೨೦೪. ಅದೇ, ಶಾ.ಸಂ.೨೬೮, ಬಂದೂರು, ಕ್ರಿ.ಶ.೧೧೬೮

೨೦೫. ಅದೇ, ಶಾ.ಸಂ.೩೧೭, ಕ್ರಿ.ಶ.೧೧೫೪, ೩೧೮, ಹಿರಿಯೂರು, ಕ್ರಿ.ಶ.೧೧೫೮

೨೦೬. ಅದೇ, ಶಾ.ಸಂ.೩೨೪, ೪೦, ಅರಸೀಕೆರೆ, ೧೮೪, ಹುಲ್ಲೇಕೆರೆ

೨೦೭. ಅದೇ, ಶಾ.ಸಂ.೪೧, ಅರಸೀಕೆರೆ, ಕ್ರಿ.ಶ.೧೨೭೨

೨೦೮. ಅದೇ, ಶಾ.ಸಂ.೩೬, ಅರಸೀಕೆರೆ, ಕ್ರಿ.ಶ.೧೧೯೦

೨೦೯. ಅದೇ, ಶಾ.ಸಂ.೧೯೮, ಕ್ರಿ.ಶ.೧೪೦೩, ಗಂಡಸಿ, ೮೬, ಕಣಕಟ್ಟೆ, ಕ್ರಿ.ಶ.೧೧೫೩

೨೧೦. ಅದೇ, ಶಾ.ಸಂ.೨೧೩, ಮುದುಡಿ, ಕ್ರಿ.ಶ.೧೧೫೩

೨೧೧. ಅದೇ, ಶಾ.ಸಂ.೨೭೩, ಜಾವಗಲ್ಲು, ಕ್ರಿ.ಶ.೧೫೧೫

೨೧೨. ಎ.ಕ.೮ (ಪರಿ) ಹಾಸನ, ಅವ್ವೇರಹಳ್ಳಿ, ಶಾ.ಸಂ.೧೮೭

೨೧೩. ಎ.ಕ. (ಪರಿ).ಅ.ಕೆ.೩೧೯, ಹಿರಿಯೂರು, ಕ್ರಿ.ಶ.೧೨೦೭

೨೧೪. ಅದೇ, ಶಾ.ಸಂ.೫೭, ೩೧೨, ೨೪೧, ೨೬೮

೨೧೫. ವಕ್ತೃ ಹಾರನಹಳ್ಳಿ ರಾಮಣ್ಣ, ವೈದ್ಯರು, ವಯಸ್ಸು ೭೫ ವರ್ಷ

೨೧೬. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೨೨೪, ಕ್ರಿ.ಶ.೧ನೇ ಶತಮಾನ

೨೧೭. ಅದೇ, ಶಾ.ಸಂ.೨೨೨, ಗೀಜಿಹಳ್ಳಿ, ಕ್ರಿ.ಶ.೧೨೦೦

೨೧೮. ಅದೇ, ಶಾ.ಸಂ.೧೬೨, ತಳಲೂರು, ಕ್ರಿ.ಶ.೧೨ನೇ ಶತಮಾನ

೨೧೯. ಅದೇ, ಶಾ.ಸಂ.೧೬೮, ತಳಲೂರು, ಕ್ರಿ.ಶ.೧೧೫೭-೫೮

೨೨೦. ಅದೇ, ಶಾ.ಸಂ.೧೬೧, ತಳಲೂರು, ಕ್ರಿ.ಶ.೧೧೯೧

೨೨೧. ಅದೇ, ಶಾ.ಸಂ.೧೬೫, ತಳಲೂರು, ಕ್ರಿ.ಶ.೧೨೭೧

೨೨೨. ಅದೇ, ಶಾ.ಸಂ.೧೩೪, ತಿರುಪತಿ, ಕ್ರಿ.ಶ.೧೭೪೪

೨೨೩. ಅದೇ, ಶಾ.ಸಂ.೨೪೧, ಕ್ರಿ.ಶ.೧೧೫೮, ಕರುಗುಂದ, ೩೧೭, ಹಿರಿಯೂರು, ಕ್ರಿ.ಶ.೧೨೫೪

೨೨೪. ಅದೇ, ಶಾ.ಸಂ.೨೭೭, ಕ್ರಿ.ಶ.೧೧೮೯, ದ್ಯಾಮೇನಹಳ್ಳಿ, ೩೯, ಕ್ರಿ.ಶ.೧೧೮೩, ಅರಸೀಕೆರೆ, ತಿರುಪತಿ, ಕ್ರಿ.ಶ.೧೭೪೪

೨೨೫. ಅದೇ, ಶಾ.ಸಂ.೨೦೯, ೨೦೮, ೧೬೦, ೧೩೪, ಗಂಡಸಿ, ಕೆಲ್ಲಂಗೆರೆ, ತಿರುಪತಿ

೨೨೬. ಅದೇ, ಶಾ.ಸಂ.೨೩, ಕ್ರಿ.ಶ.೧೧೭೩, ೩೧೭, ೩೯, ೧೫೦, ಅರಸೀಕೆರೆ, ಹಿರಿಯೂರು, ಕೆಲ್ಲಂಗೆರೆ

೨೨೭. ಅದೇ, ಶಾ.ಸಂ.೧೩೪, ತಿರುಪತಿ, ಕ್ರಿ.ಶ.೧೭೪೪

೨೨೮. ಅದೇ, ಶಾ.ಸಂ.೨೩, ಅರಸೀಕೆರೆ, ಕ್ರಿ.ಶ.೧೧೭೩

೨೨೯. ಅದೇ, ಶಾ.ಸಂ.೧೩೪, ತಿರುಪತಿ, ಕ್ರಿ.ಶ.೧೭೪೪

೨೩೦. ಅದೇ, ಶಾ.ಸಂ.೨೫೩, ೨೮, ೩೬, ೧೮೨, ೧೫೦, ದೇಶಾಣಿ, ಅರಸೀಕೆರೆ, ಯಡವನಹಳ್ಳಿ, ಕೆಲ್ಲಂಗೆರೆ

೨೩೧. ಅದೇ, ಶಾ.ಸಂ.೨೩, ಅರಸೀಕೆರೆ, ಕ್ರಿ.ಶ.೧೧೭೩

೨೩೨. ಅದೇ, ಶಾ.ಸಂ.೩೩, ೧೬೬, ೧೭೬, ೧೫೪, ೪೪, ಅರಸೀಕೆರೆ, ತಳಲೂರು, ಕೆಲ್ಲಂಗೆರೆ, ಗೋವಿಂದಪುರ

೨೩೩. ಒಕ್ಕಲಿಗ ಮುದ್ದಣ್ಣನ ವಚನಗಳು ಪೂರ್ವೋಕ್ತ

೨೩೪. ಎ.ಕ.೧೦ (ಪರಿ)ಅ.ಕೆ.ಶಾ.ಸಂ.೫೭, ಮನಕತ್ತೂರು, ೧೨೪, ನಾಗವೇದಿ

೨೩೫. ಎ.ವಿ.ನರಸಿಂಹಮೂರ್ತಿ, ಕರ್ನಾಟಕದ ನಾಣ್ಯ ಪರಂಪರೆ, ವಿಜಯನಗರದ ನಾಣ್ಯ ಸಂಪತ್ತು

೨೩೬. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೫೫, ಬಾಣಾವರ, ಕ್ರಿ.ಶ.೧೧೮೭

೨೩೭. ಕುಪ್ಪುಸ್ವಾಮಿ ಜಿ.ಆರ್., ಇಕನಾಮಿಕ್ಸ್ ಕಂಡೀಷನ್ಸ್ ಇನ್ ಕರ್ನಾಟಕ, ಪು.೧೦೯

೨೩೮. ಎ.ಕ.೧೦ (ಪರಿ) ಅ.ಕೆ.೩೯, ಅರಸೀಕೆರೆ, ಕ್ರಿ.ಶ.೧೧೮೯

೨೩೯. ಶೆಟ್ಟರ್ ಎಸ್., ಅರಸೀಕೆರೆ ಅಂಡರ್ ದಿ ಹೊಯ್ಸಳಾಸ್ ಜಿ.ಕೆ.ಯು ಸಂ.೪ ಪು.೧೫೪-೧೫೫

೨೪೦. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೧೫೬, ಕೆಲ್ಲಂಗೆರೆ ಕ್ರಿ.ಶ.೧೨೯೪

೨೪೧. ಪ್ರಾ.ಕ.ಅ.ಪ.ಕೋಶ, ನೋಟವಣ ಎ.ಕ.೧೨ (ಪರಿ) ಕಡೂರು ಶಾ.ಸಂ.೧೨೬, ಕ್ರಿ.ಶ.೧೨೯೧

೨೪೨. ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್

೨೪೩. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೮೨, ಕಣಕಟ್ಟೆ, ಕ್ರಿ.ಶ.೧೨ನೇ ಶತಮಾನ

೨೪೪. ಅದೇ, ಶಾ.ಸಂ.೯೭, ಜೆ.ಸಿ.ಪುರ, ಕ್ರಿ.ಶ.೧೨ನೇ ಶತಮಾನ

೨೪೫. ಚಿದಾನಂದಮೂರ್ತಿ ಎಂ., ಕ.ಶಾ.ಸಾ.ಅ., ಪು.೩೮೭-೮೮

೪

# ಸಾಮಾಜಿಕಸ್ಥಿತಿ ಸಂಚಲನ

## ಮುನ್ನುಡಿ

ಫಲವತ್ತಾದ ಕನ್ನೆ ನೆಲವನ್ನು ಹೊಸದಾಗಿ ಸಾಗುವಳಿಗೆ ರೂಢಿಸಿಕೊಂಡು ಉತ್ತಮ ನೀರಾವರಿ ವ್ಯವಸ್ಥೆಯನ್ನು ಒದಗಿಸಿದುದರಿಂದ ಅಧಿಕ ಆಹಾರೋತ್ಪನ್ನವಾಗಿ ಒಂದು ಸದೃಢವಾದ ಕೃಷಿ ಸಮಾಜ ರೂಪುಗೊಂಡಿತು. ಇದರ ಇತರ ಅವಶ್ಯಕತೆಗಳನ್ನು ಪೂರೈಸಲು ಸ್ಥಳೀಯ ಸಂಪನ್ಮೂಲಗಳನ್ನೇ ಬಳಸಿಕೊಂಡು ಅನೇಕ ಪೂರಕ ಕಸಬುಗಳು ಉದ್ದಿಮೆಗಳು ಬೆಳೆದುದನ್ನು ಈ ಪ್ರದೇಶದ ಶಾಸನಗಳು ಹೇಳುತ್ತವೆ. ಈ ಉದ್ದಿಮೆಗಳು ಸರಳ ಮತ್ತು ಮಿತವ್ಯಯದಿಂದ ಕೂಡಿದ್ದು, ಕುಶಲ ಕರ್ಮಿಗಳು ತಮ್ಮ ಸುತ್ತಮುತ್ತಲಿನ ಕಚ್ಚಾವಸ್ತುಗಳನ್ನೇ ಬಳಸಿಕೊಂಡು ಮನೆಗಳಲ್ಲೇ ವಸ್ತುಗಳನ್ನು ತಯಾರಿಸಿ ಗ್ರಾಮದ ಅವಶ್ಯಕತೆಗಳನ್ನು ಪೂರೈಸುತ್ತಿದ್ದರು. ಅಷ್ಟೇ ಅಲ್ಲದೆ ಅಧಿಕ ಉತ್ಪಾದನೆಯನ್ನು ಹತ್ತಿರದ ಮಾರುಕಟ್ಟೆ ಸಂತೆಗಳಿಗೆ ಒಯ್ದು ಮಾರಾಟ ಮಾಡತೊಡಗಿದರು. ರಾಜಕೀಯ ಆರ್ಥಿಕ ಕಾರಣಗಳಿಂದ ಹೊಸಗ್ರಾಮಗಳು ಅಗ್ರಹಾರ ಪಟ್ಟಣಗಳು ಆಡಳಿತ ಕೇಂದ್ರಗಳು, ವಾಣಿಜ್ಯ ಕೇಂದ್ರಗಳು ತಲೆ ಎತ್ತಿದವು. ಸಾರಿಗೆ ಸಂಪರ್ಕ, ಜನ ಸಂಖ್ಯೆಯ ಹೆಚ್ಚಳ, ಅಧಿಕ ಸಂಪತ್ತಿನ ಕ್ರೋಢೀಕರಣ, ಭೋಗವಸ್ತುಗಳಿಗೆ ಹೆಚ್ಚಾದ ಬೇಡಿಕೆ ಗ್ರಾಮಮಟ್ಟದಲ್ಲಿದ್ದ ಕಸುಬುಗಳು ಉದ್ದಿಮೆಗಳಾಗಿ ಬೆಳೆಯಲು ಕಾರಣವಾದವು. ಸಂತೆ, ಮಾರುಕಟ್ಟೆಯ ಬೆಳವಣಿಗೆ, ಒಳನಾಡು ಹೊರನಾಡಿನ ವ್ಯಾಪಾರ ವಹಿವಾಟು ಚುರುಕುಗೊಂಡಿತು. ಒಟ್ಟಿನಲ್ಲಿ ಈ ಎಲ್ಲ ಕಾರಣಗಳು ಒಂದಕ್ಕೊಂದು ಕೊಂಡಿಯಂತೆ ಬೆಸೆದು ನಗರೀಕರಣ ಪ್ರಕ್ರಿಯೆ ಕಾಣಿಸಿಕೊಂಡಿತು. ಇಲ್ಲಿನ ಆರ್ಥಿಕ ಸುಭದ್ರತೆ, ಅರಸೊತ್ತಿಗೆಯ ಪ್ರೋತ್ಸಾಹ, ಉದ್ಯೋಗಾವಕಾಶ, ವಾಣಿಜ್ಯೋದ್ಯಮದ ಬೆಳವಣಿಗೆ ಈ ಪ್ರದೇಶಕ್ಕೆ ವಲಸಿಗರನ್ನು ಆಕರ್ಷಿಸಿತು. ನಾನಾ ವಿಧದ ಸಂಘ ಸಂಸ್ಥೆಗಳು ಹುಟ್ಟಿಕೊಂಡವು. ಸಹಕಾರಿ ತತ್ವವನ್ನಾಧರಿಸಿದ ಈ ಸಂಘ ಸಂಸ್ಥೆ ಶ್ರೇಣಿಗಳ ಕಾರ್ಯ ಚಟುವಟಿಕೆಗಳು ಸಮಾಜದಲ್ಲಿ ವೈವಿಧ್ಯಮಯವಾದ ಬದಲಾವಣೆಗೆ ಕಾರಣವಾದವು.

ಈ ಪ್ರದೇಶದಲ್ಲಿ ರಾಜಧಾನಿ ತೆಂಕಣ ಅಯ್ಯಾವಳೆಯೆಂದು ಪ್ರಸಿದ್ಧವಾಗಿದ್ದ ಅರಸೀಕೆರೆ, ಕಂಠೀರಾಯ ಪೇಟೆ ಎಂದೇ ಪ್ರಸಿದ್ಧವಾದ ಬಾಣವರ, ಪ್ರಮುಖ ವ್ಯಾಪಾರೀ ಕೇಂದ್ರಗಳಾಗಿದ್ದ ಕಣಕಟ್ಟೆ, ಕೆಲ್ಲಂಗೆರೆ,

ಸರ್ವಜ್ಞಪುರಿಗಳೆಂದು ಕರೆಸಿಕೊಂಡು ವಲ್ಲಭಿಗೆ ಸಮನಾದ ವಿದ್ಯಾಕೇಂದ್ರಗಳಾಗಿದ್ದ ಅರಕೆರೆ, ಹಾರನಹಳ್ಳಿ, ಬೆಂಡೆಕೆರೆಗಳು, ಭೋಗದ ಆಗರವಾಗಿದ್ದ ಸೆಟ್ಟಿ ಪಟ್ಟಣಗಳು, ಸಾಂಸ್ಕೃತಿಕ ಕೇಂದ್ರಗಳಾಗಿ, ಆಡಳಿತ ಕೇಂದ್ರಗಳಾಗಿ ಭಂಡಾರವಾಡ, ಸುಂಕವಾಡಗಳಾಗಿ ಪ್ರಾಮುಖ್ಯತೆ ಪಡೆದ ಮಧ್ಯಮಗಾತ್ರದ ಪಟ್ಟಣಗಳು ಬೆಳೆಯಲು ಕಾರಣವಾದ ನಗರೀಕರಣ ಪ್ರಕ್ರಿಯೆಯನ್ನೂ, ಆ ಪಟ್ಟಣಗಳ ಲಕ್ಷಣಗಳನ್ನು ಶಾಸನಗಳ ಸಹಾಯದಿಂದ ತಿಳಿಯಬಹುದು.

## ೪.೧. ನಗರೀಕರಣ ಪ್ರಕ್ರಿಯೆ

ನಗರೀಕರಣದ ಚರಿತ್ರೆಯು ಭಾರತದಲ್ಲಿ ಸಿಂಧುಬಯಲಿನ ನಾಗರೀಕತೆಯಷ್ಟೇ ಪ್ರಾಚೀನವಾದುದು. ದಕ್ಷಿಣ ಭಾರತವು ಈ ನಗರೀಕರಣ ಪ್ರಕ್ರಿಯೆಗೆ ಕ್ರಿ.ಶ.ಸಾವಿರದ ನಂತರದಲ್ಲಿ ತೆರೆದುಕೊಂಡುದನ್ನು ವಿದ್ವಾಂಸರು ಗುರುತಿಸಿದ್ದಾರೆ.[೧] ದಕ್ಷಿಣ ಕರ್ನಾಟಕದ ಪ್ರಭಾವೀ ಅರಸು ಮನೆತನವಾದ ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ಪ್ರಸ್ತುತ ಅಧ್ಯಯನ ಪ್ರದೇಶದ ಗ್ರಾಮ ಸಮಾಜದ ಸ್ಥಿತಿ ಮತ್ತು ಸಂಚಲನವನ್ನು, ನಗರೀಕರಣ ಪ್ರಕ್ರಿಯೆಗೆ ಅದು ತೆರೆದುಕೊಂಡ ಬಗೆಯನ್ನು ಇಲ್ಲಿನ ಶಾಸನಗಳ ಸಹಾಯದಿಂದ ಅರ್ಥಮಾಡಿಕೊಳ್ಳಬಹುದು. ಹಳ್ಳಿಗಳು ಪಟ್ಟಣಗಳಾಗಿ ಮಾರ್ಪಡುವ, ಹಳ್ಳಿಗರು ನಗರವಾಸಿಗಳಾಗಿ ಪರಿವರ್ತನೆಗೊಳ್ಳುವ ಕೃಷಿಯೇತರ ಆರ್ಥಿಕ ಚಟುವಟಿಕೆಗಳಿಗೆ ಪ್ರಾಧಾನ್ಯತೆ ಒದಗುವ ಒಂದು ಸಂಕೀರ್ಣ ಪ್ರಕ್ರಿಯೆಯನ್ನು ನಗರೀಕರಣವೆಂದು ಸ್ಥೂಲವಾಗಿ ಗುರುತಿಸಬಹುದು. ನಗರೀಕರಣಕ್ಕೆ ಅನೇಕ ಕಾರಣಗಳನ್ನು, ಅದರ ಲಕ್ಷಣಗಳನ್ನು ವಿದ್ವಾಂಸರು ಗುರುತಿಸಿದ್ದಾರೆ.[೨] ಆಹಾರ ಪೂರೈಕೆಯಲ್ಲಿ ಹೆಚ್ಚಳ, ಜನಸಂಖ್ಯೆ ಹೆಚ್ಚಳ, ಗ್ರಾಮೀಣ ನಿರುದ್ಯೋಗ, ವೃತ್ತಿ ವೈಶಿಷ್ಟ್ಯತೆ ಅಥವಾ ಕೌಶಲ್ಯ, ವ್ಯಾಪಾರ ಮತ್ತು ಮಾರುಕಟ್ಟೆ, ಸಮಾಜದಲ್ಲಿ ವರ್ಗ ರಚನೆ, ಧರ್ಮ, ವಿಹಾರಾರ್ಥವಾಗಿ ಪ್ರಯಾಣ ಮಾಡುವುದು, ವಿದ್ಯಾಭ್ಯಾಸ, ಶ್ರೀಮಂತ ಜಮೀನ್ದಾರರು, ಚಿಲ್ಲರೆ ವ್ಯಾಪಾರಿಗಳು ಆಡಳಿತ ರಕ್ಷಣೆ, ಯುದ್ಧಗಳು, ನೀರಾವರಿ ಸೌಲಭ್ಯ ಭೌಗೋಳಿಕ ನೆಲೆ ಮತ್ತು ವೈಯಕ್ತಿಕ ಆಸಕ್ತಿ ಇವೆಲ್ಲವೂ ನಗರೀಕರಣಕ್ಕೆ ಕಾರಣವಾಗುತ್ತವೆ. ಇವೆಲ್ಲವನ್ನು ಸ್ಥೂಲವಾಗಿ ಆರ್ಥಿಕ ಸಾಮಾಜಿಕ ರಾಜಕೀಯ ಕಾರಣಗಳೆಂದು ಭಾಗ ಮಾಡಿಕೊಳ್ಳಬಹುದು. ಒಟ್ಟಿನಲ್ಲಿ ಈ ಪ್ರಕ್ರಿಯೆಯು ಪ್ರಗತಿಯ ಹಲವಾರು ಅಂಶಗಳ ಅನ್ಯೋನ್ಯ ಕ್ರಿಯೆಯ ಫಲವೆನ್ನಬಹುದು. ಇಡೀ ನಗರೀಕರಣ ಪ್ರಕ್ರಿಯೆಗಳಲ್ಲೊಂದಾದ ಪ್ರಾಥಮಿಕ ನಗರೀಕರಣದಲ್ಲಿ ಪಟ್ಟಣಗಳ ಹುಟ್ಟುವಿಕೆ ಅಥವಾ ಬೆಳವಣಿಗೆಯು, ಆಂತರಿಕ ಅಥವಾ ಸ್ಥಳೀಯ ಅಭಿವೃದ್ಧಿಯಿಂದಾಗುತ್ತದೆ. ಆಂತರಿಕ ಅಭಿವೃದ್ಧಿಯೆಂದರೆ ಒಂದು ಸ್ಥಳದ ಮಣ್ಣಿನ ಫಲವತ್ತತೆ ಮತ್ತು ನೀರಾವರಿ ವ್ಯವಸ್ಥೆಗಳಿಂದ ಅಲ್ಲಿಯ ಆರ್ಥಿಕ ಮತ್ತು ಸಾಮಾಜಿಕ ಜೀವನದಲ್ಲಾಗುವ ಪ್ರಗತಿ.[೩] ಆರ್ಥಿಕ ಸ್ಥಿತಿ ಸಂಚಲನ ಭಾಗದಲ್ಲಿ ಈ ಪ್ರದೇಶದಲ್ಲಾದ ಕೃಷಿ ವಿಸ್ತರಣೆ ಮತ್ತು ಉತ್ತಮ ನೀರಾವರಿ ವ್ಯವಸ್ಥೆಯು ಹೆಚ್ಚುವರಿ ಉತ್ಪಾದನೆಗೆ

ಆ ಮೂಲಕ ಆರ್ಥಿಕಾಭಿವೃದ್ಧಿಗೆ ಕಾರಣವಾದುದನ್ನು ಗಮನಿಸಿದ್ದೇವೆ. ಈ ಅಧ್ಯಾಯದಲ್ಲಿ ಈ ಪ್ರದೇಶದ ಕೈಗಾರಿಕೆ ಮತ್ತು ವಾಣಿಜ್ಯೋಧ್ಯಮವು ಕೃಷಿ ಪ್ರಧಾನವಾದ ಗ್ರಾಮ ಸಮಾಜದಲ್ಲಿ ಉಂಟು ಮಾಡಿದ ಸಂಚಲನವನ್ನು ಅದು ನಗರೀಕರಣಕ್ಕೆ ದಾರಿಯಾದುದನ್ನು ಗಮನಿಸಬಹುದು. ಜೊತೆಗೆ ರಾಜಕೀಯ ಶಕ್ತಿಗಳು ಮತ್ತು ನೀತಿಗಳು ಇಲ್ಲಿನ ಕೆಲವು ಆಯಕಟ್ಟಿನ ಪ್ರದೇಶಗಳನ್ನು ಆಡಳಿತ ಕೇಂದ್ರಗಳಾಗಿ ಮಾಡಿಕೊಂಡ ಕಾರಣ ಅವು ಪ್ರಮುಖ ನಗರಗಳಾಗಿಯೂ, ವ್ಯಾಪಾರೀ ಪಟ್ಟಣವಾಗಿಯೂ ಸಾಂಸ್ಕೃತಿಕ ಕೇಂದ್ರಗಳಾಗಿಯೂ ಬೆಳೆದು ಹೊರಗಿನಿಂದ ವಲಸಿಗರನ್ನು ಯಾವ ರೀತಿ ಆಕರ್ಷಿಸಿದವೆಂಬುದನ್ನು ಗಮನಿಸಬಹುದು.

### ೪.೧.೧. ಗ್ರಾಮ ಸಮಾಜ

ಗ್ರಾಮವೆಂದರೆ, ನೂರಕ್ಕೆ ಕಡಿಮೆಯಿಲ್ಲದಷ್ಟು ಐದುನೂರಕ್ಕೆ ಮೀರದಷ್ಟು ಶೂದ್ರರಾದ ಕೃಷಿಕರ ಕುಟುಂಬಗಳಿರುವ, ಒಂದು ಕ್ರೋಶ ಅಳತೆಯ ದೂರದವರೆಗೆ ಹರಡಿರುವ ಹಾಗೂ ನದಿ, ಪರ್ವತ, ಕಾಡು, ಹೂ ಬಿಡುವ ಮರಗಳಿಂದ ಕೂಡಿದ ಮೇರೆಗಳಿರುವ ಮತ್ತು ತಮ್ಮನ್ನು ತಾವೇ ಸಂರಕ್ಷಿಸಿಕೊಳ್ಳಬಲ್ಲ ಜನವಸತಿಗಳು ಎಂದು ಕೌಟಿಲ್ಯ ಅರ್ಥಶಾಸ್ತ್ರದಲ್ಲಿ ಹೇಳಿದ್ದಾನೆ. ಮನುಷ್ಯ ಕೃಷಿಯನ್ನು ಅಭಿವೃದ್ಧಿಗೊಳಿಸಿಕೊಂಡು ಒಂದೆಡೆ ನಿಂತಾಗ ಗ್ರಾಮಗಳೆಂಬ ನೆಲೆಗಳು ಸ್ಥಾಪಿತವಾದವು.

ಗ್ರಾಮದ ಪ್ರಮುಖ ಆಧಾರ ಮತ್ತು ಆಸ್ತಿ ಭೂಮಿಯೇ ಆಗಿರುತ್ತದೆ. ಸಾಮಾಜಿಕ ಮೌಲ್ಯಗಳು ಜಮೀನಿನ ಸುತ್ತ ಹೆಣೆದು ಕೊಂಡಿದ್ದು, ಗ್ರಾಮಸ್ಥರ ನಡುವಿನ ಸಂಬಂಧಗಳು ಇದನ್ನೇ ಆಧರಿಸಿರುತ್ತವೆ. ಗ್ರಾಮಗಳಲ್ಲಿ ಆಯ ಪದ್ಧತಿಯು ಸಾಂಸ್ಥಿಕ ರೂಪ ಪಡೆದುಕೊಂಡಿತ್ತು. ಕುಲಕ್ಕೊಂದು ಕುಲಕಸುಬು ಇರುತ್ತಿದ್ದು, ಆ ಕಸುಬಿಗೆ ಪ್ರತಿಫಲವಾಗಿ ಆಯಕಾರರಿಗೆ ಅವರಿಂದ ಸಹಾಯ ಪಡೆಯುತ್ತಿದ್ದ ಆಯಕುಳಗಳು ಧಾನ್ಯದ ರೂಪದಲ್ಲಿಯೋ ಭೂಮಿಯ ರೂಪದಲ್ಲಿಯೋ ವಾರ್ಷಿಕ ಸಂಭಾವನೆ ನೀಡುತ್ತಿದ್ದರು. ಒಟ್ಟಿನಲ್ಲಿ ಇಂಥ ಧಾನ್ಯಮೂಲದ ವ್ಯವಹಾರವು ಕುಟುಂಬಗಳ ನಡುವಿನ ಹಾಗೂ ಜಾತಿಗಳ ನಡುವಿನ ಪರಸ್ಪರ ಅವಲಂಬನೆಗೆ ಕಾರಣವಾಗಿತ್ತು. ಗ್ರಾಮವೊಂದರಲ್ಲಿ ದೇವಾಲಯಕ್ಕೆ, ಜೋಯ್ಸರಿಗೆ, ಪಂಡಿತರಿಗೆ, ಸೇನಬೋವರಿಗೆ, ಶ್ರೀಕರಣದ ಹೆಗ್ಗಡೆಗೆ, ಸಂಧಿವಿಗ್ರಹಿಗೆ, ಸೆಟ್ಟಿಗೆ, ಅಕ್ಕಸಾಲೆಗಳಿಗೆ, ಬಡಗಿಗಳಿಗೆ, ಕಮ್ಮಾರರಿಗೆ, ಅಗಸರಿಗೆ, ಕುಂಬಾರರಿಗೆ, ಬಾರಿಕರಿಗೆ ಹಡಪದವರಿಗೆ ಭೂಮಿಯನ್ನು ಹಂಚಿಕೊಟ್ಟದ್ದನ್ನು ಬೆಳಗಲಿಯ ಶಾಸನ[೪] ಹೇಳುತ್ತದೆ. ಗ್ರಾಮ ಸಮಾಜವು ವಿವಿಧ ಜಾತಿ ಧರ್ಮಗಳನ್ನಾಧರಿಸಿ ಕೇರಿಗಳಾಗಿ ಬೀದಿಗಳಾಗಿ ವಿಭಜಿಸಲ್ಪಟ್ಟಿರುತ್ತಿತ್ತು. ಸಾಮಾಜಿಕ ನಡವಳಿಕೆಗಳಲ್ಲಿ ಏಣಿಶ್ರೇಣಿಯ ಪ್ರಭಾವದಿಂದ ಸ್ಪೃಶ್ಯ ಅಸ್ಪೃಶ್ಯ ನಿಯಮಗಳು ಕಾಣಿಸಿಕೊಳ್ಳುತ್ತಿದ್ದವು. ಇಷ್ಟೆಲ್ಲಾ ವಿಭಜನೆಗಳಿದ್ದರೂ ಗ್ರಾಮಕ್ಕೆ ಒಂದು ಭೌತಿಕ ಸಾಂಸ್ಕೃತಿಕ ಸಮಗ್ರತೆ ಇರುತ್ತಿತ್ತು ಸುತ್ತುವರಿದ ಮಣ್ಣಿನ ಕೋಟೆ ತೋಪು ಊರಕೆರೆ ಕಲ್ಯಾಣಿಗಳು ಗೋಮಾಳ ಹೊಲಗದ್ದೆಗಳ ನಡುವೆ ಇತರ ಗ್ರಾಮಗಳಿಂದ

ಬೇರೆಯಾಗಿ ಒಂದು ಭೌತಿಕ ಸಮಗ್ರತೆಯೂ ಪರಸ್ಪರ ಸಂಪರ್ಕ, ಅವಲಂಬಿತ ಸಂಬಂಧ, ಸಮಾನ ಸಂಸ್ಕೃತಿ ಇದ್ದು ಒಂದು ಸಾಂಸ್ಕೃತಿಕ ಸಮಗ್ರತೆಯೂ ಕಂಡುಬರುತ್ತದೆ. ಹಬ್ಬ ಹರಿದಿನಗಳು ಜಾತ್ರೆ ಉತ್ಸವಗಳಲ್ಲಿ ಇಡೀ ಊರು ಇರಲಿ, ತಮ್ಮ ಅಧಿಕಾರ ಆಡಳಿತಕ್ಕೊಳ್ಳಪಟ್ಟ ಸುತ್ತ ಹನ್ನೆರಡು ಹಳ್ಳಿಗಳೂ ಸೇರಿ ಒಟ್ಟಾಗಿ ಆಚರಿಸುತ್ತಾರೆ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಈಗಲೂ ಈ ಸಾಂಸ್ಕೃತಿಕ ಅಂಶ ಸುತ್ತೂರ ಹಳ್ಳಿಗಳನ್ನು ಬೆಸೆದಿರುವುದನ್ನು ಗುರುತಿಸಿಕೊಳ್ಳಬಹುದು. ಊರಿನ ಗಡಿ, ಹೆಬ್ಬಾಗಿಲು, ಗ್ರಾಮದೇವತೆ ಇತರ ರಕ್ಷಕ ದೇವತೆಗಳು ಆಚಾರ ವಿಚಾರ ನಂಬಿಕೆಗಳು, ಊರಿಗೆ ಬಂದೊದಗುವ ಆಕ್ರಮಣಗಳು, ಸೀಮಾ ಸಂಬಂಧಿ ಯುದ್ಧಗಳು ವ್ಯಾಜ್ಯಗಳು ಗ್ರಾಮಸ್ಥರನ್ನು ಬೆಸೆಯುವ ಶಕ್ತಿಗಳಾಗಿರುತ್ತವೆ. ಹಿರಿಯ ಗ್ರಾಮಗಳು, ಅಗ್ರಹಾರಗಳ ಸುತ್ತ ಅವುಗಳ ಕಾಲುವಳ್ಳಿಗಳಾಗಿ ಅನೇಕ ಸಣ್ಣ ಹಳ್ಳಿಗಳಿರುತ್ತಿದ್ದು. ಹಿರಿಯೂರಿನ ಹಬ್ಬ ಜಾತ್ರೆ ಮಹೋತ್ಸವ ಸಂತರ್ಪಣೆಗಳಲ್ಲಿ ಆ ಎಲ್ಲ ಹಳ್ಳಿಯವರೂ ಆ ಊರುಗಳ ಧಾರ್ಮಿಕ ಗುರುಗಳು ಒಟ್ಟಾಗಿ ಸೇರುತ್ತಿದ್ದರೆಂಬುದಕ್ಕೆ ಕೆಲವು ಶಾಸನ ಆಧಾರಗಳಿವೆ.[೫] ಈ ರೀತಿಯ ಸಾಂಸ್ಕೃತಿಕ ಸಂಪರ್ಕದೊಂದಿಗೆ ಸಂತೆಗಳಲ್ಲಿ ಜಾತ್ರೆಗಳಲ್ಲಿ ಅನೇಕ ರೀತಿಯ ಕರಕುಶಲ ವಸ್ತುಗಳನ್ನು, ಹೆಚ್ಚಿನ ಉತ್ಪಾದನೆಗಳನ್ನು ವಿನಿಮಯ ಮಾಡಿಕೊಳ್ಳಲು ಅವಕಾಶ ದೊರಕುತ್ತಿದ್ದುದರಿಂದಲೂ ವ್ಯಾಪಾರಿ ಸಂಪರ್ಕವೂ ಬೆಳೆಯುತ್ತಿತ್ತು. ಅಂತರ್ ಗ್ರಾಮಗಳ ನಡುವಿನ ಗಡಿವ್ಯಾಜ್ಯಗಳು ಸಾಲಬಡ್ಡಿ ವ್ಯವಹಾರಗಳು, ಭೂದಾನ ಇತ್ಯಾದಿ ಸಂದರ್ಭದಲ್ಲಿ ಸುತ್ತೂರ ಗ್ರಾಮಗಳ ಮುಖ್ಯರು ಸಭೆ ಸೇರಿ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಿದ್ದರು. ಇಂತಹವುಗಳನ್ನು ಚೌಗಾವೆಗಳೆಂದು ಶಾಸನಗಳು ಕರೆದಿವೆ.* ಒಟ್ಟಿನಲ್ಲಿ ಈ ರೀತಿಯ ಅಂತರ್ ಗ್ರಾಮ ಸಂಬಂಧಗಳು ಗ್ರಾಮದ ಸ್ವಯಂಪೂರ್ಣತೆಯ ಕಲ್ಪನೆಗೆ ವಿಶಾಲತೆಯನ್ನು ತಂದುಕೊಡುತ್ತವೆ. ಏಕೆಂದರೆ ತನಗೆ ಬೇಕಾದ ಅತಿ ಅವಶ್ಯಕವಾದದ್ದನ್ನೆಲ್ಲಾ ಗ್ರಾಮವೇ ಪೂರೈಸಿಕೊಳ್ಳುವುದು ಎಂದು ಹೇಳಿದರೆ ಅದು ಆಹಾರ ಧಾನ್ಯ ಮತ್ತು ಅವಶ್ಯಕ ವಸ್ತುಗಳೆಂಬ ಸೀಮಿತ ಅರ್ಥದ ಸ್ವಯಂಪೂರ್ಣತೆಯಾಗುತ್ತದೆ. ಹಾಗಲ್ಲದೆ ಮಾನವನ ಬೌದ್ಧಿಕ ಭೌತಿಕ ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ, ಆಡಳಿತಾತ್ಮಕ ಸಂಬಂಧದ ಅವಶ್ಯಕತೆಗಳೆಂಬ ಅರ್ಥದಲ್ಲಿ ನೋಡಿದಾಗ ಗ್ರಾಮವೊಂದು ಎಷ್ಟೇ ವೈಶಿಷ್ಟ್ಯತೆಯಿಂದ ಕೂಡಿದ್ದರೂ ಆ ಸುತ್ತಿನ ಸಾಂಸ್ಕೃತಿಕ ಪರಿಸರದಿಂದ ಪ್ರತ್ಯೇಕವಾಗಿ ಉಳಿದು ತನ್ನ ಸ್ವಯಂ ಪೂರ್ಣತೆಯನ್ನು ಸಾಧಿಸಿಕೊಳ್ಳಲು ಸಾಧ್ಯವಿಲ್ಲ ಅದು ಒಟ್ಟು ಸಾಂಸ್ಕೃತಿಕ ಪರಿಸರಕ್ಕೆ ತನ್ನನ್ನು ತೆರೆದುಕೊಳ್ಳಲೇ ಬೇಕಾಗುತ್ತದೆ. ಇದರ ಪರಿಣಾಮವಾಗಿ ಗ್ರಾಮ ಸಮಾಜದಲ್ಲಿ ಸಂಚಲನ ಉಂಟಾಗಿ ನಾನಾ ರೀತಿಯ ಬದಲಾವಣೆಗಳಿಗೆ ಅಭಿವೃದ್ಧಿಗೆ ದಾರಿಯಾಗುತ್ತದೆ.

---

* ಚವುಗಾವೆ ಎಂದರೆ ಒಂದು ಆಡಳಿತಕ್ಕೆ ಒಳಪಟ್ಟ ಗ್ರಾಮಗಳ ಪ್ರತಿನಿಧಿಗಳ ಸಭೆ ಎಂದು ಹೇಳಬಹುದು. ಚೌಗಾವೆ ಎಂಬುದು ನಾಲ್ಕು ಗ್ರಾಮಗಳ ಪ್ರತಿನಿಧಿ ಸಭೆಯೇ ಆಗಬೇಕಿಲ್ಲ. ಕೆಲವು ಶಾಸನಗಳಲ್ಲಿ ನಾಲ್ಕಕ್ಕಿಂತ ಹೆಚ್ಚಿನ ಹಳ್ಳಿಗಳ ಪ್ರತಿನಿಧಿಗಳು ಸಭೆಯಲ್ಲಿ ಭಾಗವಹಿಸಿರುವುದು ಕಂಡುಬರುತ್ತದೆ (ಶಾಸನ ಸಂಖ್ಯೆ ಹಿರಿಯೂರು ೩೧೭, ಕಣಕಟ್ಟೆ ೮೯, ಆಲದಹಳ್ಳಿ ೧೮೬).

## ೪.೧.೨ ಕೈಗಾರಿಕೆಗಳು

ಕೈಗಾರಿಕೆಗಳು ನಗರೀಕರಣದ ಸೋಪಾನ' 'ನಗರೀಕರಣವು ಕೈಗಾರಿಕೀಕರಣದ ಕೂಸು' ಎಂಬ ಮಾತಿದೆ. ಕೃಷಿಯೇತರ ಗ್ರಾಮೀಣ ಕುಲಕಸುಬುಗಳು ಇಲ್ಲಿನ ಕೃಷಿ ಚಟುವಟಿಕೆಗಳೊಂದಿಗೇ ವಿಸ್ತರಣೆಗೊಂಡು ಉದ್ಯಮಗಳಾಗಿ ಬೆಳೆಯ ತೊಡಗಿದವು. ಈ ಪ್ರದೇಶದ ಆರ್ಥಿಕ ಅಭಿವೃದ್ಧಿಯಲ್ಲಿ ಇವುಗಳ ಪಾತ್ರ ವಿಶೇಷವಾದದ್ದು.

### ೪.೧.೨.೧ ಪಶುಸಂಗೋಪನೆ

ಕೃಷಿ ಪ್ರಧಾನವಾದ ಸಮಾಜದ ಆರ್ಥಿಕ ಅಭಿವೃದ್ಧಿಯಲ್ಲಿ ಪಶುಸಂಗೋಪನೆ ಬಹಳ ಮುಖ್ಯವಾದ ಕಸುಬಾಗಿತ್ತು. ಕೃಷಿಕ ಸಮಾಜ ರೂಪುಗೊಂಡಂತೆ ಪಶುಪಾಲನೆ ಮತ್ತಷ್ಟು ವ್ಯವಸ್ಥಿತವಾಗಿ ಬೆಳೆಯಿತು. ದನಕರು ಇತರ ಸಾಕು ಪ್ರಾಣಿಗಳನ್ನು 'ಜೀವಧನ'ವೆಂದು ಗುರುತಿಸಿದ್ದರಿಂದ ಅವು ವಾಣಿಜ್ಯ ಮೌಲ್ಯವನ್ನು ಪಡೆದುಕೊಂಡವು. ಹಾಲು ಹೈನಿಗಾಗಿ ಹಸು ಎಮ್ಮೆ ರಾಸುಗಳಿಗೆ ಎಷ್ಟು ಬೇಡಿಕೆಯಿತ್ತೋ ಅಷ್ಟೇ ಬೇಡಿಕೆ ಕೃಷಿ ಕೆಲಸಗಳಲ್ಲಿ ಉಳುಮೆಗಾಗಿ, ಸುಗ್ಗಿ ಕಾಲದ ಕಣಗೆಲಸಗಳಿಗಾಗಿ[೬] ಗೊಬ್ಬರಕ್ಕಾಗಿ, ಸಾಗಾಣಿಕೆಗಾಗಿ ಇತ್ತು. ಪ್ರತಿಯೊಂದು ಕುಟುಂಬವು ಗೊಬ್ಬರಕ್ಕಾಗಿ ತಿಪ್ಪೆಗಳನ್ನು ಹೊಂದಿರುತ್ತಿದ್ದವು. ಅನೇಕ ಶಾಸನಗಳು ತಿಪ್ಪೆ ಸುಂಕಗಳನ್ನು ಉಲ್ಲೇಖಿಸಿವೆ.[೭] ತೈಲೋದ್ಯಮದಲ್ಲಿ ಎತ್ತಿನ ಗಾಣಗಳು ವಿಶೇಷವಾಗಿದ್ದವು. ಎತ್ತಿನ ಗಾಣಗಳ,[೮] ಎತ್ತಿನ ಬಂಡಿಯ ಉಲ್ಲೇಖಗಳು ಶಾಸನಗಳಲ್ಲಿವೆ.[೯] ಯುದ್ಧಗಳಲ್ಲಿ, ವ್ಯಾಪಾರದಲ್ಲಿ ಸರಕು ಸಾಗಾಣೆ ಮಾಡಲು ಎತ್ತುಗಳನ್ನು, ಕತ್ತೆಗಳನ್ನು ಬಳಸಲಾಗುತ್ತಿತ್ತು. ಕಾಡುಗೊಲ್ಲರ ಸಾಂಸ್ಕೃತಿಕ ವೀರ ಎತ್ತಪ್ಪನ ಕಥೆಯಲ್ಲಿ ಪಶುಪಾಲನೆಯೇ ಮುಖ್ಯ ಕಸುಬಾಗಿದ್ದ ಕಾಡುಗೊಲ್ಲರಿಗೂ ಕುರುಬರಿಗೂ ಏರ್ಪಟ್ಟ ಮೈತ್ರಿ ಮತ್ತು ಪರಸ್ಪರ ಅವಲಂಬನೆಗಳ ಬಗೆಗೆ ಹಾಗೂ ಎರಡು ಜನಾಂಗದ ಆರ್ಥಿಕ ಬೆಳವಣಿಗೆಗಳ ಬಗೆಗೆ ಬೆಳಕು ಚೆಲ್ಲುವ ವಿಚಾರಗಳಿವೆ.* ಕೃಷಿ ಸಂಸ್ಕೃತಿಯು ವಾಣಿಜ್ಯೀಕರಣ, ನಗರೀಕರಣಕ್ಕೆ ಒಳಗಾಗುತ್ತಿದ್ದ ಸಂದರ್ಭದಲ್ಲಿ ಈ ಸಮುದಾಯಗಳು ಹೇಗೆ ತಮ್ಮ ಮೂಲ ಕಸುಬುಗಳನ್ನು ವಿಸ್ತರಿಸಿಕೊಂಡವು, ಕಾಡುಗಳಲ್ಲಿದ್ದವರು ಹೇಗೆ ಊರುಗಳನ್ನು ನಿರ್ಮಾಣ ಮಾಡಿ ನೆಲೆ ನಿಂತರು ಎಂಬುದರ ಬಗೆಗೆ ಇಂತಹ ಕಥೆಗಳು ಬೆಳಕು ಚೆಲ್ಲುತ್ತವೆ.

ಸಂತೆಗಳಲ್ಲಿ, ಜಾತ್ರೆಗಳಲ್ಲಿ ದನಗಳ ಮಾರಾಟ ವಿಶೇಷವಾಗಿ ನಡೆಯುತ್ತಿದ್ದುದು, ಅವುಗಳ ಮೇಲೆ ವಿಧಿಸುತ್ತಿದ್ದ ತೆರಿಗೆಗಳ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ. ಬಾಲವಣ[೧೦] ನಲ್ಲೆಮ್ಮೆ, ನಲ್ಲಾವುಗಳ ಮೇಲೆಯೂ ತೆರಿಗೆ ವಿಧಿಸಲಾಗುತ್ತಿತ್ತು.[೧೧]

---

* ಸಿರಾದ ಕುರುಬರು ಕಂಬಳಿ ಹಾಕಿಕೊಂಡು ವ್ಯಾಪಾರಕ್ಕಾಗಿ ಹೊರಟಿದ್ದು ಕತ್ತಲಾದ್ದರಿಂದ ಎತ್ತಪ್ಪನ ಹಟ್ಟಿಯಲ್ಲಿ ಒಂದು ರಾತ್ರಿ ಉಳಿಯಬೇಕಾದ ಪ್ರಸಂಗ ಬರುತ್ತದೆ. ಎತ್ತಯ್ಯನ ಗೂಡಿನಲ್ಲಿದ್ದ ಒಳ್ಳೊಳ್ಳೆ ಎತ್ತುಗಳನ್ನು ನೋಡಿ ಇವು ಸಿಕ್ಕರೆ ಕಂಬಳಿ ಹೊರೋಕೆ ಅನುಕೂಲ ಆಗುತ್ತೆ ಅಂತ, ಎತ್ತು ಕೊಟ್ಟರೆ ಹೊನ್ನು ಕೊಡ್ತೀವಿ ಅಂತಾರೆ. ವ್ಯವಹಾರ ಕುದುರಿ ಎತ್ತಯ್ಯನಿಗೆ ಭಾರಿ ಹೊನ್ನು ಬಂದು ಬೀಳುತ್ತದೆ. ಎತ್ತಪ್ಪ ಎರಡು ಊರುಗಳನ್ನು ಕಟ್ಟಿಸುತ್ತಾನೆ (ಕಾಡುಗೊಲ್ಲರ ಸಂಸ್ಕೃತಿ, ಡಾ.ಮೀರಾಸಾಬಿಹಳ್ಳಿ ಶಿವಣ್ಣ, ಪು.೪೦-೪೧).

**ಕುರಿಸಾಕಣೆ :** ಶಾಸನಗಳಲ್ಲಿ ಕಂಡುಬರುವ ಆಡುತೆರೆ, ಕುರಿದೆರೆ, ಕುರುಬರ ಮಗ್ಗದ ತೆರಿಗೆ, ಕಂಬಳಿಕಾರರ ಮೇಲೆ ವಿಧಿಸಿದ ತೆರಿಗೆ, ಮಾರ್ಗದ ಕುರಿ ನೂರಕ್ಕೆ ವಿಧಿಸಿದ ತೆರಿಗೆ, ಸ್ಥಳದಲ್ಲಿ ಮಾರಿದ ಕುರಿನೂರಕ್ಕೆ ವಿಧಿಸಿದ ತೆರಿಗೆ ಉಲ್ಲೇಖಗಳನ್ನು[೧೨] ಗಮನಿಸಿದರೆ ಈ ಪ್ರದೇಶದಲ್ಲಿ ಪಶುಪಾಲನೆಯಷ್ಟೇ ಅಲ್ಲ ಕುರಿಸಾಕಣೆಯೂ ಹೆಚ್ಚಾಗಿತ್ತೆಂಬುದು ತಿಳಿದುಬರುತ್ತದೆ. ಅರಸೀಕೆರೆಯ ದಕ್ಷಿಣಕ್ಕೆ ಅಮೃತಮಹಲ್ ಕಾವಲುಗಳು ಅನೇಕವಿದ್ದು, ದನ ಕರುಗಳ, ಕುರಿಗಳ ಸಾಕಣೆಗೆ ಸಹಾಯಕವಾಗಿದೆ.[೧೩] ಇದು ಹೈನುಗಾರಿಕೆ, ಮಾಂಸಾಹಾರ, ಚರ್ಮೋದ್ಯಮ ಹಾಗೂ ಉಣ್ಣೆಯ ಕಂಬಳಿಗಳು, ರತ್ನಗಂಬಳಿಗಳ ನೇಯ್ಗೆಯ ಉದ್ಯಮಕ್ಕೂ ಅವಕಾಶ ಮಾಡಿಕೊಟ್ಟಿತ್ತು. ಮೇವಿನ ಸುಂಕದ ಉಲ್ಲೇಖ ಶಾಸನಗಳಲ್ಲಿದೆ.[೧೪]

ಗೋಸಂಪತ್ತನ್ನು ಹಾಳುಮಾಡುವುದು ಪಾಪವೆಂಬ ಭಾವನೆ ನಂಬಿಕೆ ಶಾಸನಗಳ ಶಾಪಾಶಯ ಭಾಗಗಳಲ್ಲಿ, ದಾನ ಶಾಸನಗಳಲ್ಲಿ ಕಂಡುಬರುವ ಕರುವಿಗೆ ಹಾಲೂಡುತ್ತಿರುವ ಹಸುವಿನ ಹಾಗು ಖಡ್ಗದ ಶಿಲ್ಪಗಳಲ್ಲಿ ವ್ಯಕ್ತವಾಗಿವೆ. ಹಾಲು ತುಪ್ಪ ಮೊಸರು, ಬೆಣ್ಣೆಗಳ ಉಲ್ಲೇಖ ದೇವಾಲಯ ದಾನ ಶಾಸನಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಒಟ್ಟಿನಲ್ಲಿ ಈ ಉದ್ಯಮಗಳನ್ನು ಮುಖ್ಯವಾಗಿ ಅವಲಂಬಿಸಿದ್ದ ದೊಡ್ಡ ಸಮುದಾಯವೊಂದು ಈ ಪ್ರದೇಶದ ಆರ್ಥಿಕ ಚಟುವಟಿಕೆಯಲ್ಲಿ ಮುಖ್ಯ ಪಾತ್ರವಹಿಸಿದೆ.

### ೪.೧.೨.೨ ತೈಲೋದ್ಯಮ-ತೆಲ್ಲಿಗರು

ತೈಲೋದ್ಯಮ ಈ ಪ್ರದೇಶದಲ್ಲಿ ಪ್ರಮುಖ ಉದ್ಯಮವಾಗಿತ್ತು. ಕಾರಣ ಎಣ್ಣೆ ಬೀಜಗಳಾದ ಎಳ್ಳು, ಹರಳು ಹಾಗೂ ತೆಂಗು ವಿಶೇಷವಾಗಿ ಇಲ್ಲಿ ಉತ್ಪಾದನೆಯಾಗುತ್ತಿತ್ತು. ಈಗಲೂ ಕೂಡ ಈ ಬೆಳೆ ಹೆಚ್ಚಿರುವುದನ್ನು ಗಮನಿಸಬಹುದು. ಹರಳು, ಎಳ್ಳು, ಕೊಬ್ಬರಿಗಳನ್ನು ಅರೆದು ದೊಡ್ಡ ಒರಳುಗಳಲ್ಲಿ ರುಬ್ಬಿ, ನೀರಿನೊಂದಿಗೆ ಕುದಿಸಿ ಎಣ್ಣೆ ಬಸಿದುಕೊಳ್ಳುವುದು ಈ ಉದ್ಯಮದ ಸರಳವಾದ ಪ್ರಾಥಮಿಕ ಹಂತ. ಇದು ಮನೆಯ ಅವಶ್ಯಕತೆಗೆ ತಕ್ಕಂತೆ ಇರುತ್ತಿತ್ತು. ಆದರೆ ಮೂಲ ಸಾಮಗ್ರಿಯ ಅಧಿಕ ಉತ್ಪಾದನೆ ಮತ್ತು ಹೆಚ್ಚಾದ ಬೇಡಿಕೆಯಿಂದಾಗಿ ಇದೊಂದು ಪ್ರಮುಖ ಉದ್ಯಮವಾಗಿ ಬೆಳೆಯಲು ಅವಕಾಶವಾಯಿತು. ಈ ತೈಲೋದ್ಯಮದಲ್ಲಿ ತೊಡಗಿದವರನ್ನು ತೆಲ್ಲಿಗರು[೧೫] ಗಾಣಿಗರು[೧೬] ಎಂದು ಶಾಸನಗಳು ಕರೆದಿವೆ. ಎಣ್ಣೆಯ ಉತ್ಪಾದನೆ ಮತ್ತು ವ್ಯಾಪಾರಗಳೆರಡನ್ನೂ ನಿರ್ವಹಿಸುತ್ತಿದ್ದ ಈ ಕುಲದವರು ಈ ಪ್ರದೇಶದಲ್ಲಿ ಸಿರಿವಂತರಾಗಿದ್ದಂತೆ ತೋರುತ್ತದೆ. ಅರಸೀಕೆರೆ, ಕಣಕಟ್ಟೆ, ಕೆಲ್ಲಂಗೆರೆ, ತೆಲ್ಲಿಗನ ಕೆರೆ, ಮುದುಡಿ, ಜನ್ನಾವುರ, ಮನಗತ್ತೂರು, ಕಲ್ಗುಂಡಿಗಳಲ್ಲಿನ ಶಾಸನಗಳು ಇವರ ಆರ್ಥಿಕ ಧಾರ್ಮಿಕ ಚಟುವಟಿಕೆಗಳ ಮೇಲೆ ಬೆಳಕು ಚೆಲ್ಲುತ್ತವೆ.

ಹಲಕೂರಿನ ಒಂದು ಶಾಸನ[೧೭] 'ವಿನಾಯಕನ ಮುಂದಣ ಹರಳಕೆಯಿ ಕಂಬ ೨೦೦... ಮೂಡಣ ತೋಟದ ಬಳಿಯ ತೆವರ ಹರಳಕೆಯಿ ೪೦೦''ನ್ನು ದೇವರಿಗೆ ಬಿಟ್ಟುದನ್ನು ಹೇಳಿದೆ. ಬೀರಯ್ಯ

ದಂಡನಾಯಕನು ಮೊಸಳೆಯಲ್ಲಿ ಮುವ್ವತ್ತಾರು ಮೆಟ್ಟಿನ ಗಳೆಯಲ್ಲಿ ಅಳೆದ ೪೧೫ ಕಂಬ ಹರಳಿನ ಹೊಲವನ್ನು ದೇವರಿಗೆ ನೀಡಿದ್ದಾನೆ.[೧೮] ಎಳ್ಳಿನ ಮೇಲಿನ ತೆರಿಗೆಯನ್ನು ಶಾಸನಗಳು ಹೇಳಿವೆ.[೧೯] ಎಣ್ಣೆ, ಗಾಣಗಳ ಮೇಲಿನ ತೆರಿಗೆಗಳಿಂದ ಇಲ್ಲಿ ತೈಲೋದ್ಯಮ ವಿಶೇಷವಾಗಿತ್ತೆಂಬುದು ಕಂಡುಬರುತ್ತದೆ.

ಇವರು ಯಥೇಚ್ಛವಾಗಿ ಬೆಳೆಯುತ್ತಿದ್ದ ಎಳ್ಳು, ಹರಳು, ತೆಂಗನ್ನು ಕೃಷಿಕರಿಂದ ಖರೀದಿಸಿ ಕೈಗಾಣ, ಎತ್ತುಗಾಣ, ಮೆಟ್ಟುಗಾಣಗಳನ್ನು ಬಳಸಿ ಎಣ್ಣೆ ತೆಗೆದು, ಕೊಡಗಳಲ್ಲಿ ತೈಲಿಗಳಲ್ಲಿ ತುಂಬಿಕೊಂಡು ಮಾರಾಟಮಾಡುತ್ತಿದ್ದರು.[೨೦] ಕೊಡ, ಮಾನ, ಸೊಂಟಿಗೆ ಮುಂತಾದ ಅಳತೆಗಳು ತೈಲ ವ್ಯಾಪಾರದೊಂದಿಗೆ ಪದೇ ಪದೇ ಉಲ್ಲೇಖಗೊಳ್ಳುತ್ತವೆ. ಗಾಣಗೆರೆ[೨೧] ಇವರ ಗಾಣಗಳ ಮೇಲೆ ವಿಧಿಸುತ್ತಿದ್ದ ತೆರಿಗೆಯಾದರೆ, ತೈಲ ವ್ಯಾಪಾರದ ಮೇಲೆ ನಿಗಧಿತ ಅಳತೆಗೆ ಇಂತಿಷ್ಟು ಎಂದು ತೈಲವನ್ನೇ ತೆರಿಗೆಯಾಗಿ ಸಂಗ್ರಹಿಸುತ್ತಿದ್ದರೆಂದು ತೋರುತ್ತದೆ. 'ಎಣ್ಣೆಯ ಕೊಡ ಒಂದಕ್ಕೆ ಸೊಂಟಿಗೆ ೧'[೨೨] ಯೆಣ್ಣೆಗೆ ಸೊಂಟಿಗೆ ಬಿಟ್ಟರು.[೨೩] ಇತ್ಯಾದಿ ಉಲ್ಲೇಖಗಳು ಕಂಡುಬರುತ್ತವೆ.

ಸಮಾಜದ ನಿತ್ಯೋಪಯೋಗಕ್ಕೆ ಅವಶ್ಯಕವಾಗಿದ್ದ ಎಣ್ಣೆಯು ಅಡಿಗೆಗೆ, ದೀಪಕ್ಕೆ, ಚರ್ಮದ ಕಾಂತಿವರ್ಧನೆಗೆ ಕೇಶವರ್ಧನೆಗೆ, ಗಾಡಿಗಳ ಚಕ್ರಗಳ ಕೀಲೆಣ್ಣೆಗಳಿಗೆ[೨೪] ಬಳಕೆಯಾಗುತ್ತಿತ್ತು. ದೇವಾಲಯದ ನಂದಾ ದೀವಿಗೆಗಾಗಿ ಹಣವನ್ನು, ಎಣ್ಣೆಯನ್ನು ಗಾಣಗಳನ್ನು ದಾನ ಮಾಡಿರುವ ವಿಪುಲ ಉದಾಹರಣೆಗಳು ಸಿಗುತ್ತವೆ. ಕಣಿಕಟ್ಟೆಯು ಪ್ರಮುಖ ವ್ಯಾಪಾರೀ ಕೇಂದ್ರವಾಗಿ ಬೆಳೆದಿದ್ದು, ಅನೇಕ ವ್ಯಾಪಾರಿ ಸಂಘಗಳು ಚಟುವಟಿಕೆಯಿಂದಿದ್ದವು. ಇಲ್ಲಿ ತೆಲ್ಲಿಗರ ಸಂಘದ ಎಂಟು ಪ್ರಮುಖ ತೈಲಿಗರು ಕಲಿಗೇಶ್ವರ ದೇವರಿಗೆ ನಂದಾದೀವಿಗೆಗೆ ತಮ್ಮ ತೈಲದ ಕೊಡಗಳಿಗೆ ಸೊಂಟಿಗೆ ಒಂದರಂತೆ ದಾನಬಿಟ್ಟಿದ್ದಾರೆ. ಅಲ್ಲದೆ ದೇವಾಲಯದ ಕೆಲಸಕ್ಕೆ ವರುಷಕ್ಕೆ ಒಂದು ಗಾಣದಲ್ಲಿ ಒಂದು ಹಣದಂತೆ ದೇವರಿಗೆ ದಾನ ಬಿಟ್ಟಿದ್ದಾರೆ.[೨೫] ಅಂದರೆ ಪ್ರಮುಖ ತೈಲೋದ್ಯಮಿಗಳು ಅನೇಕ ಗಾಣಗಳ ಒಡೆಯರಾಗಿರುತ್ತಿದ್ದರು ಮತ್ತು ಕೊಡಗಟ್ಟಲೆ ತೈಲ ಉತ್ಪಾದನೆ ಮಾಡುತ್ತಿದ್ದರೆಂಬುದು ಅರ್ಥವಾಗುತ್ತದೆ. ಗಾಣಗಳಲ್ಲಿ ಕಲ್ಲುಗಾಣ ಮರದ ಗಾಣಗಳ ಉಲ್ಲೇಖವಿದೆ.[೨೬] ಮೆಟ್ಟುಗಾಣ ಕೈಗಾಣಗಳು[೨೭] ಮಾನವ ಚಾಲಿತ ಗಾಣಗಳಾಗಿದ್ದು ಬಹುಷಃ ಉತ್ಪಾದನೆಯು ಕಡಿಮೆ ಪ್ರಮಾಣದಲ್ಲಾಗುತ್ತಿತ್ತು. ಎತ್ತು ಗಾಣಗಳು ಕಡಿಮೆ ಶ್ರಮದಿಂದ ಹೆಚ್ಚು ಉತ್ಪಾದನೆಗೆ ಸಹಾಯಕವಾಗುತ್ತಿದ್ದು, ಉದ್ಯಮಿಗಳು ಇದನ್ನು ಹೆಚ್ಚು ಬಳಸುತ್ತಿದ್ದರು ಎಂದು ಊಹಿಸಬಹುದು. ಸಾಮಾನ್ಯ ತೈಲಿಗರಿಗೆ ಎತ್ತುಗಾಣ ದುಬಾರಿಯಾಗಿದ್ದಿರಬಹುದು. ದೇವಾಲಯಗಳಿಗೆ ಎತ್ತುಗಾಣ ಮತ್ತು ಕೈಗಾಣಗಳನ್ನು ದಾನ ನೀಡಿ ಅವುಗಳನ್ನು ದೇವಾಲಯದ ಆವರಣದಲ್ಲೇ ಸ್ಥಾಪಿಸಲಾಗುತ್ತಿದ್ದು ಗ್ರಾಮಸ್ಥರು ಅದನ್ನು ಬಳಸಿ ಎಣ್ಣೆ ತೆಗೆದುಕೊಂಡು ನಿಗಧಿತ ಭಾಗವನ್ನು ದೇವಾಲಯಕ್ಕೆ ಒಪ್ಪಿಸುತ್ತಿದ್ದ ವ್ಯವಸ್ಥೆ ಇದ್ದುದನ್ನು ಶಾಸನಗಳು ಹೇಳುತ್ತವೆ. ಅರಸೀಕೆರೆ ೨೩ನೇ ಶಾಸನ ಪ್ರಸನ್ನ ಚೆನ್ನಕೇಶವ ದೇವಾಲಯಕ್ಕೆ ಒಂದು ಎತ್ತುಗಾಣವನ್ನು ಒಂದು ಕೈಗಾಣವನ್ನು ಬಿಟ್ಟುದನ್ನು ಹೇಳಿದೆ. ಹಾರನಹಳ್ಳಿ

ದೇವಾಲಯಗಳಿಗೆ ೪ ಗಾಣಗಳನ್ನು ಬಿಟ್ಟಿದ್ದಾರೆ.[೨೮] ಮನಗತ್ತೂರಿನ ಚಾವೇಶ್ವರ ದೇವರಿಗೆ ನಂದಾದೀವಿಗೆಗೆ ಒಂದು ಎತ್ತಿನ ಗಾಣವನ್ನು ಬಿಟ್ಟಿದ್ದಾರೆ.[೨೯] ಗಾಣವನ್ನು ಇಟ್ಟುಕೊಳ್ಳಲಾರದ ಸಾಮಾನ್ಯರಿಗೆ ಇದು ವರದಾನವಾಗಿದ್ದು, ಸ್ವಕಾರ್ಯ 'ಸ್ವಾಮಿ' ಕಾರ್ಯವೆರಡೂ ನೆರವೇರುತ್ತಿತ್ತು. ಗಾಣವನ್ನು ಇಟ್ಟುಕೊಂಡ ಗಾಣಿಗನಾದರೋ ಗ್ರಾಮಸ್ಥರು ತಂದುಕೊಡುವ ಎಣ್ಣೆಕಾಳುಗಳನ್ನು ಗಾಣದಲ್ಲಿ ಅರೆದು ಎಣ್ಣೆಯನ್ನು ಹಿಂಡಿಯನ್ನು ಬೇರ್ಪಡಿಸಿ ಅದಕ್ಕೆ ತಕ್ಕ ಪ್ರತಿಫಲ ಪಡೆದು ಜೀವಿಸುತ್ತಿದ್ದ. ಇಂಥವರು ದೇವರಿಗೆ ಒಂದೋ ಎರಡೋ 'ಪಣ'ಗಳನ್ನು ನೀಡಿದ ಉಲ್ಲೇಖವಿದೆ.[೩೦]

ಗ್ರಾಮ ಪಟ್ಟಣಗಳಲ್ಲಿ ತೆಲುಗ ಕೇರಿ, ವಠಾರಗಳಿದ್ದುದಕ್ಕೆ ದಾಖಲೆಗಳಿವೆ. ಹಿರಿಯೂರಿನ ಶಾಸನ ಸೆಟ್ಟಿವಠಾರವನ್ನು ಹೇಳುತ್ತ ತೆಲ್ಲಿಗರ ಮನೆಯನ್ನು ಹೇಳಿದೆ.[೩೧] ರಾಜಧಾನಿ ಅರಸೀಕೆರೆಯಲ್ಲಿ ಇತರ ಕೇರಿಗಳಂತೆ ತೆಲ್ಲಿಗ ಕೇರಿಯಿತ್ತು.[೩೨]

ಈ ಪ್ರದೇಶದ ಕೆಲ್ಲಂಗೆರೆ ತೆಂಕಣಯ್ಯಾವಳೆ ಎಂದು ಪ್ರಸಿದ್ಧವಾದ,[೩೩] ಬಣಂಜಿಗರಯ್ನೂರ್ವರು ನೆಲೆಸಿದ್ದ[೩೪] ವ್ಯಾಪಾರೀ ಕೇಂದ್ರವಾಗಿದ್ದು ಇಲ್ಲಿನ ತೆಲ್ಲಿಗರು ಸಿರಿವಂತರಾಗಿದ್ದರು. ಇವರ ಶ್ರೇಣಿಯು ತೆಲ್ಲಿಗೇಶ್ವರ ದೇವಾಲಯವನ್ನು ನಿರ್ಮಾಣ ಮಾಡಿತ್ತು.[೩೫] ವಿಶೇಷವಾಗಿ ಗಾಣಗಳಿದ್ದು, ಇಲ್ಲಿನ ಸುಂಕದ ಹೆಗ್ಗಡೆಯು ದೇವಾಲಯಗಳಿಗೆ ಗಾಣಗಳನ್ನು ಗಾಣದೆರೆಯನ್ನು ದಾನ ಮಾಡಿದ್ದಾನೆ. ಜಕ್ಕವ್ವೆ ಎಂಬ ತೈಲಿಗರ ಹೆಣ್ಣು ಮಗಳೊಬ್ಬಳು ತನ್ನ ಅಣುಗದಮ್ಮ ಅಜ್ಜಮನ ಅಕಾಲ ಮರಣವಾದಾಗ ಪರೋಕ್ಷ ವಿನಯವಾಗಿ ಅವನಿಗೆ ಪುಣ್ಯವಾಗಲೆಂದು ಗ್ರಾಮೇಶ್ವರ ದೇವಾಲಯವನ್ನು ನಿರ್ಮಿಸಿದ್ದಾಳೆ. ಈ ದೇವಾಲಯ 'ತೆಲ್ಲಿಗರ ಮುಖಕೆ ಕಂನಡಿ ತೆಲ್ಲಿಗರ ಕುಲಕೆ ಕಳಶ ಪುಣ್ಯದ ಬೆಟ್ಟ' ಎಂದೆಲ್ಲ ವರ್ಣಿತವಾಗಿದೆ.[೩೬] ತೆಲ್ಲಿಗರು ಆರ್ಥಿಕ ಪ್ರಗತಿಯೊಂದಿಗೆ ಸಾಮಾಜಿಕ ಸ್ಥಾನಮಾನಗಳನ್ನು ಗಳಿಸಿದ್ದರು. ಮಾರಿಸೆಟ್ಟಿ ಎಂಬ ತೈಲಿಗಕುಲದ ವ್ಯಾಪಾರಿ ಜನ್ನಾವರ ಗ್ರಾಮದ ಗೌಡಿಕೆಯನ್ನು ಹೊಂದಿದ್ದನು. ಆತ ತನ್ನ ಮಗ ತೈಲಿಸೆಟ್ಟಿಯ ಹೆಸರಿನಲ್ಲಿ ತೈಲೇಶ್ವರ ದೇವಾಲಯ ನಿರ್ಮಿಸಿದ್ದಾನೆ.[೩೭] ಅನೇಕ ಭೂದಾನ ನೀಡಿದ್ದಾನೆ. ಮೊಸಳೆ ಗ್ರಾಮದ ಆಡಳಿತ ವ್ಯಾಪ್ತಿಗೆ ಬರುವ ಹಳ್ಳಿಗಳಲ್ಲಿ ತೆಲ್ಲಿಗನಕೆಜೆ ಎಂಬುದು ಪದೇ ಪದೇ ಉಲ್ಲೇಖಗೊಂಡಿದ್ದು ಇದು ತೈಲಿಗರು ಕಟ್ಟಿಸಿದ ಕೆರೆಯ ಕಾರಣದಿಂದ ಆ ಹೆಸರನ್ನು ಪಡೆದಿತ್ತೆಂಬುದು ಸ್ಪಷ್ಟವಾಗುತ್ತದೆ. ತೆಲ್ಲಿಗರಲ್ಲಿ ಕೆಲವರು ಕುಲವೃತ್ತಿಯಲ್ಲದೆ, ಸೈನ್ಯದಲ್ಲೂ ಸೇವೆ ಸಲ್ಲಿಸುತ್ತಿದ್ದರು. 'ಸಿಂಗನ ದಾಳಿ ಬಂದಡೆ ಎಳವಾರೆಯ ತೆಲ್ಲಿಗ ಮಲೆಯನಾಯಕನ ಮಗ ಬವರದಲ್ಲಿ ಮೆಚ್ಚುವಂತೆ ಕಾದಿ ವೀರಸ್ವರ್ಗಪಡೆದ'ನೆಂದು ಎಳವಾರೆಯ ಶಾಸನ ವರ್ಣಿಸಿದೆ.[೩೮]

### ೪ ೧ ೨.೩. ಜವಳಿ ಉದ್ಯಮ-ನೇಯ್ಗೆಕಾರರು

ಅರಸೀಕೆರೆ ಪ್ರದೇಶದಲ್ಲಿ ಈ ಉದ್ಯಮ ವೈವಿಧ್ಯವೂ ವ್ಯಾಪಕವೂ ಆಗಿ ಬೆಳವಣಿಗೆ ಹೊಂದಿತ್ತು. ಮಗ್ಗದವರ ನೇಯ್ಗೆ ಉದ್ಯಮದ ವಿವಿಧ ವಸ್ತುಗಳ ಮೇಲೆ ತೆರಿಗೆ ವಿಧಿಸಿದ್ದನ್ನು ಹಲವು ಶಾನಗಳು

ಹೇಳುತ್ತವೆ. ನೆಯ್ಗೆಯು ಬಹಳ ಪ್ರಾಚೀನವೂ ಪ್ರಮುಖವೂ ಆದ ಕೈಗಾರಿಕೆಯಾಗಿತ್ತು. ಒಳನಾಡು ಮತ್ತು ಹೊರನಾಡುಗಳಲ್ಲಿ ಜವಳಿ ವ್ಯಾಪಾರ ವ್ಯಾಪಕವಾಗಿ ಬೆಳೆದಿತ್ತು. ಅಭಿಲಷಿತಾರ್ಥ ಚಿಂತಾಮಣಿಯಲ್ಲಿ[೩೯] ಅನೇಕ ಬಗೆಯ ವಸ್ತ್ರಗಳ ಪಟ್ಟಿಯನ್ನು ನೀಡಿ ಅವುಗಳು ತಯಾರಾಗುವ ಸ್ಥಳಗಳನ್ನು ಹೇಳಿದೆ.

ಮಗ್ಗದ ಕಚ್ಚಾ ವಸ್ತುಗಳಾದ ಹತ್ತಿ, ಉಣ್ಣೆ ಮತ್ತು ನಾರು ಈ ಪ್ರದೇಶದಲ್ಲಿ ಹೇರಳವಾಗಿ ದೊರೆಯುತ್ತಿತ್ತು. ರೇಶಿಮೆಯನ್ನು ಇತರ ಭಾಗದಿಂದ ತರಿಸಿಕೊಳ್ಳುತ್ತಿದ್ದರೆನ್ನಬಹುದು. ನೂಲಿನ ಮೇಲಿನ ತೆರಿಗೆಯನ್ನು ಕೆಲ್ಲಂಗೆರೆಯ ಕಾಲುವಳ್ಳಿ ಸೂಳೆಗೆರೆ ಶಾಸನಗಳು ಉಲ್ಲೇಖಿಸಿವೆ.[೪೦] ಲಾಳಿಯ ಕಾಳಯ್ಯನೆಂಬುವವನ ಉಲ್ಲೇಖವಿದೆ.[೪೧] ಈತ ನೇಕಾರನಾಗಿದ್ದನೆಂಬುದು ಸ್ಪಷ್ಟ. ಲಾಳಿ ಕಂಡಿಕೆವಣ[೪೨] ಕದುರಬೆಸ[೪೩] ಇತ್ಯಾದಿಗಳು ನೇಯ್ಗೆಯ ಉದ್ಯಮಕ್ಕೆ ಸಂಬಂಧಿಸಿದಂತಹವು. ಇವುಗಳ ಮೇಲೆ ತೆರಿಗೆ ವಿಧಿಸಲಾಗಿದೆ. ಮಗ್ಗ ಸುಂಕ ಜೇಡದೆರೆ ಎಂದು ಪ್ರತ್ಯೇಕವಾಗಿ ಒಂದು ಶಾಸನ[೪೪] ಹೇಳಿದೆ. ಇವು ಪ್ರತೀ ಮಗ್ಗದ ಮೇಲೆ ಹಾಗು ನೇಕಾರರ ಮೇಲೆ ವಿಧಿಸಲಾಗುತ್ತಿದ್ದ ತೆರಿಗೆಗಳಾಗಿವೆ.

ತಿರುಪತಿಯ ಸಂತೆ ಶಾಸನವೊಂದು[೪೫] ವೈವಿಧ್ಯಮಯವಾದ ಮಗ್ಗವನ್ನು ಹೇಳಿದೆ. ಮಗ್ಗದವರು, ಬಿಳಿಮಗ್ಗದವರು, ದೇವಾಂಗ ಮಗ್ಗದವರು, ಕುರುಬರ ಮಗ್ಗ, ಕಬ್ಬುಲರ ಮಗ್ಗಗಳನ್ನು ಹೆಸರಿಸಿ ಪ್ರತ್ಯೇಕವಾಗಿ ಸಂತೆ ಸುಂಕವನ್ನೂ, ವರ್ಷಂಪ್ರತಿ ನೀಡಬೇಕಾದ ತೆರಿಗೆಯನ್ನು ನಿಗಧಿಪಡಿಸಿದೆ. ಜೇಡ ದೆರೆ ವೃತ್ತಿ ತೆರಿಗೆಯಾದರೆ, ಉಳಿದವು ಹತ್ತಿ, ರೇಶ್ಮೆ, ಉಣ್ಣೆ ಇತ್ಯಾದಿಗಳನ್ನು ಬಳಸಿ ತಯಾರಿಸುತ್ತಿದ್ದ ಹತ್ತಿ ಬಟ್ಟೆಗಳು, ರೇಶ್ಮೆ ಪಟ್ಟವಸ್ತ್ರಗಳು, ರತ್ನ ಗಂಬಳಿ, ಕಂಬಳಿಗಳನ್ನು ತಂದು ಸಂತೆಯಲ್ಲಿ ಮಾರಾಟ ಮಾಡುವುದಕ್ಕಾಗಿ ನೀಡಬೇಕಾದ ಸುಂಕಗಳಾಗಿವೆ. ಬಿಳಿಮಗ್ಗ ಬಹುಷಃ ಬಣ್ಣರಹಿತ ಹತ್ತಿ ಬಟ್ಟೆಯ ಮಗ್ಗಗಳಾಗಿರಬಹುದು. ಇವತ್ತಿಗೂ ಬಿಳಿ ಜಾಡರೆಂಬ ಕುಲವೊಂದಿದ್ದು, ಅವರ ಪ್ರಾಚೀನ ವೃತ್ತಿಯ ಬಗೆಗೆ ಯಾವುದೇ ತಿಳುವಳಿಕೆಯಿಲ್ಲ. ದೇವಾಂಗಮಗ್ಗ ಸಿರಿವಂತರು ಬಳಸುತ್ತಿದ್ದ ರೇಷ್ಮೆ ವಸ್ತುಗಳ ತಯಾರಿಕ ಮಗ್ಗವಾಗಿತ್ತೆನ್ನಬಹುದು. ಕುರಿತುಪ್ಪಟವನ್ನು ಸಂಗ್ರಹಿಸಿ ದಾರತೆಗೆದು ಕರಿ ಮತ್ತು ಬಿಳಿ ಕಂಬಳಿಗಳು, ಶ್ರೀಮಂತರಿಗಾಗಿ ರತ್ನಗಂಬಳಿಗಳು, ಉಣ್ಣೆ ವಸ್ತುಗಳನ್ನು ತಯಾರಿಸುತ್ತಿದ್ದ ಮಗ್ಗ, ಕುರುಬರ ಮಗ್ಗ, ಕಂಬಳಿಕಾರಕದೆರೆ ಕಂಬಳಿಗಳ ವ್ಯಾಪಾರದ ಗುತ್ತಿಗೆ ಹಿಡಿಯುತ್ತಿದ್ದ ವ್ಯಾಪಾರಿಗಳ ಮೇಲಿನ ತೆರಿಗೆಯಾಗಿತ್ತು ಎನ್ನಬಹುದು. ಬೇಡರು ಮತ್ತು ಬೆಸ್ತರು ಬಳಸುವ ಬಲೆಗಳನ್ನು ನೇಯುವ ಮಗ್ಗವೇ ಕಬ್ಬುಲರ ಮಗ್ಗ, ಅರಸೀಕೆರೆಯ ಪೇಟೆಯಲ್ಲಿ ಮಾರಾಟವಾಗುತ್ತಿದ್ದ ಸೀರೆಯ ಮಳವೆಗಳ ಮೇಲಿನ ತೆರಿಗೆಯನ್ನು ದೇವರಿಗೆ ಬಿಡಲಾಗಿದೆ.[೪೬] ಒಟ್ಟಿನಲ್ಲಿ ಪಟ್ಟು ಪೀತಾಂಬರಗಳಿಂದ ಬೆಸ್ತರ ಬಲೆಯವರೆಗೆ ಎಲ್ಲದಕ್ಕೂ ತೆರಿಗೆ ಇತ್ತು. ಅದರಿಂದ ರಾಜಾಯ ಹೆಚ್ಚುತ್ತಿತ್ತು. ಕೆಲ್ಲಂಗೆರೆ ಶಾಸನದಲ್ಲಿ[೪೭] ಧರ್ಮೇಶ್ವರ ದೇವರ ಶ್ರೀಪಾದಾರಾದಕನಾದ ಮಾಚಯ್ಯನಿಗೆ ಮಗ್ಗ ಸುಂಕ, ಜೇಡದೆರೆಯನ್ನು ಬಿಟ್ಟ

ಉಲ್ಲೇಖವಿದೆ. ಚಿಕ್ಕ ಗಂಡಸಿ ಗ್ರಾಮದಲ್ಲಿ ಇತ್ತೀಚಿನವರೆಗೂ ಮಗ್ಗದವರು ವಿಶೇಷವಾಗಿ ಚಟುವಟಿಕೆಯಿಂದಿದ್ದು ಈಗ ಕೇವಲ ತೆಂಗಿನ ನಾರಿನ ಹಗ್ಗ ಹೊಸೆಯುವ ಉದ್ಯಮ ಮಾತ್ರ ಉಳಿದುಕೊಂಡಿದೆ. ಇಲ್ಲಿನ ಮಹಾಜನರು ಸಂದರಾಮತದ ಗೋಪಿ ಚಂದನಕ್ಕೆ ಊರ ಮಗ್ಗದೊಳಗೆ ಮೂರು ವೀಸದ ಒಂದು ಮಗ್ಗದೆಜೆಯನ್ನು ನಡೆಸಿಕೊಂಡು ಬರುವುದನ್ನು ದಾಖಲಿಸಿದೆ.[೪೮] ಅಲ್ಲಿನ ಕೇಶವನಾಥ ಗೋಪೀನಾಥ ದೇವರ 'ಎಂಣೆಮಜ್ಜನದ ಧರ್ಮಕ್ಕೆ' ಹಿರಿಯ ಗಂಡಸಿಯ ಊರೊಳಗೆ ಒಂದು ಮಗ್ಗವನ್ನು ನಡೆಸಲಾಗುತ್ತಿತ್ತು.[೪೯] ಇದೇ ದೇವಾಲಯದ ದೇವರುಗಳಿಗೆ ವಸ್ತ್ರಕ್ಕಾಗಿ ಊರಿನ ಮದುವೆದೆರೆಯನ್ನು ಬಿಟ್ಟದ್ದು ತಿಳಿದುಬರುತ್ತದೆ.[೫೦] ಅರಮನೆ ಗುರುಮನೆ ನೆರೆಮನೆಗಳಲ್ಲದೆ ದೇವಾಲಯಗಳು ಮಗ್ಗದವರ ಗ್ರಾಹಕರಾಗಿದ್ದರೆಂಬುದು ಇದರಿಂದ ತಿಳಿದುಬರುತ್ತದೆ.

**ಸೂಜಿಕಾಯಕ** : ಜವಳಿ ಉದ್ಯಮಕ್ಕೆ ಪೂರಕವಾಗಿ ಬೆಳೆದ ಮತ್ತೊಂದು ಉದ್ಯಮ ಸೂಜಿಕಾಯಕ. ಚಿಪ್ಪಿಗರು ಕುಸುವರೆಂದು ಇವರನ್ನು ಕರೆಯುತ್ತಾರೆ. ಚಿಪ್ಪಿಗ ಗೊತ್ತಳಿ ಎಂಬ ಶ್ರೇಣಿಯನ್ನು ಇವರು ಹೊಂದಿದ್ದರು. ಬಟ್ಟೆಗಳನ್ನು ಕತ್ತರಿಸಿ ಸಿದ್ಧ ಉಡುಪುಗಳನ್ನು ತಯಾರಿಸುತ್ತಿದ್ದರು. ನಾನಾ ಬಗೆಯ ಚಿತ್ತಾರಗಳನ್ನು ಬಿಡಿಸಿ ಅವುಗಳನ್ನು ಆಕರ್ಷಕವಾಗಿ ಮಾಡುತ್ತಿದ್ದರು. ಹಳೇಬೀಡಿನ ಶಾಸನ[೫೧] ಈ ಚಿಪ್ಪಿಗರನ್ನು 'ಅನೇಕ ವಸ್ತ್ರ ಖಂಡಿತ ಶೃಂಗಾರವಿದ್ಯಾ ಪ್ರವೀಣರು' ಎಂದು ಕರೆದಿದೆ. ಇವರ ಅಂಗಡಿಗಳ ಮೇಲಿನ ತೆರಿಗೆಯನ್ನು ತಿರುಪತಿ[೫೨] ಶಾಸನ ಉಲ್ಲೇಖಿಸಿದೆ. ಹೊಯ್ಸಳ ಶಿಲ್ಪಗಳಲ್ಲಿ ಅದ್ಭುತ ವಸ್ತ್ರ ವಿನ್ಯಾಸ ಚಿತ್ತಾರಗಳನ್ನು ನೋಡಬಹುದು. ವೀರರೂ ಕದನ ಪ್ರಚಂಡರೂ ಸೂಜಿಕಾಯಕದ ಶ್ರೇಣಿ ಸನ್ನಾಹಿಕರೂ ಆಗಿದ್ದ ಪಟ್ಟಗಾರ ಕುಲದ ಸೂಜಿಯ ಸೋಮನೆಂಬುವನ ವಂಶವನ್ನು ಒಂದು ಶಾಸನ ವಿಶೇಷವಾಗಿ ವರ್ಣಿಸಿದೆ.[೫೩] 'ದೇವ ಬ್ರಾಹ್ಮಣರ ಪಾದಾರಾಧಕ, ನಡೆಗೋಂಟೆಮಲ್ಲ, ಕುಸುವರಾಭರಣ ಸೇಣಿಸನ್ನಾಹ, ಸೇಣಿಗೆ ಮಾರ್ಮಲೆವನಾಯಕರಗಂಡ, ಪಟ್ಟಗಾರರ ಹೆರಗೆಹಳಿವರಗಂಡ" ಮುಂತಾದ ವರ್ಣನೆಗಳಲ್ಲಿ ಈ ಸೂಜಿಕಾಯಕದವರ ಶ್ರೇಣಿಯಲ್ಲಿ ಈ ವಂಶದವರಿಗಿದ್ದ ಪ್ರಾಮುಖ್ಯತೆ ಪ್ರಸಿದ್ಧಿ ತಿಳಿದುಬರುತ್ತದೆ. ಈ ವಂಶದ ಸೂಜಿಯ ಮಾದೆಯ್ಯನು ನೀರ್ಗುಂದ ವೃತ್ತಿಯೊಳಗಿನ ಬಳ್ಳಗಟ್ಟದಲ್ಲಿ ಕುಸುವೇಶ್ವರ ದೇವಾಲಯವನ್ನು ಕಟ್ಟಿಸಿ ಭೂಮಿದಾನ ನೀಡಿದ್ದಾನೆ.

ಒಟ್ಟಿನಲ್ಲಿ ಈ ಪ್ರದೇಶವು ನಾನಾ ಬಗೆಯ ಮಗ್ಗಗಳು, ಚಿಪ್ಪಿಗರ ಅಂಗಡಿಗಳು, ಜವಳಿ ಅಂಗಡಿಗಳನ್ನು ಹೊಂದಿದ್ದು, ಇಲ್ಲಿನ ಆರ್ಥಿಕ ನಾಗರಿಕ ಬದುಕಿನ ಬಗೆಗೆ ಬೆಳಕು ಚೆಲ್ಲುತ್ತವೆ.

### ೪.೧೨.೪. ವೀರ ಪಾಂಚಾಳರ ಉದ್ಯಮಗಳು

ಲೋಹಕರ್ಮ, ಹೇಮಕರ್ಮ, ಮುತ್ತು ರತ್ನ ವಜ್ರದ ಕೆಲಸ, ಮರ ಮುಟ್ಟುಗಳ ಕೆಲಸ, ಕಲುಕುಟಿಗ ಕಸುಬುಗಳು ವೀರಪಾಂಚಾಳರೆಂದು ಕರೆಯಲ್ಪಡುವ ಕಮ್ಮಾರ, ಅಕ್ಕಸಾಲಿಗ, ಕಂಜುಗಾರ,

ಬಡಗಿ ಮತ್ತು ಶಿಲ್ಪಿಗಳ ವೃತ್ತಿಗಳಾಗಿದ್ದವು. ಇವು ಗ್ರಾಮದ ಮಟ್ಟದಲ್ಲಿ ಸಣ್ಣ ಕುಲಕಸುಬುಗಳಾಗಿದ್ದು ನಗರೀಕರಣ ಪ್ರಕ್ರಿಯೆಯೊಂದಿಗೆ ಉದ್ಯಮಗಳಾಗಿ ಬೆಳೆದವು ಎಂದರೆ ತಪ್ಪಾಗಲಾರದು. ಸಿರಿವಂತರು ಪ್ರಭುವರ್ಗದವರ ಸಂಪತ್ತಿನ ಹೆಚ್ಚಳ ಭೋಗವಸ್ತುಗಳ ಬೇಡಿಕೆ, ಕೃಷಿ ವಿಸ್ತರಣೆಗಳು ಇವರು ತಯಾರಿಸುವ ವಸ್ತುಗಳಿಗೆ ಬೇಡಿಕೆ ಹೆಚ್ಚಿಸಿದವು. ಅದರೊಂದಿಗೆ ಈ ವೃತ್ತಿಯವರ ಆರ್ಥಿಕ ಸ್ಥಿತಿಯಲ್ಲಿ ಸ್ವಲ್ಪಮಟ್ಟಿನ ಪ್ರಗತಿಗೆ ಕಾರಣವಾಯಿತು. ವಿಶ್ವಕರ್ಮ ಕುಲದವರೆಂದು ಕರೆದುಕೊಳ್ಳುವ ಇವರ ಕಲಾಪ್ರೌಢಿಮೆ ಅಭಿವೃದ್ಧಿಗೊಳ್ಳಲು ಆಳರಸರ ಸಿರಿವಂತರ ಪ್ರೋತ್ಸಾಹವೇ ಕಾರಣ. ಕಬ್ಬಿಣ, ತಾಮ್ರ, ಕಂಚು, ಹಿತ್ತಾಳೆ, ಬೆಳ್ಳಿ, ಚಿನ್ನಗಳಿಂದ ಗೃಹೋಪಯೋಗಿ ಅವಶ್ಯಕ ವಸ್ತುಗಳಿಂದ ಹಿಡಿದು ಆಭರಣ ಅಲಂಕರಣ, ಪೀಠೋಪಕರಣ ಮುಂತಾದ ಭೋಗವಸ್ತುಗಳವರೆಗೆ ಈ ಉಧ್ಯಮ ವಿಸ್ತರಿಸಿತು. ಪಾಂಚಾಲರ ಅಂಗಡಿಗಳ, ಚಿನುವಾರರ ಅಂಗಡಿಗಳ ಮೇಲಿನ ತೆರಿಗೆಯ ಉಲ್ಲೇಖಗಳಿವೆ.[೫೪]

**ಲೋಹಕರ್ಮ** ಕುಶಲ ಕಲೆಯಾಗಿ ಮಾರ್ಪಟ್ಟಿತ್ತು. **ಕಂಚುಗಾರರು** ದೇವಾಲಯಗಳ ಉತ್ಸವದ ಪ್ರತಿಮೆಗಳು ವಾಹನಗಳು, ಹರಿವಾಣಗಳು ಆರತಿ ತಟ್ಟೆಗಳು ದೂಪದ ಗುಂಡಿಗಳು ಪ್ರಭಾವಳಿಗಳು[೫೫] ಇತ್ಯಾದಿಗಳನ್ನು ಆಕರ್ಷಕವಾಗಿ ಕಲಾತ್ಮಕವಾಗಿ ತಯಾರಿಸುತ್ತಿದ್ದರು. **ಅಕ್ಕಸಾಲಿಗರು** ಬೆಳ್ಳಿ, ಬಂಗಾರದಲ್ಲಿ ದೇವರಿಗೆ ಶ್ರೀಮಂತವರ್ಗದವರಿಗೆ ಪೀಠೋಪಕರಣಗಳು, ಪಾತ್ರೆಗಳು ಆಭರಣಗಳನ್ನು ವಿಶಿಷ್ಠ ಕುಸುರಿಗೆಲಸದೊಂದಿಗೆ ತಯಾರಿಸುತ್ತಿದ್ದರು. ಮುತ್ತುರತ್ನ ವಜ್ರ ವೈಡೂರ್ಯ ಖಚಿತವಾದ ಆಭರಣಗಳನ್ನಲ್ಲದೆ, ಕಮ್ಮಟಗಳಲ್ಲಿ ಚಿನ್ನ, ಬೆಳ್ಳಿ, ತಾಮ್ರದ ನಾಣ್ಯಗಳನ್ನು ಇವರು ಸಿದ್ಧಪಡಿಸುತ್ತಿದ್ದರು. ಚಿನುವಾರರ ಅಂಗಡಿಗಳು ಹಾರಿಕಾಯ, ಅಕ್ಕಸಾಲಿಗರಅಯ ಇತ್ಯಾದಿಗಳು ಇವರ ಮೇಲಿನ ತೆರಿಗೆಗಳಾಗಿದ್ದವು.[೫೬] ಈ ಉದ್ಯಮಕ್ಕೆ ಪೂರಕವಾಗಿ ರತ್ನಪಡಿ ವ್ಯಾಪಾರಿಗಳು ಮಣೆಗಾರರು[೫೭] ಇದ್ದು ಬಹಿತ್ರದಿಂದ ಮುತ್ತು ರತ್ನಗಳನ್ನು ತಂದು ವ್ಯಾಪಾರ ಮಾಡುತ್ತಿದ್ದರು. ಈ ಉದ್ಯಮದ ಮೇಲಿನ ಉಸ್ತುವಾರಿಗಾಗಿ ಮಾಣಿಕ್ಯ ಭಂಡಾರಿಗಳೇ ಇರುತ್ತಿದ್ದರು.[೫೮]

ಈ ಪ್ರದೇಶದಲ್ಲಿ ಕಲ್ಯಾಡಿ ಎಂಬ ಗ್ರಾಮದ ಪರಿಸರದ ಕಲ್ಲು ಗುಡ್ಡಗಳ ಹರವಿನಲ್ಲಿ ತಾಮ್ರದ ನಿಕ್ಷೇಪವಿದ್ದು, ಪ್ರಾಚೀನ ಕಾಲದಿಂದಲೂ ಇಲ್ಲಿ ಗಣಿಗಾರಿಕೆ ನಡೆಯುತ್ತಿತ್ತೆಂದು ತಿಳಿದುಬಂದಿದೆ.[೫೯] ನೆರೆಯ ಪ್ರದೇಶಗಳಾದ ಪೂಂಗಾಮೆಯ ಬಳಿ ಚಿನ್ನದ ಗಣಿಗಳು ಚಿಕ್ಕನಾಯಕನಹಳ್ಳಿ ಗುಬ್ಬಿಗಳಲ್ಲಿ ಕಬ್ಬಿಣದ ಗಣಿಗಳಿದ್ದುದು ತಿಳಿದುಬಂದಿದೆ.[೬೦]

**ಕಮ್ಮಾರರು :** ಕೃಷಿ ವಿಸ್ತರಣೆಯೊಂದಿಗೆ ಕೃಷಿ ಸಂಬಂಧಿ ವಸ್ತುಗಳಿಗೆ ಬೇಡಿಗೆ ಹೆಚ್ಚಿತು. ಸಾಮ್ರಾಜ್ಯಗಳು ಸ್ಥಾಪನೆಯಾದಂತೆ ಆಯುಧಗಳಿಗಾಗಿ ಸೈನ್ಯದಿಂದ ಬಾರಿ ಬೇಡಿಕೆ ಉಂಟಾಯಿತು. ಇದು ಕಮ್ಮಾರರ ಗ್ರಾಮೀಣ ಕುಲುಮೆಗಳು ಪ್ರಮುಖ ಕೈಗಾರಿಕ ಘಟಕಗಳಾಗಿ ಬೆಳೆಯುವುದಕ್ಕೆ ಕಾರಣವಾಯಿತು. ಕುಲುಮೆ

ಕಾಯಕದಲ್ಲಿ ಕಬ್ಬಿಣದ ಬಳಕೆ ವ್ಯಾಪಕವಾಗಿತ್ತು.[೮೧] ಗ್ರಾಮದಿಂದ ಪೇಟೆಗಳಿಗೆ ರಾಜಧಾನಿ ನಗರ ಕೇಂದ್ರಗಳವರೆಗೆ ಕಮ್ಮಾರರ ಸೇವೆ ವಿಸ್ತರಿಸಿತು. ಇವರ ಆರ್ಥಿಕ ಮಟ್ಟ ಸುಧಾರಿಸಿತು. ಇವರು ನಿಗಧಿತ ತೆರಿಗೆಯನ್ನು ಪಾವತಿಸುತ್ತಿದ್ದರು.[೮೨]

**ಬಡಗಿಗಳು** : ಇವರು ಕೃಷಿಕರಿಗೆ ಅವಶ್ಯಕವಾದ ನೇಗಿಲು ನೊಗದಿಂದ ಹಿಡಿದು ದೇವಾಲಯ ಶಿಖರಗಳವರೆಗೆ ಅವಶ್ಯಕವಾದ ವಸ್ತುಗಳನ್ನು ಮರದಿಂದ ತಯಾರಿಸಿಕೊಡುತ್ತಿದ್ದರು. 'ಕಾರಕನ ಕೈಯಲ್ಲಿ ಮರವನ್ನು ಶುದ್ಧಮಾಡಿಸಿ ಹುಗಿಲು ತೆಗೆದು ಈಯವನಿಕ್ಕಿ, ಮೇಳಿಯಂ ಬೆಟ್ಟಿ ಜಿಗುಳಿಯನಿಕ್ಕಿ ಗುಳುವ ತೊಡಿಸಿ ನೇಗಿಲು ನೊಗಗಳನ್ನು ರೈತರು ಮಾಡಿಸಿಕೊಳ್ಳುತ್ತಿದ್ದುದನ್ನು ಒಕ್ಕಲಿಗ ಮುದ್ದಣ್ಣ ಹೇಳಿದ್ದಾನೆ.[೮೩] ಆರ್ಥಿಕ ಸುಸ್ಥಿತಿಯಿಂದ ಹೆಚ್ಚಾದ ನಿರ್ಮಾಣಕಾರ್ಯ, ಪೀಠೋಪಕರಣಗಳ ಬೇಡಿಕೆ, ಸಿರಿವಂತರ ಪ್ರೋತ್ಸಾಹದಿಂದ ತಮ್ಮ ಕಸುಬಿನಲ್ಲಿ ನೈಪುಣ್ಯತೆಯನ್ನು ಸಾಧಿಸಿಕೊಳ್ಳಲು ಬಡಗಿಗಳು ಪ್ರಯತ್ನಿಸಿದರು. ದೇವಾಲಯಗಳ ಶಿಲ್ಪಗಳಲ್ಲಿ ಕಂಡುಬರುವ ನಾನಾ ಬಗೆಯ ಸುಖಾಸೀನಗಳು ಮಂಚ, ಪೀಠಗಳು ಮಣೆಗಳು ಬಾಗಿಲುವಾಡಗಳು ಸುಂದರ ಕೆತ್ತನೆಯ ವೈಶಿಷ್ಟ್ಯತೆಗಳು ಆ ಕಾಲದ ಮರದ ಪೀಠೋಪಕರಣಗಳ ಬಗೆಗೆ ಬೆಳಕು ಚೆಲ್ಲುತ್ತವೆ. ಮೊಸಳೆಯ ಶಾಸನವೊಂದು[೮೪] ದೇವಾಲಯದ ಮುಂದಿನ ರಂಗಮಂಟಪವನ್ನು 'ಮರವೆಸನವಾಗಿ' ಮಾಡಿಸಿದ್ದನ್ನು ಹೇಳಿದೆ. ಬಡಗಿಗಳನ್ನು ದೇವಾಲಯದ ಪರಿವಾರ ವರ್ಗದವರಲ್ಲಿ ಸೇರಿಸಿ ಅವರಿಗೆ ಮನೆ[೮೫] ಭೂಮಿಗಳನ್ನು ಕೊಡುತ್ತಿದ್ದರು.[೮೬] ಬಡಗಿ ಚಿಕ್ಕೋಜನ ಮಗ ಮಸಣೋಜ ತನ್ನ ತಂದೆಯ ಹೆಸರಿನಲ್ಲಿ ಚಿಕ್ಕೇಶ್ವರ ದೇವಾಲಯ ಪ್ರತಿಷ್ಠೆಯನ್ನು ಕ್ರಿ.ಶ.೧೧೦೧ ರಲ್ಲಿ ಮನಕತ್ತೂರಿನಲ್ಲಿ ಮಾಡಿಸಿ ದಾನಬಿಟ್ಟಿದ್ದಾನೆ.[೮೭]

**ಕಲ್ಲುಕುಟಿಗರು** : ಅರಸೀಕೆರೆ, ಹಾರನಹಳ್ಳಿ, ಜಾವಗಲ್ಲು, ಹುಲ್ಲೇಕೆರೆ, ಮಾವುತನಹಳ್ಳಿಗಳಲ್ಲಿನ ದೇವಾಲಯಗಳ ಅದ್ಭುತ ಶಿಲ್ಪ ಕಲಾ ವೈಭವ, ತಾಂತ್ರಿಕತೆ ನೈಪುಣ್ಯತೆಗಳು ಈ ಪ್ರದೇಶದ ಕಲ್ಲುಕುಟಿಗರ ಕಸುಬಿನ ಕಲಾವಂತಿಕೆಯನ್ನು ಅಭಿವೃದ್ಧಿಯನ್ನು ಮನಮುಟ್ಟಿಸುತ್ತದೆ. ವಿಶ್ವಕರ್ಮರೆಂದು ಕರೆದುಕೊಳ್ಳುವ ಈ ಶಿಲ್ಪಿಗಳು, ರೂವಾರಿಗಳು, ಒಡ್ಡರನ್ನು ವೀರ ಪಾಂಚಾಳರೆಂದೇ ಗುರುತಿಸಲಾಗುತ್ತದೆ. ಕಲ್ಲು ಒರಳಿನ ತಯಾರಿಕೆಯಿಂದ ಅತ್ಯಂತ ಸೂಕ್ಷ್ಮ ಕುಸುರಿಕೆಲಸದ ಶಿಲ್ಪ, ಕಟ್ಟಡಗಳ ನಿರ್ಮಾಣದವರೆಗೆ ಇವರ ಹರವಿತ್ತು. ಈ ಪ್ರದೇಶದಲ್ಲಿ ಹೊಯ್ಸಳರ ಕಾಲದಲ್ಲಿ ವಿಶೇಷ ಪ್ರೋತ್ಸಾಹ ದೊರೆತು ಅಸಂಖ್ಯ ಕೆರೆಗಳು ದೇವಾಲಯಗಳೂ ಮಂಟಪಗಳೂ ನಿರ್ಮಾಣವಾಗಿವೆ. ಅನುವಂಶಿಕವಾದ ಈ ವೃತ್ತಿಯಲ್ಲಿ ನಿರಂತರ ಪ್ರಯೋಗ ಶೀಲತೆ ಕಂಡುಬರುತ್ತದೆ. ಶ್ರೇಷ್ಠ ರೂವಾರಿಗಳು ಸಮಾಜದಲ್ಲಿ ಉತ್ತಮ ಸ್ಥಾನಮಾನ ಆರ್ಥಿಕ ಸ್ಥಿತಿಗತಿಗಳನ್ನು ಪಡೆದಿದ್ದರು. ಇವರ ವೃತ್ತಿಯನ್ನು ಉದ್ದಿಮೆ ಎಂದು ಕರೆಯುವುದಕ್ಕಿಂತ ಕಸುಬು ಎಂದು ಕರೆಯುವುದೇ ಸೂಕ್ತವೆನಿಸುತ್ತದೆ. ಬೇಡಿಕೆಯ ಮೇರೆಗೆ ಈ ಕಸುಬುದಾರರು ಸೇವೆಯನ್ನು ನೀಡುತ್ತಿದ್ದರು.

**೪.೧.೨.೫. ಕುಂಬಾರಿಕೆ**

ಕುಂಬಾರರು ಗ್ರಾಮೀಣ ಸಮಾಜದ ಜನರ ಅವಶ್ಯಕತೆಗೆ ತಕ್ಕಂತೆ ಮಡಿಕೆ, ಕುಡಿಕೆ, ಗುಡಾಣ ಹೆಂಚು ಇತ್ಯಾದಿಗಳನ್ನು ತಯಾರಿಸುತ್ತಿದ್ದರು. ಸಮೀಪದ ಸಂತೆ ಪೇಟೆಗಳಿಗೆ ಒಯ್ದು ಮಾರುತ್ತಿದ್ದರಾದರೂ ಇವರ ಆರ್ಥಿಕ ಸ್ಥಿತಿ ಅಷ್ಟೇನೂ ಸುಧಾರಿಸಿದಂತೆ ಕಂಡುಬರುವುದಿಲ್ಲ. ಇವರು ತಿಗರಿಗಳ ಮೇಲೆ ನಿಗದಿತ ಪ್ರಮಾಣದ ತೆರಿಗೆಯನ್ನು ನೀಡಬೇಕಾಗಿತ್ತು.[೧೮] ಇವರು ಮಡಿಕೆ ಮಾಡುವುದರೊಂದಿಗೆ ಬೆಂಡಿನಲ್ಲಿ ಸುಂದರವಾದ ಹಾರ ಬಾಸಿಂಗ ಆಟಿಕೆಗಳನ್ನು ಮಾಡುವುದರಲ್ಲಿ ಪ್ರವೀಣರಾಗಿರುತ್ತಿದ್ದು, ನಿಗದಿತ ಪ್ರದೇಶಗಳ ಮದುವೆಗಳಿಗೆ ಮಾತ್ರ ಬೇಡಿಕೆಯ ಮೇರೆಗೆ ಅರಣಿಗಳನ್ನು ಬಾಸಿಂಗಗಳನ್ನು ಮಾಡಿಕೊಡಬೇಕಾಗಿತ್ತು. ಹಾಗಾಗಿ ಇವರ ಉದ್ದಿಮೆ ವ್ಯಾಪಕವಾಗಿ ಬೆಳೆಯಲು ಅವಕಾಶವಾಗಲಿಲ್ಲ. (ವಕ್ತೃ ಕುಂಬಾರ ರಾಜಪ್ಪ ಬಾಣಾವರ) ಇವರು ಗ್ರಾಮಗಳಿಗೆ ನೀಡುತ್ತಿದ್ದ ಸೇವೆಗಾಗಿ ಭೂದಾನವನ್ನು,[೧೯] ಸುಗ್ಗಿಯ ಕಾಲದಲ್ಲಿ ರೈತರಿಂದ ಆಯವಾಗಿ ಧವಸ ದಾನ್ಯವನ್ನು ಪಡೆಯುತ್ತಿದ್ದರು.

**ಇತರ ಉದ್ಯಮೆಗಳು :** ಬಳೆಗಾರರು'[೨೦] ಮೇದರು, ಗವರೆಗಳು,[೨೧] ಮುಚ್ಚಿಗರ ಅಂಗಡಿಗಳ ಮೇಲಿನ ತೆರಿಗೆ, ದೀವರ ಅಂಗಡಿ ಮೇಲಿನ ತೆರಿಗೆ, ಬೆಸ್ತರ ಬಲೆಯ ಮೇಲಿನ ತೆರಿಗೆ[೨೨] ಇವುಗಳು ಇಲ್ಲಿನ ಶಾಸನಗಳಲ್ಲಿ ಉಲ್ಲೇಖಗೊಂಡಿರುವುದರಿಂದ ಇದಕ್ಕೆ ಸಂಬಂಧಿಸಿದ ಉದ್ಯಮಗಳಾದ ಗಾಜಿನ ಚರ್ಮದ ಉದ್ದಿಮೆಗಳು ಇದ್ದಿರಬಹುದು. ಅಥವಾ ಸಂತೆಗಳಿಗೆ ಇತರ ಭಾಗಗಳಿಂದ ವ್ಯಾಪಾರಕ್ಕಾಗಿ ತರಲಾಗುತ್ತಿತೆಂದು ಊಹಿಸಬಹುದು. ಈ ಪ್ರದೇಶದಲ್ಲಿ ಬಿದಿರು ದೊರೆಯುತ್ತಿದ್ದು ಗವರೆಗಳು ಬುಟ್ಟಿ, ಕುಕ್ಕೆ, ಮೊರ, ತೊಟ್ಟಿಲು ಏಣಿ ಇತ್ಯಾದಿ ವಸ್ತುಗಳನ್ನು ತಯಾರಿಸಿ ಮಾರುತ್ತಿದ್ದರು ಎನ್ನಬಹುದು. ಕೆರೆಗಳೇ ವಿಶೇಷವಾಗಿರುವ ಈ ಪ್ರದೇಶದಲ್ಲಿ ಕೆರೆ ಮೀನುಗಾರಿಕೆ ಇದ್ದಿತು. ದೀವರು ಅಂಗಡಿಗಳಲ್ಲಿ ಮೀನು ಮಾರುತ್ತಿದ್ದು ಅವರ ಅಂಗಡಿಗಳ ಮೇಲೆ ತೆರಿಗೆ ವಿಧಿಸಲಾಗುತ್ತಿತ್ತು ಮತ್ತು ಅವರ ಬಲೆಗಳ ಮೇಲೆಯೂ ತೆರಿಗೆಗಳನ್ನು ವಿಧಿಸಲಾಗಿತ್ತು. ಈ ಪ್ರದೇಶದಲ್ಲಿ ಆಲೆದೆರೆಯ ಉಲ್ಲೇಖ ಬಂದಿರುವುದರಿಂದ ಈ ಪ್ರದೇಶದಲ್ಲಿ ಬೆಳೆಯುತ್ತಿದ್ದ ಕಬ್ಬನ್ನು ಬಳಸಿ ಬೆಲ್ಲ ಸಕ್ಕರೆ ತಯಾರಿಸುತ್ತಿದ್ದರೆಂದು ಊಹಿಸಬಹುದು.[೨೩]

ಪಟ್ಟಣ ನಗರದ ಬೆಳವಣಿಗೆಯಾಗುತ್ತ ಬಂದಂತೆ ಗ್ರಾಮೀಣ ಕೃಷಿಕರ ಸೇವೆಗೆ ಸೀಮಿತವಾಗಿದ್ದ ಆಯಕಾರರು ತಮ್ಮ ಕುಲಕಸುಬನ್ನು ಉದ್ದಿಮೆಯಾಗಿ ಬೆಳೆಸಿಕೊಂಡುದರಿಂದ ಇವರಲ್ಲಿ ಕೆಲವರ ಬದುಕು ಸುಧಾರಿಸಿದಂತೆ ತೋರುತ್ತದೆ. ಆಯಪದ್ಧತಿಯಾದರೋ ವರ್ಗ ವರ್ಣಭೇದಗಳನ್ನು ರಕ್ಷಿಸುವಂತದ್ದು. ಆನುವಂಶಿಕವಾದ ವೃತ್ತಿಗಳು ಉಳಿದುಕೊಂಡು ಬರಲು ಇದು ಸಹಾಕಾರಿಯಾಗಿತ್ತಾದರೂ ಇಂಥ ಸ್ಥಾವರ ಪದ್ಧತಿಗಳು ಸಾಮಾಜಿಕ ಹಾಗೂ ವೃತ್ತಿ ಚಲನೆಗೆ ಅಡ್ಡಿಯುಂಟು ಮಾಡಿ ಅವರ ಆರ್ಥಿಕ ಬದುಕಿನಲ್ಲಿ ಪ್ರಗತಿಗೆ ಅವಕಾಶವೀಯುತ್ತಿರಲಿಲ್ಲ. ಈ ಕಸುಬುದಾರರಿಂದ ಉತ್ಪಾದಿತವಾದ ವಸ್ತು ಪದಾರ್ಥಗಳಿಗೆ

ಪಟ್ಟಣ ಪ್ರದೇಶಗಳಿಂದ ಬೇಡಿಕೆ ಏರಿದಂತೆ ಇವರು ಸಂಘಟಿತರಾಗಿ ಆರ್ಥಿಕ ಚಟುವಟಿಕೆಯಲ್ಲಿ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಕೊಂಡರೆಂಬುದನ್ನು ಶಾಸನಗಳಿಂದ ತಿಳಿದುಕೊಂಡೆವು. ಆದರೆ ಸೇವೆಗೆ ಮೀಸಲಾದ ಅಗಸ, ಕ್ಷೌರಿಕ ಮುಂತಾದ ಕೆಳಜಾತಿವರ್ಗದವರ ಬದುಕಿನಲ್ಲಿ ಹೆಚ್ಚಿನ ಬದಲಾವಣೆಗೆ ಅವಕಾಶವಾಗಲಿಲ್ಲವೆಂದೇ ಹೇಳಬೇಕಾಗುತ್ತದೆ.

## ೪.೧.೩. ವಾಣಿಜ್ಯೋದ್ಯಮ, ಪ್ರಮುಖ ಪಟ್ಟಣ, ಅಗ್ರಹಾರಗಳ ಬೆಳವಣಿಗೆ

ಕೃಷಿ, ಕೈಗಾರಿಕೋದ್ಯಮಗಳ ಬೆಳವಣಿಗೆ, ಉತ್ಪಾದನೆಯ ಹೆಚ್ಚಳದೊಂದಿಗೆ, ಆ ರೀತಿ ಉತ್ಪಾದನೆಗೊಂಡ ಹೆಚ್ಚುವರಿ ಅಥವಾ ಮಿಗುತೆಯನ್ನು ಬೇಡಿಕೆಯಿರುವ ಸ್ಥಳಗಳಿಗೆ ಮುಟ್ಟಿಸುವ ವ್ಯವಸ್ಥಿತವಾದ ಜಾಲವೊಂದರ ಅವಶ್ಯಕತೆಯಿದೆ. ಅದೇ ವ್ಯಾಪಾರ ವಹಿವಾಟು ಅಥವಾ ವಾಣಿಜ್ಯೋದ್ಯಮ. ಅಂತರ್‌ಗ್ರಾಮಗಳ ವ್ಯಾಪಾರ ವಸ್ತುವಿನಿಮಯಗಳಿಗೆ ಅನುಕೂಲವಾಗುವಂತೆ ವಾರದ ಸಂತೆಗಳನ್ನು ಏರ್ಪಡಿಸುವುದರಿಂದ ಹಿಡಿದು ಕಡಲಾಚೆಗಿನ ವ್ಯಾಪಾರಿ ಸಂಪರ್ಕದವರೆಗೆ ವಿವಿಧ ಹಂತಗಳಲ್ಲಿ ಈ ವಾಣಿಜ್ಯ ಚಟುವಟಿಕೆಗಳನ್ನು ವರ್ತಕ ಶ್ರೇಣಿ, ಸಂಘಗಳು ವ್ಯವಸ್ಥಿತವಾಗಿ ಕೈಗೊಂಡು ಉತ್ತಮ ವಾಣಿಜ್ಯ ಸಂಪರ್ಕ ಜಾಲವೇರ್ಪಟ್ಟಿದ್ದನ್ನು ಶಾಸನಗಳು ತಿಳಿಸಿಕೊಡುತ್ತವೆ. ಅವಶ್ಯಕ ವಸ್ತುಗಳ ಸಂಗ್ರಹ ವಿಕ್ರಯವಿತರಣೆ ವಿನಿಮಯ ಸರಬರಾಜಿನ ಚಟುವಟಿಕೆಗಳನ್ನು ವ್ಯಾಪಕವಾಗಿ ಕೈಗೊಳ್ಳುತ್ತಿದ್ದ ವ್ಯಾಪಾರಿ ಉಬಯ ನಾನಾದೇಸಿ ವರ್ತಕ ಸಂಗಗಳು ಈ ಪ್ರದೇಶದ ಆರ್ಥಿಕಾಭಿವೃದ್ಧಿಗೆ ನಗರೀಕರಣಕ್ಕೆ ವಿಶೇಷವಾಗಿ ದುಡಿದಿವೆ.

ಈ ಹಿಂದೆಯೇ ಗಮನಿಸಿದಂತೆ ಈ ಪ್ರದೇಶವು ಆಯಕಟ್ಟಿನಲ್ಲಿದ್ದು ಕಡಲತೀರದ ವ್ಯಾಪರೀಕೇಂದ್ರಗಳನ್ನು ಒಳನಾಡಿನ ವ್ಯಾಪಾರಿಪಟ್ಟಣಗಳನ್ನು ಬೆಸೆಯುವ ವಾಣಿಜ್ಯ ಪಥದಲ್ಲಿದ್ದುದು ಇಲ್ಲಿನ ವಾಣಿಜ್ಯೋದ್ಯಮವೂ, ಪಟ್ಟಣಗಳೂ ಅಭಿವೃದ್ಧಿಗೊಳ್ಳಲು ಮುಖ್ಯಕಾರಣ. ಉತ್ತಮ ಸಾರಿಗೆ ಸಂಪರ್ಕಸಾಧನಗಳಿಂದ ವಾಣಿಜ್ಯ ವಹಿವಾಟು ವಿಶೇಷವಾಗಿ ಅಭಿವೃದ್ಧಿ ಹೊಂದುವುದರಲ್ಲಿ ಅನುಮಾನವಿಲ್ಲ. ಬಾಣಾವರದ ಶ್ರೀಕಂಠೀರಾಯಪೇಠೆಯ ಸಂತೆಶಾಸನವೊಂದು ವ್ಯಾಪಾರ ವಹಿವಾಟಿಗಾಗಿ ಅಲ್ಲಿನ ಪೇಟೆಗೆ ಬಂದಿದ್ದ ಸ್ಥಳ ಮತ್ತು ಪರಸ್ಥಳ ಮಹಾನಾಡಿನ ವರ್ತಕರ ಹೆಸರನ್ನು ಅವರ ಊರುಗಳನ್ನು ಹೇಳಿದೆ. ಕರ್ನಾಟಕದ ಪ್ರಮುಖ ಪಟ್ಟಣಗಳೂ ಹಾಗೂ ಆಂಧ್ರದ ಕಡಪ, ಧರ್ಮಾವರ, ಆದವಾನಿ ಮುಂತಾದ ಸುಮಾರು ೭೦ ಪ್ರಮುಖ ಪಟ್ಟಣಗಳ ವರ್ತಕರು ಈ ಕಂಠೀರಾಯ ಪೇಠೆಯಲ್ಲಿ ವಹಿವಾಟು ನಡೆಸಲು ಬಂದಿದ್ದರು.[೭೪] 'ನವಿಲೆಗೆ ಹೋಹ ದಾರಿಯ ನಟ್ಟಕಲ್ಲು, ನಾಡು ನಡೆವ ಹೆದ್ದಾರಿಯ ನಟ್ಟಕಲ್ಲು ಕೊಲತೂರ ಹೆದ್ದಾರಿಯ" ಇತ್ಯಾದಿ ಉಲ್ಲೇಖಗಳಿಂದ[೭೫] ಈ ಒಳನಾಡಿನ ವ್ಯಾಪಾರಿ ಪಟ್ಟಣಗಳನ್ನು ಬೆಸೆಯುವ ಉತ್ತಮ ಸಾರಿಗೆ ಸಂಪರ್ಕಕ್ಕೆ ಅನುಕೂಲವಾದ ಹೆಬ್ಬಟ್ಟೆಗಳು, ಕಿರುದಾರಿಗಳು

ಅಸ್ತಿತ್ವದಲ್ಲಿದ್ದುವೆಂದು ಸ್ಪಷ್ಟವಾಗಿ ಹೇಳಬಹುದು. ಕೆಲವು ಶಾಸನಗಳು ಕಟಕದ ದಾರಿ, ಹರದಾರಿ, ಹೆಬ್ಬಟ್ಟೆ ಇತ್ಯಾದಿಗಳನ್ನು ಉಲ್ಲೇಖಿಸುತ್ತವೆ.[೨೬] ಮುಖ್ಯ ರಾಜಧಾನಿಗಳನ್ನು ಪ್ರಾಂತೀಯ ರಾಜಧಾನಿ, ಪಟ್ಟಣ ಪೇಟೆಗಳನ್ನು ಬೆಸೆಯುವ ಹೆಬ್ಬಟ್ಟೆಗಳಲ್ಲಿ ಹರದಾರಿಕಲ್ಲುಗಳನ್ನು (ಮೈಲುಗಲ್ಲು) ನೆಡುತ್ತಿದ್ದರೆಂದು ತಿಳಿದು ಬಂದಿದೆ. ಬಾಣಾವರದ ಎಲ್ಲೆಯಲ್ಲಿ ನೆಟ್ಟಿರುವ ಒಂದು ಕಲ್ಲಿನಲ್ಲಿ 'ಜಾವಗಲ್ಲು ಮುಂದಣ ರಾಯಂಣನ ಹಾಳಬಾವಿ ಹರದಾರಿ ಕಲ್ಲಿನಿಂದ ಇಲ್ಲಿಗೆ ಗಜ ೫೨೦೦ಕ್ಕೆ ಕೋಸು ೧" ಎಂದು ಬರೆದಿದೆ. ಬೇಲೂರು ಹಳೇ ಬೀಡಿನಿಂದ ಬಾಣಾವರದ ಕಡೆಗೆ ಸಾಗುವ ಈ ಹೆಬ್ಬಟ್ಟೆಯಲ್ಲಿ ಒಂದೊಂದು ಕ್ರೋಶಕ್ಕೆ ಒಂದೊಂದು ಕಲ್ಲನ್ನು ನೆಟ್ಟಿದ್ದರೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ರಾಜಧಾನಿಗಳಿಂದ ಹೊರಟ ಇಂಥ ಹೆಬ್ಬಟ್ಟೆಗಳಲ್ಲಿ ಕಲ್ಲುಗಳು ಇತರೆಡೆಗಳಲ್ಲೂ ಕಂಡುಬಂದಿದೆ.[೨೭] ಇಂಥ ದಾರಿಗಳು ಸೈನ್ಯದನಡೆಗೆ, ಸರಕು ಸಾಗಣೆಗೆ, ಪುಣ್ಯಕ್ಷೇತ್ರಗಳಿಗೆ ಯಾತ್ರೆ ಕೈಗೊಳ್ಳಲು ಸಹಾಯಕವಾಗಿದ್ದು, ಇವುಗಳನ್ನು ಪ್ರಭುಗಳು, ಅಧಿಕಾರಿವರ್ಗದವರು ಮತ್ತು ವರ್ತಕರು ಸಂರಕ್ಷಿಸುವ ದುರಸ್ತಿ ಮಾಡುವ ಕಾರ್ಯ ನಡೆಸುತ್ತಿದ್ದರೆಂದು ಊಹಿಸಬಹುದು. ಕಂಡನಂಬಿಸೆಟ್ಟಿಯು ಮುತ್ತನ ಹೊಸವೂರಿನ ಹೊಸಪಥವನ್ನು ಅದರ ಪಕ್ಕದಲ್ಲಿ ಹೊಸಗದ್ದೆಗಳನ್ನು ತಿದ್ದಿಸಿದ್ದಾನೆ. ಈ ಗ್ರಾಮದಲ್ಲಿ ಕಟಕದ ದಾರಿಯಿದ್ದ ಉಲ್ಲೇಖವಿದೆ. ಅದು ಗಾಡಿ ದಾರಿ ಅಥವಾ ರಾಜಧಾನಿಗೆ ಹೋಗುವ ದಾರಿಯಾಗಿರಬಹುದು.[೨೮]

**೪ ೧ ೩.೧. ಅರಸೀಕೆರೆ**

ಅರಸಿಯೊಬ್ಬಳ ಹೆಸರಿನಲ್ಲಿ ನಿರ್ಮಿತವಾದ ಕೆರೆಯ ಕಾರಣದಿಂದಲೇ ಆ ಹೆಸರನ್ನು ಪಡೆದ ಅರಸೀಕೆರೆಯು ಇಂದು ತಾಲ್ಲೂಕು ಕೇಂದ್ರವಾಗಿ ರೈಲ್ವೆ ಜಂಕ್ಷನ್ ಆಗಿ ಪ್ರಸಿದ್ಧವಾಗಿದೆ. ಹೊಯ್ಸಳರ ಅಭಿವೃದ್ಧಿಯೊಂದಿಗೆ ಅಭಿವೃದ್ಧಿಗೊಂಡು ಪ್ರಾಂತೀಯ ರಾಜಧಾನಿಯಾಗಿ, ಪ್ರಮುಖವಾದ ವಾಣಿಜ್ಯಕೇಂದ್ರವೂ ಧಾರ್ಮಿಕ, ಸಾಂಸ್ಕೃತಿಕ, ಕೇಂದ್ರವೂ ಆಗಿ ಸರ್ವಜ್ಞಪುರಿ, ತೆಂಕಣ ಅಯ್ಯಾವಳೆ, ಸೀತಾಳ ಮಳಿಗೆ, ಭಂಡಾರವಾಡ, ಜಯಗೊಂಡ ಬಲ್ಲಾಳ ಪುರ, ಅಭಿನವ ದ್ವಾರಾವತಿ ಎಂದೆಲ್ಲಾ ಕರೆಸಿಕೊಂಡಿರುವುದನ್ನು ನೋಡಿದರೆ. ಈ ಪಟ್ಟಣದ ಸಮಗ್ರ ಬೆಳವಣಿಗೆಯು ತಿಳಿಯುತ್ತದೆ. 'ಏರೆಯಂಗನ ಮನೆ ಮೊನೆಗೆ' ವಿಜಯವನ್ನು ತಂದುಕೊಡುತ್ತಿದ್ದ ನಿಷ್ಠಾವಂತ ಅಧಿಕಾರಿ ಕಚ್ಚಪೆರ್ಗಡೆಯು ಮುನ್ನದಾರಿಗೆವನಾದ್ಯವೆನಿಸಿದ್ದ ಚೆನ್ನಾಳ್ವರಸಿಯ ಕೆರೆಯಲ್ಲಿ ಒಂದು ಕನ್ನೆಗೆರೆಯನ್ನು ಕಟ್ಟಿಸಿ ೬೦೦ ಹೊನ್ನನ್ನು ಸಮೆಸಿ ತೂಬನ್ನು ಮಾಡಿಸುತ್ತಾನೆ. ಪುಲಿಗೆರೆಯ ಪ್ರಸಿದ್ಧ ರೂವಾರಿ ಏಚನು 'ಅರಸಿಯಕೆರೆ ತೂಂಬನಿಕ್ಕಿದ' ಎಂದು ಆ ಶಾಸನದಲ್ಲಿ[೨೯] ಹೇಳಿರುವುದರಿಂದ ಕಚ್ಚಪೆರ್ಗಡೆ ಕಟ್ಟಿಸಿದ ಇಂದಿಗೂ ಉಳಿದು ಬಂದಿರುವ ದೊಡ್ಡಕೆರೆಯೇ ಅರಸಿಯಕೆರೆ ಎಂದು ಹೇಳಬೇಕಾಗುತ್ತದೆ. ಅಂದರೆ ಕಾಡು ಪ್ರದೇಶವಾಗಿದ್ದ ಈ ಜಾಗದಲ್ಲಿ ಗ್ರಾಮನಿರ್ಮಾಣ ಕೆರೆ ನಿರ್ಮಾಣ ಒಟ್ಟಾಗಿ ನಡೆದಿರಬಹುದೆಂದು ಊಹಿಸಬಹುದು. ಈ ಕೆರೆ ಮತ್ತು ಹಾರನಹಳ್ಳಿಯ

ಕೆರೆಯನ್ನು 'ಅಕ್ಕತಂಗಿ ರಾಣೇರ್ ಕೆರೆ' ಎಂದು ಸ್ಥಳೀಯರು ಕರೆಯುವುದರಿಂದ ಬಹುಷಃ ಇವು ಎರೆಯಂಗನ ಇಬ್ಬರು ರಾಣಿಯರಾದ ಏಚಲದೇವಿ, ಮಹಾದೇವಿಯರ ಹೆಸರಿನಲ್ಲಿ ನಿರ್ಮಾಣಗೊಂಡಂತೆ ತೋರುತ್ತದೆ. ಇಮ್ಮಡಿ ವೀರ ಬಲ್ಲಾಳನ ರಾಣಿ ಉಮಾದೇವಿಯ ತವರೂರಾದ ಅರಸೀಕೆರೆಗೆ ಇವರ ಕಾಲದಲ್ಲಿ ಹೆಚ್ಚಿನ ಪ್ರಾಮುಖ್ಯತೆ ದೊರೆಯಿತು. ಉತ್ತಮ ಅಧಿಕಾರಿಗಳಾದ ಅವಳ ಅಜ್ಜ ಹರಿಹರ, ತಂದೆ ಕೇಶವ ದೇವರಸನ ಹಾಗೂ ಅವನ ಸೋದರರು, ಕೇತಮಲ್ಲ, ವಸುದೈಕ ಬಾಂಧವನೆಂದು ಪ್ರಸಿದ್ಧನಾದ ರೇಚರಸ ಮುಂತಾದವರ ಉತ್ತಮ ಆಡಳಿತವು. ಅವರು ನಿರ್ಮಿಸಿದ ದೇವಾಲಯಗಳು ಮಾಡಿದ ದಾನಗಳು ಈ ಗ್ರಾಮ ಪಟ್ಟಣವಾಗಿ ಆಡಳಿತ ಕೇಂದ್ರವಾಗಿ ರಾಜಧಾನಿ ಎನಿಸಲು ಕಾರಣವಾಯಿತು.[೮೦] 'ತೀವಿದ ಚೆಂನನಪ್ಪ ಕೆಱೆ ವುಂನತವಪ್ಪ ಸಿವಾಲಯಗಳಿಂ ಭಾವಕರಪ್ಪ ಸದುವಿಟರ ಸಂಕುಲದಿಂ ಗಣಿಕಾಜನಂಗಳಿಂ ದೇವರ ಪೂಜೆಯುತ್ಸವ ಗೀತ ರವಂಗಳಿನೊಳ್ಪುವೆತ್ತು ನಾನಾ ವಿಧದಿಂದ ತಾನರಸಿಯೊಳುಗೆಱೆ ಸೋಭಿಸುತಿರ್ಕ್ಕು ಸಂತತಂ' ಎಂಬ ಪದ್ಯ[೮೧] ಅರಸೀಕೆರೆಯ ನಗರ ಜೀವನವನ್ನು ಪ್ರತಿಬಿಂಬಿಸಿದೆ. ಬ್ರಹ್ಮ, ಅರಹಂತ, ಆಚಾರ್ಯ, ಉಪಾಧ್ಯಾಯ ಸಾಧು ಮತ್ತು ಸಿದ್ಧರೆಂಬ ಪಂಚ ಪರಮೇಷ್ಠಿಗಳೆಂದು ಪ್ರಖ್ಯಾತರಾದ ವಿಪ್ರಸಮೂಹದಿಂದಲೂ, ಭೂಮಿ ಸಮಾನರಾದ ಶೂದ್ರಾಳಿಗಳಿಂದಲೂ, ಕಿಂನರಕಾಂತರಂತೆ ಪ್ರಖ್ಯಾತರಾದ ವರ್ತಕರಿಂದಲೂ, ಇನಜನಂತೆ ದಾನ ಶೂರರಾದ ಕೊಯ್ಲಾಳ್ಗಳ ಸಮೂಹದಿಂದಲೂ, ಸಾಗರವನ್ನು ಹೋಲುವ ತಟಾಕಗಳಿಂದಲೂ, ಅಮರ ಪುರದಂತಹ ಉದ್ಯಾನಗಳಿಂದ ತುಂಬಿದ್ದ ಅರಸಿಯ ಕೆರೆಗೆ ಸುವರ್ಣ ವೃಷ್ಟಿಯೇ ಆಗುತ್ತಿತ್ತೆನ್ನುತ್ತಾನೆ, ಕವಿ ತ್ರಿವಿಕ್ರಮ ಪಂಡಿತ.[೮೨] ಇಲ್ಲಿ ಉಭಯ ನಾನಾದೇಸಿ ವರ್ತಕರು, ಮುಮ್ಮುರಿದಂಡರು, ಸೆಟ್ಟಿಗುತ್ತರು, ಉಗುರು ಮುನ್ನೂರ್ವರು, ಕೊಯ್ಲಾಳ್ಗಳು, ಮೇಳಿ ಸಾಸಿರ್ವರು, ಜಗತಿಗಳು, ಗೊಜ್ಜರು, ಕುಬೇರರನ್ನು ಹೋಲುವ ಶೆಟ್ಟಿಗಳಿಂದ[೮೩] ವಿಪುಲವಾದ ಅವರ ವಾಣಿಜ್ಯ ಚಟುವಟಿಕೆಗಳಿಂದ, ಫಲವತ್ತಾದ ಕೃಷಿಭೂಮಿಯಿಂದ ಅರಸೀಕೆರೆಗೆ ಸಂಪತ್ತು ತುಂಬಿಬಂದಿತ್ತು. ಆ ಕಾರಣಕ್ಕಾಗಿಯೇ ಇದು ವೀರಬಲ್ಲಾಳನ ಕಾಲದಲ್ಲಿ ಭಂಡಾರವಾಡವೂ ಆಗಿತ್ತು. ಈ ವರ್ತಕ ಶ್ರೇಣಿ, ಸಂಘಗಳು ವ್ಯಾಪಾರ ವಹಿವಾಟಿನೊಂದಿಗೆ ಅನೇಕ ದಾನ ಧರ್ಮಕಾರ್ಯಗಳನ್ನು ಮಾಡಿದ್ದಾರೆ. ದೇವಾಲಯ ನಿರ್ಮಾಣ ಮಾಡಿದ್ದನ್ನು ಕಾಣಬಹುದು. ವಿದ್ವನ್ ಮಹಾಜನ ಸಾವಿರೊಕ್ಕಲುಗಳಿಂದ ತುಂಬಿ ವಿದ್ಯಾಕೇಂದ್ರವೂ, ದೇವಾಲಯಗಳಿಂದಾಗಿ ಧಾರ್ಮಿಕ ಕೇಂದ್ರವೂ ಆಗಿ ನಾನಾ ಧರ್ಮ ಜಾತಿ ಜನಾಂಗಗಳನ್ನು ವಿದ್ಯಾರ್ಥಿ ಸಮೂಹವನ್ನು ವಲಸಿಗರನ್ನು ಇದು ಆಕರ್ಷಿಸ ತೊಡಗಿತು. ಭೋಗದ ಆಗರವಾಗಿ ರಾಜಧಾನಿ ಪಟ್ಟಣವಾಗಿ ಹೊಯ್ಸಳರ ಕಾಲದಲ್ಲಿ ಮೆರೆದ ಅರಸೀಕೆರೆಯು ವಿಜಯನಗರದ ಅರಸರಕಾಲದಲ್ಲಿ ಹಿನ್ನೆಲೆಗೆ ಸರಿಯಿತು. ಬಾಣಾವರವು ಈ ಸೀಮೆಯ ಆಡಳಿತ ಕೇಂದ್ರವಾಗಿ ಮುಂಚೂಣಿಗೆ ಬಂದಿತು.

### ೪.೧.೩.೨. ಬಾಣಾವರ

ಕ್ರಿ.ಶ.೧೬-೧೭ನೇ ಶತಮಾನದ ಹೊತ್ತಿಗೆ ಕಂಠೀರಾಯ ಪೇಠೆ ಎಂದು ಪ್ರಸಿದ್ಧವಾದ ವಾಣಿಜ್ಯಕೇಂದ್ರವೂ ಸುಭದ್ರ ಒಳಕೋಟೆ ಹೊರಕೋಟೆಗಳನ್ನು ಪಡೆದು, ಬಾಣಾವರ ಸೀಮೆಯ ಆಡಳಿತ ಕೇಂದ್ರವಾಗಿ ಬೆಳೆಯಿತು. ಇಂದಿಗೂ ಆ ಪರಿಸರದಲ್ಲಿ ಪ್ರಾಮುಖ್ಯತೆಹೊಂದಿರುವ ಬಾಣಾವರದ ನಗರೀಕರಣ ಪ್ರಕ್ರಿಯೆ ಪ್ರಾರಂಭವಾದದ್ದು ೧೨ನೇ ಶತಮಾನದ ಆದಿ ಭಾಗದಲ್ಲಿ. ಬಾಣಾವರದ ಮಾಚಿದೇವನೆಂಬ ಸಾತ್ವಿಕ ವಿಪ್ರನ ಮಗ ಮಾರಯ್ಯನು ಬ್ರಾಹ್ಮಣ್ಯವನ್ನು ತೊರೆದು ವಣಿಕ ಧರ್ಮವನ್ನು ಹಿಡಿದುದನ್ನು ಅಲ್ಲಿನ ಶಾಸನವೊಂದು[೮೪] ಈ ರೀತಿ ಹೇಳಿದೆ.

> ಅನಿಶಂ ಗೋಮಾರ್ಗ'ದಿಂದ ಪೊಟ್ಟೆಯನೆ ಪೊರೆದುಕೊಂಡಿರ್ಪ್ಪದೀ ಗೂಡಮಾನು
> ಷ್ಯನೆ ಹೇಳ್ ಧರ್ಮಾರ್ತ್ಥಕಾಮಂಗಳೊಳನುನಯದಿಂ ವರ್ತಿಸಲ್ಕರ್ತ್ಥಿಯಿಂದಂ
> ಧನಮಂ ವಾಣಿಜ್ಜದಿಂದಾರ್ಜಿಸುತೆ ಸಕಲ ಧರ್ಮಗಳೊಳ್ ಕಾಮದೊಳ್ ಸಂ
> ದು ನಿತಾನ್ತಂ ಶೋಭಿಸಿರ್ಪ ಸಕಳ ಗುಣಯುತಂ ಮಾರನತ್ಯನ್ತಧೀರಂ

ಈ ಪದ್ಯವು ಕೇವಲ ಮಾರಯ್ಯನು ಮಾರಿಸೆಟ್ಟಿಯಾದ ಅವನ ಬದುಕಿನಲ್ಲಾದ ಪಲ್ಲಟವನ್ನಷ್ಟೇ ಹೇಳುತ್ತಿಲ್ಲ. ಇಡೀ ೧೧-೧೨ನೇ ಶತಮಾನಕ್ಕೇ ಕನ್ನಡಿ ಹಿಡಿದಿದೆ. ಆ ಕಾಲದ ಶಾಸನಗಳು, ಸಾಹಿತ್ಯ ಕೃತಿಗಳನ್ನು ಶಾಸ್ತ್ರ ಗ್ರಂಥಗಳನ್ನು ಗಮನಿಸಿದಾಗ ಇಡೀ ಸಮಾಜ ಅರ್ಥಮುಖಿ'ಯಾಗಿತ್ತೆಂಬುದು, ಸಂಪತ್ತಿನ ಒಡೆತನ ಅದರ ಅತ್ಯಂತಿಕ ಗುರಿಯಾಗಿತ್ತೆಂಬುದು ಕಂಡುಬರುತ್ತದೆ. ವಣಿಕನಾದ ಈ ಮಾರಯ್ಯನ ಮಕ್ಕಳಾದ ಕಮ್ಮಟದ ಸೆಟ್ಟಿ ಎಂದು ಪ್ರಖ್ಯಾತನಾದ ಚಟ್ಟಪ್ಪಸೆಟ್ಟಿ ಮತ್ತು ಅನುಪಮ ವಣಿಜ ದಾಸೆಯ್ಯಸೆಟ್ಟಿಯರು ಇಮ್ಮಡಿ ವೀರಬಲ್ಲಾಳನ ಕಾಲದ ಪ್ರಸಿದ್ಧ ಒಳನಾಡು ಮತ್ತು ಕಡಲಾಚೆಯ ವ್ಯಾಪಾರಿಗಳಾಗಿದ್ದರು. ಈ ಸೋದರರು ಕೈಗೊಂಡ ವ್ಯಾಪಾರ ವಹಿವಾಟು, ದೇವಾಲಯ ಕೆರೆ ನಿರ್ಮಾಣ, ಅಭಿವೃದ್ಧಿ ಕಾರ್ಯಗಳಿಂದ ಬಾಣಾವರವು ನಗರೀಕರಣಕ್ಕೆ ತೆರೆದುಕೊಂಡಿತೆಂದು ಹೇಳಬಹುದು. ಚಟ್ಟಪಸೆಟ್ಟಿಯು ಜಾತ್ಯಶ್ವಗಳನ್ನು ಶ್ರೇಷ್ಠವಾದ ಆನೆಗಳನ್ನು ಮುತ್ತುಗಳನ್ನು ಬಹಿತ್ರದೆ ತಂದು ಧರಣಿಪರಿಗೆ ಮಾರುತ್ತಿದ್ದ ರಾಜ ಶ್ರೇಷ್ಠಿಯಾಗಿದ್ದುದಲ್ಲದೆ ಹೊಯ್ಸಳರ ಕಮ್ಮಟದ ಅಧಿಕಾರಿಯೂ ಆಗಿದ್ದನು. ಇವನ ಸೋದರ ದಾಸಿಸೆಟ್ಟಿ ಪೂರ್ವದಿಂದ ಪಶ್ಚಿಮಕ್ಕೂ ಪಶ್ಚಿಮದಿಂದ ಪೂರ್ವಕ್ಕೂ, ಉತ್ತರದಿಂದ ದಕ್ಷಿಣಕ್ಕೂ ದಕ್ಷಿಣದಿಂದ ಉತ್ತರಕ್ಕೂ ಅವಶ್ಯಕವಾದ ಸರಕು ಸಾಗಾಣೆ ಮಾಡುತ್ತಿದ್ದ ಹೊರ ದೇಶದ ದೊಡ್ಡ ವ್ಯಾಪಾರದಲ್ಲಿ ತೊಡಗಿದ್ದನು. ಕರ್ನಾಟಕದ ತೀರ ಪ್ರದೇಶಗಳು ಪ್ರಾಚೀನ ಕಾಲದಿಂದಲೂ ಕಡಲಾಚೆಯ ಸಂಪರ್ಕವನ್ನು ಹೊಂದಿತ್ತೆಂಬುದು ನಮಗೆ ತಿಳಿದ ವಿಷಯವೇ.[೮೫]

ಒಳನಾಡಿನ ವ್ಯಾಪಾರವನ್ನು ಉಬಯ ನಾನಾ ದೇಶಿ ಐಯ್ಯಾವಳಿ ಮುಖ್ಯರಾದ ಸಾಲುಮೂಲೆ ಚತುರ್ದಿಕ್ಕು ಐವತ್ತಾರು ದೇಶದ ಮಹಾನಾಡಿನ ವರ್ತಕರು ಅಮೂಲ್ಯ ಸರಕುಗಳನ್ನು ಗಾಡಿಗಳಲ್ಲಿ ತುಂಬಿಕೊಂಡು ಯಾವ ರೀತಿ ವ್ಯಾಪಕವಾದ ವ್ಯಾಪಾರ ಕೈಗೊಳ್ಳುತ್ತಿದರೆಂಬುದನ್ನು ತಿರುಪತಿಯ ತಾಮ್ರ

ಪಟ ಶಾಸನದಿಂದ ತಿಳಿಯಬಹುದು. "....ವಜ್ರ ವೈಡೂರ್ಯ ಗೋಮೇಧಿಕ ಪುಷ್ಯರಾಗ ಮರಕತ ಮಾಣಿಕ್ಯ ನೀಲ ಮಾಕ್ತಿಕ ಪ್ರವಾಳಾದಿನವರತ್ನ ಪರೀಕ್ಷಾ ಧುರಂಧರರಾದ ದೇಶವಂ ಬಳಸಿ ಬರುತಿಪ್ಪ ಭಾಷಾ ಭೂಶಣರಾದ ಚಪ್ಪನ್ನ ಐದತ್ತಾರು ದೇಶದಲ್ಲು ಸಂಚರಿಸುವಂತ್ಥಾ ಮಹಾನಾಡಿನ ಬಿರುದುಳ್ಳ ಉದ್ದಂಡ ಕೋಲಾಹಲರಾದ ಧರ್ಮಾಧರ್ಮಕ್ಕೆ ವರಗಲ್ಲರಾದ..." ಉಭಯ ನಾನಾದೇಸಿ ಪೃಥವೀಶೆಟ್ಟಿ ರಾಯರ ಮಂತ್ರಿ ಭಾಸ್ಕರಂಣನು ಐಯಾವಳಿ ಮುಖ್ಯರಾದ ಸಾಲುಮೂಲೆ ಚತುರ್ದಿಕ್ಕಿನ ಮಹಾನಾಡಿನ ವರ್ತಕ ಸಮೂಹದೊಂದಿಗೆ ಬಾಣಾವರದ ಕಂಠೀರಾಯ ಪೇಟೆಯ ಶ್ರೀ ಬಸವೇಶ್ವರ ದೇವರ ಮುಖಮಂಟಪದಲ್ಲಿ ವಜ್ರ ಸಿಂಹಾಸನ ರೂಢರಾಗಿ ಕೂಡಿ ಕುಳಿತು ಸಂತೆ ಶಾಸನವನ್ನು ಬರೆಸಿದ್ದನ್ನು ಶಾಸನ ದಾಖಲಿಸಿದೆ.[೮೬] ತರೀಕೆರೆ ಪಾಳೆಗಾರರು, ಮೈಸೂರು ವಡೆಯರು, ಟಿಪ್ಪು ಕಾಲದಲ್ಲಿ ಬಾಣವರ ಈ ಪ್ರದೇಶದ ಪ್ರಮುಖ ಆಡಳಿತ ಕೇಂದ್ರವಾಗಿತ್ತು.

೪ ೧.೩ ೩. ಕೆಲ್ಲಂಗೆರೆ

ಹೊಯ್ಸಳ ಪೂರ್ವಕಾಲದಲ್ಲೇ ಪ್ರಸಿದ್ಧವಾಗಿದ್ದ ಈ ಗ್ರಾಮವು ಗಂಗರ ಕಾಲದಲ್ಲಿ ನಿರ್ಮಾಣಗೊಂಡ ಜೈನ ಬಸದಿಗಳನ್ನು ಹೊಂದಿದ್ದು ಬಣಂಜಿಗರೈನೂರ್ವರಿಂದ ಪೋಷಿಸಲ್ಪಟ್ಟಿತ್ತು.[೮೭] ತೆಂಕಣ ಅಯ್ಯಾವಳೆ ಎಂದು ಪ್ರಸಿದ್ಧವಾಗಿದ್ದ ಕೆಲ್ಲಂಗೆರೆಯನ್ನು ಅಗ್ರಹಾರವಾಗಿ ಹೊಯ್ಸಳ ವಿಷ್ಣುವರ್ಧನನು ಮಾರ್ಪಡಿಸಿ ಕೊಡಂಗನೂರಿನಿಂದ ಬ್ರಾಹ್ಮಣರನ್ನು ತನ್ನೊಡನೆ ಕರೆತಂದು ಇಲ್ಲಿ ನೆಲೆಸುವಂತೆ ಮಾಡಿದ ಮೇಲೆ ಇದು ಪ್ರಮುಖ ವಿದ್ಯಾಕೇಂದ್ರವಾಗಿ, ಧಾರ್ಮಿಕ ಕೇಂದ್ರವಾಗಿ ಶಿವಾಲಯಗಳು ಕೇಶವಾಲಯಗಳಿಂದ ಕೂಡಿತು. ಒಂದು ಮಠವೂ ಅಸ್ತಿತ್ವಕ್ಕೆ ಬಂತು.[೮೮] ಅಷ್ಟೇ ಅಲ್ಲ. ಅಲ್ಲಿನ ಕೆರೆ ಕಟ್ಟೆಗಳ ನಿರ್ಮಾಣ ನಿರ್ವಹಣೆಗೆ ಮಹಾಜನರು ವಿಶೇಷ ಗಮನ ನೀಡಿದ್ದು. ಅನೇಕ ದಾನ ದತ್ತಿಗಳನ್ನು ಬಿಟ್ಟಿರುವ ಉಲ್ಲೇಖವಿದೆ.[೮೯] ಈ ಪ್ರದೇಶದಲ್ಲಿ ವಿಶೇಷವಾಗಿ ಗದ್ದೆ ತೋಟಗಳ ಕ್ರಯ ದಾನ ಮರುಕ್ರಯಗಳ ಅನೇಕ ಉಲ್ಲೇಖಗಳು ದೊರೆಯುತ್ತವೆ.[೯೦] ೧೨-೧೩ನೇ ಶತಮಾನದಲ್ಲಿ ವಿಶೇಷವಾಗಿ ಪ್ರಗತಿ ಸಾಧಿಸಿ ಉತ್ತಮ ಸ್ಥಿತಿಯನ್ನು ಪಡೆದ ಕೆಲ್ಲಂಗೆರೆ ೧೪ನೇ ಶತಮಾನದ ಹೊತ್ತಿಗೆ ಸಂಕಷ್ಟಕ್ಕೆ ಸಿಕ್ಕಿದಂತೆ ತೋರುತ್ತದೆ. ಅತ್ಯಂತ ಬಲಿಷ್ಠರಾಗಿ ಬೆಳೆದಿದ್ದ ೨೦೦ ಮಹಾ ಜನರು ೧೪ನೇ ಶತಮಾನದ ಹೊತ್ತಿಗೆ ಸುತ್ತುಮುತ್ತಲ ಜಮೀನುಗಳನ್ನು ಕ್ರಯ ಮಾಡಲು ಪ್ರಾರಂಭಿಸಿದುದು ಕಂಡುಬರುತ್ತದೆ. ಮುಮ್ಮಡಿ ಬಲ್ಲಾಳನ ಕಾಲದಲ್ಲಿ ಇಲ್ಲಿನ ಕೆಲ ರೈತರು ಸಿದ್ಧಾಯ ಅಪೂರ್ವಾಯಗಳನ್ನು ತೆರಲಾರದೆ ಉಳುಮೆ ಮಾಡುತ್ತಿದ್ದ ಭೂಮಿಯನ್ನು ಉಳುಮೆ ಮಾಡಲಾಗದೆ ಮಹಾಜನರಿಗೆ ಒಪ್ಪಿಸಿಕೊಟ್ಟುದನ್ನು ಹೇಳುತ್ತದೆ. ಆ ಭೂಮಿಯನ್ನು ಮಹಾಜನರು ಭಂಡಾರಿ ಕಾವಣ್ಣನ ಮಗ ರಾಮಣ್ಣನಿಗೆ ಒಪ್ಪಿಸಿ ಕಟ್ಟು ಗುತ್ತಿಗೆ ಪಡೆದುದನ್ನು ಹೇಳುತ್ತದೆ.[೯೧] ಕ್ರಿ.ಶ.೧೩೬೭ರಲ್ಲಿ ಒಂದು ಶಾಸನ[೯೨] ವಿಜಯನಗರದರಸ ಹರಿಹರನ

ಕಾಲದಲ್ಲಿಯೂ ಇಲ್ಲಿನ ಮಹಾಜನಗಳು ಕೆರೆ ನಿರ್ವಹಣೆಗಾಗಿ ಕೋಣಗಳು ಗುಗ್ಗರಿ, ಕೆರೆಬಂಡಿಯವರ ಆಳಜೀವಿತಕ್ಕೆ, ಹರೆ ಎಣ್ಣೆಗೆ, ಗುದ್ದಲಿ ಇತ್ಯಾದಿಗಳಿಗೆ ಅಲ್ಲಿನ ಅನೇಕ ಸುಂಕಗಳನ್ನು ಅಡಕೆ, ಎಲೆ, ಕಿತ್ತಲೆಹಣ್ಣಿನ ಮೇಲಿನ ತೆರಿಗೆಯನ್ನು ಬಿಟ್ಟುದನ್ನು ಹೇಳಿದೆ. ಇದನ್ನೆಲ್ಲ ಗಮನಿಸಿದಾಗ ಒಂದು ಕಡೆ ಅಭಿವೃದ್ಧಿ ಕಾರ್ಯಗಳು ನೀರಾವರಿ ಭೂಮಿಗಳು ಸಂಪತ್ತು, ವಿದ್ಯಾಕೇಂದ್ರ ಧಾರ್ಮಿಕ ಕೇಂದ್ರಗಳು ಉತ್ತಮ ಪ್ರೋತ್ಸಾಹ ಪಡೆದು ಬೆಳೆಯುತ್ತಿರುವಾಗಲೂ ಸಾಮಾನ್ಯ ರೈತನ ಬಡತನ ಕಷ್ಟಗಳು ನಿವಾರಣೆಯಾದಂತೇನೂ ಕಂಡುಬರುವುದಿಲ್ಲ. ಭೂಮಿ ಕಳೆದುಕೊಂಡ ಇಂಥ ರೈತರು ಕೃಷಿಯೇತರ ಸೇವಕ ವೃತ್ತಿಗಳಲ್ಲಿ ಊಳಿಗ ಮಾಡಲು ತೊಡಗುತ್ತಾರೆ. ಪ್ರಭುಗಳು ಮತ್ತು ಸೇವಕವರ್ಗಗಳುಂಟಾಗಿ ಸಾಮಾಜಿಕ ಸ್ತರವಿನ್ಯಾಸ ಕಾಣಿಸಿಕೊಳ್ಳುತ್ತದೆ.[೯೩]

### ೪ ೧.೩.೪ .ಕಣಿಕಟ್ಟೆ

ನಗರೀಕರಣದ ಲಕ್ಷಣಗಳು ಕಾಣಿಸಿಕೊಂಡ ಮತ್ತೊಂದು ಪ್ರಮುಖ ಪಟ್ಟಣ ಎಂದರೆ ಕಣಿಕಟ್ಟೆ. ಒಂದು ಪ್ರದೇಶ ವಿಶೇಷವಾಗಿ ಪಟ್ಟಣವಾಗಿ ಮಾರ್ಪಡಲು ಅವಶ್ಯಕವಾದ ಭೂಸಂಪತ್ತು ಪ್ರಗತಿಗೆ ಪೂರಕ ಚಟುವಟಿಕೆಗಳು ರಾಜಕೀಯ ಪ್ರಾಮುಖ್ಯತೆ ಸಮರ್ಥ ಆಡಳಿತ, ವ್ಯಾಪಾರ ವಹಿವಾಟು, ಧಾರ್ಮಿಕ ಸಾಂಸ್ಕೃತಿಕ ನೆಲೆಯಾಗಿ ಬೆಳೆಯಲು ಅವಶ್ಯಕವಾದ ದಾನ ದತ್ತಿ, ಧರ್ಮಕಾರ್ಯಗಳು ಹೇಗೆ ಕಾರಣವಾಗುತ್ತವೆಂಬುದಕ್ಕೆ ೯ನೇ ಶತಮಾನದಿಂದ ೧೫ನೇ ಶತಮಾನದವರೆಗಿನ ಕಳಿಕಟ್ಟೆಯ ಶಾಸನಗಳು ತಿಳಿಸುತ್ತವೆ. ಕಳಿಕಟ್ಟೆ ಪ್ರಮುಖ ವ್ಯಾಪಾರೀ ಮಾರ್ಗದಲ್ಲಿದ್ದು ಕೇವಲ ಸರಕು ಸಾಗಣೆಯಷ್ಟೇ ಅಲ್ಲ ಉತ್ತರದಿಂದ ದೋರಸಮುದ್ರದತ್ತ ಸಾಗಿ ಬರಬಹುದಾದ ಸೈನ್ಯಗಳಿಗೆ ಮುಖ್ಯಪಥವೂ ಆಗಿತ್ತು. ಕಳಿಕಟ್ಟೆಯ ಮೊದಲ ಉಲ್ಲೇಖ ನೊಳಂಬರಿಗೂ ಗಂಗರಿಗೂ ಕಳಿಕಟ್ಟೆಯಲ್ಲಿ ನಡೆದ ಯುದ್ಧದ ಶಾಸನದಲ್ಲಿದೆ.[೯೪] ಆಸಂದಿನಾಡನ್ನಾಳುತ್ತಿದ್ದ ಬಲಿವಂಶದ ಸಾಮಂತ ಮುತ್ತರಸನು. ಹೋರಾಡಿ ಮಡಿದ ಸಂದರ್ಭದಲ್ಲಿ ಗಂಗರಸ ಎರೆಯಪ್ಪನು ಅವನ ವಂಶದವರಿಗೆ ಅರಕೆರೆ ಮತ್ತು ಕಳಿಕಟ್ಟೆಗಳನ್ನು ಕಲ್ನಾಡಾಗಿ ನೀಡಿದ್ದಾನೆ. ಕಳಿಕಟ್ಟೆ ಹೊಯ್ಸಳರ ಕಾಲದಲ್ಲಿ ಮಗರೆ ನಾಡಿನ ಮೊದಲ ಬಾಡವಾಗಿ ಪ್ರಾಮುಖ್ಯತೆಗಳಿಸಿದ್ದು, ಅದು ಆಯಕಟ್ಟಿನಲ್ಲಿದ್ದುದರಿಂದ ಸಮರ್ಥರಾದ ಅಧಿಕಾರಿಗಳನ್ನು ಸಾಮಂತರನ್ನು ಅಲ್ಲಿ ಇರಿಸಿ ಅಲ್ಲಿನ ಚಟುವಟಿಕೆಗಳ ಮೇಲೆ ಕಣ್ಣಿಡುವ ಅಗತ್ಯವಿತ್ತು. ವಿಷ್ಣುವರ್ಧನನ ಕಾಲದಲ್ಲಿ ಮಹಾ ಮಂಡಳೇಶ್ವರನು ಮಾಳಚೀ ದೇವಿ ಲಬ್ದ ವರ ಪ್ರಸಾದನಾದ ಮಲ್ಲರಸನೆಂಬುವವನು ಇಲ್ಲಿ ಆಳುತ್ತಿದ್ದನು.[೯೫] ಅರಸೀಕೆರೆಯ (ಬಳ್ಳಾರಿ ಜಿಲ್ಲೆ) ಸಾಮಂತ ಸಿಂಘರಸನನ್ನು ಎತ್ತಿಸಿ ತಂದು ವಿಷ್ಣುವರ್ಧನನು ಇಲ್ಲಿ ಸ್ಥಾಪಿಸಿದ್ದಾನೆ.[೯೬] ಈ ಸಿಂಘರಸನು ಸಿಂಗೇಶ್ವರ ದೇವಾಲಯ, ಬೆಟ್ಟದ ಕಲಿದೇವರ ದೇವಾಲಯ[೯೭] ಗಳನ್ನು ನಿರ್ಮಿಸಿದ್ದಾನೆ. ಇವನೊಂದಿಗೆ ಇಲ್ಲಿನ ಜಗತಿ ಕೊತ್ತಳಿ ಸಮೂಹ ಜಗತೇಶ್ವರ ದೇವಾಲಯದೊಂದಿಗೆ ಅನೇಕ

ಶಿವಾಲಯಗಳನ್ನು, ಕೆರೆಗಳನ್ನು ನಿರ್ಮಿಸಿದ್ದಾರೆ.[೯೮] ಮಾನಸಿಗ ಎಕ್ಕಟಿಗರಲ್ಲಿ ಪ್ರಮುಖರಾದ ಚಟ್ಟಬೋವನ ಮುಂದಾಳತ್ವದಲ್ಲಿ ನೀಲೇಶ್ವರ ದೇವಾಲಯ ಹಾಗೂ ಕೆರೆ ನಿರ್ಮಾಣವಾಗಿದೆ.[೯೯] ಈ ಎಲ್ಲ ಕಾರ್ಯಗಳಿಗೆ ಪ್ರೋತ್ಸಾಹಕರಾಗಿ ೧೧೪೩ರಲ್ಲಿ ಕಣಿಕಟ್ಟೆಯನ್ನು ಆಳುತ್ತಿದ್ದ ಹುಳಿಯೇರ ಪುರವರಾಧೀಶ್ವರ ಸಾಮಂತ ಗೋಯಿದೇವ ಶಿವಭಕ್ತನಾಗಿದ್ದು, ಜೈನಧರ್ಮ ಸ್ಥಗಿತ ಗುಣ ಕಳಾಳಾಪನೆಂಬ ಬಿರುದನ್ನು ಹೊಂದಿದ್ದು, ಕಣಿಕಟ್ಟೆಯಲ್ಲಿ ಜೈನಧರ್ಮವನ್ನು ಮೆಟ್ಟಿ ಶೈವ ಪ್ರಾಧಾನ್ಯತೆ ಬೆಳೆಯಲು ಅವಕಾಶ ಮಾಡಿ ಕೊಟ್ಟಂತೆ ಕಂಡುಬರುತ್ತದೆ. ಇವನ ನಂತರ ಒಂದನೇ ನರಸಿಂಹನ ಕಾಲದಲ್ಲಿ ಮಹಾಪ್ರಧಾನ ಸೇನಾಪತಿ ಹೆಗ್ಗಡೆ ಬಲ್ಲಣ್ಣನು ಇಲ್ಲಿನ ಜಗತೇಶ್ವರ ದೇವಾಲಯಕ್ಕೆ ಭೂಮಿ, ಹೊನ್ನುಗಳ ದಾನ ನೀಡಿ ಪ್ರೋತ್ಸಾಹಿಸಿದ್ದಾನೆ.[೧೦೦] ದೇವಾಲಯದಲ್ಲಿ ನಡೆಯುತ್ತಿದ್ದ ಅತಿಥಿ ಅಭ್ಯಾಗತರ ಆಹಾರ ದಾನ ಭೈಷಜ್ಯ ಇತ್ಯಾದಿ ಸಾಮಾಜಿಕ ಕಾರ್ಯಗಳಿಗೆ ಇಲ್ಲಿನ ಎಲ್ಲ ಅಧಿಕಾರಿ, ಸಾಮಂತ, ಅರಸರು ರಾಣಿಯರು ನೆರವಾಗಿದ್ದಾರೆ.[೧೦೧] ಮಹಾಪ್ರಧಾನ ಸಾಮಂತ ಕೆಚ್ಚನ ಮಾಚಯ್ಯ ನಾಯಕನ ವಂಶದ ಸಾಮಂತ ಘಸಣಿ ಮಾಧವ ನಾಯಕ[೧೦೨] ಅವನ ಮಗ ಸೋಮೆಯ ನಾಯಕ ಅವನ ಮಗ ಮಹಾಸಾಮಂತ ಮಾಚಯ್ಯ ದಂಣಾಯಕರು ಕಳಿಕಟ್ಟೆಯ ಸಮರ್ಥ ಅಧಿಕಾರಿಗಳಾಗಿದ್ದರು.[೧೦೩] ಇಮ್ಮಡಿ ನರಸಿಂಹನ ಕಾಲದಲ್ಲಿ ಇದು ಅಗ್ರಹಾರವಾಗಿ ಪರಿವರ್ತಿತವಾಗಿದೆ. ೧೧೪೩ರಲ್ಲೇ ಆಳ್ವಿಭಟ್ಟನೆಂಬ ಮಹಾಪಂಡಿತನಾದ ಶಿಷ್ಟ ಬ್ರಾಹ್ಮಣನು ಕಲಿಗೇಶ್ವರ ದೇವಾಲಯ ನಿರ್ಮಿಸಿ ದೇವರ ಭೂಮಿಗೆ ನೀರೊದಗುವಂತೆ ಹೊಸ ತೂಬನ್ನು ಮಾಡಿಸಿ ಸಾಮಂತ ಗೋಯಿ ದೇವನಿಂದ ದಾನದತ್ತಿಗಳನ್ನು ದೇವಾಲಯಕ್ಕೆ ಬಿಡಿಸಿದ ಉಲ್ಲೇಖವಿದೆ.[೧೦೩] ೧೨೨೭ರ ಶಾಸನಗಳು ಕಳಿಕಟ್ಟೆಯನ್ನು ವಿಜಯನರಸಿಂಹಪುರವೆಂದು ಕರೆದಿದೆ. ಅಲ್ಲಿಂದ ಮುಂದೆ ನಡೆಯುವ ಎಲ್ಲ ಚಟುವಟಿಕೆಗಳು ಅಲ್ಲಿನ ೧೨೦ ಮಹಾಜನರ ನೇತೃತ್ವದಲ್ಲಿ ಅವರ ಪಾದಾರಾಧಕರೆಂದು ಕರೆದುಕೊಳ್ಳುವ ಜಗತಿಗಳ ನೇತೃತ್ವದಲ್ಲಿ ಮತ್ತು ಕಳಿಕಟ್ಟೆಯ ಪಟ್ಟಣ ಸ್ವಾಮಿಗಳು ವಡ್ಡ ವ್ಯವಹಾರಿಗಳ ಸಮಕ್ಷದಲ್ಲಿ ನಡೆದುಕೊಂಡು ಹೋಗುವುದನ್ನು ಕಾಣುತ್ತೇವೆ.[೧೦೪] ವೈಷ್ಣವ ದೇವಾಲಯಗಳ ನಿರ್ಮಾಣ[೧೦೫], ಮಂಟಪಗಳು ಮಠ ಇತ್ಯಾದಿಗಳ ನಿರ್ಮಾಣ[೧೦೬] ಇವು ಹೆಚ್ಚಾಗಿ ಕಾಣಿಸಿಕೊಂಡು ಮಹಾಜನರು ಶೈವ ಸ್ಥಾನಿಕರಿಗೆ ಅನೇಕ ನಿಬಂಧನೆಗಳನ್ನು ಹೇರಿದ್ದು ಕಂಡುಬರುತ್ತದೆ.[೧೦೭] ಆಡಳಿತದಲ್ಲಿನ ಸಡಿಲತೆ ಮಹಾಜನರ ಪ್ರಾಬಲ್ಯ, ಧಾರ್ಮಿಕ ಅಸಹಿಷ್ಣುತೆಗಳು ತಲೆದೋರಿ ಭೂಸಂಬಂಧಿ ವ್ಯಾಜ್ಯಗಳು ಕಾಣಿಸಿಕೊಳ್ಳುತ್ತವೆ.[೧೦೮] ಒಟ್ಟಿನಲ್ಲಿ ಕಳಿಕಟ್ಟೆಯು ಇಲ್ಲಿನ ಆಡಳಿತ ವರ್ಗ ಪುರೋಹಿತ ವರ್ಗದ ಪ್ರಭುತ್ವದ ಜೊತೆಗೆ ಅತ್ಯಂತ ಚಟುವಟಿಕೆಯಿಂದ ಕೂಡಿದ್ದ ವ್ಯಾಪಾರಿ ವರ್ಗ ಹಾಗೂ ಉತ್ಪಾದನಾ ವರ್ಗ ಜಗತಿ ಕೊತ್ತಳಿಗಳು, ಜೇಡ ಗೊತ್ತಳಿಗಳು, ಎಕ್ಕಟಿಗರು, ತೈಲಿಗರು, ಶಿಲ್ಪಿಗಳು ಮುಂತಾದವರು ಸಂಘಟಿತರಾಗಿ ತಮ್ಮ ತಮ್ಮ ಸಂಘಗಳ ಮೂಲಕ ಅನೇಕ ಧರ್ಮಕಾರ್ಯಗಳನ್ನು ಮಾಡುತ್ತ ತಮ್ಮ ವೃತ್ತಿಯನ್ನು ಅಭಿವೃದ್ಧಿಪಡಿಸಿಕೊಂಡು ಕಳಿಕಟ್ಟೆಯನ್ನು ಪ್ರಮುಖ ಪಟ್ಟಣವಾಗಿ ಮಾಡಿದರೆನ್ನಬಹುದು.[೧೦೯]

### ೪.೧.೩.೪. ಮುತ್ತನ ಹೊಸವೂರು

ಗಂಗರ ಸಾಮಂತನಾಗಿ ಆಸಂದಿನಾಡಾಳುತ್ತಿದ್ದ ಬಲಿವಂಶ ಕುಲತಿಲಕ ಮುತ್ತರನಿಗೆ ಅರಕೆರೆ ಪ್ರದೇಶ ಕಲ್ನಾಡಾಗಿ ದೊರೆತ ನಂತರ[೧೧೦] ಅವನ ವಂಶದವರು ಮುತ್ತರನ ಹೆಸರಿನಲ್ಲಿ ಈ ಹೊಸ ಊರನ್ನು ಮಾಡಿರುವ ಸಾಧ್ಯತೆಯಿದೆ. ಇಲ್ಲಿ ಹಿರಿಯ ಮುತ್ತನ ಹೊಸವೂರು ಚಿಕ್ಕ ಮುತ್ತನ ಹೊಸ ಊರೆಂದು ಜೋಡಿ ಗ್ರಾಮಗಳಿವೆ. ಮುತ್ತನ ಹೊಸ ಊರಿನ (ಹಿರಿಯೂರು) ಉಲ್ಲೇಖ ಕ್ರಿ.ಶ.೧೧೦೦-೦೧ರಲ್ಲೇ ಕಾಣಿಸಿಕೊಂಡಿದೆ.[೧೧೧] ಎರೆಯಂಗನ ರಾಣಿ ಮಹಾದೇವಿಯು ಮುತ್ತನಹೊಸವೂರಿನಲ್ಲಿ ಒಂದು ಕೆರೆಯನ್ನು ಕಟ್ಟಿಸುತ್ತಾಳೆ. ಬಾಣಾವರದ ಚಟ್ಟಿಪಸೆಟ್ಟಿ ಎರಡೂ ಮುತ್ತನಹೊಸೂರಗಳ ಕಡೆಯ ಕೆರೆಗಳನ್ನು 'ಪಿರಿದೆನೆ' ಕಟ್ಟಿಸಿದನಂತೆ[೧೧೨] ಇಮ್ಮಡಿ ಬಲ್ಲಾಳನಿಂದ ಕೇರಳದ ವ್ಯಾಪಾರಿ ಮಹಾವಡ್ಡ ವ್ಯವಹಾರಿ ಸಂಧಿವಿಗ್ರಹಿ ಕುಂಜಿಸೆಟ್ಟಿ ಉಚ್ಚಂಗಿ ದುರ್ಗದ ದಿಗ್ವಿಜಯದ ಸಂದರ್ಭದಲ್ಲಿ ತೋರಿದ ಪರಾಕ್ರಮಕ್ಕೆ ಮೆಚ್ಚಾಗಿ ಪಡಿಯಾಗಿ ಈ ಮುತ್ತನಹೊಸವೂರನ್ನು ಪಡೆಯುತ್ತಾನೆ. ಇವನ ಅಳಿಯ ಸಂತಾನದವರು ಇಲ್ಲಿ ಕೈಗೊಂಡ ಅಭಿವೃದ್ಧಿ ಕಾರ್ಯಗಳಿಂದ ಕೋಟೆ, ಪೆರ್ಗೆರೆ ದೇವಾಲಯಗಳು ನಿರ್ಮಾಣವಾದವು.[೧೧೩] ಹೊಸದಾಗಿ ಭೂಮಿಯನ್ನು ಸಾಗುವಳಿಗೆ ರೂಢಿಸಲಾಯಿತು. ರಾಜಧಾನಿ, ಅರಸೀಕೆರೆ, ಬಾಣಾವಾರ ಅರಕೆರೆ ಬೆಂಡೆಕೆರೆಗಳಿಗೆ ಸಂಪರ್ಕದಾರಿಗಳು ಇದ್ದುದರ ಬಗೆಗೆ ಇಲ್ಲಿನ ಶಾಸನಗಳು ಹೇಳುತ್ತವೆ.[೧೧೪] ಮುತ್ತನ ಹೊಸ ಊರಿನ ಕುಂಜೇಶ್ವರ ದೇವಾಲಯ ಅಪಾರ ಭೂಮಿಯನ್ನು ಹೊಂದಿದ್ದು, ಅದನ್ನು ಆಶ್ರಯಿಸಿದ ದೊಡ್ಡ ಪರಿವಾರ ವರ್ಗವೇ ಇತ್ತು. ಮತ್ತು ಅವರುಗಳಿಗಾಗಿ ಮನೆಗಳು, ವಠಾರಗಳು ಸಾಲಾಗಿ ನಿರ್ಮಿಸಲ್ಪಟ್ಟಿದ್ದವು. ಇಲ್ಲಿ ನಡೆಯುವ ಧಾರ್ಮಿಕ ಚಟುವಟಿಕೆಗಳಿಗೆ ರಾಜಗುರುಗಳ ನೇತೃತ್ವದಲ್ಲಿ ನೂರಿಪ್ಪತ್ತು ಶೈವ ಸ್ಥಾನದ ಮುಖ್ಯ ಸ್ಥಾನಿಕರು ಶಿವಗಣಗಳು ಹಾಜರಿರುತ್ತಿದ್ದರು.

### ೪.೧.೩.೬. ಇತರ ಗ್ರಾಮಗಳು

ಕೇರಳದಿಂದ ಬಂದ ವ್ಯಾಪಾರಿಗಳ ಕುಟುಂಬಕ್ಕೆ ಇಮ್ಮಡಿ ಬಲ್ಲಾಳ ಮತ್ತು ಇಮ್ಮಡಿ ನರಸಿಂಹನು ನೀಡಿದ ಪ್ರೋತ್ಸಾಹ[೧೧೫]ವನ್ನು ಹೊಯ್ಸಳ ಸೋವಿದೇವನೂ ಮುಂದುವರೆಸಿದ್ದುದರಿಂದ, ಅರಸೀಕೆರೆ ಬಾಣವರಗಳ ನಡುವಿನ ಪ್ರಮುಖ ಗ್ರಾಮಗಳಾದ ಅರಕೆರೆ, ಕೊಂಡಂಬಾಗಿಲು, ಬೆಂಡೆಕೆರೆ ವಿಶೇಷವಾಗಿ ಬೆಳೆವಣಿಗೆಯನ್ನು ಕಂಡವು. ಜಯಗೊಂಡ ಬಲ್ಲಾಳ ಪುರವೆಂದು ಖ್ಯಾತವಾಗಿದ್ದ ಪ್ರಸಿದ್ಧ ಅಗ್ರಹಾರ ಬೆಂಡೆಕೆರೆ ಹಾಗೂ ಸರ್ವಜ್ಞ ಪುರವೆಂದು ಖ್ಯಾತಿಪಡೆದಿದ್ದ ಅಗ್ರಹಾರ ಅರಕೆರೆ ಹೊಯ್ಸಳನೃಪ ನರಸಿಂಹನರಾಜ್ಯ ಪೂಜ್ಯ ಕೇರಳವ್ಯಾಪಾರಿ ದಾಮೋದರ ಶೆಟ್ಟಿಯಿಂದಾಗಿ ಅನೇಕ ನಾಗರಿಕ ಸೌಲಭ್ಯಗಳನ್ನು ಪಡೆದು ಅಭಿವೃದ್ಧಿ ಹೊಂದಿದುದನ್ನು ನೋಡಬಹುದು. ಈ ಗ್ರಾಮಗಳಲ್ಲಿ ಅವನು ಕಟ್ಟಿಸಿದ ಕೆರೆ, ಸುರಾಲಯಗಳು, ಇಟ್ಟಲಆರವೆ, ಪಲವು ಸತ್ರ, ಅರವಂಟಿಗೆಗಳು ಮಹಾಜನರಿಗೆ ದೇವಾಲಯಗಳಿಗೆ ಬಿಟ್ಟ

ದಾನಗಳಿಗೆ ಲೆಕ್ಕವಿಲ್ಲ.[೧೧೬] ಬ್ರಹ್ಮಪುರಿಗಳಿಗೆ, ದೇವಾಲಯಗಳ ಉತ್ಸವಾದಿಗಳಿಗೆ, ಪೂಜಾರಿ ಪರಿಚಾರಕರು, ಬಾಣಸಿಗರು ಮಾಲಕಾರರು, ಅಂಗರಕ್ಕರು ಮುಂತಾದವರಿಗಾಗಿ ಉತ್ತಮ ಜಮೀನು ತೋಟಗಳನ್ನು ಕೊಂಡು ದೇವಾಲಯಕ್ಕೆ ಬಿಟ್ಟಿದ್ದನು. ಶೆಟ್ಟಿಗಳ ಸಂಪತ್ತು ಹೇರಳವಾಗಿದ್ದು ಅಲ್ಲಿ ಭೋಗ ಜೀವನ ವಿಶೇಷವಾಗಿತ್ತು.

ಇದೆಲ್ಲವನ್ನು ಗಮನಿಸಿದಾಗ ಅಗ್ರಹಾರಗಳು, ದೇವಾಲಯ ಪಟ್ಟಣಗಳು, ಸೆಟ್ಟಿ ಪಟ್ಟಣಗಳಲ್ಲಿ ಅಪಾರ ಸಂಖ್ಯೆಯ ಜನ ಕೃಷಿಯೇತರ ಉದ್ಯೋಗಗಳಲ್ಲಿ ತೊಡಗಿಕೊಂಡು ಸುಖದ, ಮನರಂಜನೆಯಿಂದ ಕೂಡಿದ ನಗರದ ಭೋಗ ಜೀವನ ನಡೆಸುತ್ತಿದ್ದುದು ಕಂಡುಬರುತ್ತದೆ. ನಾಟ್ಯ ನಾಟಕ ಪ್ರದರ್ಶನಗಳು[೧೧೭] ಕಥಾಕಾಲಕ್ಷೇಪ, ಗಮಕ, ಪುರಾಣ ಶ್ರವಣ, ಅವಧಾನ[೧೧೮] ಇತ್ಯಾದಿಗಳಲ್ಲಿ ತಮ್ಮ ಬಿಡುವನ್ನು ಕಳೆಯುತ್ತಿದ್ದರು. ಇಂತಹ ಪಟ್ಟಣದ ಐಶಾರಾಮಿ ಜೀವನ ಸುತ್ತಮುತ್ತಲ ಕಾಲುವಳ್ಳಿಗಳಲ್ಲಿ ಅನೇಕ ಬದಲಾವಣೆಗಳನ್ನು ತರಲು ಪ್ರೇರಕವಾಗುತ್ತಿದ್ದವು.

ತಳಲೂರು ಅಗ್ರಹಾರದಲ್ಲಿನ ದೇವಾಲಯಗಳಲ್ಲಿ ವಿಶೇಷವಾಗಿ ಪಾತ್ರ ಭೋಗದವರಿದ್ದು, ಅವರ ಕಲಾ ಪ್ರದರ್ಶನಕ್ಕೆ ಸೂಳೆ ಮಂಟಪವಿದ್ದುದು ತಿಳಿದುಬರುತ್ತದೆ. ತಳಲೂರಿನ ಕಾಲುವಳ್ಳಿಯಾದ ಉಯ್ಯಗೌಂಡಿಯ ಹಳ್ಳಿಯ ದೇವರಸನ ಮಕ್ಕಳು ಇಂಥಹ ವೈಭವ ತಮ್ಮ ಹಳ್ಳಿಯ ದೇವರಿಗೂ ಬೇಕೆಂದು ಬಯಸಿ, 'ಪ್ರತಿವರ್ಷ ೪೧ ಗದ್ಯಾಣಗಳನ್ನು ಪಾತ್ರಭೋಗಕ್ಕೆ ಇಕ್ಕುತ್ತ ಬಹೆವು' ಎಂಬ ಕರಾರಿನ ಮೇಲೆ ತಳಲೂರಿನ ಮಹಾಜನರನ್ನು ಒಪ್ಪಿಸಿ ಹಳ್ಳಿಯಲ್ಲಿ ಮನರಂಜನೆಗೆ ಅವಕಾಶ ಮಾಡಿಕೊಳ್ಳುವುದನ್ನು ಕಾಣುತ್ತೇವೆ.[೧೧೯] ಇಂತಹ ಉದಾಹರಣೆಗಳು ರಾಜಧಾನಿಗಳ, ಮುಖ್ಯ ಪಟ್ಟಣಗಳ ಅಗ್ರಹಾರಗಳ ನೆರೆಹೊರೆಯ ಗ್ರಾಮಗಳೂ ನಗರದ ವಾತಾವರಣಕ್ಕೆ ನಿಧಾನವಾಗಿ ಹೇಗೆ ತೆರೆದುಕೊಳ್ಳುತ್ತವೆ, ಆ ಮೂಲಕ ಗ್ರಾಮ ಜೀವನದಲ್ಲಿ ಸಂಚಲನ ತರುತ್ತವೆ ಎಂಬುದಕ್ಕೆ ಸಾಕ್ಷಿಯಾಗಿದೆ.

ದೇವಾಲಯ ಪಟ್ಟಣಗಳು, ಅಗ್ರಹಾರಗಳು, ರಾಜಧಾನಿಗಳು ತಮ್ಮ ಆಹಾರ ಮತ್ತು ಇತರ ಅವಶ್ಯಕತೆಗಳಿಗೆ ಕೃಷಿ ಗ್ರಾಮಗಳನ್ನು ಅವಲಂಬಿಸಿರುತ್ತಿದ್ದವು. ಇವುಗಳಿಗೆ ಸೇರಿದ ಸುತ್ತಮುತ್ತಲ ಕಾಲುವಳ್ಳಿಗಳಲ್ಲಿ ಮಹಾಜನರ, ನಗರವಾಸಿಗಳ ಸೇವೆಗೆ ನಿಂತ ರೈತಾಪಿ ವರ್ಗದವರ ವಸತಿಗಳು ಇದ್ದು, ಅವರನ್ನು ಅಗ್ರಹಾರದ ದೇವಾಲಯಗಳ ವಿಸ್ತಾರವಾದ ಭೂಮಿಯನ್ನು ಉಳುಮೆ ಮಾಡುವ ಕೆಲಸಕ್ಕೆ ನೇಮಿಸಲಾಗುತ್ತಿತ್ತು.[೧೨೦] ಒಡೆಯ, ಸೇವಕವರ್ಗದ ಅಂತರ ಹೆಚ್ಚಲು ಕಾರಣವಾದ ಈ ರೀತಿಯ ಭೂಮಿಸ್ವಾಮ್ಯತೆಯು ರೈತ ಸಮುದಾಯವನ್ನು ಆಡಳಿತದ ನಿಯಂತ್ರಣಕ್ಕೆ ಒಳಪಡಿಸುವುದು, ನಾನಾ ನಿಬಂಧನೆಗಳನ್ನು ತೆರಿಗೆಗಳನ್ನು ಹೇರುವುದು. ಒಕ್ಕಲುಗಳ ಮೇಲೆ ಒತ್ತಡ ಹೇರುವುದು.[೧೨೧] ಅಸಮಾಧಾನ ಬಂದರೆ ಒಕ್ಕಲನ್ನು ಬದಲಾಯಿಸುವುದು[೧೨೨] ಕಂಡುಬರುತ್ತದೆ. ಶ್ರೀಮಂತ ಶೆಟ್ಟಿಗಳು ಸಾಲ ಬಡ್ಡಿ

ವ್ಯವಹಾರಗಳನ್ನು ನಡೆಸುತ್ತಿದ್ದು, ಇವರ ಸಂಪರ್ಕಕ್ಕೆ ಬಂದ ರೈತಾಪಿ ಜನಗಳು ಸಾಲವನ್ನು ಪಡೆದು ತೀರಿಸಲಾಗದೆ ಸಾಲಪತ್ರಕ್ಕೆ ಬದಲಾಗಿ ಭೂಮಿ, ತೋಟ, ಮನೆ ಇತ್ಯಾದಿಗಳನ್ನು ಕಳೆದುಕೊಂಡಿರುವ ಉದಾಹರಣೆಗಳೂ ಇವೆ.[೧೨೩] ಆರ್ಥಿಕ ಸ್ಥಿತಿ ಮತ್ತು ರಾಜಕೀಯ ಸವಲತ್ತುಗಳ ವ್ಯತ್ಯಾಸದ ಆಧಾರದ ಮೇಲೆ, ಈ ಪ್ರದೇಶದಲ್ಲಿ ಹಳ್ಳಿ ಪಟ್ಟಣ ವ್ಯತ್ಯಾಸದೊಂದಿಗೇ ಸ್ಪಷ್ಟವಾದ ಸಾಮಾಜಿಕ ಸ್ತರವಿನ್ಯಾಸವೂ ಉಂಟಾಗಲೂ ಕಾರಣವಾಯಿತೆಂಬುದನ್ನು ಮೇಲಿನ ಉದಾಹರಣೆಗಳು ತೆರೆದು ತೋರಿಸುತ್ತವೆ. ಯಾವ ಪಟ್ಟಣವನ್ನು ಭೋಗದಾರವೆಂದು ಶಾಸನವು ಕರೆಯುತ್ತಿರುತ್ತದೋ ಅದೇ ಸ್ಥಳದಲ್ಲೇ ಭೂಮಿ ಮನೆ ಕಳೆದುಕೊಂಡ ಸಾಲಿಗನೂ ಇರುವ ಸತ್ಯವನ್ನು ಕಾಣಬಹುದಾಗಿದೆ.[೧೨೪] ಸಿರಿವಂತರು, ಆಳರಸರು, ಅಧಿಕಾರಿಗಳು ಮಹಾಜನರ ವರ್ಗವನ್ನು ಸೇವಿಸುವ ದೊಡ್ಡ ಸಂಖ್ಯೆಯ ಊಳಿಗದವರ ವರ್ಗವೊಂದು ಬೆಳೆಯುತ್ತಿದ್ದುದನ್ನು ಶಾಸನಗಳಿಂದ ತಿಳಿಯಬಹುದು. ಮೈಗಾವಲಿನ ನಿಷ್ಠಾವಂತ ಬಂಟರು, ಅರಮನೆಗಳ ಸೇವಕ ವರ್ಗ, ದೇವಾಲಯಗಳ ಪರಿಚಾರಕ ವರ್ಗ, ಶ್ರೀಮಂತರ ಪ್ರತಿಷ್ಠಿತರ ಖಾಸಾ ಊಳಿಗ ವರ್ಗ ಹೀಗೆ ಸಮಾಜದಲ್ಲಿ ಸಂಪತ್ತಿನ ಅಭಿವೃದ್ಧಿಯೊಂದಿಗೆ ಅದರ ಹಂಚಿಕೆಯಲ್ಲಾದ ಏರುಪೇರಿನಿಂದ ಶ್ರೀಮಂತರು ಪ್ರಭುಗಳು ಮತ್ತು ರಾಜರನ್ನೊಳಗೊಂಡ ಉನ್ನತ ವರ್ಗ, ವ್ಯಾಪಾರಿಗಳನ್ನೊಳಗೊಂಡ ಎರಡನೆಯ ವರ್ಗ, ವೃತ್ತಿ ಸಂಘಗಳನುಳ್ಳ ಕುಶಲ ಕರ್ಮಿಗಳು ಮೂರನೆಯ ವರ್ಗ, ಸೇವಕರು, ಭೂರಹಿತರು, ದರಿದ್ರರ ನಾಲ್ಕನೆಯ ವರ್ಗ ಸ್ಪಷ್ಟವಾಗಿ ಕಾಣಿಸಿಕೊಳ್ಳತೊಡಗಿತು.

### ೪.೨.ವಲಸೆಗಳು-ವಲಸಿಗರ ಸ್ಥಿತಿಗತಿ

ವಲಸೆ ಎಂದರೆ ಒಬ್ಬ ವ್ಯಕ್ತಿ ಇಲ್ಲವೆ ಒಂದು ಗುಂಪು (ಕುಟುಂಬ) ದೈಹಿಕವಾಗಿ ಒಂದು ಸಾಮಾಜಿಕ ಪರಿಸ್ಥಿತಿಯಿಂದ ಇನ್ನೊಂದು ಸಾಮಾಜಿಕ ಪರಿಸ್ಥಿತಿಗೆ ಸ್ಥಾನಾಂತರಗೊಳ್ಳುವುದು. ಆದಿ ಮಾನವನ ಅನ್ನದ ಹುಡುಕಾಟದೊಂದಿಗೆ ಮಾನವನ ವಲಸೆಯ ಇತಿಹಾಸವೂ ಪ್ರಾರಂಭವಾಯಿತೆನ್ನಬಹುದು.

ಪ್ರಸ್ತುತ ಅಧ್ಯಯನ ಪ್ರದೇಶದ ಕೆಲವು ಶಾಸನಗಳು ವಲಸೆಯನ್ನು ಕುರಿತು ಬೆಳಕು ಚೆಲ್ಲುತ್ತವೆ. ಅವುಗಳ ಸೂಕ್ಷ್ಮ ಅಧ್ಯಯನದಿಂದ ವಲಸೆಯ ಪ್ರೇರಣೆಗಳನ್ನೂ ಪರಿಣಾಮಗಳನ್ನು ಅರಿಯಬಹುದು. ಈ ಹಿಂದೆ ಚರ್ಚಿಸಿದಂತೆ ಪ್ರಸ್ತುತ ಪ್ರದೇಶದಲ್ಲಾದ ರಾಜಕೀಯ ಮತ್ತು ಆರ್ಥಿಕ ಸ್ಥಿತ್ಯಂತರಗಳು ಉಂಟು ಮಾಡಿದ ಸಾಮಾಜಿಕ ಬದಲಾವಣೆಗಳು, ಹೊಸ ಗ್ರಾಮಗಳ, ಪಟ್ಟಣಗಳ ಹುಟ್ಟು ಮತ್ತು ಬೆಳವಣಿಗೆಗಳು, ಇಲ್ಲಿನ ಸಂಪತ್ತು, ಆಳರಸರ ರಾಜಕೀಯ, ಆರ್ಥಿಕ, ಧಾರ್ಮಿಕ ನೀತಿಗಳು ವಲಸಿಗರನ್ನು ವಿಶೇಷವಾಗಿ ಆಕರ್ಷಿಸಿತು. ಅರಸೀಕೆರೆ, ಅರಕೆರೆ, ಕೆಲ್ಲಂಗೆರೆ, ಬೆಂಡೆಕೆರೆ, ಮುತ್ತನ ಹೊಸವೂರು, ಮೊಸಳೆ, ಉಂಡಿಗನಾಳು, ಹಾರನಹಳ್ಳಿ, ಕಣಕಟ್ಟೆ, ಶಂಕರನಹಳ್ಳಿ, ಗೀಜಿಹಳ್ಳಿ, ತಳಲೂರು, ಗಂಡಸಿ, ಶಾನವಗೆರೆಗಳಿಗೆ ವಲಸೆಗಳು ನಡೆದಿರುವುದು ಶಾಸನಗಳಿಂದ ತಿಳಿದುಬರುತ್ತದೆ.

ವಲಸೆಗಳನ್ನು ನೇರವಾಗಿ ಉಲ್ಲೇಖಿಸುವ ಇಲ್ಲಿನ ಶಾಸನಗಳು ಹೊಯ್ಸಳರ ಕಾಲದವಾಗಿರುವುದರಿಂದ ಹೊಯ್ಸಳ ಅರಸರ ನೀತಿ ವಲಸೆಗೆ ಪ್ರೇರಕ ಮತ್ತು ಪೂರಕವಾಗಿದ್ದಿತೆಂದು ಅರಿವಾಗುತ್ತದೆ ಮತ್ತು ಅಂತಹ ಆಡಳಿತಾತ್ಮಕ ನೀತಿಯ ಪೂರ್ಣ ಲಾಭವನ್ನು ಈ ವಲಸಿಗರು ಹೇಗೆ ಪಡೆದರೆಂಬುದನ್ನು ಆಧರಿಸಿ ವಲಸೆಯನ್ನು ರಾಜಕೀಯ ವಲಸೆ, ಆರ್ಥಿಕ ವಲಸೆ, ಸಾಮಾಜಿಕ ಧಾರ್ಮಿಕ ಇತ್ಯಾದಿಯಾಗಿ ವಿಂಗಡಿಸಬಹುದು. ವಲಸೆಯಲ್ಲಿ ಒಳವಲಸೆ ಮತ್ತು ಹೊರವಲಸೆಗಳೆಂಬ ಎರಡು ರೀತಿಗಳಿದ್ದರೂ ಇಲ್ಲಿ ಕೇವಲ ಒಳವಲಸೆಯನ್ನು ಮಾತ್ರ ಚರ್ಚಿಸಲಾಗಿದೆ. ಇಲ್ಲಿ ವಲಸಿಗ ಅಧಿಕಾರಿಗಳು, ವಲಸಿಗ ಬ್ರಾಹ್ಮಣರು, ವಲಸಿಗ ವ್ಯಾಪಾರಿಗಳು, ವೈದ್ಯರು, ರೂವಾರಿಗಳನ್ನು ಕಾಣಬಹುದು.

### ೪.೨.೧. ರಾಜಕೀಯ ಪ್ರೇರಿತ ವಲಸೆ-ಅಧಿಕಾರಿಗಳು ಮತ್ತು ಸಾಮಂತರು

ಹೊಯ್ಸಳ ವಿಷ್ಣುವರ್ಧನನು ನಿಷ್ಠಾವಂತರಾದ ಪರಾಕ್ರಮಿಗಳಾದ ಅಧಿಕಾರಿಗಳನ್ನು, ಬಂಟರುಗಳನ್ನು ತಾನು ಗೆದ್ದ ಪ್ರದೇಶಗಳಿಂದ ಕರೆತಂದು ಅವರಿಗೆ ಜೀವಿತಕ್ಕಾಗಿ ಅನೇಕ ಗ್ರಾಮಗಳ ವೃತ್ತಿಗಳನ್ನು ಉಂಬಳಿಯಾಗಿ ನೀಡಿ ಸ್ಥಳೀಯ ಸಾಮಂತರಾಗಿ ಸ್ಥಾಪಿಸುತ್ತಿದ್ದುದನ್ನು ಶಾಸನಗಳು ಹೇಳಿವೆ. ಈ ರೀತಿ ಅರಸನ ಕಾರುಣ್ಯಕ್ಕೆ ಪಾತ್ರರಾಗಿ ಸಮಾಜದಲ್ಲಿ ಉತ್ತಮ ಸ್ಥಾನಮಾನ ಗೌರವಗಳನ್ನು ಪಡೆದ ವಲಸಿಗರು ವಂಶಪಾರಂಪರ್ಯವಾಗಿ ಅಲ್ಲಿ ನೆಲಸಿ ಅಭಾದಿತವಾದ ರಾಜನಿಷ್ಠೆ ಡಿಂಗರಿಗತನವನ್ನು ಮೆರೆದಿದ್ದಾರೆ. ಒಂದು ರೀತಿಯ ಶಾಶ್ವತ ಒಡೆಯ ಸೇವಕ ಬಾಂಧವ್ಯ ಬೆಳೆದು ಹೊಯ್ಸಳವಂಶಕ್ಕೆ ಇವರು ಸತತವಾಗಿ ಸೇವೆ ಸಲ್ಲಿಸುತ್ತ ಬಂದಿದ್ದಾರೆ. ಅಷ್ಟೇ ಅಲ್ಲ ಹೊಯ್ಸಳರ ನಂತರದಲ್ಲೂ ತಮ್ಮ ಉಂಬಳಿ ಪ್ರದೇಶಗಳ ಆಡಳಿತವನ್ನು ಮುಂದುವರೆಸಿಕೊಂಡು ಒಡೆಯರ ಕಾಲದವರೆಗೆ ಕೆಲವು ವಲಸಿಗರು ಕಾಣಿಸಿಕೊಳ್ಳುತ್ತಾರೆ. ಇಂತಹ ವಲಸೆಗಳ ಹಿಂದೆ ಆಳರಸರ ಚಾಣಾಕ್ಷ ಆಡಳಿತ ನೀತಿ ವ್ಯಕ್ತವಾಗುತ್ತದೆ. ಈ ರೀತಿಯ ಏರ್ಪಾಟಿನಿಂದ ಸಾಮಂತಾಧಿಕಾರಿಗಳ ಮೇಲೆ ಬಿಗಿ ಹಿಡಿತಗಳನ್ನು ಹೊಂದಲು ಸಾಧ್ಯವಾಗುತ್ತಿದ್ದುದಲ್ಲದೆ ವಿದ್ರೋಹಗಳಿಗೆ ಅವಕಾಶವಾಗದಂತೆ ನೋಡಿಕೊಳ್ಳಬಹುದಾಗಿತ್ತು.

#### ೪.೨.೧.೧. ಚಳುಕೆಯ ವೃತ್ತಿಯ ಸಾಮಂತರು

ಅರಸೀಕೆರೆಯ ಗಂಜಿಗೆರೆ, ಶಾನವಗೆರೆ ಒಳಗೊಂಡಂತೆ ಸುತ್ತಿನ ಅನೇಕ ಗ್ರಾಮಗಳು ಚಳುಕೆಯ ವೃತ್ತಿ ಎಂದು ಕರೆಯಲ್ಪಟ್ಟಿದ್ದು, ಅದನ್ನು ಸು.೧೧೧೩ ರಿಂದ ಹೊಯ್ಸಳ ೩ನೇ ನರಸಿಂಹನ ಕಾಲದವರೆಗೆ[೧೨೫] ಚಳುಕೆಯ ವಂಶದವರು ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಈ ವಂಶದವರು ನಂದಗೋಕುಲ ನಾರಾಯಣದೇವರ ಪಾದಾರಾದಕರು, ಗಡಿಯಂಕ ಭೀಮ ಹಯವತ್ಸರಾಜ, ಕಡಂಬಕಂಠೀರವ ಮುಂತಾದ ಬಿರುದುಳ್ಳವರಾಗಿದ್ದಾರೆ.[೧೨೬] ಇವರ ವಂಶವನ್ನು ಈ ರೀತಿ ಗುರುತಿಸಬಹುದು.




ಈ ಚಳುಕೆಯ ವಂಶದವರನ್ನು ವಿಷ್ಣು ವರ್ಧನನು ಕಲ್ಯಾಣದಿಂದ ಕರೆತಂದು ಇಲ್ಲಿ ಸ್ಥಾಪಿಸಿದನು.[೧೨೭] 'ಕಲ್ಯಾಣದ ಹಿರಿಯ ಹೆಂಮಾಡಿರಾಯನನು ಬಿಟ್ಟಿದೇವನೋಲಗಿಸಲು ಹೋಗಿ ಬಡಗಣಿಂದಂ ಬಹಲಿ ಚಳುಕವ್ವೆ ವೋಲಗಿಕಾತಿಯಾಗಿ ಇದ್ದಲ್ಲಿ ಇವರು ನಂಮನ್ವಯದವರೆಂದು ಆದ್ಯನಹ ಚಿಕಚಳಿಕೆಯ ನಾಯಕನನು ಪಾದ ಮೂಲ ಪರಿಗ್ರಹವಾಗಿ ಕಳುಹಿದಲ್ಲಿ ಆತನು ತಂಮ ಡಿಂಗರಿನಾಗಿ ಬೆಸಕೆಯ್ದಡೆ ಮೆಚ್ಚಿ ಕಾರುಣ್ಯಂ ಮಾಡಿ" ಅವರಿಗೆ ನೀಡಿದ ಸ್ಥಳವೇ ಚಳುಕೆಯ ವೃತ್ತಿ. ಈ ಚಳುಕೆಯ ವೃತ್ತಿಯಲ್ಲಿ ಕಂಚಿಗಲ್ಲು, ಬಿದಿರೆ, ಎಕ್ಕಹಟ್ಟಿ, ಚಟ್ಟನಹಳ್ಳಿ, ಅಣ್ಣಿಗೆರೆ, ಕೆಲಮಗಟ್ಟ, ಸೋಮನಹಳ್ಳಿ, ಕೋತಿಕೆರೆ, ಹುಳ್ಳಿಗೆರೆ, ಕುಂದೂರು, ಸೇನವಗೆರೆ, ಗಂಜಿ ಗೆರೆ, ಮಾವಿನಕೆರೆ, ನಾಗಸಮುದ್ರ, ಮತ್ತಿಯಹಳ್ಳಿ, ಕೇಸಿಹಳ್ಳಿ, ಸಿಂಗಟಿ ಗೆರೆ, ಮುಗಳಿಕಟ್ಟ ಇತ್ಯಾದಿಗಳು ಸೇರಿದ್ದವು. ಈ ಗ್ರಾಮಗಳಲ್ಲಿ ಸುಮಾರು ೮೩ ಸಲಗೆ ಗದ್ದೆಯನ್ನು ೬೦ ಸಲಗೆ ಬೆದ್ದಲನ್ನು ಬಿಟ್ಟಿದೇವನು ಈ ಚಳುಕೆಯ ನಾಯಕನ ಸಂತತಿಗೆ ಕಾರುಣ್ಯ ಮಾಡಿದ್ದನೆಂದು ತಿಳಿದುಬರುತ್ತದೆ.

ಈ ವಂಶದ ಹಿರಿಯ ನೊಣಬೆಯನಾಯಕ ಮತ್ತು ಅವನ ಮಗ ಚಿಕ್ಕ ನೊಣಬೆಯನಾಯಕರು ಬಹಳ ಪ್ರಸಿದ್ದರು.[೧೨೮] ಈ ಪ್ರದೇಶದಲ್ಲಿ ಈ ಆದ್ಯನಹ ಚಳುಕೆಯ ನಾಯಕ ತನ್ನ ಸೋದರನೊಂದಿಗೆ ಯಗಟಿಯ ಕಲ್ಲೇಶ್ವರ ದೇವಾಲಯವನ್ನು ಮಾಡಿಸಿದ ಉಲ್ಲೇಖ ೧೧೧೩ರಲ್ಲಿ ಕಂಡುಬರುತ್ತದೆ. ಇವನನ್ನು ದೇಶಿಯಂಕ ಕಾರನೆಂದು ನನ್ನಗೋಪಾಳಕನೆಂದಷ್ಟೇ ಕರೆದಿದೆ. ವಿಶೇಷ ಬಿರುದುಗಳಿಲ್ಲ.[೧೨೯] ಈ ವಂಶದ ಹಿರಿಯ ಚಳುಕೆಯ ನಾಯಕನು ೧೧೫೩ರಲ್ಲಿ ಚಳುಕೆಯ ವಿತ್ತಿಯನ್ನು ಸಿಂಗಟಿಗೆರೆಯಿಂದ ರಾಜ್ಯಭಾರ ಮಾಡುತ್ತಿದ್ದನು.[೧೩೦] ಇವನ ಸೋದರ ಚಿಕ್ಕ ಚಳುಕೆಯನಾಯಕ ಸೇನವಗೆರೆಯ ವಿತ್ರಿಯನ್ನು ಆಳುತ್ತಿದ್ದನು.[೧೩೧] ಇವರಿಬ್ಬರಿಗೂ ಮಹಾ ಸಾಮಂತರೆಂದು ಶಾಸನಗಳಲ್ಲಿ ಕರೆದಿದೆ. ಚಿಕ್ಕ ಚಳುಕೆಯನಾಯಕನ ಮಕ್ಕಳಾದ ಹಿರಿಯನೊಣಬೆಯ ನಾಯಕ ಮತ್ತು ಮಾಚಯ್ಯ ನಾಯಕರು ತಮ್ಮ ನಿಷ್ಠೆ ಪರಾಕ್ರಮ

ದಾನ ಧರ್ಮಗಳಿಂದ ಈ ವಂಶಕ್ಕೆ ಹೆಚ್ಚು ಗೌರವ ತಂದುಕೊಟ್ಟಿದ್ದಾರೆ. ಇವರ ಕಾಲದಲ್ಲಿ ಅನೇಕ ಶಿವಾಲಯಗಳ ನಿರ್ಮಾಣವಾಗಿದ್ದು, ಇವರು ಯಥೇಚ್ಛವಾಗಿ ದಾನ ನೀಡಿದ್ದಾರೆ.[೧೩೨] ಕ್ರಿ.ಶ.೧೨೫೨ರಲ್ಲಿ ನೊಣಬೆಯ ನಾಯಕ ಬಮ್ಮರಸ ಚಳುಕೆಯ ನಾಯಕರು ಒಟ್ಟಿಗೆ ಆಳ್ವಿಕೆ ಮಾಡುತ್ತಿದ್ದರೆಂದು ಎರಡು ಶಾಸನಗಳು ಹೇಳುತ್ತವೆ.[೧೩೩]

ಮುಂದೆ ಚಿಕ್ಕ ನೊಣಬೆಯ ನಾಯಕ ತನ್ನ ಅನೇಕ ಸೋದರರ ಒಗಗೂಡಿ ಆಳ್ವಿಕೆ ಮಾಡುತ್ತಿದ್ದು ವಿಶೇಷವಾದ ಹೊಸ ಬಿರುದುಗಳನ್ನು ಧರಿಸಿದ್ದಾನೆ. ಹಯ ವಿಶಮಗಜಪ್ರವುಡರೇಖಾರೇವಂತ, ಪೆಂಮಿಯ ತಲೆಗೊಂಡಗಂಡ, ಶ್ರೀನಾಯಕನಾರಾಯಣ ಗಜಪತಾಕ ಇತ್ಯಾದಿಗಳಿದ್ದು, ಇವನನ್ನು ರಾಯನಾಯಕ ನಾರಾಯಣನೆಂದು ಕರೆದಿವೆ. ಇವನ ಮನೆಯ ಬಾಹತ್ತರ ನಿಯೋಗಾಧಿಪತಿ ಮಹಾವಡ್ಡ ವ್ಯವಹಾರಿ ಚಳುಕಿಯ ವೃತ್ತಿಯ ಪ್ರಭು ಎಂದು ಕರೆಯಲಾಗುತ್ತಿದ್ದ ನೊಣಬಿಸೆಟ್ಟಿಯನ್ನು ಚಿಕ್ಕ ನೊಳಣಬೆಯ ನಾಯಕನ ರಾಜ್ಯಕ್ಕೆ ಶಿರೋಮಣಿ ಎಂದು ಕರೆದಿದೆ. ಚಿಕ್ಕನೊಣಬೆಯ ನಾಯಕನು ತನ್ನ ತಾಯಿ ಬೊಮ್ಮಲಾನಾಯಕಿತಿಯ ಹೆಸರಿನಲ್ಲಿ ಹೇರಡಿಘಟ್ಟವನ್ನು ಬ್ರಹ್ಮಲಾಪುರವೆಂಬ ಅಗ್ರಹಾರ ಮಾಡಿದ್ದಾನೆ.[೧೩೪] ತನ್ನ ವಡ್ಡ ವ್ಯವಹಾರಿ ಕಟ್ಟಿಸಿದ ಶಿವಾಲಯಗಳಿಗೆ ೬೦೦೦ ಅಡಕೆಯ ಮರದ ತೋಟ, ಹೂತೋಟ ಗದ್ದೆ ಬೆದ್ದಲುಗಳನ್ನು ದಾನ ಮಾಡಿದ್ದಾನೆ.

ಒಟ್ಟಿನಲ್ಲಿ ಈ ವಂಶದವರು ವಿಷ್ಣು ವರ್ಧನನಿಂದ ಪ್ರಾರಂಭಿಸಿ ಹೊಯ್ಸಳರ ಪತನದವರೆವಿಗೂ ನಿಷ್ಠಾವಂತರಾಗಿ ಅರಸರ ಸೇವೆಸಲ್ಲಿಸಿದ್ದಾರೆ. ತಾವೂ ಬೆಳೆದಿದ್ದಾರೆ. ತಮ್ಮ ಆಡಳಿತ ಪ್ರದೇಶದ ಅಭಿವೃದ್ಧಿಗೂ ಕಾರಣರಾಗಿದ್ದಾರೆ. ವಿಜಯನಗರದ ಅಚ್ಚುತ ರಾಯನ ಕಾಲದಲ್ಲಿ ಈ ಚಳುಕೆಯ ವೃತ್ತಿಯ ಪ್ರದೇಶ ಅಚ್ಚುತರಾಯನ ಕಾರ್ಯಕ್ಕೆ ಕರ್ತರಾದ ಬಾಚರಸರ ಕುಮಾರ ರಾಮಪಯ್ಯನ ಬೂದಿಹಾಳು ಸೀಮೆಯ ನಾಯಕತನದ ವ್ಯಾಪ್ತಿಗೆ ಸೇರಿದಂತೆ ತೋರುತ್ತದೆ.[೧೩೫]

### ೪.೨.೧.೨. ಸಾಮಂತ ಸಿಂಗರಸ

ಹೊಯ್ಸಳ ವಿಷ್ಣುವರ್ಧನನು ಕ್ರಿ.ಶ.೧೧೨೯ಕ್ಕೆ ಮೊದಲು ಸಾಮಂತ ಸಿಂಗರಸನನ್ನು ಅರಸೀಕೆರೆ ಯಿಂದೆತ್ತಿಸಿ ತಂದು ಮಗರೆ ಮುಂನೂರರೊಳಗಣ ಮೊದಲ ಬಾಡದ ಕಳಿಕಟ್ಟಿಯಲ್ಲಿ ಸ್ಥಾಪಿಸುತ್ತಾನೆ.[೧೩೬] ಕಳಿಕಟ್ಟಿಯ ಪಟ್ಟಣದ ಸಮಸ್ತ ಜಗತಿ ಕೊತ್ತಳಿಗಳು ವೀರಬಲ್ಲಾಳನ ಅಜ್ಜ ವಿಷ್ಣುವರ್ಧನ ಪೊಯ್ಸಳ ಬಿಟ್ಟಿದೇವನ ಬೆಸದಿಂದ ಸಿಂಗರಸನನ್ನು ಕಳಿಕಟ್ಟಿಗೆ ಬರಮಾಡಿಕೊಂಡರೆಂದು ಒಂದು ಶಾಸನ ಹೇಳುತ್ತದೆ.[೧೩೭] ಈ ಅರಸೀಕೆರೆಯು (ಬಳ್ಳಾರಿ ಜಿ.ಹರಪನಹಳ್ಳಿ ತಾ.) ನೊಳಂಬವಾಡಿ ೩೨೦೦೦ದ ಕೋಗಳಿ ೫೦೦ರ ಕಂಪಣ ಮುತ್ತಗೆ ೩೦ರಲ್ಲಿದ್ದು, ಪ್ರಮುಖ ಭಾಗವಾಗಿತ್ತು. ಇದು ಸಿಂಘರಸನ ಪೂರ್ವಜರ ಆಳ್ವಿಕೆಗೆ ಒಳಪಟ್ಟಂತೆ ತೋರುತ್ತದೆ. ಇಲ್ಲಿನ ನೊಳಂಬೇಶ್ವರನಿಗೆ ಸಿಂಘರಸ ದಾನ ನೀಡಿದ್ದಾನೆ. ವಿಷ್ಣುವರ್ಧನನ

ಅಪೇಕ್ಷೆಯಂತೆ ಸಿಂಘರಸ ಕಣಿಕಟ್ಟಿಗೆ ವಲಸೆಯಾದಾಗ ಅವನೊಂದಿಗೆ ಇಲ್ಲಿನ ನೈಷ್ಠಿಕ ತಪೋಧನ ಪರೇಶ್ವರ ಪಂಡಿತರ ಶಿಷ್ಯ ಕ್ರಿಯಾಶಕ್ತಿಯೂ, ಅಧಿಕಾರಿಗಳು ವೀರಪಡೆ, ಕವಿ ಕಲಾವಿದರು ವಲಸೆ ಗೊಂದಿದ್ದಾರೆ.

ಮಹಾಸಾಮಂತ ಸಿಂಗರಸನು ಶಾರದಾ ದೇವಿಲಬ್ಧವರ ಪ್ರಸಾದನೂ ಸೋಮಾನ್ವಯ ಕುಲದೀಪಕನೂ ನೀತಿ ಚಾಣಾಕ್ಯನೂ ಏಕವಾಕ್ಯನೆಂದು ಶಾಸನ ಹೊಗಳಿದೆ.[೧೩೮] ಇವನು ಪುಣುಸೆಗಾಂಕ ಮತ್ತು ಚಟ್ಟಬ್ಬೆಯ ಮಗನೆಂದು ಹೇಳಿದುದಲ್ಲದೆ ಕುಣಿಂಗಿಲು ನಾಡು ಎಂಟುನೂರಕ್ಕೆ ಅಧಿಪತಿಯಾಗಲು ಹುಟ್ಟಿದವನು ಎಂದಿರುವುದರಿಂದ ಇವನು ಮೊದಲು ಆ ನಾಡಿನ ಪ್ರಾಂತ್ಯವನ್ನಾಳುತ್ತಿದ್ದನೆಂದು ಹೇಳಬಹುದು. ಇವನಿಗೆ ವಿಷ್ಣುವರ್ಧನನು ಹಿರಿಯ ಮಗಳು ಹರಿಯಬ್ಬರಸಿಯನ್ನು ವಿವಾಹ ಮಾಡಿಕೊಟ್ಟಿದ್ದ.[೧೩೯] ಈ ಶಾಸನದಲ್ಲಿ ಅವರ ವಂಶಾವಳಿ ಇದೆ.

ಚೆನೆಗಂಗ + ಸೋವಬ್ಬೆ -> ಕೂರಾಳು ಸುಭಗ + ಮಾದಿಕಬ್ಬೆ -> ಮಾರಸಿಂಘ + ಬೊಮ್ಮಿಕಬ್ಬೆ -> ಬೂವ + ಸೋವಬ್ಬೆ -> ಸಾಮಂತ ಕಾಮರಸ ಪುಣುಸೆಗಾಂಕ + ಚಟ್ಟಬ್ಬೆ -> ಸಾಮಂತ ಸಿಂಘ

ಈ ವಂಶದವರೆಲ್ಲರೂ ವೀರರಾಗಿದ್ದರೆಂಬುದನ್ನು ಅವರಿಗೆ ಬಳಸಿರುವ ಕೂರಾಳ್, ಆಹವಧೀರನ್, ಕಾಯ್ವರ ಗಣ್ಡ, ಕಟ್ಟಾಳು ಮುಂತಾದ ವಿಶೇಷಣಗಳು ತಿಳಿಸುತ್ತವೆ. ಈ ಸಿಂಘರಸನು ಕಳಿಕಟ್ಟೆಯಲ್ಲಿ ಸಿಂಗೇಶ್ವರ ದೇವರ ಪ್ರತಿಷ್ಠೆಯನ್ನು ಮಾಡಿ ದೇವರ ಅಂಗರಂಗ ಭೋಗ ನೈವೇದ್ಯಕ್ಕೆ ತಪೋಧನರ ಆಹಾರದಾನಕ್ಕೆ, ವಿದ್ಯಾದಾನಕ್ಕೆಂದು ದಾನಬಿಟ್ಟಿದ್ದಾನೆ. ಅರಸೀಕೆರೆಯ (ಬಳ್ಳಾರಿ ಜಿಲ್ಲೆ) ಶೈವ ಸ್ಥಾನದ ನೈಷ್ಟಿಕ ಮತಾಚಾರ್ಯರಾದ ಪರೇಶ್ವರ ಪಣ್ಡಿತರ ಶಿಶ್ಯರಾದ ಕ್ರಿಯಾಶಕ್ತಿ ಪಂಣ್ಡಿತರ ಪಾದ ತೊಳೆದು ಬಿಟ್ಟ ದಾನವನ್ನು ಸಿಂಗೇಶ್ವರದ ಸ್ತಾನಪತಿಯ ಮಗ ರಾಮದೇವನಿಗೆ ಒಪ್ಪಿಸಿ ಕೊಡುತ್ತಾರೆ. ಕ್ರಿ.ಶ.೧೧೩೨ರಲ್ಲಿ ಇವನು ಬೆಟ್ಟದ ಕಲಿದೇವರ ಲಿಂಗಪ್ರತಿಷ್ಠೆಯನ್ನು ಮಾಡಿದ್ದಾನೆ.[೧೪೦] ಶೈವಭಕ್ತನಾದ ಈ ಸಿಂಗರಸನು ಜೈನ ಕೇಂದ್ರವಾಗಿದ್ದ ಕಳಿಕಟ್ಟೆಯು ಶೈವ ಪ್ರಾಧಾನ್ಯತೆಯನ್ನು ಪಡೆಯಲು ಕಾರಣನಾದನೆಂದು ಹೇಳಬಹುದು. ಹೊಯ್ಸಳರು ಮತ್ತು ನೊಳಂಬರ, ಕಳಿಕಟ್ಟೆ ಮತ್ತು ಅರಸೀಕೆರೆಯ ರಾಜಕೀಯ ಧಾರ್ಮಿಕ ಸಂಬಂಧಗಳು ಇವನಿಂದಾಗಿ ವಿಶೇಷವಾಗಿ ಬೆಳೆದು ಕಳಿಕಟ್ಟೆಯ ಪ್ರಗತಿಗೆ ಕಾರಣವಾಯಿತು. ಈತ ೧೧೨೯ ರಿಂದ ೧೧೪೧ರವರೆಗೆ ಆಳ್ವಿಕೆ ಮಾಡಿದಂತೆ ತೋರುತ್ತದೆ. ಇವನ ನಂತರ ಕಳಿಕಟ್ಟೆ ಸಾಮಂತ ಗೋಯಿ ದೇವನ ಆಳ್ವಿಕೆಗೆ ಒಳಪಟ್ಟಿತು.

### ೪.೨.೧.೩ ಉಂಡಿಗನಾಳಿನ ಸಾಮಂತ ಜೆಟ್ಟಿಗಳು

ಉಂಡಿಗನಹಾಳು ಅರಸೀಕೆರೆ ಜಾವಗಲ್ ರಸ್ತೆಯಲ್ಲಿ ಹನ್ನೆರಡನೇ ಮೈಲಿಗಲ್ಲಿನ ಹತ್ತಿರವಿರುವ ಗ್ರಾಮ. ಈ ರಸ್ತೆಯು ಬೇಲೂರು, ಹಳೇಬೀಡು ಜಾವಗಲ್ಲು ಹಾರನಹಳ್ಳಿ ಅರಸೀಕೆರೆಗಳನ್ನು ಬೆಸೆಯುವ

ಹತ್ತಿರದ ಮಾರ್ಗ. ಹಿಂದಿನಿಂದಲೂ ಈ ಮಾರ್ಗ ಸೈನಿಕ ಪಥ, ವಾಣಿಜ್ಯ ಪಥವಾಗಿತ್ತು. ಮತ್ತು ಕಲ್ಯಾಡಿಯ ಬೆಟ್ಟದ ಸಾಲು, ಚಿಕ್ಕರಂಗಯ್ಯನ ಗುತ್ತಿ, ಕಂಡಿಸಿದ್ದಪ್ಪನ ಕಣಿವೆ ಇತ್ಯಾದಿ ಕಾಡು ಬೆಟ್ಟದ ತಪ್ಪಲಿನಲ್ಲಿರುವ ಈ ಗ್ರಾಮ ಕಳ್ಳಕಾಕರ ಅಡಗು ತಾಣವಾಗಿತ್ತು. ಹಾಗಾಗಿ ಇಲ್ಲಿ ಸಾಗಿ ಬರುವ ವ್ಯಾಪಾರೀ ಸರಕುಗಳಿಗೆ ಪ್ರಯಾಣಿಕರಿಗೆ ಮಾರಣಾಂತಿಕವಾಗಿತ್ತು. ಇಂತಹ ಜಾಗವನ್ನು ಆರಿಸಿ ರಹದಾರಿ ನೆಲೆಯನ್ನಾಗಿ ಮಾಡಿ ಅದರ ಅಭಿವೃದ್ಧಿ ಸುಭದ್ರತೆಗೆ ಹೊಯ್ಸಳರು ಹೆಚ್ಚಿನ ಗಮನ ನೀಡಿದರು. ಕ್ರಿ.ಶ.೧೧೫೯ರ ಇಲ್ಲಿನ ಒಂದು ಶಾಸನ ವಿಷ್ಣುವರ್ಧನ ದೇವನ ಕಾರುಣ್ಯದಿಂದ ಈ ಉಂಡಿಗೆ ಹಾಳನ್ನೂ ಹಾಗೂ ಚಲವಜೆವನಹಳ್ಳಿ(ಚೆಲುವನಹಳ್ಳಿ)ಯನ್ನೂ ಚೆಟ್ಟಿಗಳು ಆಳುತ್ತಿದ್ದರೆಂದು ಹೇಳುತ್ತದೆ.[೧೪೧] ಗುಜರಾತಿನ ಕಡೆಯ ಜಟ್ಟಿಗಳೂ ವಿಷ್ಣುವರ್ಧನನ ಕಾಲದಲ್ಲಿ ವಲಸೆ ಬಂದು ಇಲ್ಲಿ ನೆಲಸಿದರೆಂದು ಕೆಲವು ಐತಿಹಾಸಿಕ ಆಧಾರಗಳಿಂದ ಊಹಿಸಲಾಗಿದೆ.[೧೪೨] ಇಲ್ಲಿನ ಐತಿಹ್ಯವೂ ಇದನ್ನೇ ಪೋಷಿಸುತ್ತದೆ. ಗುಜರಾತಿನ ಕಾಥೇವಾಡ ಎಂಬ ಊರಿನ ವಾಸಿಗಳಾಗಿದ್ದು ನಿಂಬಜಾದೇವಿಯ ಆರಾಧಕರಾಗಿದ್ದ ಜಟ್ಟಿಗಳು ಅಲ್ಲಿ ತಮಗೆ ಉಂಟಾದ ತೊಂದರೆಯಿಂದ ತಮ್ಮ ದೇವರೊಂದಿಗೆ ದಕ್ಷಿಣಕ್ಕೆ ವಲಸೆ ಹೊರಟರು. ವಿಷ್ಣುವರ್ಧನ ಇವರ ಶೌರ್ಯ ಪರಾಕ್ರಮಗಳನ್ನು ಗುರುತಿಸಿ ಅವರಿಗೆ ರಾಜ್ಯಕೊಟ್ಟು ಸಾಮಂತರನ್ನಾಗಿ ಮಾಡಿದನೆಂದು ಈ ಗ್ರಾಮದ ಜಟ್ಟಿ ವಂಶಕ್ಕೆ ಸೇರಿದವರು ಹೇಳುತ್ತಾರೆ. ಈ ವಲಸೆಯು ಮುನಿಜೆಟ್ಟಿಯ ನಾಯಕತ್ವದಲ್ಲಿ ನಡೆಯಿತೆಂದು ಐತಿಹ್ಯವಿದ್ದರೂ ಇಲ್ಲಿನ ಯಾವುದೇ ಶಾಸನದಲ್ಲಿ ಮುನಿ ಜಟ್ಟಿಯ ಉಲ್ಲೇಖವಿಲ್ಲ. ಮುನಿ ಜಟ್ಟಿಯು ಕಟ್ಟಿಸಿದನೆಂದು ಹೇಳುವ ನಿಂಬಜಾದೇವಿ ದೇವಾಲಯವು ೧೧೫೯ರಲ್ಲಿ ಮಲ್ಲಿ ಜೆಟ್ಟಿ ಎಂಬುವವನು ಕಟ್ಟಿಸಿದ ದೇವಾಲಯವೇ ಆಗಿರಬೇಕು.[೧೪೩] ಈ ಮಲ್ಲಿ ಜೆಟ್ಟಿಯನ್ನು ನಾಯಕ ಕೇಸರಿ ಕಲಿ ಬಲ್ಲಾಳನೆಂದು ಪ್ರಸಿದ್ಧಿ ಪಡೆದಿದ್ದನೆಂದು ಶಾಸನ ಹೇಳಿದೆ. ಈತನು ಬಲದೇವಿ ಮತ್ತು ದೇವ ಜಟ್ಟಿಯ ಮಗ. ಈ ದೇವ ಜಟ್ಟಿಯ ಪಂಚಪಾಂಡವರಂತಿದ್ದ ಐವರು ಮಕ್ಕಳಲ್ಲಿ ಮಲ್ಲಿ ಜಟ್ಟಿಯೂ ಒಬ್ಬ. ಚಂಡಹರಜೆಟ್ಟಿಯು ತಮ್ಮ ಕುಲ ವಲಯಕ್ಕೆ ಚಂದ್ರನಂತಿದ್ದ. ಸ್ವರಿ ಜೆಟ್ಟಿ, ಭೀಮಜೆಟ್ಟಿ, ದರ್ಪಿಷ್ಟ ಪ್ರತಿಮಲ್ಲ ಹವಲರ ಜೆಟ್ಟಿ ಮತ್ತು ಮಲ್ಲಿಜೆಟ್ಟಿಯರು ಸ್ವಾಮಿ ಪ್ರಸಾದ ಸಂಪನ್ನರಾಗಿ, ಗುರು, ದ್ವಿಜರಿಂದ ಆಶೀರ್ವಾದವನ್ನು ಪಡೆದು ಕೀರ್ತಿಯನ್ನು ಹೊಂದಿದವರಾಗಿದ್ದರು. ಇವರಲ್ಲಿ ಮೂವರು ತ್ರಿಮೂರ್ತಿಗಳಂತೆ ಬಿರುದಮಾರಾಯರೆನಿಸಿ ಭುಜಬಲದಿಂದ ಮೆರೆದರೆಂದೂ ಹೇಗೆ ಕೇಸರಿಗೆ ಶೌರ್ಯದಲ್ಲಿ ಕೇಸರಿಯೇ ಸಮಾನವೋ ಹಾಗೆ ಬಹುಬನ್ಧದ ಮಲ್ಲ ಯುದ್ಧ ವಿದ್ಯಾಬಲದಲ್ಲಿ ಸಾಹಸಿಗರಾದ ಮುಷ್ಟಿಕ ಚಾಣೂರಾಸುರರಿಗೆ ಸಮನಾದ ಏಕೈಕ ವ್ಯಕ್ತಿ ಕೃಷ್ಣನ ಪರಾಕ್ರಮಕ್ಕೆ ಈ ಮಲ್ಲಜೆಟ್ಟಿ ಸಮಾನನಾಗಿದ್ದನು. ಕೇಸರಿ ಬಿರುದಿನ ಮಲ್ಲಿಜೆಟ್ಟಿ ತಮ್ಮ ತಂದೆ ತಾಯಿಗಳಿಗೆ ಪರೋಕ್ಷ ವಿನಯಕ್ಕಾಗಿ ಈ ದೇವಾಲಯವನ್ನು ಕಟ್ಟಿಸಿದ್ದಾನೆ. ಇವನ ತಾಯಿ ಬಲದೇವಿಯ ಹೆಸರಿನ ಗ್ರಾಮ ಉಂಡಿಗನಾಳಿನ ಪಕ್ಕದಲ್ಲಿದ್ದು ಅಲ್ಲಿ ವಿಶೇಷವಾಗಿ ಜಟ್ಟಿ ಜನಾಂಗಕ್ಕೆ ಸೇರಿದ ಜನರು ವಾಸವಾಗಿದ್ದರು. ಆ ಗ್ರಾಮದಲ್ಲಿ ಪ್ರಾಚೀನ ಕಟ್ಟಡಗಳ

ಅವಶೇಷಗಳೂ, ಕಲ್ಯಾಣಿಗಳೂ ಆನೆ ಕರೋಟಿ, ಸುರಂಗಗಳೂ, ಅರಮನೆಯ ಅವಶೇಷಗಳಿತ್ತೆಂದು ಹಾಸನ ರಂಗಾಚೆಟ್ಟಿ ಸೋಮಸುಂದರರಂರವರು ದಾಖಲಿಸಿದ್ದಾರೆ.[೧೪೪]* ಉಂಡಿಗನಾಳಿನಲ್ಲೇ ಈ ಜಟ್ಟಿವಂಶದವರು ನಿರ್ಮಿಸಿದ ದೇವಾಲಯಗಳು ಮಂಟಪಗಳು ಉಯ್ಯಾಲೆ ಕಂಬ, ಕೋಟೆ, ಕಲ್ಯಾಣಿ, ಜಟ್ಟಿ ಬಾವಿ, ಮಲ್ಲಗಂಬಗಳು, ಚಂದ್ರಘಟ್ಟ, ಮರಿದೇವರ ಸಾಕ್ಷಿಕಟ್ಟೆ, ರಾಜಾಜ್ಞೆ ಕಂಬ, ಘೋಡೆ ಹೊಲ ಇತ್ಯಾದಿಗಳು ಇನ್ನೂ ಉಳಿದು ಬಂದಿದ್ದು, ಜಟ್ಟಿ ವಂಶದವರ ವೈಭವದ ಬದುಕಿಗೆ ಸಾಕ್ಷಿಯಾಗಿದೆ.

ಇಲ್ಲಿನ ನಿಂಬಜಾದೇವಿ ದೇವಾಲಯವು ನಿಂಬೇಶ್ವರ ದೇವಾಲಯವು ೧೧೩೯ರಲ್ಲಿ ಮಲ್ಲಿಚೆಟ್ಟಿ ಕಟ್ಟಿಸಿದಾಗ ಬಹುಷಃ ದ್ವಿಕೂಟ ದೇವಾಲಯವಾಗಿದ್ದು ಮುಂದೆ ಅದು ತ್ರಿಕೂಟವಾಗಿ ಚೆನ್ನಕೇಶವ ದೇವರ ಗರ್ಭಗುಡಿಯ ಭಾಗ ಮತ್ತು ಮುಂದಿನ ಮುಖಮಂಟಪದ ಜಗುಲಿಯ ರಾಮಾನುಜಾಚಾರ್ಯರ ವಿಗ್ರಹ ಸ್ಥಾಪನೆ ಇತ್ಯಾದಿಗಳು ನಡೆದಂತೆ ತೋರುತ್ತದೆ. ಈಗ ಚೌಡೇಶ್ವರಿ ಎಂದು ಕರೆಯುವ ಮಹಿಷಾಸುರ ಮರ್ಧಿನಿ ಮೂರ್ತಿಯನ್ನಿಟ್ಟಿರುವ ಪೀಠವು ಮೂಲತಃ ನಿಂಬಜಾದೇವಿಯ ನವಿಲಿನ ಪೀಠವಾಗಿದ್ದು ದೇವಾಲಯ ಜೀರ್ಣೋದ್ಧಾರದ ಸಂದರ್ಭದಲ್ಲಿ ಬದಲಾಯಿಸಿರುವಂತೆ ತೋರುತ್ತದೆ. ಈ ಮುಖ್ಯ ದೇವಾಲಯದ ಹಿಂಭಾಗದಲ್ಲಿರುವ ಮತ್ತೊಂದು ದೇವಾಲಯದಲ್ಲಿ ಮಹಿಷಾಸುರ ಮರ್ಧಿನಿಯ ಸಿಂಹಪೀಠದಲ್ಲಿ ನವಿಲಿನ ಮೇಲೆ ನಿಂತಿರುವ ಸುಂದರ ನಿಂಬಜಾದೇವಿಯ ಮೂರ್ತಿಯಿದೆ. ಈ ದೇವಾಲಯದ ಎರಡೂ ಪಕ್ಕಗಳಲ್ಲಿ ಕಂಬಗಳಲ್ಲಿ ಹಾಗೂ ದೇವಾಲಯ ಆವರಣದಲ್ಲಿರುವ ಮಂಟಪದ ಕಂಬಗಳಲ್ಲಿ ಜಟ್ಟಿಗಳ ಉಬ್ಬು ಶಿಲ್ಪಗಳಿವೆ. ಇಲ್ಲಿನ ಯಾವುದೇ ಶಾಸನದಲ್ಲಿ ಚೌಡೇಶ್ವರಿ ಅಥವಾ ಮಹಿಷಾಸುರಮರ್ಧಿನಿಯ ಉಲ್ಲೇಖವಿಲ್ಲ. ಕ್ರಿ.ಶ.೧೨೨೩ರಲ್ಲಿ ಕೇಶವೇಶ್ವರ ದೇವರ ದೇವದಾನ ಭೂಮಿಗಳ ಹಂಚಿಕೆ ಸ್ಥಾನಿಕರ ಕುಟುಂಬದಲ್ಲಿ ನಡೆದಿದೆ.[೧೪೫] ಕ್ರಿ.ಶ.೧೨೭೬ರ ಶಾಸನವು[೧೪೬] ರಾಮಚಂದ್ರ ಜಟ್ಟಿಯರ ಮಕ್ಕಳಾದ ಬಿಡವೆ ಜಟ್ಟಿ ಮತ್ತು ಸೊಂಡಾಚೆಟ್ಟಿಯ ಮಗ ನನ್ನ ಚೆಟ್ಟಿಗಳು ೨೫ ಕಂಬದ ಅಳತೆಯ ಬಾಳೆಯ ತೋಟವೊಂದನ್ನು ಕ್ರಯಮಾಡಿ ನಿಂಬಜಾದೇವಿಯ ಅಮೃತ ಪಡಿಗೆ ಬಿಟ್ಟಿದ್ದನ್ನು ಹೇಳಿದೆ. ಇದೇ ಶಾಸನ ಬಿವಡೆ ಜಟ್ಟಿಯನ್ನು ಮಲ್ಲಪ್ಪ ಜಟ್ಟಿಯನ್ನು 'ಚಲ ಬಲುಹು ಸತ್ಯ ಸಂನ್ನಹ ಚಲುವು ಪರಾಂಗನೆಗೆರಗದ ಉನ್ನತಿಮಂತಂ ಕುಲರಾಮಚಂದ್ರತನಯಂ ಬಿವಡನುಂ ಮಲ್ಲಪಜಟ್ಟನು ಜಗದೊಳು" ಎಂದು ಹೊಗಳಿದೆ. ಜೊತೆಗೆ ತನ್ನ ಬರಿಗೈಯಲ್ಲೇ ಭದ್ರಗಜದ ಸೊಂಡಿಲಲ್ಲಾಡುವ ರಾಯಜೆಟ್ಟಿ ಅವಘಡ ಭೀಮ, ಮಾರಿಯ ಮರಿಯೋ' ಎಂಬ ಉದ್ಗಾರ ಮಾಡಿದ್ದಾನೆ. ಕವಿ. ಈ ರಾಯ ಜೆಟ್ಟಿ ಮಧಿಸಿದ ಆನೆಯೊಂದನ್ನು ಮುರಿದು ಅರಸನಿಂದ ಆನೆಯನ್ನೇ ಬಹುಮಾನವಾಗಿ ಪಡೆದ

* ಆದರೆ ಈಗ ಪೂರ್ಣವಾಗಿ ಬೇಚಿರಾಕ್ ಆಗಿ ಸಾಗುವಳಿಗೆ ಹೊಲಗಳನ್ನು ಮಾಡಿಕೊಂಡಿರುವುದರಿಂದ ಯಾವ ಅವಶೇಷಗಳೂ ಉಳಿದಿಲ್ಲ.

ಐತಿಹ್ಯವೊಂದಿದೆ. ಅದಕ್ಕೆ ಪೂರಕವಾದ ಉಬ್ಬುಶಿಲ್ಪವನ್ನೊಳಗೊಂಡ ವೀರಗಂಬವೊಂದು ಇಲ್ಲಿನ ದೇವಾಲಯದ ಆವರಣದಲ್ಲಿದೆ.

ಈ ದೇವಾಲಯದ ಆವರಣದಲ್ಲಿ ಮಲ್ಲಿಜೆಟ್ಟಿಯ ಕಾಲದ ಒಂದು ಹಂದಿಬೇಟೆಯ ವೀರಗಲ್ಲಿದೆ.[೧೪೭] ಈ ಜೆಟ್ಟಿಗಳ ಪರಾಕ್ರಮ ನಿಷ್ಠೆಗಳಿಗೆ ಮೂಕ ಸಾಕ್ಷಿಗಳಾಗಿ ಇಡೀ ಉಂಡಿಗ ನಾಳಿನ ತುಂಬ ತುಂಬಿಕೊಂಡಿರುವ ಮಹಾಸತಿ ಕಲ್ಲುಗಳು, ವೀರಮಾಸ್ತಿ ಕಲ್ಲುಗಳನ್ನು ನೋಡಬಹುದು. ಹುಲಿಯ ಬಾಯಿಗೆ ಸಿಕ್ಕಿದ ಹೆಣ್ಣು ಮಗಳೊಬ್ಬಳನ್ನು ಉಳಿಸಿ ಹುಲಿಯೊಡನೆ ಹೋರಾಡಿ ಬೊಮ್ಮಜೆಟ್ಟಿಯ ಅಣ್ಣನು ಮಡಿದಾಗ ಅವನ ಮಡದಿ ಕಿಚ್ಚನ್ನು ಹಾಯ್ದ ಶಾಸನವಿದೆ. ಕೆಳದಿ ಅರಸರ ಕಾಲದಲ್ಲಿ ಮೈಸೂರು ಒಡೆಯರಿಗೆ ನಿಷ್ಠರಾಗಿದ್ದ ಈ ಉಂಡಿಗನಾಳಿನ ಸಾಮಂತ ಜೆಟ್ಟಿಗಳ ಮೇಲೆ ಕೆಳದಿ ರಾಣಿ ಚೆನ್ನಮ್ಮಾಜಿ ನವರಾತ್ರಿಯ ಸಂಭ್ರಮದಲ್ಲಿದ್ದ ಜಟ್ಟಿಗಳನ್ನು ಹಠಾತ್ತಾಗಿ ಮುತ್ತಿದಾಗ ಕೆಲವರು ವೀರಾವೇಶದಿಂದ ಹೋರಾಡಿದರೆ ಮತ್ತೆ ಕೆಲವರು ಸೆರೆಸಿಕ್ಕಲು ಒಪ್ಪದೆ ಮಡದಿ ಮಕ್ಕಳೊಂದಿಗೆ ಕೆರೆಗೆ ಹಾರಿಕೊಂಡರೆಂಬ ಪ್ರತೀತಿಯಿದೆ. ಉಂಡಿಗನಾಳಿನ ಅನೇಕ ಜಟ್ಟಿಗಳು ಮೈಸೂರಿನ ಅರಮನೆಯ ಖಾಸಾ ಊಳಿಗಕ್ಕೆ ಸೇರಿಕೊಂಡರೆಂದೂ, ವಡೆಯರು ಜಟ್ಟಿ ಕಾಳಗ ಮಲ್ಲಯುದ್ಧಗಳಿಗೆ ವಿಶೇಷ ಪ್ರೋತ್ಸಾಹ ನೀಡುತ್ತಿದ್ದುದರಿಂದ ಆಶ್ರಯವನ್ನು ಬಯಸಿ ಜಟ್ಟಿ ಕುಲದವರು ಮೈಸೂರಿಗೆ ವಲಸೆಯಾದರೆಂದು ಸ್ಥಳೀಯರು ಹೇಳುತ್ತಾರೆ. ಮೈಸೂರು ಮತ್ತು ಉಂಡಿಗನಾಳಿನ ಜಟ್ಟಿಗಳ ಸಂಬಂಧ ಪೂರಕ ಸಾಕ್ಷಿಯಾಗಿ ಕೃಷ್ಣರಾಜ ವಡೆಯರ ಕಾಲದಲ್ಲಿ ಇಲ್ಲಿನ ನಿಂಬಜಾದೇವಿ ಮತ್ತು ಚಾಮುಂಡೇಶ್ವರಿಗೆ ವಡೆಯರ ಊಳಿಗದಲ್ಲಿದ್ದ ಕೋನಾ ಜೆಟ್ಟಿಯರ ಮಗ ವೆಂಕಾಜೆಟ್ಟಿಯು ಪ್ರಭಾವಳಿಗಳನ್ನು ಮಾಡಿಸಿಕೊಟ್ಟು ಶಾಸನ ಬರೆಸಿದ್ದಾನೆ.[೧೪೮]

ನಿಂಬಜಾದೇವಿಯು ಜಟ್ಟಿಗಳ ಕುಲದೇವತೆ, ತ್ರಿಮೂರ್ತಿಗಳ ಶಕ್ತಿಯನ್ನು ತನ್ನಲ್ಲಡಗಿಸಿಕೊಂಡ ಈ ದೇವತೆಯನ್ನು ರಣದೇವತೆಯೆಂದು ಕರೆಯುತ್ತಾರೆ. ಷಟ್ಭುಜೆಯಾದ ಇವಳು ಅಕ್ಷಮಾಲೆ, ಕುಂಭ, ತ್ರಿಶೂಲ ಡಮರುಗ, ಶಂಖ ಚಕ್ರಗಳನ್ನು ಧರಿಸಿ ಮಯೂರದ ಮೇಲೆ ನಿಂತಿರುವ ಸುಂದರ ಶಿಲ್ಪವನ್ನು ಇಲ್ಲಿ ನೋಡಬಹುದು. ಈ ಜಟ್ಟಿ ವಂಶದವರು ವೈಷ್ಣವ ಧರ್ಮದಿಂದ ಪ್ರಭಾವಿತರಾಗಿ ಆ ಧರ್ಮವನ್ನು ಸ್ವೀಕರಿಸಿರುವುದಕ್ಕೆ ಇಲ್ಲಿರುವ ಚೆನ್ನಕೇಶವ ಮತ್ತು ಮುಖಮಂಟಪದ ಜಗಲಿಯಲ್ಲಿ ರಾಮಾನುಜಾಚಾರ್ಯರ ವಿಗ್ರಹವಿರುವುದನ್ನು ನೋಡಬಹುದು. ಇಡೀ ಈ ಪ್ರದೇಶದಲ್ಲಿ ಇಷ್ಟು ದೊಡ್ಡದಾದ ಸುಮಾರು ಮೂರು ಅಡಿ ಎತ್ತರ ಎರಡೂವರೆ ಅಡಿ ಗಾತ್ರದ ವಿಗ್ರಹ ಮತ್ತೆಲ್ಲೂ ಕಂಡುಬಂದಿಲ್ಲ. ಆದರೆ ಈ ಶಿಲ್ಪವನ್ನು ಜಟ್ಟಿಗಳು ನವನೂಲು ಜಟ್ಟಪ್ಪನೆಂದು ಕರೆಯುತ್ತಾರೆ. ಮತ್ತು ಯಾವುದೇ ಶುಭಕಾರ್ಯಕ್ಕೆ ಮೊದಲು ಬಂದು ಈ ಜಟ್ಟಪ್ಪನಿಗೆ ಬಲಿ ನೀಡಿ ಪೂಜಿಸುತ್ತಾರೆ. ಈ ಶಿಲಾ ಪ್ರತಿಮೆಯು ನವನೂಲು ಕೊಂಡಾಜೆಟ್ಟಿ' ಎಂಬ ಜಟ್ಟಿ ಸಮಾಜದ ಪ್ರಸಿದ್ಧ ವ್ಯಕ್ತಿಯೆಂದು ಅವನು ಉಂಡಿಗನಾಳಿಗೆ ವಲಸೆ ಬಂದ ಮುನಿಜಟ್ಟಿಯ ಸಮಕಾಲೀನನೆಂದೂ, ಆತ ಜಟ್ಟಿಗಳ ಏಳಿಗೆಗಾಗಿ ದುಡಿದವನೆಂದೂ, ಜಟ್ಟಿ ಸಮಾಜದಲ್ಲಿದ್ದ ವರದಕ್ಷಿಣೆ

ಮುಂತಾದ ಅನಿಷ್ಟ ಪದ್ಧತಿಯನ್ನು ಇವನು ಸಮಾಜ ಸುಧಾರಣೆಯ ಮೂಲಕ ತೊಡೆದು ಹಾಕಿದನೆಂದು ಹೇಳುತ್ತಾರೆ. ಇವನು ಮಾಡಿದ ಮಹೋಪಕಾರಕ್ಕೆ ಕೃತಜ್ಞತೆಯನ್ನು ವ್ಯಕ್ತಪಡಿಸಲು ಮದುವೆಯ ಕಾಲದಲ್ಲಿ ಪ್ರಥಮ ತಾಂಬೂಲವನ್ನು ಈತನ ಹೆಸರಿನಲ್ಲಿ ಕೊಡತಕ್ಕ ಪದ್ಧತಿ ಈಗಲೂ ಜಟ್ಟಿಗಳಲ್ಲಿ ರೂಢಿಯಲ್ಲಿದೆ. ಅವನು ಮಾಡಿದ ಸುಧಾರಣೆಯ ಪ್ರಕಾರ ವಿವಾಹ ಕಾಲದಲ್ಲಿ ಹೆಣ್ಣಿನ ಕಡೆಯವರು ವರನಿಗೆ ವರದಕ್ಷಿಣೆಯನ್ನು ಕೊಡುವ ಬದಲು 'ನವನೂಲು' ಎಂಬ ದಾರದ ಸರವನ್ನು ಕೊಡುತ್ತಾರೆ. ಈ ನೂಲಿನ ಸರವನ್ನು ವರನು ೧೦೮ ಗದ್ಯಾಣಗಳೆಂದು ಭಾವಿಸಿ ಕನ್ಯೆಯನ್ನು ವಿವಾಹವಾಗುತ್ತಾನೆ.[೧೪೯] ಬಹುಷಃ ಈ ನವನೂಲು ಕೊಂಡಾಜೆಟ್ಟಿ ವಿಷ್ಣುವರ್ಧನನ ಕಾಲದವನೆಂಬ ಪ್ರತೀತಿ ಇರುವುದರಿಂದ ಬಹುಷ ಈತನು ರಾಮಾನುಜಾ ಚಾರ್ಯರ ಪ್ರಭಾವಕ್ಕೆ ಒಳಗಾದ ವ್ಯಕ್ತಿಯಾಗಿದ್ದು, ಆತ ವೈಷ್ಣವ ದೀಕ್ಷೆ ಸ್ವೀಕರಿಸಿ ನವನೂಲನ್ನು ಧರಿಸಿರುವ (ಜನಿವಾರ) ಸಾಧ್ಯತೆಯಿದೆ. ಜಟ್ಟಿಗಳಲ್ಲಿ ವೈಷ್ಣವ ನಿಷ್ಠೆ ಈಗಲೂ ವಿಶೇಷವಾಗಿ ಕಾಣುತ್ತದೆ. ಅನೇಕರು ಸಂಧ್ಯಾವಂದನೆ ಮುಂತಾದ ಬ್ರಾಹ್ಮಣ ಆಚಾರಗಳನ್ನು ಅನುಸರಿಸುತ್ತಿದ್ದರೆಂದು ತಿಳಿದುಬರುವುದರಿಂದ, ಇದು ರಾಮಾನುಜರ ಕಾಲದಲ್ಲಾದ ಕೆಳಜಾತಿಗಳ ಬ್ರಾಹ್ಮಣೀಕರಣ (ಸಂಸ್ಕೃತೀಕರಣ) ಪ್ರಕ್ರಿಯೆಯನ್ನೇ ಸೂಚಿಸುವಂತೆ ತೋರುತ್ತದೆ. ರಾಮಾನುಜರ ಪ್ರಭಾವದಿಂದ ಕೊಂಡಾಜೆಟ್ಟಿಯ ಮುಖಾಂತರ ಜಟ್ಟಿ ಸಮಾಜದಲ್ಲುಂಟಾದ ಈ ವಿಶಿಷ್ಟ ಸಂಚಲನ ಆ ಸಮಾಜದ ಜನಮನಸ್ಸಿನ ಸ್ಮೃತಿಯಲ್ಲಿ ಶಾಶ್ವತವಾಗಿ ಉಳಿದುದಲ್ಲದೆ, ಆ ಕೆಲವು ಆಚರಣೆಗಳು ಇಂದು ಸಾಂಕೇತಿಕವಾಗಿ ಉಳಿದು ಬಂದಂತೆ ತೋರುತ್ತದೆ. ಇವರು ತಮ್ಮನ್ನು ಕ್ಷತ್ರಿಯರೆಂದು ಕರೆದುಕೊಂಡರೂ ಶಾಂಡಿಲ್ಯ, ಅತ್ರೇಯ, ಭಾರದ್ವಾಜ ಮುಂತಾದ ದಶಗೋತ್ರದವರೆಂದು ಹೇಳುತ್ತಾರೆ.[೧೫೦] ಶ್ರೀವೈಷ್ಣವ ಚಿಹ್ನೆಯಾದ ತ್ರಿನಾಮವನ್ನು ಹಣೆಯಲ್ಲಿ ಧರಿಸುತ್ತಾರೆ. ಮಹಿಳೆಯರು ರಜಪೂತರಂತೆ ಘೋಷ ಪದ್ಧತಿ ಆಚರಿಸುತ್ತಾರೆ. ನಿಂಬಜಾದೇವಿಯ ಜಯಂತಿಯನ್ನು ಪ್ರತಿವರ್ಷ ಶ್ರಾವಣ ಶುದ್ಧ ಚತುರ್ದರ್ಶಿಯ ದಿವಸ ಗರಡಿಯ ಮಟ್ಟಿಯಲ್ಲಿರುವ ಕೆಮ್ಮಣ್ಣನ್ನು ಗುಡ್ಡೆ ಮಾಡಿ ತುದಿಯಲ್ಲಿ ಶಂಕ ಚಕ್ರಗಳನ್ನಿಟ್ಟು ಪೂಜಿಸುತ್ತಾರೆ. ಇದನ್ನೆಲ್ಲ ಗಮನಿಸಿದಾಗ ವಲಸಿಗರಾದ ಈ ಜಟ್ಟಿ ಕುಲವು ತಮ್ಮ ಮೂಲ ಸಂಸ್ಕೃತಿ ಸಂಪ್ರದಾಯಗಳೊಂದಿಗೆ ತಾವು ನೆಲೆನಿಂತ ಪ್ರದೇಶದ ಧಾರ್ಮಿಕ ಸಾಮಾಜಿಕ ಸಂಸ್ಕೃತಿಗಳ ಪ್ರಭಾವಕ್ಕೆ ಒಳಗಾಗಿ ಅನೇಕ ಹೊಸ ಆಚರಣೆ ಪದ್ಧತಿಗಳನ್ನು ರೂಢಿಸಿಕೊಂಡಂತೆ ತೋರುತ್ತದೆ. ಕಾಲಾಂತರದಲ್ಲಿ ಧಾರ್ಮಿಕ ಸಾಮಾಜಿಕ ಸುಧಾರಕರಾದ ರಾಮಾನುಜಾಚಾರ್ಯ ಮತ್ತು ನವನೂಲು ಕೊಂಡಾಜೆಟ್ಟಿಯ ನಡುವಿನ ವ್ಯತ್ಯಾಸ ವಿಸ್ಮೃತಿಗೊಂಡು ಏಕವೆಕ್ತಿಯಂತೆ ಬೆಸೆದುಕೊಂಡು ಆಚರಣೆಯಾಗಿ ಅವರ ಸಾಂಸ್ಕೃತಿಕ ಲೋಕದಲ್ಲಿ ಉಳಿದುಕೊಂಡುಬಂದಿದೆ ಎಂದು ಹೇಳಬಹುದು. ಹಾಗಾಗಿ ರಾಮಾನುಜಾಚಾರ್ಯರ ಪ್ರತಿಮೆ ನವನೂಲು ಜಟ್ಟಪ್ಪನಾಗಿ ಬಲಿ ಪೂಜೆ ನಡೆಯುತ್ತಿದೆ!

ಆಳರಸರ ಪ್ರೋತ್ಸಾಹ ಮನ್ನಣೆಯಿಂದ ವೈಭವದಲ್ಲಿದ್ದ ಈ ಸಮಾಜ ಇಂದು ತಮ್ಮ ಕುಲಕಲೆಯನ್ನು ಬಿಟ್ಟುಕೊಡುತ್ತಿದೆ. ಅರಸೀಕೆರೆಯ ಕರಿಯಮ್ಮನ ಗರಡಿಯಲ್ಲಿ ಇಂದಿಗೂ ಕೆಲವು

ಹೊಯ್ಸಳರ ಕಾಲದ ಜಟ್ಟಿಗಳು ಸಾಧನೆಗೆ ಬಳಸುತ್ತಿದ್ದ ಬಳಪಿನ ಕಲ್ಲಿನ ಗರದನ್ ಲೋಡ್ (ಕುತ್ತಿಗೆಯ ಸುತ್ತ ಬಳೆಯಂತೆ ಹಾಕಿಕೊಳ್ಳುವ ಸಾಧನ ಸುಮಾರು ೨೩ ಕೆ.ಜಿ.ತೂಕ) ಮತ್ತು ಸಂಗ್ರಾಣಿ (ಎರಡೂ ಕೈಗಳಲ್ಲಿ ಹಿಡಿದು ಸಾಮುಮಾಡುವ ಮಧ್ಯೆ ಹಿಡಿಕೆಯುಳ್ಳ ಕೈಗಲ್ಲು ಸುಮಾರು ೧೦ ಕೆ.ಜಿ.ತೂಕ)ಯನ್ನು ನೋಡಬಹುದು. ಒಟ್ಟಿನಲ್ಲಿ ವಜ್ರ ಕಾಯರಾಗಬಯಸುತ್ತಿದ್ದ ಆಳರಸರು, ದಂಡನಾಯಕರು ಸೈನಿಕರಿಂದ ಗರಡಿಯ ಸಾಧನೆಗೆ ಹೆಚ್ಚು ಬೇಡಿಕೆ ಪ್ರೋತ್ಸಾಹ ಇರುತ್ತಿತ್ತು. ನುರಿತ ಜಟ್ಟಿಗಳಿಗೆ ಬಲಿಷ್ಠ ಮಲ್ಲರಿಗೆ ಸೈನ್ಯದಲ್ಲಿ ಉತ್ತಮ ಸ್ಥಾನ ದೊರೆಯುತ್ತಿತ್ತು. ಅಲ್ಲದೆ ಈ ಜಟ್ಟಿಗಳು ಮೈಮೇಟಿಗಳಾಗಿ ತೈಲಲೇಪನ, ಅಸ್ಥಿ ಚಿಕಿತ್ಸಕರೂ ಆಗಿರುತ್ತಿದ್ದು, ಆರೋಗ್ಯಪೂರ್ಣ ಪುಷ್ಠಿದಾಯಕ ತೈಲ ಹಾಗೂ ಪಾನೀಯಗಳ ತಯಾರಿಕೆಯಲ್ಲಿ ನಿಪುಣರೂ, ಗಿಡಮೂಲಿಕೆಗಳ ಔಷಧೀಯ ಗುಣಗಳನ್ನು ಅರಿತವರೂ ಆಗಿದ್ದು, ಉತ್ತಮ ಶೌರ್ಯ, ಶೌಚಗಳಿಂದ ಸಮಾಜದಲ್ಲಿ ಗೌರವಕ್ಕೆ ಪಾತ್ರರಾಗುತ್ತಿದ್ದರೆಂದು ತಿಳಿದುಬರುತ್ತದೆ.[೧೫೧]

ಉಂಡಿಗನಾಳಿನ ಶಾಸನಗಳು ಮತ್ತು ಐತಿಹ್ಯಗಳ ಸಹಾಯದಿಂದ ಸುಮಾರು ೧೯ ಜಟ್ಟಿಗಳನ್ನು ಬೇರೆ ಬೇರೆ ಕಾಲಗಳಲ್ಲಿ ಗುರುತಿಸಬಹುದಾದರೂ ಕಾಲಕ್ರಮದಲ್ಲಿ ಅವರ ವಂಶಾವಳಿಯನ್ನು ನೀಡುವುದು ಸಾಧ್ಯವಾಗುವುದಿಲ್ಲ.[೧೫೨]

೧. ಮುನಿಜಟ್ಟಿ ಮತ್ತು ನವನೂಲು ಕೊಂಡಾಜೆಟ್ಟಿ (ವಿಷ್ಣುವರ್ಧನನ ಸಮಕಾಲೀನರೆಂದು ಪ್ರತೀತಿಯಿದೆ. ಇವರ ಶಾಸನಗಳಿಲ್ಲ)

೨. ದೇವಜಟ್ಟಿ + ಬಲದೇವಿ (ಕ್ರಿ.ಶ.೧೧೩೯-ಶಾ.ಸಂ.೨೪೬)

೩. ಚಂಡಹರಜೆಟ್ಟಿ (ಚಂದ್ರಹರಜೆಟ್ಟಿ) ಭೀಮಜೆಟ್ಟಿ ಹವಲರಜೆಟ್ಟಿ ಸ್ವರಿಜೆಟ್ಟಿ ಮಲ್ಲಿಜೆಟ್ಟಿ

೪. ಜಟ್ಟಿ ಚವುಂಡ (ಕ್ರಿ.ಶ.೧೨೨೩-ಶಾ.ಸಂಖ್ಯೆ ೨೪೭)

೫. ರಾಮಚಂದ್ರಜಟ್ಟಿ          ಸೋಂಡಾಜೆಟ್ಟಿ (ಕ್ರಿ.ಶ.೧೨೭೨)

೬. ಬಿವಡೆಜಟ್ಟಿ ಮಲ್ಲಪ್ಪಜೆಟ್ಟಿ ರಾಯಜೆಟ್ಟಿ          ನನ್ನಜೆಟ್ಟಿ.

೭. ಬೊಮ್ಮಜೆಟ್ಟಿ ಮತ್ತು ಅವನ ಹಿರಿಯ ಸೋದರ (ಸು.೧೪ನೇ ಶತಮಾನ - ಶಾ.ಸಂ.೨೫೦)

೮. ಮಯಿಜಟ್ಟಿ (೧೪ನೇ ಶತಮಾನ)

೯. ಕೋನಾಜೆಟ್ಟಿ (೧೮ನೇ ಶತಮಾನ)

೧೦. ವೆಂಕಾಜೆಟ್ಟಿ (ಕೃಷ್ಣರಾಜ ಒಡೆಯರ ಕಾಲ ಸು.೧೮ನೇ ಶತಮಾನ)

### ೪.೨೧.೪. ವಸುಧೈಕ ಬಾಂಧವ ರೇಚರಸ

ವಸುಧೈಕ ಬಾಂಧವನೆಂದೇ ಪ್ರಸಿದ್ಧನಾಗಿದ್ದ ರೇಚರಸನು ಕಲಚುರಿ ಬಿಜ್ಜಳ ಮತ್ತು ಅವನ ಮಕ್ಕಳಿಗೆ ಆಧಾರಸ್ತಂಭವೆನಿಸಿದ್ದ ಅತ್ಯಂತ ಪರಾಕ್ರಮಿಯಾದ ದಂಡನಾಥನಾಗಿದ್ದ. ಬಿಜ್ಜಳನಿಗೆ ಸಪ್ತಾಂಗ ಸಂಪತ್ತಿಯನ್ನು ಕ್ರಮದಿಂದ ಪಡೆದುಕೊಟ್ಟವನು. ಈತನು ವಾಜಿ ವಂಶೋದ್ಭವನಾಗಿದ್ದು, ಲಕ್ಕುಂಡಿಯಲ್ಲಿ ವಸುಧೈಕ ಬಾಂದವ ಜಿನಾಲಯವನ್ನು ಕಟ್ಟಿಸಿರುವನು.[೧೫೩] ಹೊಯ್ಸಳ ಇಮ್ಮಡಿ ವೀರಬಲ್ಲಾಳನು ಕಲಚೂರಿಗಳನ್ನು ಗೆದ್ದ ಮೇಲೆ ರೇಚರಸನ ಮುತ್ಸದ್ದಿತನವನ್ನು ಪರಾಕ್ರಮವನ್ನು ಗಮನಿಸಿ ಅವನಿಗೆ ಹೊಯ್ಸಳನಾಡಿಗೆ ಆಹ್ವಾನಿಸಿ ಮಂತ್ರಿ ಪದವಿಯನ್ನಿತ್ತು ಗೌರವಿಸಿದ್ದಾನೆ. ಈ ಪ್ರೋತ್ಸಾಹ ರೇಚರಸನು ವಲಸೆಗೊಳ್ಳಲು ಪ್ರೇರಣೆ ಎನ್ನಬಹುದು.

ಅರಸೀಕೆರೆಯ ಕ್ರಿ.ಶ.೧೧೭೪ರ ಶಾಸನ[೧೫೪] ಇವನನ್ನು ಸನ್ಮಂತ್ರಿತ್ವವನ್ನು ಪಡೆದವನು ಜೀಯಾ ಎಂದು ಶರಣಾಗಿ ಬಂದವರನ್ನು ಒಲವಿನಿಂದ ಕಾಣುವ, ಚಲದಿಂದ ಎದುರಾದವರನ್ನು ಇಕ್ಕಿ ಮೆಟ್ಟಿ ಸತ್ಕೀರ್ತಿಯನ್ನು ಪಡೆಯುವವನೂ ಸಾಹಿತ್ಯ ವಿದ್ಯಾಧರನೂ ಎಂದು ವರ್ಣಿಸಿದೆ. ಅರಸೀಕೆರೆಯ ಇತರ ರಾಜ್ಯಾದ್ಯಕ್ಷದ ಹೆಗ್ಗಡೆಗಳೊಂದಿಗೆ ಹಿರೇಕಲ್ಲು ಬೆಟ್ಟದ ಅರೆಯ ಶಂಕರೇಶ್ವರನಿಗೆ ಇವನು ದಾನಬಿಟ್ಟಿದ್ದಾನೆ. ೧೧೭೪ರಿಂದ ೧೨೨೦ರವರೆಗೆ ಜಯಗೊಂಡ ಪುರವಾದ ಭಂಡಾರವಾಡದ ರಾಜಧಾನಿ ಅರಸೀಕೆರೆಯಲ್ಲಿ ಮಂತ್ರಿಯಾಗಿ ಇಮ್ಮಡಿ ಬಲ್ಲಾಳನ ಆಳ್ವಿಕೆಯ ಕಾಲಾವಧಿಯ ಉದ್ದಕ್ಕೂ ಸೇವೆ ಸಲ್ಲಿಸಿದ್ದಾನೆ. ಕ್ರಿ.ಶ.೧೨೯ರಲ್ಲಿ ಇವನು ಮಡದಿ ಗೌರಾಂಬಿಕೆಯ ನೋಂಪಿಯ ಉದ್ಯಾಪನೆ ನಿಮಿತ್ತವಾಗಿ ಜಿನ ಬಸದಿ ಮಾಡಿಸಿದ್ದಾನೆ. ಹನ್ನೆರಡು ವರ್ಷ ವಿಶೇಷವಾದ ವ್ರತ ದೀಕ್ಷೆಯನ್ನು ಹಿಡಿದಿದ್ದ ಸಾಗರಣಂದಿ ಸಿದ್ಧಾಂತ ದೇವರು ಇವನಿಂದ ಸಹಸ್ರ ಕೂಟ ಜಿನಾಲಯವನ್ನು ನಿರ್ಮಾಣ ಮಾಡಿಸಿ ತಮ್ಮ ವ್ರತವನ್ನು ಪರಿಪೂರ್ಣಗೊಳಿಸಿದರೆಂದು ಮತ್ತೊಂದು ಶಾಸನ ಹೇಳಿದೆ.[೧೫೫] ಈತ ಸಹಸ್ರ ಕೂಟ ಜಿನಬಿಂಬವನ್ನು ಮೊದಲು ಪ್ರತಿಷ್ಠೆ ಮಾಡಿಸುತ್ತಾನೆ. ಈ ಬಸದಿಗೆ ಅರಸೀಕೆರೆಯ ಭವ್ಯನಖರರು ಸಹಸ್ರಕೂಟ ಜಿನಾಲಯವನ್ನು ಎತ್ತಿಸಿ ಏಳ್ಕೋಟಿ ಜಿನಾಲಯವೆಂದು ಕರೆದು ದಾನಗಳನ್ನು ಬಿಟ್ಟಿದ್ದಾರೆ. ಇವನು ನಾಗಾಂಬಿಕೆಯ ಸೂನು ಎಂದೂ ಗೌರಿಸಖನೆಂದೂ ಶಿಕಾರಿಪುರ ಶಾಸನ[೧೫೬] ಹೇಳಿದೆ. 'ಒಸೆದವರಿವರೆನ್ನದೆ ಸಂತಸಮಪ್ಪಿನಮಿತ್ತು'' ಇವನು ವಸುಧೈಕಬಾಂಧವನೆಂಬ ಬಿರುದನ್ನು ಪಡೆದನಂತೆ.[೧೫೭] ರೇಚಣನ ಹಿರಿಮೆಯನ್ನು ಒಂದು ಶಾಸನ ಸುಂದರವಾಗಿ ಹೇಳಿದೆ.[೧೫೮]

'ವದನಂ ವಾಗ್ವನಿತಾ ವಿಲಾಸ ಸದನಂ ವಕ್ಷಂ ರಮಾನರ್ತಕೀ
ವಿಧಿತಾನರ್ತ್ತವುದಾರವರ್ಥಿ ಜನತಾ ಸಂತರ್ಪ್ಪಣಂ ಕೀರ್ತಿಕೌ
ಮುದಿ ಜೈನಾರ್ಣವ ವರ್ಧನಂ ಗುಣಗಣ ಭೂ ಭೂಷಣಂ ಮೂರ್ತಿ ಚಾ
ರುದಯಾನ್ವಿತಮೆನಲ್ಕೆ ರೇಚಣ ಚಮೂಪಂ ಪೆರ್ಮೆಯಂ ತಾಳ್ದಿದಂ''

ಈ ಪದ್ಯವು ಅವನ ವಿದ್ಯೆ ಸಂಪತ್ತು ಉದಾರ ಗುಣ ಜೈನಧರ್ಮ ಪ್ರಿಯತೆಗಳನ್ನು ಎತ್ತಿ ತೋರುತ್ತದೆ. ಇವನು ಚನ್ನರಾಯಪಟ್ಟಣ ತಾಲ್ಲೂಕಿನ ಜಿನನಾಥಪುರದಲ್ಲಿ ಶಾಂತಿನಾಥ ಬಸದಿಯನ್ನು ಜಿನನ ಬಿಂಬವನ್ನು ಮಾಡಿಸಿದ್ದಾನೆ.[೧೫೮] ಜೈನ ಧರ್ಮವು ಹಿನ್ನಡೆಯನ್ನನುಭವಿಸುತ್ತಿದ್ದ ಕಾಲದಲ್ಲಿ ಆ ಧರ್ಮದ ಏಳಿಗೆಗೆ ರೇಚರಸನ ಕಾಣಿಕೆ ದೊಡ್ಡದು. ಇವನ ಘನ ವ್ಯಕ್ತಿತ್ವ ಅನೇಕ ಶಾಸನಗಳಲ್ಲಿ ಅರಳಿದೆ.[೧೫೯] ಆಶ್ರಿತ ಕವಿ ಆಚಣ್ಣ ವರ್ಧಮಾನ ಪುರಾಣದಲ್ಲಿ ಪ್ರೀತಿಯಿಂದ ಇವನನ್ನು ಹೊಗಳಿದ್ದಾನೆ.

### ೪.೨.೨. ಧಾರ್ಮಿಕ ಮತ್ತು ಸಾಮಾಜಿಕ ವೃತ್ತಿ ಸಂಬಂಧಿತ ವಲಸೆಗಳು

ರಾಜಕೀಯ ಪ್ರೇರಿತ ವಲಸೆಗಳಷ್ಟೇ ಅಲ್ಲದೆ ಈ ಪ್ರದೇಶಕ್ಕೆ ಧಾರ್ಮಿಕ ಸಾಮಾಜಿಕ ವೃತ್ತಿ ಸಂಬಂಧಿತವಾದ ವಲಸೆಗಳು ನಡೆದಿವೆ. ಜೈನ, ಶೈವ, ವೈಷ್ಣವ ಧಾರ್ಮಿಕರು ಮುನಿಗಳು ವಲಸೆ ಬಂದು ಇಲ್ಲಿ ಆಶ್ರಯ ಪಡೆದು ಉತ್ತಮ ಸ್ಥಾನಮಾನಗಳನ್ನು ಗಳಿಸಿದ್ದಾರೆ.

### ೪.೨.೨.೧. ಬ್ರಾಹ್ಮಣರ ವಲಸೆ

ಭಾರತದಲ್ಲಿ ಗುಪ್ತರ ಕಾಲದಲ್ಲಿ ಬ್ರಾಹ್ಮಣ್ಯಕ್ಕೆ ವಿಶೇಷ ಪ್ರಾಶಸ್ತ್ಯ ದೊರೆತು ಬ್ರಾಹ್ಮಣ ವಿದ್ವಾಂಸರ ಬದುಕಿನಲ್ಲಿ ಒಂದು ಸಂಚಲನವನ್ನು ತಂದಿತು. ಕ್ರಿ.ಶ.೫-೬ನೇ ಶತಮಾನದಿಂದಲೇ ಉತ್ತರ ಭಾರತದಲ್ಲಿ ಬ್ರಾಹ್ಮಣರ ವಲಸೆಗಳಾದುದನ್ನು ಶಾಸನಾಧಾರಗಳಿಂದ ಗುರುತಿಸಲಾಗಿದೆ. ಒರಿಸ್ಸ ಗುಜರಾತಿನ ಭಾಗಗಳಲ್ಲಿ ಈ ವಲಸೆಯ ಪ್ರಕ್ರಿಯೆ ಹೆಚ್ಚಾಗಿ ಕಾಣಿಸಿಕೊಂಡಿತು.[೧೬೦] ಗುಪ್ತರ ಸಮಕಾಲೀನರಾದ ಕರ್ನಾಟಕದ ಕದಂಬರು ಅಗ್ರಹಾರಗಳನ್ನು ನಿರ್ಮಿಸಿರುವರು. ಮಯೂರಶರ್ಮನು ತಾಳಗುಂದಕ್ಕೆ ಅಹಿಛತ್ರದಿಂದ ಅನೇಕ ಬ್ರಾಹ್ಮಣರನ್ನು ಕರೆತಂದನೆಂಬ ವಿಚಾರವಿದೆ.[೧೬೧] ದಕ್ಷಿಣ ಪಥೇಶ್ವರನೆಂದು ಕರೆಸಿಕೊಂಡ ಇಮ್ಮಡಿ ಪುಲಿಕೇಶಿ ಮತ್ತು ನಂತರದ ರಾಷ್ಟ್ರಕೂಟ ಅರಸರ ಕಾಲದಲ್ಲಿ ಡೆಕನ್ನಿನ ಹೆಚ್ಚಿನ ಪ್ರದೇಶ, ಗುಜರಾತ್ ಇವರ ಆಳ್ವಿಕೆಗೆ ಒಳಪಟ್ಟಾಗ ಆ ಭಾಗಗಳಿಂದ ಕರ್ನಾಟಕಕ್ಕೆ ಬ್ರಾಹ್ಮಣರ ವಲಸೆ ವಿಶೇಷವಾಗಿ ಕಾಣಿಸಿಕೊಳ್ಳತೊಡಗಿತು.[೧೬೨] ಶಂಕರರೊಂದಿಗೆ ಅನೇಕ ಶಿಷ್ಯರು ಕಾಶ್ಮೀರದ ವಿದ್ವಾಂಸರು ದಕ್ಷಿಣಕ್ಕೆ ಬಂದುದನ್ನು ಶಂಕರ ವಿಜಯಗ್ರಂಥವು ತಿಳಿಸುತ್ತದೆ.[೧೬೩] ತಮಿಳು ನಾಡಿನಿಂದ ನಾಚಾರಮ್ಮನ ನೇತೃತ್ವದಲ್ಲಿ ಬರಗಾಲದ ಬವಣೆಯನ್ನು ಸಹಿಸಲಾರದ ಸ್ಮಾರ್ಥ ಸಂಕೇತಿ ಬ್ರಾಹ್ಮಣರ ವಲಸೆಯು ೭೦೦ರ ಮತ್ತು ೩೦೦ರ ಎರಡು ದೊಡ್ಡ ಗುಂಪುಗಳಲ್ಲಿ ೧೨ ವರ್ಷಗಳ ಅಂತರದಲ್ಲಿ ಕ್ರಿ.ಶ.೧೦೭೫ ಮತ್ತು ೧೦೮೭ರಲ್ಲಿ ಕರ್ನಾಟಕದ ಹಾಸನ ಜಿಲ್ಲೆ ಮತ್ತು ಬಳ್ಳಾರಿ ಜಿಲ್ಲೆಗಳಿಗೆ ನಡೆದಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ.[೧೬೪] ಹೊಯ್ಸಳ ವಿಷ್ಣುವರ್ಧನನ ಕಾಲದಿಂದ ಇಮ್ಮಡಿ ನರಸಿಂಹನ ಕಾಲದವರೆಗೆ ದಕ್ಷಿಣ ಕರ್ನಾಟಕದಲ್ಲಿ ಅಸಂಖ್ಯ ಅಗ್ರಹಾರಗಳು ನಿರ್ಮಾಣಗೊಂಡಿದ್ದು, ಹೆಚ್ಚಿನ ಸಂಖ್ಯೆಯಲ್ಲಿ ಬ್ರಾಹ್ಮಣರು ವಲಸೆ ಬಂದಿರುವುದನ್ನು ಶಾಸನಗಳು ತಿಳಿಸುತ್ತವೆ. ಅದೇ ರೀತಿ ವಿಜಯನಗರದ

ಅರಸರ ಕಾಲದಲ್ಲಿ ತೆಲುಗುನಾಡಿನಿಂದ ಹಾಸನ ಜಿಲ್ಲೆಗೆ ಅನೇಕ ತೆಲುಗು ಬ್ರಾಹ್ಮಣ ಕುಟುಂಬಗಳು ವಲಸೆಯಾಗಿವೆ.[೧೬೫] ಪ್ರಸ್ತುತ ಅಧ್ಯಯನದ ಪ್ರದೇಶದ ಶಾಸನಗಳಲ್ಲಿ ಕಂಡುಬರುವ ಬ್ರಾಹ್ಮಣ ವಲಸೆಗಳನ್ನು ಅವರು ಈ ಪ್ರದೇಶದಲ್ಲಿ ಪಡೆದ ಸ್ಥಾನಮಾನಗಳನ್ನು ನೋಡಬಹುದು.

ಕೆಲ್ಲಂಗೆರೆಯ ಶಾಸನವೊಂದು[೧೬೬] ಹೊಯ್ಸಳ ವಿಷ್ಣುವರ್ಧನನು 'ಕೊಡಂಗನೂರೆ ಕಡುರಯ್ಯ ಮಪ್ಪುದು ಇದಕಂ ಮಿಗಿಲಪ್ಪುದನ್ ಊರನ್ ಈವೆನು" ಎಂದು ಒಡನೊಡಗೊಂಡು ಬಂದು ವಿನಯದಿಂದ ಕೆಲ್ಲಂಗೆರೆಯನ್ನು ಅಗ್ರಹಾರವಾಗಿ ಮಾಡಿ ಮಹಾಜನರನ್ನು ಸ್ಥಾಪಿಸಿದನೆಂಬ ಸ್ಪಷ್ಟ ಉಲ್ಲೇಖವಿದೆ. ಈ ಮಹಾಜನರು ಯಮ ನಿಯಮಸ್ವಾಧ್ಯಾಯ ಮುಂತಾಗಿ ಶೀಲಗುಣ ಸಂಪನ್ನರಾಗಿದ್ದರು. ಶಟ್ಕರ್ಮನಿರತರಾಗಿದ್ದರು. ನಾಲ್ಕು ವೇದಗಳಲ್ಲೂ ಷಡಂಗದಲ್ಲೂ ಪ್ರವೀಣರಾಗಿದ್ದರು ಎಂದು ಅವರ ವಿದ್ವತ್ತು ವರ್ಚಸ್ಸನ್ನು ಹೇಳಿ ಅವರ ಭೌತಿಕ ಅಲಂಕಾರವನ್ನು ಸಾಮಾಜಿಕ ಸ್ಥಾನಮಾನವನ್ನೂ ಶಾಸನದಲ್ಲಿ ಈ ರೀತಿ ಹೇಳಿದೆ. 'ಮುಂಜಿ ಯಜ್ಞೋಪವೀತ ಬದ್ಧರಾಗಿದ್ದರು ಹೇಮಕರ್ಣಕುಂಡಲವನ್ನು ಧರಿಸಿದ್ದರು. ಕ್ಷತ್ರಿಯ, ವೈಶ್ಯ, ಶೂದ್ರತ್ರಯ ಲಲಾಟಪಾದ ಘಟ್ಟಿತರಾಗಿದ್ದರು" ಎಂಬ ಮಾತು, ಸಮಾಜದ ಮೂರು ಮುಖ್ಯ ಕ್ಷೇತ್ರವಾದ ಅಧಿಕಾರ-ರಕ್ಷಣೆ, ವ್ಯಾಪಾರ ವಹಿವಾಟು, ಆರ್ಥಿಕಾಭಿವೃದ್ಧಿ-ಕೃಷಿ ಉತ್ಪಾದನೆ ಮತ್ತು ಸೇವಾವರ್ಗದ ಮೇಲೆ ಅವರು ಸಾಧಿಸಿಕೊಂಡಿದ್ದ ಹಿಡಿತವನ್ನು ಶ್ರೇಷ್ಠ ಸ್ಥಾನಮಾನವನ್ನು ಬಿಂಬಿಸುತ್ತದೆ.

ಕವಿಗಳು, ಗಮಕಿಗಳು ವಾದಿ, ವಾಗ್ಮಿಗಳೂ ವೇದವಿದರೂ, ಷಡಂಗಿಗಳೂ ಆದ ಈ ಇನ್ನೂರ್ವರು ಮಹಾಜನರು[೧೬೭] ಅಧ್ಯಯನ ಅಧ್ಯಾಪನಗಳಷ್ಟೇ ಅಲ್ಲದೆ ತಾವು ನೆಲೆನಿಂತ ಪ್ರದೇಶದ ಧಾರ್ಮಿಕ ಆರ್ಥಿಕ ಪ್ರಗತಿಗಾಗಿ ಕೆರೆ ನಿರ್ಮಾಣ ನಿರ್ವಹಣೆ ದೇವಾಲಯಗಳಿಗೆ ದಾನ, ದೇವದಾನ ಭೂಮಿಗಳ ದಾನ ದತ್ತಿಗಳ ಸಮರ್ಪಕ ನಿರ್ವಹಣೆ[೧೬೮] ಇತ್ಯಾದಿಗಳನ್ನು ಮಹಾಜನರ ಪ್ರಿಯಪುತ್ರರೆಂದು ಕರೆದುಕೊಳ್ಳುವ ನಿಷ್ಠಾವಂತ ಸ್ಥಳೀಯ ಅಧಿಕಾರಿಗಳ ಸಹಕಾರದೊಂದಿಗೆ ಉತ್ತಮವಾಗಿ ನಿರ್ವಹಿಸುತ್ತ, ವಲಸಿಗರಾಗಿದ್ದರೂ ಬ್ರಾಹ್ಮಣರಾಗಿದ್ದರಿಂದ ಪ್ರಭುತ್ವದೊಂದಿಗೆ ಕೈಜೋಡಿಸಿ ಪ್ರಭಾವಿವರ್ಗವಾಗಿ ಸಮಾಜದ ಮೇಲೆ ಹಿಡಿತವನ್ನು ಸ್ಥಾಪಿಸಿದ್ದರೆಂದು ಹೇಳಬಹುದು.[೧೬೯]

ಹೊಯ್ಸಳ ನೃಸಿಂಹನ ರಾಜಿತ ರಾಜಗೇಹದೊಳು ಶ್ರೀಕರಣಾಗ್ರನಾಗಿದ್ದ 'ಉಭಯಹಸ್ತ ಲೇಖನ ಕುಶಲ ಅವಧಾನ ಚಕ್ರವರ್ತಿ" ಎಂಬ ಬಿರುದುಳ್ಳ ಶ್ರೀಕರಣದ ವಿಶ್ವನಾಥ ಪೂರ್ವಿಕರು ಲಕ್ಕುಂಡಿಯವರೆಂಬುದು ತಿಳಿದುಬರುತ್ತದೆ.[೧೭೦] 'ನೆಗಳ್ತೆವೆತ್ತಭಿಜಾತನ ವಂಶಜರ್ಗೆ ಜನ್ಮಭೂಮಿ ಜಗದ್ವಿಖ್ಯಾತ ಬೆಳ್ವೊಲದೊಳ್ ಗ್ರಾಮಾತಿಶಯಂ ಲೊಕ್ಕುಗುಂಡಿ ಕರಮೆಸೆದಿರ್ಕುಂ"ಎಂದು ಅವರ ತಾಯ್ನಾಡಿನ ವರ್ಣನೆ ವಿಶ್ವನಾಥನ ಶಾಸನದಲ್ಲಿದೆ. ಆ ಲಕ್ಕುಂಡಿಯಲ್ಲಿ ಮಾಳಿಗೆಯವರು ಎನಿಸಿದ

ವಶಿಷ್ಠ ಪೂತಿಮಾಷಾಂಕದ ಗೋತ್ರದ ರಾಯರಸನಿಂದ ಇವರ ವಂಶವಿಚಾರ ತಿಳಿದುಬರುತ್ತದೆ. ಈ ರಾಯರಸ ಮತ್ತು ಚಾಮವ್ವೆಯ ಮಗನಾದ ಈಶ್ವರದೇವನ ಮಕ್ಕಳು. ರಾಯಣ್ಣ ಮತ್ತು ವಿಶ್ವನಾಥ. ಬಹುಶ ಈ ವಂಶದವರು ಇಮ್ಮಡಿ ವೀರ ಬಲ್ಲಾಳನ ಕಾಲದಲ್ಲಿ ಅವನು ಲಕ್ಕುಂಡಿಯನ್ನು ಜಯಿಸಿದ ಮೇಲೆ[೧೭೧] ಹೊಯ್ಸಳರ ಆಶ್ರಯಕ್ಕೆ ಬಂದಂತೆ ತೋರುತ್ತದೆ. ಇವರ ವಂಶವಿವರ ಈ ರೀತಿಯಿದೆ.




ರಾಯಣ್ಣ ಮತ್ತು ಮುದ್ದವ್ವೆಯರ ನಾಲ್ಕು ಮಕ್ಕಳೂ ನರಸಿಂಹನ ಸಭಾಮಣಿ ಭೂಷಣರಾಗಿದ್ದರಂತೆ. ಅರಸನಾದ ನೃಸಿಂಹನಿಗೆ 'ಅಕ್ಕರಮುಂ ಲೆಕ್ಕಮುವನೋಜೆಯಿಂ ತಿಳಿಪಿ' ಕಳಾಪರಿಣತೆಯನ್ನು ಮೆರೆದು ಚಮೂವರರಲ್ಲಿ ಸಮನಾಗಿ ಪ್ರಸಿದ್ಧನಾದ ಈಶ್ವರ ದೇವನು ಅವರಲ್ಲಿ ಹಿರಿಯ. ಇವನು ಇಮ್ಮಡಿ ನರಸಿಂಹನಿಗೆ ಗುರುವಾಗಿ ನೇಮಿಸಲ್ಪಟ್ಟಿದ್ದು ಇಮ್ಮಡಿ ಬಲ್ಲಾಳನ ಕೃಪೆಗೆ ಪಾತ್ರನಾಗಿ ಚಮೂವರನೂ ಆಗಿದ್ದನು. ಎರಡನೆಯ ಮಗನಾದ ಗೋಪಂಣನು ವಿದ್ಯೆ, ವಿಭವ, ಒಳ್ಗುಣ, ವಿನಯ, ಸಂಭಾವನೆ, ಸಚ್ಚರಿತದಲ್ಲಿ ಎಲ್ಲರಿಗಿಂತ ಹಿರಿಯನೆನಿಸಿದವನಾಗಿದ್ದ. ಇವನನ್ನು ಆರಾಧನೆಯ ಗೋಪಣ್ಣನೆಂದೂ ಶಾಸನ ಕರೆದಿದೆ.[೧೭೨] ಮೂರನೆಯ ಮಗನಾದ ವಿಶ್ವನಾಥನು ಅತ್ಯಂತ ಪ್ರಸಿದ್ಧನಾಗಿದ್ದನು. ಇವನು ನರಸಿಂಹನ ಅರಮನೆಯ ಶ್ರೀಕರಣಾಗ್ರಗಣ್ಯನಾಗಿದ್ದನು. ಇವನನ್ನು 'ವಾಕ್ ಶ್ರೀ ಕಮಳಾಕರ, ಬುಧಸುಧಾಕರ, ಆಶ್ರಿತವಾರ್ಧಿ, ವಿಶ್ವಧರ್ಮಾಕೃತಿ ವಿಶ್ವನಾಥನೆಂದು ಕವಿ ಹೊಗಳಿದ್ದಾನೆ. ಇವನ 'ಉಭಯ ಹಸ್ತಲೇಖನ' ಕಲೆ ಹಾಗೂ ಶತಾವಧಾನ ಕಲೆಗೆ ಮೆಚ್ಚಿ ದೊರೆ ಕರೆದು ಕೆಂಬಾಳನ್ನು ನೀಡಿದಾಗ ಅದನ್ನು ವೀರಲಕ್ಷ್ಮೀ ನರಸಿಂಹಗ್ರಾಮವೆಂಬ ಹೆಸರಿನಲ್ಲಿ ಅಗ್ರಹಾರ ಮಾಡಿ ವೀರಲಕ್ಷ್ಮೀನರಸಿಂಹನನ್ನು ಪ್ರತಿಷ್ಠೆ ಮಾಡಿಸಿ ಮನೋಹರವಾದ ದೇವಾಲಯವನ್ನು ಕೆರೆಗಳನ್ನು ಕಟ್ಟಿಸಿದ್ದಾನೆ. ತಾನು ಪಡೆದ ಸಂಪತ್ತನ್ನು ಪಂಡಿತರಿಗೆ ಆಶ್ರಿತರಿಗೆ, ಅತಿಥಿಗಳಿಗೆ ಆಮ್ನಾಯ ಜಾತರಿಗೆ ವಿನಿಯೋಗಿಸುತ್ತಿದ್ದನಂತೆ. ಅಗ್ರಹಾರವನ್ನು ೭೪ ವೃತ್ತಿಗಳಾಗಿ ವಿಂಗಡಿಸಿ ಎರಡು ವೃತ್ತಿಗಳನ್ನು ದೇವರ ಪೂಜಾದಿಗಳಿಗೆ ಬಿಟ್ಟು ಉಳಿದ ೭೨ ವೃತ್ತಿಗಳನ್ನು ವೇದ ಶಾಸ್ತ್ರಯುಕ್ತರಾದ ದ್ವಿಜೋತ್ತಮರಿಗೆ ಸಗೃಹ ಸೋಪಕರಣ ಸಾಲಂಕಾರ ಸಹಿತ ಧಾರಾಪೂರ್ವಕವಾಗಿ ನೀಡಿದನಂತೆ. ಅಂದರೆ ಸುಸಜ್ಜಿತವಾದ ಮನೆಗಳನ್ನು ಪಾತ್ರೆ ಪಡಗ ಪೀಠೋಪಕರಣಗಳ ಸಮೇತವಾಗಿ ನೀಡಿದ್ದಾನೆ. ದೇವರ ಅಲಂಕಾರದ ಉಪಕರಣಗಳನ್ನು ಮಾಡಿಸಿಕೊಟ್ಟಿದ್ದಾನೆ.[೧೭೩]

ವಿಶ್ವನಾಥನ ತಮ್ಮ ದೇವಣ್ಣನು ಹಾರನಹಳ್ಳಿಯಲ್ಲಿ ಶ್ರೀಕರಣ ದಂಣಾಯಕನಾಗಿದ್ದನು. ಕೆಂಬಾಳಿನಲ್ಲಿ ವಿಶ್ವನಾಥನ ಚಿಕ್ಕಪ್ಪ ವಿಶ್ವನಾಥದೇವಣ್ಣ ಸಿರಿಯವ್ವೆಯ ಮಕ್ಕಳಾದ ಏಚಣ ಮತ್ತು ಕಿರಿಯ ರಾಯಣ ಸೋವಿ ದೇವರಸನ ಕಾಲದಲ್ಲಿ 'ಕೋಶಾಧ್ಯಕ್ಷ'ರಾಗಿದ್ದವರು ಹಿರಿಯ ಮಾಣಿಕ್ಯ ಭಂಡಾರದಧ್ಯಕ್ಷರಾಗಿದ್ದು ಕೆಂಬಾಳು ಮತ್ತು ಹಾರನಹಳ್ಳಿಗಳ ಲಕ್ಷ್ಮೀನರಸಿಂಹ ದೇವಾಲಯಗಳಿಗೆ ಶ್ರೀಕಾರ್ಯಕ್ಕಾಗಿ ಅರಸನನ್ನು ಭಿನ್ನವಿಸಿಕೊಂಡು ಕೆಂಬಾಳಿನ ಸಿದ್ಧಾಯ ನೂರು ಗದ್ಯಾಣಗಳಲ್ಲಿ ೧೨ ಗದ್ಯಾಣಗಳಂತೆ ಎರಡೂ ದೇವಾಲಯಗಳಿಗೆ ಬಿಡಿಸಿದ್ದಾರೆ.[೧೭೪] ಹಾರನಹಳ್ಳಿಯ ಲಕ್ಷ್ಮೀನರಸಿಂಹನಿಗೆ ಶ್ರೀಕರಣಾಗ್ರಣಿ ವಿಶ್ವನಾಥನು ವೇದಾರ್ತ್ಥದ ವೈಜಭಟ್ಟರಿಂದ ಕ್ರಯವಾಗಿ ಕೊಂಡಿದ್ದ ಪ್ರಥಮದ ಎಲೆಯ ಭಾಗದ ಗದ್ದೆಯೊಳಗೆ ೧೨ ಕಂಬಭೂಮಿಯನ್ನು ಬಿಟ್ಟಿದ್ದಾನೆ. ಆನಂದಬೋಧರ ಮಕ್ಕಳು ನಿರ್ಮಿಸಿದ ಈ ದೇವಾಲಯಕ್ಕೆ ಆನಂದ ಬೋಧರ ದಾಸನೆಂದು ಕರೆದುಕೊಳ್ಳುವ ಈ ವಿಶ್ವನಾಥ ದೈವಭಕ್ತಿಯನ್ನೂ ಗುರು ಕಾಣಿಕೆಯನ್ನೂ ಈ ರೀತಿ ಸಮರ್ಪಿಸಿದ್ದಾನೆನ್ನಬಹುದು.

ಒಟ್ಟಿನಲ್ಲಿ ತಮ್ಮ ಪಾಂಡಿತ್ಯ, ನಿಷ್ಠೆ, ಕಲಾವಂತಿಕೆಯಿಂದ ಮಹಾ ಅಗ್ರಹಾರವಾಗಿದ್ದ ಲಕ್ಕುಂಡಿಯಿಂದ ವಲಸೆ ಬಂದ ಈ ಬ್ರಾಹ್ಮಣ ಕುಟುಂಬವು ಉತ್ತಮ ಸ್ಥಾನಮಾನ ಗೌರವಗಳಿಗೆ ಪಾತ್ರವಾಗಿದ್ದು, ಆರ್ಥಿಕವಾಗಿಯೂ ಸಾಮಾಜಿಕವಾಗಿಯೂ ಪ್ರತಿಷ್ಠೆಯನ್ನು ಪಡೆದಿತ್ತು. ನರಸಿಂಹನಿಂದ ಅವಧಾನ ಚಕ್ರವರ್ತಿ ಎಂಬ ಬಿರುದನ್ನೂ ಈ ಶ್ರೀಕರಣರ ವಂಶದ ವಿಶ್ವನಾಥ ಪಡೆದಿದ್ದನೆಂಬುದು ಮುಖ್ಯವಾಗುತ್ತದೆ. ನೀರ್ಗುಂದನಾಡಿಗೆ ಸೇರಿದ್ದ ಅರಸೀಕೆರೆಯ ಹಾರನ ಹಳ್ಳಿ ಮತ್ತು ಕೆಂಬಾಳುಗಳಲ್ಲಿ ಈ ಕುಟುಂಬದವರು ನೆಲಸಿದ್ದು, ಅಲ್ಲಿನ ಅಭಿವೃದ್ಧಿಗೆ ದುಡಿದಿರುವುದು ಕಂಡುಬರುತ್ತದೆ.

ತಮಿಳುನಾಡಿನಿಂದ ರಾಮಾನುಜರೊಂದಿಗೆ ಕರ್ನಾಟಕಕ್ಕೆ ವಲಸೆ ಬಂದ ವೈಷ್ಣವರು ಇಲ್ಲಿ ಹೊಯ್ಸಳ ಅರಸರಿಂದ ಸ್ಥಾಪಿಸಲ್ಪಟ್ಟ ಅನೇಕ ಚತುರ್ವೇದಿ ಮಂಗಲಗಳು ಅಥವಾ ಅಗ್ರಹಾರಗಳಲ್ಲಿ ನೆಲಸಿ ಧಾರ್ಮಿಕ ಸಾಮಾಜಿಕ ಕ್ಷೇತ್ರದಲ್ಲಿ ಹೊಸ ಸಂಚಲನವನ್ನೇ ಉಂಟುಮಾಡಿದರು. ಅನೇಕ ಊರುಗಳು ಕೇಶವಪುರ, ಲಕ್ಷ್ಮೀನರಸಿಂಹಪುರಗಳಾಗಿ ಪರಿವರ್ತನೆಗೊಳ್ಳುವುದರ ಜೊತೆಗೆ ಅಲ್ಲಿನ ಹೊಸ ದೇವಾಲಯಗಳ ಪೂಜಾದಿ ಪರಿಚಾರಕ ವರ್ಗದವರು, ಪೂಜಾ ವಿಧಿ ವಿಧಾನಗಳು ಈ ವಲಸಿಗರ ಸಂಸ್ಕೃತಿಗೆ ತಕ್ಕಂತೆ ನಡೆಯಲು ಪ್ರಾರಂಭವಾಯಿತು. ವಲಸಿಗರು ತಮ್ಮ ಧರ್ಮ ದೈವಗಳೊಂದಿಗೆ ದೇವಾಲಯ ಪುರವರ್ಗದವರನ್ನು ಕರೆತರುತ್ತಿದ್ದರೆಂದು ತೋರುತ್ತದೆ.[೧೭೫] ವಿವಿಧ ಉತ್ಸವ ಪೂಜೆಗಳ ನೈವೇದ್ಯ ಭಕ್ಷಭೋಜ್ಯಗಳ ಪೂಜಾರಿ ಪರಿಚಾರಕರ ಹೆಸರುಗಳನ್ನು ಗಮನಿಸಿದರೆ ನಡೆದಿರಬಹುದಾದ ವಲಸೆಗಳ ಪ್ರಮಾಣ, ಪ್ರಭಾವ ವೈವಿಧ್ಯತೆಯನ್ನು ಅರಿಯಬಹುದು. ಹೀಗೆ ವಲಸೆ ಬಂದವರು ತಿರುವಲಸೆಗೊಳ್ಳದಂತೆ ಅವರು ಸ್ಥಿರವಾಗಿ ನಿಲ್ಲಬೇಕೆಂದು ಆಳರಸರು ಅಧಿಕಾರಿಗಳು ಪುನರ್ ದತ್ತಿದಾನಗಳನ್ನು ನೀಡುತ್ತಿದ್ದುದ್ದೂ ಶಾಸನಗಳಿಂದ ಖಚಿತವಾಗುತ್ತದೆ.[೧೭೬]

೧೨-೧೩ನೇ ಶತಮಾನದಲ್ಲಿ ಹೆಚ್ಚಾಗಿದ್ದ ವಲಸೆ ಮತ್ತು ಅವರಿಗೆ ನೆಲೆಯನ್ನು ಒದಗಿಸಿ ಕೊಡುವುದಕ್ಕಾಗಿ ಅಗ್ರಹಾರ ಹೊಸ ಗ್ರಾಮಗಳ ನಿರ್ಮಾಣ ಅಥವಾ ಪರಿವರ್ತನೆ ವಿಜಯನಗರದ ಅರಸರ ಕಾಲದಲ್ಲೂ ಕಾಣಿಸಿಕೊಂಡರೂ ವಿರಳವಾಗಿತ್ತು. ಅಗ್ರಹಾರಗಳ ಜೀರ್ಣೋದ್ಧಾರ ಕಾರ್ಯಗಳು ೧೩ನೇ ಶತಮಾನದ ನಂತರ ಕಾಣಿಸಿಕೊಳ್ಳುತ್ತವೆ.[೧೭೭] ಅಚ್ಯುತರಾಯನಿಂದ ಹೊನ್ನವಳ್ಳಿ ಸೀಮೆಯನ್ನು ನಾಯಕತನಕ್ಕೆ ಪಡೆದ ಬಯಕಾರ ರಾಮಪ್ಪನು ಚಿಕ್ಕಗಂಡಸಿಯನ್ನು ೫೩ ಬ್ರಾಹ್ಮಣರಿಗೆ ವೃತ್ತಿಗಳಾಗಿ ವಿಂಗಡಿಸಿ ದಾನಗ್ರಾಮವಾಗಿ ನೀಡಿದ ಸಂದರ್ಭದಲ್ಲಿ ಆ ಬ್ರಾಹ್ಮಣರಲ್ಲಿ ಕೆಲವರಾದರೂ ತೆಲುಗು ನಾಡಿನಿಂದ ವಲಸೆ ಬಂದವರಂತೆನಿಸುತ್ತದೆ.[೧೭೮] ಸಂಪದ್ಭರಿತವಾದ ಈ ಪ್ರದೇಶಕ್ಕೆ ಪಂಡಿತರಾದ ಬ್ರಾಹ್ಮಣರಷ್ಟೇ ಅಲ್ಲ ವೈದ್ಯರು, ಶಿಲ್ಪಿಗಳು ಕಲಾವಿದರು ಸೇವಕ ವೃತ್ತಿಯವರು ಉದ್ಯೋಗಾವಕಾಶವನ್ನು ಅರಸಿ ಈ ಪ್ರದೇಶಕ್ಕೆ ವಲಸೆ ಬಂದಿದ್ದಾರೆ.

### ೪ ೨ ೨.೨. ವೈದ್ಯ ದೇವರಾಜಪಿಳ್ಳೆಯ ವಲಸೆ

ವೈದ್ಯ ದೇವರಾಜ ಪಿಳ್ಳೆಯು ಹೊಯ್ಸಳ ಮೂರನೇ ನರಸಿಂಹನ ಕಟಕದ ಮಹಾಪ್ರಧಾನ ಬೀರಯ್ಯ ದಂಣಾಯಕನ ಮನೆಯಲ್ಲಿ ಅಭಿನವದನ್ವಂತರಿ ಎನಿಸಿಕೊಂಡಿದ್ದ. ಇವನನ್ನು 'ವಿನೆಯ ನಿಧಾನಂ ಸಜ್ಜನ ಜನ ಸೇಬ್ಯಂ ಸರ್ವಸಮಯ ಸಮದರ್ಶಿ, ಜನವಂದ್ಯ ದೇವರಾಜನೆಂದೂ 'ನೂತನ ವೈದ್ಯ ಕಳಾವಿಖ್ಯಾತ' 'ಧರ್ಮನಿಧಾನ' ಎಂದೂ ಹೊಗಳಲಾಗಿದೆ.[೧೭೯] ಇವನು ಮೊಸಳೆಯ ಕಾಲುವಳ್ಳಿ ಮಲ್ಲಯ್ಯನ ಹಳ್ಳಿಯಲ್ಲಿ ಕೂತಣ್ಣ ಹೆಗ್ಗಡೆಯು ಕಟ್ಟಿಸಿದ್ಧ ಶ್ರೀ ಚೆನ್ನಕೇಶವ ದೇವಾಲಯವು ಕೆರೆ ಏರಿ ಒಡೆದು ಜೀರ್ಣವಾಗಿದ್ದರಿಂದ ತನ್ನ ಒಡತಿ, ಮಹಾ ಪ್ರಧಾನ ಬೀರಯ್ಯ ದಂಣಾಯಕನ ಮಡದಿ ತಾಯಿಯಮ್ಮನವರಿಗೆ ಬಿನ್ನಹ ಮಾಡಿ ಅವಳ ಅನುಮತಿ ಪಡೆದು ೫೦ ಹೊನ್ನು ಸವೆಸಿ ಜೀರ್ಣೋದ್ಧಾರವನ್ನು ಮಾಡಿಸುತ್ತಾನೆ. ಇದರಿಂದ ಸಂತೋಷಪಟ್ಟ ಜನತೆ ದೇವರ ಅಮೃತಪಡಿಗೆ ದೇವಗೊಳಗ ಬಿಡುತ್ತಾರೆ. ಕೂತಣ ಹೆಗ್ಗಡೆಯ ಮಗ ಬಲ್ಲಣ್ಣನು ಚೆನ್ನಕೇಶವ ದೇವರ ಸ್ಥಾನವನ್ನು ದೇವಪಿಳ್ಳೆಯಣ್ಣನ ಮಗ ಸಿದ್ಧಣ್ಣನಿಗೆ ನೀಡಿ ಆ ದೇವಾಲಯಕ್ಕೆ ಮೊದಲಿದ್ದ ಸಕಲ ಭೂಮಿಗಳನ್ನು ದೇವಾಲಯದ ತೆಂಕಣ ಮನೆಗಳನ್ನು, ಕಣಗಳನ್ನು ಪ್ರೀತಿದಾನವಾಗಿ ಕೊಡುತ್ತಾನೆ. ಅಷ್ಟೇ ಅಲ್ಲದೆ ತಮ್ಮ ಕೊಡಗಿಯ ಗದ್ದೆ, ಬೆದ್ದಲು, ಕಣ, ಮನೆ ಒಳಗಾದ ಆ ಊರ ಗೌಡಿಕೆಯನ್ನು ೩೦ ಗದ್ಯಾಣಗಳನ್ನು ಸಿದ್ಧಣ್ಣನಿಂದ ಪಡೆದು ರಾಜಗುರುಗಳು ಮುಂತಾದ ಪ್ರಮುಖರ ಒಪ್ಪಿಗೆಯೊಂದಿಗೆ ನೀಡಿದ್ದಾನೆ. ರಾಜಗುರು ರುದ್ರಶಕ್ತಿಯ ಮಕ್ಕಳೂ ಗದ್ದೆ, ಕ್ಷೇತ್ರ ಮನೆಗಳನ್ನು ದಾನ ಬಿಟ್ಟಿದ್ದಾರೆ.

ದೇವಪಿಳ್ಳೆಯಣ್ಣನು ಬೀರಯ್ಯ ದಂಣಾಯಕರ ತಾಯಿಯ ಹೆಸರಿನಲ್ಲಿ ಗೌರೇಶ್ವರ ದೇವಾಲಯ ಪ್ರತಿಷ್ಠೆಯನ್ನೂ ಮಾಡಿಸಿದ್ದಾನೆ.[೧೮೦] ಈ ದೇವಾಲಯಕ್ಕೆ ಬೀರಯ್ಯ ದಂಣಾಯಕನು ವೈದ್ಯನ ಮಗ

ಸಿದ್ಧಣ್ಣನಿಂದ ೩೦ ಗದ್ಯಾಣಗಳಿಗೆ ಆ ಊರ ಗೌಡಿಕೆಯ ಭೂಮಿಯನ್ನು ಕೊಂಡು ಗೌರೇಶ್ವರ ದೇವರಿಗೆ ಬಿಟ್ಟಿದ್ದಾನೆ. ಆ ದೇವಾಲಯದ ಕೆಲಸ ಪ್ರತಿಷ್ಠೆ ದೇವರ ಅಮೃತಪಡಿಗೆ ಭೂಮಿ ಮತ್ತು ಪ್ರತಿಮೆ ಎಲ್ಲದಕ್ಕೂ ಆದ ಖರ್ಚನ್ನೂ ಕೊಟ್ಟಿದ್ದಾನೆ. ದಂಣಾಯಕನ ಅಳಿಯನೂ ಅಪಾರ ಗದ್ದೆ ಬೆದ್ದಲು ಮನೆಯನ್ನು ದಾನ ನೀಡಿದ್ದಾನೆ. ಕೇವಲ ಎರಡು ವರ್ಷಗಳಲ್ಲಿ ಈ ವಲಸಿಗ ವೈದ್ಯ ವಿಸ್ತಾರವಾದ ಭೂಮಿಗೆ ಮನೆಗಳಿಗೆ ಒಡೆಯನಾಗಿ ದೇವಾಲಯಗಳ ಸ್ಥಾನಿಕನಾಗಿ ಪಡೆದ ವರ್ಚಸ್ಸು ವಿಶಿಷ್ಟವಾದದ್ದು. ಮಗ ವೈಷ್ಣವ ಸ್ಥಾನಕ್ಕೆ ಸ್ಥಾನಿಕನಾದರೆ ತಂದೆ ಶೈವ ದೇವಾಲಯದ ಸ್ಥಾನಿಕ! ವಲಸಿಗರ ಧರ್ಮ ಸಮನ್ವಯಕ್ಕೆ ಇದು ಉತ್ತಮ ಉದಾಹರಣೆ ಅವರ ಬದುಕಿನ ಜಾಣತನವನ್ನು ನಾವು ಮೆಚ್ಚಲೇ ಬೇಕು. ವೈದ್ಯನಾದುದರಿಂದ ಸಾರ್ವಜನಿಕರಿಗೆ ವೈದ್ಯಕೀಯ ಸೇವೆ ನೀಡುವ ವ್ಯವಸ್ಥೆ ಇತ್ತೆ? ಅದಕ್ಕಾಗಿಯೇ ಅವನಿಗೆ ದೇವಾಲಯದ ಸಮೀಪ ಅನೇಕ ಮನೆಗಳನ್ನು ನೀಡಲಾಯಿತೆ? ಎಂಬ ಅನುಮಾನವೂ ಬರುತ್ತದೆ.

### ೪.೨.೨.೩. ರೂವಾರಿಗಳ ವಲಸೆ

ಶಿಲ್ಪಿಗಳು ವಾಸ್ತುಶಿಲ್ಪ ರೂವಾರಿಗಳು ಖಂಡರಣೆಕಾರರು ಒಂದು ಪ್ರಾಂತ್ಯದಿಂದ ಮತ್ತೊಂದಕ್ಕೆ ಒಂದು ಗ್ರಾಮದಿಂದ ಮತ್ತೊಂದಕ್ಕೆ ವಲಸೆ ಬಂದಿರುವುದು ಸಾಮಾನ್ಯವಾಗಿ ಹೊಯ್ಸಳರ ಶಾಸನಗಳಿಂದ ತಿಳಿದುಬರುತ್ತದೆ. ಅಂತಹ ಶಾಸನಗಳ ಸಂಖ್ಯೆ ಹೆಚ್ಚಿಲ್ಲದಿದ್ದರೂ ಈ ಕಲಾವಿದರ ಚಲನವಲನವನ್ನು ಇವುಗಳ ಆಧಾರದಿಂದಲೇ ಗುರುತಿಸಿಕೊಳ್ಳಬಹುದು. ಕೆಲವು ಪ್ರಮುಖ ರೂವಾರಿಗಳು ಅಥವಾ ಖಂಡರಣೆಕಾರರು ಒಂದು ಪಟ್ಟಣ ಅಥವಾ ಗ್ರಾಮದಿಂದ ಮತ್ತೊಂದಕ್ಕೆ ಉದ್ಯೋಗ ನಿಮಿತ್ತವಾಗಿ ಚಲಿಸಿರುವುದನ್ನು ಕಾಣಬಹುದು. ಪ್ರತಿಭಾವಂತ ಶಿಲ್ಪಿಗಳು ರಾಜರ, ಮಂತ್ರಿಗಳ, ಅಧಿಕಾರಿಗಳ, ಸಿರಿವಂತ ವರ್ತಕರ ಕರೆಗೆ ತಕ್ಕಂತೆ ಗುಂಪು ಗುಂಪಾಗಿ ಒಂದು ದೇವಾಲಯ ಸಂಕೀರ್ಣದಿಂದ ಮತ್ತೊಂದು ದೇವಾಲಯ ಸಂಕೀರ್ಣಕ್ಕೆ ಚಲಿಸುತ್ತಿದ್ದರೆಂದು ತೋರುತ್ತದೆ. ಮಲ್ಲಿತಮನಂತಹ ಶ್ರೇಷ್ಠ ರೂವಾರಿ ಸುಮಾರು ೨೦೦ ಕಿಲೋಮೀಟರ್ ಅಂತರದೊಳಗೆ ಅನೇಕ ದೇವಾಲಯಗಳನ್ನು ನಿರ್ಮಿಸಿದ್ದಾನೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಹಾರನಹಳ್ಳಿ ನುಗ್ಗೇಹಳ್ಳಿ ಜಾವಗಲ್ಲು ದೇವಾಲಯಗಳಲ್ಲಿ ಅವನ ಹೆಸರು ಪ್ರಧಾನವಾಗಿ ಕಂಡುಬಂದಿದೆ.[೧೮೧] ಆಳರಸರ, ಅಧಿಕಾರಿಗಳ ಸಿರಿವಂತರ ಪ್ರೋತ್ಸಾಹ ಅವರಿಗೆ ಆರ್ಥಿಕ ಲಾಭವನ್ನು ಪ್ರಸಿದ್ಧಿಯನ್ನು ತಂದುಕೊಡುತ್ತಿತ್ತು. ಇಂತಹ ವ್ಯವಸ್ಥೆ ಶಿಶ್ಪಿಗಳ ಗುಂಪಿಗೆ ಒಂದು ಸಾಂಘಿಕವಾದ ಲಕ್ಷಣವನ್ನು ತಂದುಕೊಡುತ್ತಿತ್ತು. ಇವರಲ್ಲಿ ಮುಖ್ಯ ರೂವಾರಿಗಳು ಅವರ ಶಿಷ್ಯ ಪ್ರಶಿಷ್ಯರು ಬಂಧುಗಳು ಸಾಮಾನ್ಯ ಕಲ್ಲೊಡ್ಡರೂ, ಕಲಾನಿಪುಣರೂ ಸಹಾಯಕರೂ ಒಂದು ಸೂತ್ರಕ್ಕೆ ಬದ್ಧರಾಗಿ ದುಡಿಯುವ ಶಿಸ್ತು ಬೆಳೆಯಲು ಹಾಗೂ ಒಂದು ವಿಶಿಷ್ಟ ಕಲಾನೈಪುಣ್ಯತೆ, ಪ್ರಯೋಗಶೀಲತೆ, ಪಕ್ವತೆ ಬೆಳೆಯಲು ಅವಕಾಶವಾಗುತ್ತಿತ್ತು. ಈ ಕಲಿಕೆ ತರಬೇತಿ ಪ್ರಯೋಗಗಳಿಂದ ವಿಶಿಷ್ಟ ಶೈಲಿಯೂ

ರೂಪಿತವಾಗಲು ಕಾರಣವಾಗುತ್ತಿತ್ತೆನ್ನಬಹುದು. ಈ ವೃತ್ತಿಕಲಾವಿದರಿಗೆ ಅವರ ಕಾರ್ಯಕ್ಕೆ ಪ್ರತಿಫಲವಾಗಿ ಭೂದಾನಗಳನ್ನು ನೀಡುತ್ತಿದ್ದುದು[೧೮೨] ಕಲಾವಿದರು ಆಯಾ ಗ್ರಾಮಗಳಲ್ಲೇ ನೆಲೆ ನಿಲ್ಲುವಂತೆ ಪ್ರೇರೇಪಿಸುತ್ತಿತ್ತು.

ಹೊಯ್ಸಳ ಅರಸರ ಕಾಲದಲ್ಲಿ ಈ ಪ್ರದೇಶದಲ್ಲಿ ಕೆರೆ ಕಟ್ಟೆ ದೇವಾಲಯ ನಿರ್ಮಾಣ ಕಾರ್ಯ ಬಿರುಸಿನಿಂದ ಸಾಗಿದ್ದು ಸ್ಥಳೀಯ ಶಿಲ್ಪಿಗಳಲ್ಲದೆ ದೂರ ದೂರದ ಪ್ರಾಂತ್ಯಗಳಿಂದ ರೂವಾರಿಗಳು ವಲಸೆ ಬಂದಿದ್ದಾರೆ. ಹೊಯ್ಸಳರ ಶೈಲಿ ವಿಶಿಷ್ಟವಾಗಿ ಬೆಳೆಯಲು ಮೂಲ ಪ್ರೇರಕ, ಪೂರಕವಾದ ಚಾಲುಕ್ಯ ನಾಡಿನ ಶಿಲ್ಪಿಗಳ ವಲಸೆ, ಇದರೊಂದಿಗೆ ತಮಿಳು ನಾಡಿನ ವಲಸೆ, ಆಂಧ್ರ ನಾಡಿನ ಕಲಾವಿದರ ವಲಸೆಗಳನ್ನು ವಿದ್ವಾಂಸರು ಈಗಾಗಲೇ ಗುರುತಿಸಿದ್ದಾರೆ.[೧೮೩] ಕ್ರಿ.ಶ.೧೧೯೦ರ ಸುಮಾರಿಗೆ ಎರೆಯಂಗನ ಅಧಿಕಾರಿ ಕಚ್ಚಪೆರ್ಗಡೆ ೬೦೦ ಹೊನ್ನು ಸವೆಸಿ ಕಟ್ಟಿದ ಅರಸೀಕೆರೆಯ ದೊಡ್ಡದಾದ ಕೆರೆಯನ್ನು ಸರಸ್ವತಿ ಗಣದಾಸಿ ಕೇತೋಜ ಹಾಗೂ 'ನೆಗಳ್ದ ಪುಲಿಗೆರೆಯ ಏಚೋಜ'ರು ಕಟ್ಟಿ ತೂಬನ್ನು ಇಟ್ಟಿದ್ದಾರೆ.[೧೮೪] ಪುಲಿಗೆರೆಯ ವೀರಬಲ್ಲಾಳೇಶ್ವರದ ಆಚಾರಿ ಲಖೋಜನ ಮಗ ಬ್ರಹ್ಮಪಂಡಿತನು ಒಂದು ಸುಂದರವೀರಗಲ್ಲನ್ನು ಖಂಡಿರಿಸಿದ್ದಾನೆ.[೧೮೫] ಕಣಿಕಟ್ಟೆಯ ಒಂದು ಶಾಸನವನ್ನು ಬಳ್ಳಿ 'ಗ್ರಾಮೆಯ ದಾಸೋಜ' ಖಂಡರಿಸಿದ್ದಾನೆ.[೧೮೬] ಕ್ರಿ.ಶ.೧೧೯೧ರ ತಳಿರೂರಿನ ಒಂದು ಅತ್ಯಂತ ಸುಂದರವಾದ ಲಿಪಿಯ ಶಾಸನವನ್ನು ಪ್ರಸಿದ್ಧನಾದ 'ದಾಸೋಜನ ಅಗ್ರತನೆಯ ಮಸಣ'ನು ಖಂಡಿರಿಸಿದ್ದಾನೆ.[೧೮೭] ಮುದುಡಿಯ ಒಂದು ಶಾಸನವನ್ನು[೧೮೮] ಬಂಕಾಪುರದ ರೂವಾರಿಯೊಬ್ಬ ಖಂಡರಿಸಿದ್ದಾನೆ. ಇಲ್ಲಿ ಉಕ್ತವಾಗಿರುವ ಪುಲಿಗೆರೆ ಬಳ್ಳಿಗ್ರಾಮೆ, ಬಂಕಾಪುರಗಳು ಹಾಗೂ ಲಕ್ಕುಂಡಿ ಗದಗ ಮುಂತಾದ ಪ್ರದೇಶಗಳು ಶಿಲ್ಪ ಕಲೆಯ ಕೇಂದ್ರಗಳಾಗಿದ್ದು, ಅಲ್ಲಿ ತರಬೇತಿ ಪಡೆದ ಶಿಲ್ಪಿಗಳು ಉದ್ಯೋಗಾಕಾಂಕ್ಷಿಗಳಾಗಿ ಪ್ರೋತ್ಸಾಹ ದೊರೆತಲ್ಲಿಗೆ ವಲಸೆಯಾಗಿದ್ದಾರೆ. ಮತ್ತು ಹೊಯ್ಸಳರ ವಿಶಿಷ್ಟ ಶಿಲ್ಪ ವಾಸ್ತು ಕಲಾಸೌಂದರ್ಯಕ್ಕೆ ಇವರ ಕೊಡುಗೆ ಅಪಾರವಾಗಿದೆ.

### ೪.೨.೨.೪. ಮಾರಜೀಯನ ನೇತೃತ್ವದ ಧಾರ್ಮಿಕ ವಲಸೆ

ಕ್ರಿ.ಶ.೧೨೦೭ರ ಹಿರಿಯೂರಿನ ಶಾಸನವೊಂದು[೧೮೯] ಬಹಳ ಸ್ಪಷ್ಟವಾಗಿ "ಪಾಣ್ಡ್ಯನಾಡ ಕೇಸೂರ ಮೆದಕೇರಿಯಿಂ ಸಮಸ್ತ ಪ್ರಜೆಗಳುಂ ಗಾವುಂಡುಗಳು ಬಹುತ ಮಾರಜೀಯ ಮುಂತಾಗಿ ಬನ್ದು ಮುತ್ತನ ಹೊಸವೂರಲು ಸುಖದಿಂದಮಿರೆ" ಎಂದು ವಲಸೆಯನ್ನು ದಾಖಲಿಸಿದೆ (ಪಾಂಡ್ಯನಾಡು ಉಚ್ಚಂಗಿ ಪಾಂಡ್ಯರ ಆಳ್ವಿಕೆಯ ಪ್ರದೇಶ ಈ ಕೇಸವುರದ ನೆಲೆವೀಡಿನಿಂದ ನೊಣಂಬವಾಡಿ ಮುವತ್ತಿರ್ಚ್ಛಾಸಿರವನ್ನು ತ್ರಿಭುವನಮಲ್ಲ ದೇವ ಪಾಣ್ಡ್ಯನು ಆಳುತ್ತಿದ್ದನು).[೧೯೦] ಪಾಂಡ್ಯನಾಡಿನ ಮೆದಕೇರಿಯಿಂದ ಸಮಸ್ತ ಪ್ರಜೆಗಾವುಂಡುಗಳ ಸಮೇತ ಧಾರ್ಮಿಕ ಪ್ರಮುಖನಾದ ಮಾರಜೀಯನ ನೇತೃತ್ವದಲ್ಲಿ ಇಡೀ ಊರೇ ಗುಳೆ ಹೊರಟಂತೆ ಬರಲು ಕಾರಣವೇನು? ಎಂಬುದು ಸ್ಪಷ್ಟವಾಗುವುದಿಲ್ಲ. ಒಂದು ಗ್ರಾಮದಿಂದ ಒಂದು

ವ್ಯಕ್ತಿ ಇಲ್ಲ ಒಂದು ಕುಟುಂಬ ಅಥವಾ ಕೆಲವು ಕುಟುಂಬಗಳು ವಲಸೆ ಹೋಗುವ ಉದಾಹರಣೆಗಳು ಸಾಮಾನ್ಯ ಆದರೆ ಸಮಸ್ತ ಪ್ರಜೆಗಳೂ, ಗೌಡುಗಳೂ, ಧಾರ್ಮಿಕ ಗುರುವೂ ಒಟ್ಟಾಗಿ ಸ್ಥಳಾಂತರಗೊಳ್ಳುವ ಉದಾಹರಣೆ ಅಪರೂಪ. ಇದಕ್ಕೆ ಪ್ರವಾಹ, ಕ್ಷಾಮದಂತಹ, ನೈಸರ್ಗಿಕ ವಿಕೋಪವೋ ಇಲ್ಲ ರಾಜಕೀಯ, ಸಾಮಾಜಿಕ ಸಂಘರ್ಷವೋ ಕಾರಣವಿರಬೇಕು. ಕಾರಣವೇನೇ ಇರಲಿ ಹೀಗೆ ಬಂದ ದೊಡ್ಡ ಗುಂಪಿಗೆ ವಸತಿಗಳನ್ನು ಜೀವನೋಪಾಯಕ್ಕೆ ದಾರಿಯನ್ನು ಕಲ್ಪಿಸಿಕೊಡುವುದು ಸಾಮಾನ್ಯ ವಿಷಯವಲ್ಲ. ಇದಕ್ಕೆ ಆಳರಸರ ಅಧಿಕಾರಿಗಳ ಸಿರಿವಂತರ ಸಹಾಯವಿಲ್ಲದೆ ಸಾಧ್ಯವಿಲ್ಲ. ಜೊತೆಗೆ ಹೊಸ ನೆಲೆಯು ಆಹಾರಾಭಾವವಿಲ್ಲದ, ಶಾಂತಿ ಸಮೃದ್ಧಿಗಳ ತಾಣವಾಗಿರಬೇಕಾಗುತ್ತದೆ. ಮುತ್ತನ ಹೊಸವೂರಿನಲ್ಲಿ ಈ ಎಲ್ಲ ಸೌಕರ್ಯಗಳಿದ್ದುವೆಂಬುದಕ್ಕೆ ಇಲ್ಲಿನ ಶಾಸನಗಳು ಸಾಕ್ಷಿಯಾಗಿವೆ.[೯೧] ಹಿರಿಯ ಮುತ್ತನ ಹೊಸವೂರಿನಲ್ಲೇ ಕೆರೆ ಕಟ್ಟೆಗಳು ೧೧ ಇದ್ದು ಚಿಕ್ಕ ಮುತ್ತನ ಹೊಸ ಊರಿನಲ್ಲಿ ೩ ಕೆರೆ ಹಳ್ಳವನ್ನು ಶಾಸನಗಳು ಉಲ್ಲೇಖಿಸಿವೆ. ಮುತ್ತನ ಹೊಸ ಊರಿನಲ್ಲಿ ಸುಖದಿಂದ ಇರುವಾಗ ಮಾರಜೀಯನು ಧರ್ಮೋಪಾರ್ಜನೆಯನ್ನು ನೆನೆದು ಶಿವಾಲಯವನ್ನು ಮಾಡಿಸಿ ಅರೆಯ ಶಂಕರ ದೇವರ ಪ್ರತಿಷ್ಠೆಯನ್ನು ಮಾಡಿ ಕೆರೆಯನ್ನು ಕಟ್ಟಿಸಿದ್ದಾನೆ. ಅವನ ಈ ಧರ್ಮಕಾರ್ಯಕ್ಕೆ ಪೂರಕವಾಗಿ ಅರೆಯಶಂಕರ ದೇವರಿಗೆ ಉತ್ತಮ ನೀರಾವರಿ ಭೂಮಿಗಳನ್ನು ಸ್ಥಳೀಯರು ದಾನ ನೀಡಿದ್ದಾರೆ. ಕ್ರಿ.ಶ.೧೨೦೭ರಲ್ಲಿ ಈ ದೇವಾಲಯ ಕೆರೆ ನಿರ್ಮಾಣವಾಗಿದ್ದು ಈ ವಲಸೆ ಅದಕ್ಕಿಂತ ಮೊದಲು ನಡೆದಿದೆ ಎಂಬುದು ಸ್ಪಷ್ಟವಾಗುತ್ತದೆ.

ಮುತ್ತನಹೊಸವೂರು ಮತ್ತು ಪಾಂಡ್ಯನಾಡಿನ ಸಂಬಂಧ ಕ್ರಿ.ಶ.೧೧೦೦ಕ್ಕೂ ಹಿಂದೆಯೇ ಇದ್ದುದು ತಿಳಿದುಬರುತ್ತದೆ.[೯೨] ಹೊಯ್ಸಳ ಎರೆಯಂಗನ ವಧುವಾಗಿ ಪಾಂಡ್ಯ ರಾಜಕುಮಾರಿ ಈ ಪ್ರದೇಶಕ್ಕೆ ವಲಸೆ ಗೊಂಡಿದ್ದಾಳೆ. ಎರೆಯಂಗನ ಪಟ್ಟದರಸಿಯಾದ ಈ ಮಹಾದೇವಿಯು ಮುತ್ತನ ಹೊಸೂರಿನಲ್ಲಿ ಕೆರೆಯೊಂದನ್ನು ಕಟ್ಟಿಸಿದ ವಿವರಗಳಿವೆ. ಅವಳ ಶಾಸನದಲ್ಲಿ ಎರೆಯಂಗನಿಗಿಂತ ಈ ಮಹಾದೇವಿಯ ಪಿತಾಮಹ, ಮಾತಮಹ, ದೊಡ್ಡಪ್ಪ, ತಂದೆಯರ ವರ್ಣನೆಗೆ ಹೆಚ್ಚು ಪ್ರಾಶಸ್ತ್ಯವಿದೆ. ಈ ಪ್ರದೇಶ ಅವಳ ಆಳ್ವಿಕೆಗೆ ಒಳಪಟ್ಟಿದ್ದಿರಬಹುದೆನಿಸುತ್ತದೆ. ಇವಳು ತ್ರಿಭುವನಮಲ್ಲ ರಾಯಪಾಂಡ್ಯನ ಸೋದರ ಇರುಕ್ಕವೇಳನ ಮಗಳು. ಈ ಇರುಕ್ಕವೇಲು ಅಥವಾ ಪಲಂತ ಪಾಂಡ್ಯನು ತಮಿಳುನಾಡಿನಿಂದ ಬಂದ ೩೦೦ ವಲಸಿಗರಿಗೆ ನೀಲಗುಂದದಲ್ಲಿ ನೆಲೆಸಲು ಅವಕಾಶ ಮಾಡಿಕೊಟ್ಟಿದ್ದನು.[೯೩] ಇವಳ ದೊಡ್ಡಪ್ಪ ಮತ್ತು ತಂದೆಯ ಆಳ್ವಿಕೆಯ ಕಾಲದಲ್ಲಿ ಪಾಂಡ್ಯ ನಾಡಿನ ಬಾಗಳಿಯಲ್ಲಿ ಕೊಳೆಮೂಕ ಪಟ್ಟಣದಿಂದ ವಲಸೆ ಬಂದ ಮಹಾವಡ್ಡ ವ್ಯವಹಾರಿಗಳು ನೆಲಸಿದ್ದರು.[೯೪] ಹೊಯ್ಸಳ ನಾಡಿನೊಂದಿಗೆ ಇವರಿಗೆ ಸಂಪರ್ಕವಿತ್ತು. ಹೊಯ್ಸಳ ವೀರ ಬಲ್ಲಾಳ ಪಾಂಡ್ಯ ರಾಜಕುಮಾರಿ ಪದ್ಮಲಾದೇವಿಯನ್ನು ವಿವಾಹವಾಗಿದ್ದ. ಕ್ರಿ.ಶ.೧೧೯೩ರ ಒಂದು ಶಾಸನ [೯೫] ಬಲ್ಲಾಳನು ಬಾಗಳಿಯ ನೆಲೆವೀಡಿನಲ್ಲಿ ಆಳುತ್ತಿದ್ದನೆನ್ನುತ್ತದೆ. ಅವನ ಉಚ್ಚಂಗಿ

ಗೆಲುವಿನ ನಂತರ ಮುತ್ತನಹೊಸವೂರಿಗೆ ಮತ್ತೊಂದು ಮಹತ್ತರವಾದ ವರ್ತಕ ಕುಟುಂಬದ ವಲಸೆ ನಡೆದಿರುವುದನ್ನು ಇಲ್ಲಿನ ಶಾಸನಗಳು ಹೇಳುತ್ತವೆ.[೧೯೬]

### ೪.೨.೨.೫. ವರ್ತಕರ ವಲಸೆ

ಈ ಹಿಂದೆ ಚರ್ಚಿಸಿದಂತೆ ಹೊಯ್ಸಳ ಅರಸರು ವಾಣಿಜ್ಯ ಚಟುವಟಿಕೆಗಳಿಗೆ ವ್ಯಾಪಾರಿಗಳಿಗೆ ದೇಶೀಯ ಅಂತರ್ ದೇಶೀಯ ವಾಣಿಜ್ಯಕ್ಕೆ ಪ್ರೋತ್ಸಾಹ ನೀಡಿದ್ದುದರ ಪರಿಣಾಮವಾಗಿ ಹಾಗೂ ಸಂತೆ ನಡೆಸಲು, ಪಟ್ಟಣ ನಿರ್ಮಾಣ ಮಾಡಲು ಕೆರೆ ಕಟ್ಟೆ ನಿರ್ಮಾಣಗಳಲ್ಲಿ ಬಂಡವಾಳ ಹೂಡಲು ಪ್ರೋತ್ಸಾಹಿಸುವ ಸಲುವಾಗಿ ಅನೇಕ ರೀತಿಯ ತೆರಿಗೆ ವಿನಾಯಿತಿ ಉಂಬಳಿ ಕೊಡುಗೆಗಳಂತಹ ವಾಸ್ತವ ಆಕರ್ಷಣೆಗಳನ್ನು ಹೊಂದಿದ್ದ ಅವರ ಆರ್ಥಿಕ ನೀತಿಗಳ ಪರಿಣಾಮವಾಗಿ ಸ್ಥಳೀಯ ಸಿರಿವಂತರನ್ನಷ್ಟೇ ಅಲ್ಲ ವಲಸಿಗರನ್ನು ಆಕರ್ಷಿಸಿದ್ದರು. ಈ ಮುಕ್ತ ವಾತಾವರಣ ವಲಸಿಗ ವ್ಯಾಪಾರಿಗಳಿಗೆ ಬಹಳ ಪ್ರೋತ್ಸಾಹಕವಾಗಿತ್ತು. ಹಾಗಾಗಿ ಆ ಕಾಲದಲ್ಲಿ ವಿಶೇಷವಾಗಿ ಹೊರನಾಡಿನ ವಲಸಿಗ ವ್ಯಾಪಾರಿಗಳು ವ್ಯಾಪಾರ ವಹಿವಾಟಿಗಾಗಿ ಇಲ್ಲಿ ಬಂದು ಹೋಗುತ್ತಿದ್ದುದಷ್ಟೇ ಅಲ್ಲ ಅವರು ಇಲ್ಲಿ ಶಾಶ್ವತ ನೆಲೆಯನ್ನು ಕಂಡುಕೊಳ್ಳತೊಡಗಿದರು. ಇಲ್ಲಿನ ಆರ್ಥಿಕ ಸಾಮಾಜಿಕ ನೀತಿಯ ಪೂರ್ಣಲಾಭ ಪಡೆದರು. ತಾವೂ ಬೆಳೆದರು ತಾವು ನೆಲೆಸಿದ ಗ್ರಾಮಗಳನ್ನು ಅಭಿವೃದ್ಧಿ ಪಡಿಸಿದರು.

ಭಾರತದ ಬೇರೆ ಬೇರೆ ಪ್ರಾಂತ್ಯಗಳಿಂದ ಬಂದು ಕರ್ನಾಟಕದಲ್ಲಿ ನೆಲೆಸಿದ ವರ್ತಕರಲ್ಲಿ ಕೇರಳದಿಂದ ಬಂದ ಮಹಾವಡ್ಡ ವ್ಯವಹಾರಿಗಳು ಹೆಚ್ಚು ಗಮನ ಸೆಳೆಯುತ್ತಾರೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಅರಕೆರೆ, ಬೆಂಡೆಕೆರೆ, ಮತ್ತನಹೊಸವೂರು, ಗೀಜಿಹಳ್ಳಿ, ಶಂಕರನಹಳ್ಳಿ, ಕಣಿಕಟ್ಟೆ ಶಾಸನಗಳು ವಲಸಿಗ ವರ್ತಕರ ಮೇಲೆ ಬೆಳಕು ಚೆಲ್ಲುತ್ತವೆ. ಈ ಕೆಲವು ಶಾಸನಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ ಮಧ್ಯಕಾಲೀನ ಕರ್ನಾಟಕದ ರಾಜ ಮಹಾರಾಜರು ಅನುಸರಿಸಿದ ಆರ್ಥಿಕ ನೀತಿಯಿಂದಾಗಿ ಹೆಚ್ಚಿನ ಸಂಖ್ಯೆಯಲ್ಲಿ ಹೊರಗಿನ ಬಂಡವಾಳಗಾರರು ಈ ನೆಲದಲ್ಲಿ ಬೇರುಬಿಟ್ಟು ಅಪಾರವಾದ ಭೂಮಿಯ ಒಡೆತನವನ್ನು ಪಡೆದುಕೊಂಡು ಸಶಕ್ತರಾಗಿ ಬೆಳೆದಿರುವುದೂ ಸ್ಥಳೀಯರ ಆರ್ಥಿಕ ಸ್ಥಿತಿ ಅವನತಿಯತ್ತ ಮುಖಮಾಡಿರುವುದೂ ಕಂಡುಬರುತ್ತದೆ. ಸಧ್ಯದಲ್ಲಿ ಇಂತಹದೇ ಪರಿಸ್ಥಿತಿಯನ್ನು ಅನುಭವಿಸುತ್ತಿರುವ ನಾವು ಇಂತಹ ಶಾಸನಗಳನ್ನು ಓದಿಕೊಳ್ಳುವಾಗ ಅವು ಏನನ್ನು ಹೇಳುತ್ತಿವೆ? ಯಾವ ಧ್ವನಿಯಲ್ಲಿ ಯಾವ ಬಣ್ಣಕೊಟ್ಟು ಹೇಳುತ್ತಿವೆ ಮತ್ತು ಏನನ್ನು ಮರೆ ಮಾಚುತ್ತಿವೆ ಎಂಬುದನ್ನು ಸೂಕ್ಷ್ಮವಾಗಿ ಗಮನಿಸುವ ಅಗತ್ಯವಿದೆ.

ಕೇರಳದ ಕೊಳೆಮೂಕ ಪಟ್ಟಣದಿಂದ ವಲಸೆ ಬಂದ ವರ್ತಕರು ಮುತ್ತನಹೊಸವೂರಿನ ಸುತ್ತಮುತ್ತಲ ಪ್ರದೇಶಗಳಲ್ಲಿ ನೆಲೆನಿಂತಿರುವುದು ಕಂಡುಬರುತ್ತದೆ. ಮಹಾವಡ್ಡ ವ್ಯವಹಾರಿ ಕುಂಜಿಸೆಟ್ಟಿಯು ಪಾಂಡ್ಯಸೇನೆ ಕರಗಿಹೋಗುವಂತೆ ಸಾಹಸ ತೋರಿದ್ದರಿಂದ ಬಲ್ಲಾಳನು ಅವನನ್ನು ಕರೆಸಿ ಅವನ ಸಾಹಸಕ್ಕೆ

ತಲೆದೂಗಿ ಪ್ರೀತಿಯಿಂದ ಪರಾಕ್ರಮಕ್ಕೆ ಪಡಿಯಾಗಿ ಈ ಮುತ್ತನಹೊಸವೂರನ್ನು ನೀಡುತ್ತಾನೆ. ಕುಂಜಿಸೆಟ್ಟಿಯ ಸೆಟ್ಟಿಪಟ್ಟವು ಈ ನೆಲದಲ್ಲಿ ಮತ್ತಷ್ಟು ಹೆಮ್ಮೆಯನ್ನು, ಶ್ರೇಷ್ಠತೆಯನ್ನು ಪಡೆಯಿತು ಎನ್ನುತ್ತದೆ ಶಾಸನ.[೧೯೭] ಈ ರೀತಿ ಸೆಟ್ಟಿಪಟ್ಟವನ್ನು ಪಡೆದ ಕುಂಜಿಸೆಟ್ಟಿ ಮುತ್ತನ ಹೊಸವೂರಿಗೆ ವಲಸೆ ಬಂದು ನೆಲಸಿದ್ದಾನೆ. ಇವನ ಅಳಿಯಸಂತಾನದ ವಂಶದವರು ಇಲ್ಲಿ ಕೈಗೊಂಡ ವ್ಯಾಪಾರ ವಹಿವಾಟು, ಅಭಿವೃದ್ಧಿ ಕಾರ್ಯಗಳು, ಸ್ಥಳೀಯರೊಂದಿಗಿನ ಅವರ ಒಡನಾಟ ಅವರ ಸಂಸ್ಕೃತಿ ವಿಶೇಷತೆಗಳನ್ನು ಅವರ ಕೆಲವು ಶಾಸನಗಳ ಸಹಾಯದಿಂದ ಅರ್ಥಮಾಡಿಕೊಳ್ಳಬಹುದು.

ಈ ಮುತ್ತನಹೊಸವೂರು 'ವನಜಾತ ವಿಷಯಕಾಂತೆಗೆ ಜನಪದ ಲಕ್ಷ್ಮಿಗಿಟ್ಟ ಹೊಸಬೊಟ್ಟು ಅನೂನ ಸುಖಸಾಗರ ವುಂನತ ಭೋಗದಾಗರವಾಗಿತ್ತು' ಎಲ್ಲಿ ನೋಡಿದರೂ ಬೆಳೆದು ನಿಂತ ಪೈರು, ಅರಳಿದ ಹೂವುಗಳು, ತುಂಬಿದ ಬನಗಳಿಂದಾಗಿ ಅಲ್ಲಿನ ಹಕ್ಕಿ ದುಂಬಿ ಮಾನಸರಿಗೆ ಹಸಿವೆಂಬುದೇ ತಿಳಿದಿರಲಿಲ್ಲವೆನ್ನುತ್ತದೆ ಶಾಸನ. ಈ ಸಂಪತ್ತಿಗೆ ಈಗಾಗಲೇ ಅಲ್ಲಿ ನಿರ್ಮಾಣಗೊಂಡಿದ್ದ ಅನೇಕ ಕೆರೆಗಳೂ, ಮುಖ್ಯ ವಾಣಿಜ್ಯ ಪಥಕ್ಕೆ ಸಮೀಪವಾದ ಸ್ಥಳವೂ ಆಗಿದ್ದುದರ ಬಗೆಗೆ ತಿಳಿದುಕೊಂಡಿದ್ದೇವೆ. ಇಂತಹ ಗ್ರಾಮವನ್ನು ಸೆಟ್ಟಿಪಟ್ಟವಾಗಿ ಪಡೆದನಂತರ ಈ ವಂಶದವರು ಅಲ್ಲಿ ಕೋಟೆ ನಿರ್ಮಾಣ, ರಸ್ತೆ ನಿರ್ಮಾಣ, ಹೊಸ ಭೂಮಿಗಳನ್ನು ಸಾಗುವಳಿಗೆ ರೂಢಿಸುವ ಕಾರ್ಯ, ದೇವಾಲಯ ನಿರ್ಮಾಣಗಳನ್ನು ದಾನ ಧರ್ಮ ಕಾರ್ಯಗಳನ್ನು ಯಥೇಚ್ಛವಾಗಿ ಮಾಡಿದ್ದಾರೆ. ಅಲ್ಲದೆ ಮಹಾ ವಡ್ಡ ವ್ಯವಹಾರಿಗಳಾಗಿ, ಸಂಧಿವಿಗ್ರಹಿಗಳಾಗಿ ಹೊಯ್ಸಳ ಅರಸರ ಆಸ್ಥಾನದಲ್ಲಿ ವಿಶೇಷ ಗೌರವಕ್ಕೆ ಪಾತ್ರರಾಗಿದ್ದಾರೆ.

ಈ ಕುಟುಂಬದವರು ಕೇರಳ ದೇಶಲಕ್ಷ್ಮಿಯ ಮುಖಾರವಿಂದಕ್ಕೆ ಕನ್ನಡಿಯಂತಿದ್ದ ಕುಳಮೂಕನಗರದ ಮೂಲನಿವಾಸಿಗಳಾಗಿದ್ದರು. ಇವರು ವೈಶ್ಯ ಕುಲಾಭರಣರೂ, ಸದ್ಗುಣ ಕರಣ್ನರುಂ, ಭದ್ರ ಕಾಳೀದೇವಿ ಲಬ್ಧ ವರಪ್ರಸಾದರೂ, ವಸ್ತು ವಾಹನ ಲಕ್ಷಣ ವಿಶಾರದರೂ ಆಗಿದ್ದು ಮಹಾವಡ್ಡ ವ್ಯವಹಾರಿಗಳಾಗಿ ಪ್ರಸಿದ್ಧರಾಗಿದ್ದರು.

**ಕುಂಜಸೆಟ್ಟಿ :** ಈತ ಕೇವಲ ವಡ್ಡ ವ್ಯವಹಾರಿಯಷ್ಟೇ ಅಲ್ಲ "ವೀರದಕಣಿ ವೀರದ ನಿಧಿ ಎಂದು ಪ್ರಸಿದ್ಧನಾಗಿದ್ದನು. ಮಹಾ ಯೋಧನಾಗಿದ್ದ ಈತ ಹೊಯ್ಸಳ ಇಮ್ಮಡಿ ಬಲ್ಲಾಳನ ಸೇವೆಯಲ್ಲಿ ಉಚ್ಚಂಗಿದುರ್ಗದ ವಿಜಯದಲ್ಲಿ ವೈರಿ ಕೋಳಾಹಳನಾಗಿ ತೋರಿದ ಸಾಹಸಕ್ಕಾಗಿ ವೀರದ ಪೆರ್ಮೆಯನ್ನು ಕೀರ್ತಿಯನ್ನು, ಸುಭಟ ಪಟ್ಟದೊಂದಿಗೆ ಸೆಟ್ಟಿಪಟ್ಟವನ್ನು ಪಡೆದುಕೊಂಡನು.

**ಕೊಂಡನಂಬಿ :** ಕುಂಜಸೆಟ್ಟಿಯ ಅಳಿಯನಾದ ಕೊಂಡನಂಬಿಯ ಘನವ್ಯಕ್ತಿತ್ವವನ್ನು ಕವಿ ಮನದುಂಬಿ ಹೊಗಳಿದ್ದಾನೆ. 'ಅತಿಶಯ ತೀರ್ಥಗಳು ಎಲ್ಲೆಲ್ಲಿ ಇರುವುವೋ ಅಲ್ಲಿಯೇ ತನ್ನ ದಾನದದೇಳ್ಗೆ ತನ್ನ ನೆಗಳ್ತೆ, ತನ್ನಯ ಸತ್ಯ ಬುದ್ಧಿ ಸಂಗತಿ ಎಂದು ಭಾವಿಸಿ ಈ ಕೊಂಡನಂಬಿ ಹರಿಹರದಲ್ಲಿ,

ರಾಮಸೇತುವಿನಲ್ಲಿ, ಪಂಡರಂಗೆಯಲ್ಲಿ, ವಾರಣಾಸಿಯಲ್ಲಿ 'ವಾರಿಸತ್ರ'ಗಳನ್ನು ಇಡಿಸಿದ್ದ ಅಚುಂಬಿತ ಭಾಗ್ಯವಂತನಾಗಿದ್ದನಂತೆ. ಇಂದ್ರನಿಗೆ ಸಮನಾದ ವೈಭವವೂ ಉಭಯನಾನಾದೇಸಿಗಳನ್ನು ಒಲವಿನಿಂದ ಪ್ರತಿಪಾಳಿಸುವ ಈ ಮಹಾವಡ್ಡ ವ್ಯವಹಾರಿಯು 'ಅರಸಿರಿಕೊಂಡನಂಬಿ' ಎಂದೇ ಪ್ರಖ್ಯಾತನಾಗಿದ್ದನಂತೆ. ಈ ಮಾತುಗಳಿಂದ ಕೊಂಡನಂಬಿಯ ಐಶ್ವರ್ಯ, ವರ್ತಕ ಶ್ರೇಣಿಯಲ್ಲಿ ಪಡೆದಿದ್ದ ವರ್ಚಸ್ಸು, ಅವನ ವ್ಯಾಪಾರ ವಹಿವಾಟಿನ ವಿಸ್ತಾರ ಪ್ರದೇಶ, ಆ ಪ್ರದೇಶಗಳಲ್ಲಿ ಉಭಯ ನಾನಾ ದೇಸಿಗಳ ಸಹಾಯಕ್ಕಾಗಿಯೇ ಅವನು ಕಟ್ಟಿಸಿರುವ ಛತ್ರಗಳು, ಅವನನ್ನು ದಯದ ಆಣ್ಮ ಅನಾಥರ ಕಲ್ಪ ಬೂರುಹವೆಂದು ಕರೆಯಲು ಕಾರಣವೆಂದು ತೋರುತ್ತದೆ. ಅರಕೆರೆಯ ಸಮೀಪದ ಕೊಂಡಂಬಾಗಿಲು ಅಗ್ರಹಾರ ಬಹುಷ ಇವನ ಹೆಸರಿನಲ್ಲೇ ನಿರ್ಮಾಣವಾದಂತೆ ತೊರುತ್ತದೆ. ಏಕೆಂದರೆ ಕೊಂಡಂಬಾಗಿಲಿನ ಮಹಾಜನರಿಗೂ ಈ ಕುಟುಂಬದವರಿಗೂ ಆತ್ಮೀಯ ಸಂಬಂಧವಿರುವುದು ಕಂಡುಬರುತ್ತದೆ.[೧೯೮] ಇವನಿಗೆ ಪ್ರಸಿದ್ಧರಾದ ಇಬ್ಬರು ಸೋದರರು ಇದ್ದರು ದಾಮೋದರಶೆಟ್ಟಿ ಮತ್ತು ಕುಂಜನಂಬಿ ಸೆಟ್ಟಿಯರು.

**ದಾಮೋದರ ಶೆಟ್ಟಿ** : ಇವನು ಕೇರಳದ ಕೊಳೆ ಮೂಕ ಪಟ್ಟಣಕ್ಕೆ ಅಧಿಪತಿ ಎನಿಸಿದ್ದ ಗೋವಿಂದನ ಮೊಮ್ಮಗ. ತಾಯಿ ಚೆರುನಂಗೆ ತಂದೆ ನಂಬ್ಯಕ್ಕಮಣವಾಳ. ಸಿರಿಯೊಡನೆ ಮುನಿಮುಖ್ಯರ ಮಧ್ಯೆ ಅಚ್ಚುತ ಇರುವಂತೆ ಈತ ಅರಕೆರೆಯ ದ್ವಿಜರ ಮಧ್ಯೆ ನೆಲೆಸಿದ್ದನಂತೆ! ಇವನು ಪರಮ ವೈಷ್ಣವನಾಗಿದ್ದ. 'ಹರಿಯ ಕಥೆ ಹರಿಯಕಥನಂ ಹರಿಯರ್ಚನೆ ಹರಿಯಭಕ್ತಿ ಹರಿಯಾನಂದ ನೆರೆದಿರೆ ದಾಮೋದರ ಹರಿಮಯವೆನೆ ನೆಗಳ್ದಂ" ಅನೇಕ ವಿಷ್ಣು ಭಕ್ತರ ಭಕ್ತಿಗಿಂತ ಮಿಗಿಲಾದ ಭಕ್ತಿ ನಿಧಾನನಾಗಿದ್ದನು ಅರಕೆರೆಯಲ್ಲಿ ಚೆನ್ನಕೇಶವ, ಲಕ್ಷ್ಮೀನರಸಿಂಹ, ಗೋಪಾಲದೇವರ ತ್ರಿಕೂಟಾಚಲ ದೇವಾಲಯವನ್ನು ನಿರ್ಮಿಸಿದ್ದಾನೆ. ಸಮಸ್ತ ಶ್ರೀಕಾರ್ಯಕ್ಕೆ ಅಪಾರ ಭೂಮಿ, ತೋಟ, ಮನೆಗಳನ್ನು ಬಿಟ್ಟಿದ್ದಾನೆ.[೧೯೯] ಬೆಂಡೆಕೆರೆಯಲ್ಲಿ ದಾಮೋದರೇಶ್ವರ ದೇವಾಲಯ ನಿರ್ಮಿಸಿ ಭೂದಾನ ಮಾಡಿದ್ದಾನೆ.[೨೦೦] ಇವನು ಹೊಯ್ಸಳ ನರಸಿಂಹನ ಅಪ್ತ ರಾಜಶ್ರೇಷ್ಠಿ. ನಾನಾ ವಸ್ತುವಾಹನ ಪರೀಕ್ಷೆಯಲ್ಲಿ ತಜ್ಞನೂ ಸುವರ್ಣ, ರತ್ನ, ಗೋ, ಮೇದಿನಿ, ವಸ್ತ್ರ, ಧಾನ್ಯ, ವರಕಂನ್ಯೆಕೆರೆಯರ್ ಫಲತೋಯದಾನ, ಉಭಯಮುಖಿ (ಗರ್ಭಧರಿಸಿರುವ ಗೋವು) ದಾನ, ಜಲದಾನ ಸಮುದ್ಧರಣನು ಆಗಿದ್ದನು. ಕೆರೆಗಳನ್ನು ಸುರಾಲಯಗಳನ್ನು ಕಟ್ಟಿಸಿ, ಅರವಟ್ಟಿಗೆ ಉದ್ಯಾನವನ ಛತ್ರಗಳನ್ನಿಡಿಸಿ ಬೆಂಡೆಯ ಕೆರೆಯಲ್ಲಿ ಬ್ರಹ್ಮಪುರಿಯನ್ನು ನಿರ್ಮಿಸಿದ್ದಾನೆ. ಅತ್ಯಂತ ಸಿರಿವಂತನಾದರೂ ಇವನು ಉತ್ತಮ ಮಾನವನಾಗಿದ್ದ'ನೆನ್ನುತ್ತದೆ ಶಾಸನ. ಪ್ರಭುವರ್ಗದೊಂದಿಗೆ ನಿಕಟ ಸಂಪರ್ಕಹೊಂದಿದ್ದು, ತನ್ನ ವ್ಯಾಪಾರ ವಹಿವಾಟಿನಿಂದ ರಾಜನ ಬೊಕ್ಕಸದ ಅಪಾರ ಆದಾಯಕ್ಕೆ ಕಾರಣನಾಗಿದ್ದುದಷ್ಟೇ ಅಲ್ಲ ಸಮಾಜ ಕಲ್ಯಾಣ ಕಾರ್ಯಗಳಿಂದ ಸ್ಥಳೀಯರ ಪ್ರೀತಿಯನ್ನೂ ಗಳಿಸಿಕೊಂಡಿದ್ದನೆಂಬುದು ತಿಳಿದುಬರುತ್ತದೆ.

**ಕುಂಜನಂಬಿ :** ಇವನು ಕೊಂಡನಂಬಿ ಮತ್ತು ದಾಮೋದರ ಶೆಟ್ಟಿಯಿಂದ ಕಿರಿಯ ಸೋದರ. ಉತ್ತಮ ವ್ಯಾಪಾರಿಯಾಗಿದ್ದುದರ ಜೊತೆಗೆ ಉತ್ತಮ ರಾಯಭಾರ ಕುಶಲಿಯೂ ಆಗಿದ್ದನು. 'ಧಾತ್ರೀನಾಥರ್ಕಳ ಚಿತ್ತವೃತ್ತಿಗಳನಿಙ್ಗಾ ಮಾತ್ರ'ದಿಂದಲೇ ತಿಳಿದುಕೊಂಡುಬಿಡಬಲ್ಲ ಕುಶಲಿ. ಉತ್ತಮ ರತ್ನ ಪರೀಕ್ಷಣಾ ಚತುರನೂ ಆಗಿದ್ದನು. ದಕ್ಷಿಣದ ಹೊಯ್ಸಳ ಸಾಮ್ರಾಟ ಮತ್ತು ಉತ್ತರದ ಬಲ್ಲಹ ಇವರಿಬ್ಬರನ್ನೂ ಮೆಚ್ಚಿಸಿ ಇಬ್ಬರ ನಡುವೆ ಮುಂಕೈವತ್ತಿಸಿ (Shakehands) ಸಂಧಾನವನ್ನೇರ್ಪಡಿಸಿ ಮೆಚ್ಚುಗೆ ಪಡೆದುಕೊಂಡಿದ್ದನಂತೆ! ಇವನು ಸತ್ಯದ ಸಾಕಾರ ರೂಪನೂ ಸಮಾಲೋಚನೆಯಲ್ಲಿ ವಿದ್ಯಾಧರನೂ ಆಗಿದ್ದನು. ಅವನ ಮಂತ್ರಾಲೋಚನ ಸಾಮರ್ಥ್ಯಕ್ಕೆ ಸಮನಾದ ಯಾವ ಸೆಟ್ಟಿಯೂ ಇರಲಿಲ್ಲ. ಈ ಮೈತ್ರಿ ಒಪ್ಪಂದವು ಇಮ್ಮಡಿ ವೀರಬಲ್ಲಾಳ ಮತ್ತು ಕಲಚುರಿ ಸಂಕಮರ ನಡುವೆ ಏರ್ಪಟ್ಟಿರುವುದೆಂದು ಇತಿಹಾಸಕಾರರು ಹೇಳಿದ್ದಾರೆ.[೨೦೧] ಕುಂಜನಂಬಿಯನ್ನು 'ನಯವಿದ ಚಕ್ರವರ್ತಿ ರಾಜಪೂಜ್ಯ ಅಖಿಳ ಅವನೀತಳ ಅಶೇಷ ಗುಣಗಳ ಪುಟ್ಟಿ' ಎಂದು ಕವಿ ಹೊಗಳಿದ್ದಾನೆ. ಇವನು ಮಾಳವ, ಕಳಿಂಗ, ಚೋಳ, ಪಾಂಡ್ಯ ಹೊಯ್ಸಳ ಮುಂತಾದ ಅರಸರ ಅವಸರಕ್ಕೆ ಒದಗಿ ಅವರ ಕಾರ್ಯಗಳನ್ನು ಶ್ರದ್ಧೆಯಿಂದ ಮಾಡುತ್ತಿದ್ದುದರಿಂದ ಅವನ ಕೀರ್ತಿ ವಿಶಾಲವಾಗಿ ಹರಡಿತ್ತು.[೨೦೨]

**ಭಂಡಿನಂಬಿ ಸೆಟ್ಟಿ :** ಇವನು ಕುಂಜನಂಬಿಯ ಅಳಿಯ, ಭಂಡಿಯ ತುಂಬ ಹೊನ್ನನ್ನು ತುಂಬಿ ದಾನ ಮಾಡಿದುದರಿಂದ ಭಂಡಿನಂಬಿ ಎಂಬ ಹೆಸರು ಬಂದಿತಂತೆ! ಅತ್ಯಂತ ಸಿರಿವಂತನೂ ಭೋಗಭಾಗ್ಯ ಪುರುಷಾರ್ಥಗಳೊಂದಿಗೆ ವಿನಯವನ್ನು ಹೊಂದಿದ್ದ ಈತ ದೇವ ದ್ವಿಜಾರಾಧನಪರನಾಗಿದ್ದನು. ಇವನ ಮಗಳು ಚಂದ್ರಿಕಾಮಹಾದೇವಿ. ಕಾಕರಮಣವಾಳ ಮತ್ತು ಸೋವಿಯಕ್ಕರ ಮಗನಾದ ಕಂಡನಂಬಿಯು ಚಂದ್ರಿಕಾ ಮಹಾದೇವಿಯನ್ನು ಮದುವೆಯಾಗಿ ಭಂಡಿನಂಬಿಸೆಟ್ಟಿಯರ ಅಳಿಯನೆಂಬ ಪ್ರಖ್ಯಾತಿಗೆ ಪಾತ್ರನಾಗಿದ್ದನು.[೨೦೩]

**ಕಂಡನಂಬಿಸೆಟ್ಟಿ :** ಕಂಡ ನಂಬಿಸೆಟ್ಟಿಯು ಹಿರಿಯ ಭಂಡಿನಂಬಿಯರ ಅಳಿಯನಾಗಿ ಅಪಾರ ಸಂಪತ್ತಿನ ಒಡೆಯನಾದನು. ಚಂದ್ರಿಕಾ ಮಹಾದೇವಿಯಿಂದ ಮಗ ಕುಂಜ ಹಾಗೂ ಹೆಣ್ಣು ಮಕ್ಕಳು ಸೋವಕ್ಕ ಹಾಗೂ ಚಂದವ್ವೆಯರನ್ನು ಪಡೆದನು. ಮಗ ಕುಂಜನು ಶಿವನ ಮಹಾಭಕ್ತನಾಗಿದ್ದು, ಹರಪದ ಪೂಜೆಯಲ್ಲಿ ಹರಕಥೋಚಿತ ತತ್ವ ಸುಖಾನುಸೇವೆಯಲ್ಲಿ ಹರಸಮಯ ಪ್ರಭಾವ ಪರಿವರ್ತನೆ ಹರಸ್ಮರಣೆಯಲ್ಲಿ ತನುವನ್ನು ಧನವನ್ನು ವ್ಯಯಿಸುತ್ತಿದ್ದನು. 'ತನುವನ್ನು ಜಂಗಮದೆಡೆಯೊಳು ಮನವನ್ನು ಶ್ರೀ ಸೋಮನಾಥಪದ ಪಂಕಜದೊಳಗೆ ವಿನಿಯೋಗಿಸಿದ್ದ ಈ ಕುಂಚನ ಸಾವು ಈ ಕುಟುಂಬದಲ್ಲಿ ವಿಶೇಷ ಬದಲಾವಣೆಯನ್ನು ತಂದಂತೆ ತೋರುತ್ತದೆ. ಕುಂಜನ ಪರೋಕ್ಷ ವಿನಯಕ್ಕಾಗಿ ಕುಂಜೇಶ್ವರ ದೇವಾಲಯವನ್ನು ಕಂಡ ನಂಬಿ ಕಟ್ಟಿಸುತ್ತಾನೆ. ಹೇರಳ ದಾನದತ್ತಿ ನೀಡಿದ್ದಾನೆ.[೨೦೪] ಕುಂಜನ ಸೋದರಿ ಚಂದವ್ವೆಯ ಮೇಲೂ ವಿಶೇಷವಾಗಿ ವೀರಶೈವ ಧರ್ಮದ ಪ್ರಭಾವ ಕಂಡುಬಂದಿದೆ. ಆಕೆ

ಗಣಕುಮಾರಿಯಾಗಿದ್ದಾಳೆ. ಕಂಡನಂಬಿಯು ಮಗಳನ್ನು ಕುಂಚೇಶ್ವರ ದೇವಾಲಯದ ಮುಖ್ಯಸ್ಥೆಯನ್ನಾಗಿ ಮಾಡಿ ರಾಜಗುರು ರುದ್ರಶಕ್ತಿಯ ನೇತೃತ್ವದಲ್ಲಿ ನೂರಿಪ್ಪತ್ತು ಶೈವ ಸ್ಥಾನಿಕರೂ, ಕಂಪಣಾಚಾರ್ಯ ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ಸಂನಿಧಾನದಲ್ಲಿ ಆಕೆಗೆ ವಿಭೂತಿ ಪಟ್ಟವನ್ನು ಕಟ್ಟಿಸುತ್ತಾನೆ. ಅಲ್ಲಿ ಒಂದು ಶೈವಮಠವಿದ್ದು ಅದರ ಮೇಲಿನ ಮಠದೆರೆಯನ್ನು ಮಾನ್ಯಮಾಡಿರುವುದು ತಿಳಿದುಬರುತ್ತದೆ.

ಅನ್ಯ ಭಾಷಾ ಸಾಂಸ್ಕೃತಿಕ ಸಂದರ್ಭದಲ್ಲಿ ನೆಲೆಸಿದ್ದಾಗ್ಯೂ ತಮ್ಮ ಮಾತೃ ಮೂಲೀಯ ಸಂಸ್ಕೃತಿ ಯನ್ನು ಉಳಿಸಿಕೊಂಡು ಅಳಿಯ ಸಂತಾನ ಕಟ್ಟನ್ನು ಮುಂದುವರೆಸಿಕೊಂಡು ಈ ಕುಟುಂಬ ಸುಮಾರು ಅರ್ಧ ಶತಮಾನಕ್ಕೂ ಹೆಚ್ಚು ಕಾಲನೆಲಸಿತ್ತೆಂದು ಹೇಳಬಹುದು.

**೪.೨.೨.೬. ವಲಸಿಗರು ಮತ್ತು ಸ್ಥಳೀಯರ ಸಂಬಂಧ**

ವಲಸಿಗರ ಒಡೆತನವನ್ನು ಸ್ಥಳೀಯರು ಯಾವ ರೀತಿ ಒಪ್ಪಿಕೊಳ್ಳುತ್ತಿದ್ದರು. ವಲಸಿಗರಿಗೆ ಗ್ರಾಮಗಳನ್ನು ಕೊಡುಗೆಯಾಗಿ ನೀಡುವ ಮೊದಲು ಸ್ಥಳೀಯರ ಒಪ್ಪಿಗೆ ಪಡೆಯಲಾಗುತ್ತಿತ್ತೆ? ಅಥವಾ ತಮ್ಮ ನಿರ್ಧಾರಗಳನ್ನು ಅಧಿಕಾರಸ್ಥರು ಸ್ಥಳೀಯರ ಮೇಲೆ ಹೇರುತ್ತಿದ್ದರೆ? ಹೀಗೆ ಹೊರಗಿನಿಂದ ಬಂದವರೊಂದಿಗೆ ಸ್ಥಳೀಯರ ಸಂಬಂಧ ಯಾವ ರೀತಿಯದಾಗಿರುತ್ತಿತ್ತು? ಇಂಥ ಪ್ರಶ್ನೆಗಳನ್ನು ಉಂಬಳಿ ಕೊಡಗಿ ಗ್ರಾಮ ದಾನ ಅಗ್ರಹಾರ ಪರಿವರ್ತನೆಯ ಸಂದರ್ಭಗಳಲ್ಲೂ ಎತ್ತಬಹುದು. ಆದರೆ ಶಾಸನಗಳು ಇಂತಹ ಸೂಕ್ಷ್ಮ ಸಮಸ್ಯೆಗಳ ಬಗೆಗೆ ಹೆಚ್ಚಾಗಿ ಮೌನವಹಿಸುತ್ತವೆ. ಸ್ಥಳೀಯರ ಪ್ರತಿಭಟನೆ ವ್ಯಕ್ತವಾದ ಒಂದೆರಡು ಉದಾಹರಣೆ ಸಿಗಬಹುದಷ್ಟೆ.[೨೦೫] ಶಂಕರನಹಳ್ಳಿಯಲ್ಲಿ ಮಲೆಯಾಳಿ ಶಂಕರಸೆಟ್ಟಿಯರು ಹಾಗೂ ಅವನ ಅಳಿಯಂದಿರು ನೆಲೆಸಿದ್ದು ವ್ಯಾಪಾರ ವಹಿವಾಟನ್ನು ನಡೆಸುತ್ತಿದ್ದರು. ಮಗರೆ ೩೦೦ ನಾಡಿನ ರಾಜಧಾನಿಯಾದ ಹುಳಿಯೇರು ಮತ್ತು ಮಗರೆ ೩೦೦ರ ಮೊದಲ ಬಾಡ ಕಣೆಟ್ಟಿಯ ನಡುವೆ ಇವರ ವ್ಯಾಪಾರ ವಿಶೇಷವಾಗಿತ್ತು. ಈ ಶಂಕರ ಶೆಟ್ಟಿಯು ಮಹಾವಡ್ಡ ವ್ಯವಹಾರಿಯಾಗಿದ್ದು, ಅವನ ವ್ಯಾಪಾರದಲ್ಲಿ ಅವನ ಅಳಿಯಂದಿರಾದ ಶಂಕರಚ್ಚಪಣಿಕರು, ಜಗೆಚ್ಚನಾಯರ್ ಸಹಕರಿಸುತ್ತಿದ್ದರು. ಇವರಿಗೂ ಹುಳಿಯೆರದ ಕೆಸವೆಯ ಬೊಮ್ಮನೆಂಬುವನ ಮಧ್ಯೆ ಭಿನ್ನಾಭಿಪ್ರಾಯ ವೈಮನಸ್ಸುಗಳು ಬೆಳೆದು ಕೆಸವೆಯ ಮೊಮ್ಮನನ್ನು ಇವರು ಕೊಂದಿದ್ದಾರೆ. ಬಹುಷಃ ಕೆಸವೆಯ ಬೊಮ್ಮ ಮಗರೆನಾಡಿನ ಪ್ರಮುಖ ವ್ಯಕ್ತಿಯಾಗಿದ್ದಿರಬಹುದು. ಹಾಗಾಗಿ ಈ ಕೊಲೆಗೆ ಪ್ರತೀಕಾರವಾಗಿ ಮಲ್ಲಯನಾಯಕನ ನೇತೃತ್ವದಲ್ಲಿ ಹದಿನೆಂಟು ಕೊಟ್ಟದಾಳು ಮುಖ್ಯವಾಗಿ ಮಗರೆ ನಾಡು ಹಳಿದೆಗೆದು ಬಂದು' ಶಂಕರನ ಹಳ್ಳಿಯನ್ನು ಮುತ್ತಿ ತುರುಗಳನ್ನು ಹಿಡಿದು ಶಂಕರಚ್ಚ ಪಣಿಕ್ಕರ್ ಮತ್ತು ಜಗಚ್ಚನಾಯರನ್ನು ಕೊಂದಿದ್ದಾರೆ. ಶಂಕರಶೆಟ್ಟಿಯರ ಶೆಟ್ಟಿಪಟ್ಟಣವಾಗಿದ್ದ ಈ ಊರು ಸಂಪತ್ತಿನಿಂದ ತುಂಬಿದ್ದು, ಇವರು ಸ್ಥಳೀಯರೊಂದಿಗೆ ಉತ್ತಮ ಸಂಬಂಧಗಳನ್ನು ಇಟ್ಟುಕೊಳ್ಳದ ಕಾರಣ ಅನೇಕ ಬಾರಿ ಇಂತಹ ಗೋಗ್ರಹಣಗಳು ಇಲ್ಲಿ ನಡೆದಿವೆ. ಅದಕ್ಕೆ ಆ ಗ್ರಾಮದಲ್ಲಿರುವ ಅನೇಕ ಗೋಗ್ರಹಣ ವೀರಗಲ್ಲುಗಳೇ ಸಾಕ್ಷಿ.

ಈ ವಲಸಿಗರಿಗೆ ಆಶ್ರಿತ ನೆಲೆಯಲ್ಲಿ ಬೇರು ಬಿಟ್ಟು ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ಶ್ರೇಷ್ಠಸ್ಥಾನಮಾನ ಗಳಿಸಬೇಕಾದರೆ ಎರಡು ಪ್ರಮುಖ ವರ್ಗವನ್ನು ಒಲೈಸಲೇ ಬೇಕಿತ್ತು. ಒಂದು ಅಧಿಕಾರೀ ಪ್ರಭುವರ್ಗ ಮತ್ತೊಂದು ಸಮಾಜದ ಪ್ರತಿಷ್ಠಿತ ವರ್ಗವಾಗಿದ್ದ ಮಹಾಜನರು. ವಲಸಿಗರು ಈ ಕಾರ್ಯವನ್ನು ಬಹಳ ನೈಪುಣ್ಯತೆಯಿಂದ ನಿಭಾಯಿಸಿದ್ದಾರೆ. ಆದರೆ ಸಾಮಾನ್ಯರೊಂದಿಗಿನ ಇವರ ಸಂಬಂಧಗಳು ಹೇಗಿದ್ದವೆಂಬುದು ಸ್ಪಷ್ಟವಾಗುವುದಿಲ್ಲ.

ಮುತ್ತನಹೊಸವೂರಿಗೆ ವಲಸೆ ಬಂದ ಕುಂಜಸೆಟ್ಟಿಯ ಕುಟುಂಬ ರಾಜಪ್ರೀತಿಯನ್ನು ಮಹಾಜನರ ಆಶೀರ್ವಾದವನ್ನೇನೋ ಪಡೆದಿತ್ತು. ಇವರ ಅಳಿಯ ಸಂತಾನದ ಕಂಡನಂಬಿ ವ್ಯಾಪಾರ ವಹಿವಾಟಿನೊಂದಿಗೆ ಸಾಲಬಡ್ಡಿ ವ್ಯವಹಾರವನ್ನು ಮಾಡುತ್ತಿದ್ದನೆಂದು ತಿಳಿದುಬರುತ್ತದೆ.[೨೦೬] ಆ ಪ್ರದೇಶದ ಪ್ರಮುಖ ಗಾವುಂಡುಗಳೂ ಸಹಿತ ತಮ್ಮ ಶಕ್ತಿಗೆ ಮೀರಿ ಇವನಲ್ಲಿ ಸಾಲ ಮಾಡಿರುವುದು ಕಂಡುಬರುತ್ತದೆ. ಪತ್ರ ಸಾಲದ ಮೊತ್ತ ೧೩೫೨ ಗದ್ಯಾಣ ೪೦೦ ಗದ್ಯಾಣ ೬೦ ಗದ್ಯಾಣ ಹೀಗೆ ಕ್ರಮವಾಗಿ ಚಿಕ್ಕ ಮುತ್ತನ ಹೊಸವೂರಿನ ಗೌಡ, ಗುಬ್ಬಿ ಕಲ್ಲಯ್ಯ, ಹಿರಿಯಮುತ್ತನಹೊಸವೂರಿನ ಗೌಡರು ಸಾಲವನ್ನು ತೀರಿಸಲಾಗದೆ ತಮಗೆ ಗೌಡು ಕೊಡುಗೆಯಾಗಿ ಬಂದ ತೋಟ, ಗದ್ದೆ, ಹೊಲ, ಮನೆ ಜೊತೆಗೆ ಗವುಡಿಕೆಯಲ್ಲುಳ್ಳ ಅಷ್ಟಬೋಗ ತೇಜ ಸಾಮ್ಯವೆಲ್ಲವನ್ನು ನೀಡಿ ಕಂಡ ನಂಬಿಸೆಟ್ಟಿಯರನ್ನೊಡಂಬಡಿಸಿ ಋಣ ಮುಕ್ತರಾದ ವಿಚಾರವನ್ನು ಗಮನಿಸಿದಾಗ ಆಶ್ಚರ್ಯವೂ ಖೇದವೂ ಒಟ್ಟಿಗೆ ಆಗುತ್ತದೆ. ಹೊರನಾಡುಗಳಿಂದ ಬಂದು ಅನ್ಯ ಭಾಷಿಕ ಪರಿಸರದಲ್ಲಿ ಈ ವ್ಯಾಪಾರಿಗಳು ಪಡೆದುಕೊಂಡ ಆರ್ಥಿಕ ಸದೃಢತೆ ಹಾಗೂ ಹಿಂದೊಮ್ಮೆ ಉತ್ತಮ ಕೃಷಿಭೂಮಿಗಳ ಒಡೆಯರಾಗಿದ್ದ ಸ್ಥಳೀಯರ ಆರ್ಥಿಕ ಬದುಕು ಹೇಗೆ ಅಧೋಗತಿಗೆ ಇಳಿಯಿತು ಎಂಬುದರ ಸ್ಪಷ್ಟ ಚಿತ್ರಣ ಇದಾಗಿದೆ. ಸ್ಥಳೀಯ ಗ್ರಾಮ ಸಮಾಜದಲ್ಲಿ ಪ್ರತಿಷ್ಠಿತ ವರ್ಗವಾಗಿದ್ದ ಈ ಗೌಡು ಕುಟುಂಬಗಳಿಗೇ ಇಂಥ ಪರಿಸ್ಥಿತಿ ಒದಗಿತೆಂದರೆ ಇತರ ಸಾಮಾನ್ಯರ ಸ್ಥಿತಿ ಹೇಗೆ? ಇದಕ್ಕೆ ಕಾರಣಗಳೇನು? ಗೌಡುಗಳಿಗಿದ್ದ ಆದಾಯ ಅವರ ಬದುಕಿನ ನಿರ್ವಹಣೆಗೆ ಸಾಕಾಗುತ್ತಿರಲಿಲ್ಲವೇ? ಸಾಲ ಪಡೆಯುವ ಅನಿವಾರ್ಯತೆ ಇಲ್ಲದಿದ್ದರೂ ಸಾಲ ನೀಡಲು ಅತಿ ಉತ್ಸಾಹಿ ಶ್ರೀಮಂತನೊಬ್ಬ ಮುಂದೆ ಬಂದಾಗ ಪ್ರಚೋದನೆಗೆ ಒಳಗಾಗಿ ತಮ್ಮ ಐಷಾರಾಮಕ್ಕಾಗಿ ಇಷ್ಟೊಂದು ಮೊತ್ತದ ಸಾಲ ಪಡೆದರೆ? ಅಥವಾ ಸಾಲವಾಗಿ ಹಣವನ್ನು ಪಡೆದು ಭೂಮಿಕಾಣೆಗಳಲ್ಲಿ ಬಂಡವಾಳವಾಗಿ ಹೂಡಿದರೆ? ಅಥವಾ ಕ್ಷಾಮ ಇತ್ಯಾದಿ ಕಾರಣದಿಂದ ಆ ಪ್ರದೇಶದಿಂದ ವಸೂಲಿಯಾಗಬೇಕಿದ್ದ ತೆರಿಗೆ ವಸೂಲಿಯಾಗದೆ ಇಂತಹ ಸ್ಥಿತಿ ಬಂತೆ? ಒಟ್ಟಿನಲ್ಲಿ ಈ ಸಾಲಕ್ಕಾಗಿ ಅವರ ಭೂಮಿ ಗೌಡಿಕೆಗಳು ಕೈಬಿಟ್ಟುದು ನಿಜ. ಚಿಕ್ಕ ಮುತ್ತನ ಹೊಸ ಊರಿನ ಗೋಪ ಗೌಡನ ಕುಟುಂಬದಲ್ಲಿ ತಂದೆ ಮಕ್ಕಳಿಬ್ಬರೂ ಸಾಲ ಪಡೆದಿರುವುದು ಆ ಕುಟುಂಬದ ಆರ್ಥಿಕ ಮುಗ್ಗಟ್ಟನ್ನು ಹೇಳುತ್ತದೆ.

ಈ ಸಾಲಿಗರಿಂದ ಭೂಮಿಯನ್ನು ಎರಡು ಮುತ್ತನಹೊಸವೂರ ಸಮಸ್ತ ಪ್ರಜೆಗಾವುಂಡುಗಳ ಸ್ಥಾನಿಕರ ಸಾಕ್ಷಿಯಲ್ಲಿ ಚವುಗಾವೆಯ ಮುಂದೆ ಸಾಲಕ್ಕೆ ಬದಲಾಗಿ ವಜಮಾಡಿಕೊಳ್ಳಲಾಗಿದೆ. ಕಂಡ ನಂಬಿ ಈ ರೀತಿ ಪಡೆದ ಭೂಮಿಗಳು ಹಾಗೂ ಸ್ಥಳೀಯರಿಂದ ಕ್ರಯಕ್ಕೆ ಕೊಂಡಿರುವ ಭೂಮಿಗಳು ಹಾಗೂ ಪಾಳು ಭೂಮಿ ಮತ್ತು ಹೊಸದಾಗಿ ಸಾಗುವಳಿಗೆ ರೂಢಿಸಿದ್ದ ಗದ್ದೆಗಳು, ಅವನ ಮಾವ ಬಂಡಿನಂಬಿಯರು, ಮಹಾಜನರು ಹಾಗೂ ಇತರರು ಕೊಟ್ಟ ಭೂಮಿಗಳು ಎಲ್ಲವೂ ಸೇರಿದರೆ ಅಪಾರ ಕೃಷಿ ಜಮೀನು ಮನೆ ಕಣಗಳು ಇತ್ಯಾದಿಗಳನ್ನೆಲ್ಲಾ ಅವನು ತನ್ನ ಮಗನ ಹೆಸರಿನಲ್ಲಿ ಕಟ್ಟಿಸಿದ ಕುಂಜೇಶ್ವರ ದೇವಾಲಯಕ್ಕೆ ಬಿಟ್ಟಿದ್ದಾನೆ. ಮಗಳು ಚಂದವ್ವೆಗೆ ಗಣಕುಮಾರಿತನ, ವಿಭೂತಿ ಪಟ್ಟಕಟ್ಟಿಸಿ ಆ ದೇವಾಲಯದ ಒಡತಿಯನ್ನಾಗಿ ಮಾಡಿದ್ದಾನೆ. ಹಾಗೂ ಕುಂಜೇಶ್ವರ ಪುರವರ್ಗವೊಂದನ್ನು ಸ್ಥಾಪಿಸಿದ್ದಾನೆ. ಆದರೆ ಈ ವಿಭೂತಿ ಪಟ್ಟಕಟ್ಟಿದ ಮೂರು ವರ್ಷ ಎಂಟು ತಿಂಗಳಲ್ಲೇ ಸೆಟ್ಟಿ ಪಟ್ಟವಾಗಿದ್ದ ಆ ಊರನ್ನು ಅಗ್ರಹಾರವಾಗಿ ಬದಲಾಯಿಸಿದ್ದಾನೆ. ಮಾರ ಜೀಯನ ವಲಸೆಯೊಂದಿಗೆ ಬಂದ ಶೈವಧರ್ಮ, ಸೋಮೇಶ್ವರ, ಬಲ್ಲಾಳೇಶ್ವರ, ಕುಂಜೇಶ್ವರ ಅರೆಯಶಂಕರ ಇತ್ಯಾದಿ ಶಿವಾಲಯಗಳಿಂದ ತುಂಬಿದ್ದ ಊರಾಗಿದ್ದು, ರಾಜಗುರು ರುದ್ರಶಕ್ತಿ, ನೂರಿಪ್ಪತ್ತು ಸ್ಥಾನಿಕರು, ಕಂಪಣಾಚಾರ್ಯರು, ಮಹಾಗಣಗಳು ಇವರೆಲ್ಲರ ಹಾರೈಕೆ ಹಾಗೂ ಪುರಾತನ ಶಿವಭಕ್ತರು, ಬಸವ, ದಾಸಿಮಯ್ಯರಂತಹ ಶಿವಶರಣರ ಗಾಢ ಪ್ರಭಾವವು ಕಾಣಿಸಿಕೊಂಡು ವೀರಶೈವ ವಾತಾವರಣವಿದ್ದ ಈ ಊರನ್ನು ಶಿವಪುರವಾಗಿಸುವ ಸಾಧ್ಯತೆಗಳಿದ್ದಾಗ ಅಗ್ರಹಾರ ಮಾಡಿರುವುದು ಆಶ್ಚರ್ಯವಾಗುತ್ತದೆ. ಕಾರಣಗಳನ್ನು ಹೀಗೆ ಊಹಿಸಬಹುದು. ಮಗ ಶಿವಶರಣನಾದ ಕುಂಜನಂತೂ ತೀರಿಹೋಗಿದ್ದ. ಕಿರಿಯ ಮಗಳು ಚಂದವ್ವೆ ಗಣಕುಮಾರಿಯಾಗಿದ್ದಳು. ಹಿರಿಯ ಮಗಳಿಗೆ ಭೂಮಿ ಮನೆ ಇತ್ಯಾದಿಗಳನ್ನು ಬೇರೆಯಾಗಿ ಹಂಚಿಕೊಟ್ಟಿದ್ದಾನೆ. ತನ್ನ ನಂತರ ಇವೆಲ್ಲವನ್ನು ಸಮರ್ಥವಾಗಿ ನಿಭಾಯಿಸಬಲ್ಲ ಅಳಿಯನೊಬ್ಬ ದೊರಕಲಿಲ್ಲವೋ? ಮಗ ಮತ್ತು ಹೆಂಡತಿಯ ವಿಯೋಗ ವಯಸ್ಸಿಗೆ ಸಹಜವಾದ ವೈರಾಗ್ಯ ಪುಣ್ಯಕಾರ್ಯದ ಸೆಳೆತ ಇವೆಲ್ಲ ಕಾರಣವೆಂದು ಊಹಿಸಬಹುದಾದರೂ, ಇದಕ್ಕಿಂತ ಮುಖ್ಯವಾದ ಕಾರಣ ಬೇರೆ ಎನಿಸುತ್ತದೆ. ಅತ್ಯಧಿಕ ಪ್ರಮಾಣದ ಭೂಮಿ ಒಡೆತನವು ಸ್ಥಳೀಯರಿಂದ ಸಾಲ ಪತ್ರಕ್ಕೆ ದಕ್ಕು ಹಾಕಿಕೊಂಡುದಾಗಿತ್ತು. ಇದರಿಂದಾಗಿ ಉಂಟಾಗಿರಬಹುದಾದ ಸ್ಥಳೀಯ ಗೌಡುಗಳು ಮುಂತಾದವರ ಅತೃಪ್ತಿ, ಸ್ಥಳೀಯರೊಂದಿಗೆ ಸಂಬಂಧ ಹಳಸಲು ಕಾರಣವಾಗಿರಬಹುದು. ವಲಸಿಗರು ತಮ್ಮ ಸಂಸ್ಕೃತಿಗೆ ತಕ್ಕಂತೆ ಸ್ತ್ರೀಯೊಬ್ಬಳನ್ನು ಆ ಸಮಸ್ತ ಆಸ್ತಿಗೆ ಒಡೆಯಳನ್ನಾಗಿ ಮಾಡಿದ್ದುದು ಸ್ಥಳೀಯರಿಗೆ ಸಹಿಸಿಕೊಳ್ಳಲು ಸಾಧ್ಯವಾಗಲಿಲ್ಲವೆನ್ನಬಹುದು. ಆ ಭೂಮಿಯ ಕೃಷಿ ಮಾಡುತ್ತಿದ್ದ ಗೇಣಿದಾರರಿಂದ ಉಂಟಾಗಿದ್ದ ಅಸಹಕಾರದಿಂದ ಬಿಟ್ಟಿ ಮತ್ತು ತೆರುಗಡೆಗಳು ಸರಿಯಾಗಿ ನಡೆಯುತ್ತಿರಲಿಲ್ಲವಾಗಿ ಮಹಾಜನರಿಗೆ ವಿಧೇಯರಾಗಿರಬಹುದಾದ ಹನ್ನೆರಡು ಒಕ್ಕಲುಗಳನ್ನು ನಿಯಮಿಸಿ ಭೂಮಿಗಳ ಉಳಿಮೆಮಾಡಿ ಬಿಟ್ಟಿ ಸೋಲದಂತೆ ತೆರುಗಡೆ ಎಲ್ಲವನ್ನೂ

ಮಾಡಬೇಕೆಂದು ಹೊಸದಾಗಿ ನಿಯಮ ಮಾಡಬೇಕಾಗಿ ಬಂದಿದೆ. ಒಟ್ಟಿನಲ್ಲಿ ಒಂದು ಸೌಹಾರ್ದ ವಾತಾವರಣ ಕಂಡ ನಂಬಿಯ ಸಾಲಬಡ್ಡಿ ವ್ಯವಹಾರದಿಂದಾಗಿ ಇಲ್ಲವಾಯಿತೆಂದು ತೋರುತ್ತದೆ. ಜೊತೆಗೆ ಹೊಯ್ಸಳ ಸೋಮೇಶ್ವರನ ಕಾಲಕ್ಕಾದ ರಾಜಕೀಯ ಬದಲಾವಣೆಯೂ ಕಾರಣವಾಗಿರಬಹುದು. ಆನಂತರದಲ್ಲಿ ಈ ಕುಟುಂಬದ ಯಾವ ಶಾಸನಗಳೂ ಕಾಣಿಸಿಕೊಂಡಿಲ್ಲ.

ಕ್ರಿ.ಶ.೧೨೭೪ರ ಕಣಿಕಟ್ಟೆಯ ಒಂದು ಶಾಸನದಲ್ಲಿ[೨೦೭] ಅಲ್ಲಿನ ಶೈವ ಸ್ಥಾನಿಕರಿಗೂ ಮಹಾಜನಗಳಿಗೂ ಉಂಟಾದ ಭೂವಿವಾದವನ್ನು ಹೇಳಿದೆ. ಇಮ್ಮಡಿ ನರಸಿಂಹನ ಕಾಲದಲ್ಲಿ ಅಗ್ರಹಾರ ನರಸಿಂಹ ಪುರವೆಂದು ಪರಿವರ್ತನೆಕೊಂಡ ಕಳಿಕಟ್ಟೆಗೆ ಅನೇಕ ವೈಷ್ಣವ ವಲಸಿಗರು ಬಂದು ನೆಲಸಿದ್ದರು.[೨೦೮] ಈ ಭೂವಿವಾದವನ್ನು ವಲಸಿಗನಾಗಿ ಬಂದು ಇಲ್ಲಿ ನೆಲಸಿ ಪ್ರಸಿದ್ಧನಾಗಿದ್ದ ಮಹಾವಡ್ಡ ವ್ಯವಹಾರಿ ಪೊಂನಚ್ಚ ಸೆಟ್ಟಿಯರು, ಕಳಿಕಟ್ಟೆಯ ಪಟ್ಟಣ ಸೆಟ್ಟಿಯಾದ ಲಕ್ಕಿಸೆಟ್ಟಿ ಮತ್ತು ಇತರರು ಬಗೆಹರಿಸಿದ್ದಾರೆ. ಇದು ವಲಸಿಗರ ವ್ಯಾಪಾರಿಯೊಬ್ಬನಿಗೆ ಸ್ಥಳೀಯ ಸಮಾಜವು ವ್ಯಾಪಾರ, ಆಡಳಿತ ಮತ್ತು ನ್ಯಾಯವಿತರಣೆಯಂತಹ ಗುರುತರವಾದ ಕಾರ್ಯದಲ್ಲಿ ತೊಡಗಿಸಿಕೊಳ್ಳಲು ಅವಕಾಶ ನೀಡಿದ್ದುದನ್ನು ಸ್ಥಳೀಯ ಸಮುದಾಯ ಅವನಿಗೆ ನೀಡಿದ್ದ ಸ್ಥಾನಮಾನವನ್ನು ಸೂಚಿಸುತ್ತದೆ. ಈ ವಿವಾದದಲ್ಲಿ ನ್ಯಾಯವು ವಲಸಿಗರಾದ ವೈಷ್ಣವರ ಕಡೆಗೇ ತೀರ್ಮಾನವಾಯಿತೆಂಬುದು ಮುಖ್ಯ.

ತಳಲೂರಿನ ವಲಸಿಗ ವೈಷ್ಣವರನ್ನು ಅಲ್ಲಿನ ಸ್ಥಳೀಯ ಶೈವ ಸ್ಥಾನದವರು ಸಹಿಸಿಕೊಳ್ಳುತ್ತಿರಲಿಲ್ಲ. ಅಲ್ಲಿನ ನೀರಿನ ಪಂಥದ ವಿವಾದವೊಂದಕ್ಕೆ ೮೦ ವರ್ಷಗಳ ನಂತರ ಒಂದು ಒಪ್ಪಂದ ಏರ್ಪಟ್ಟಿದೆ. ಒಟ್ಟಿನಲ್ಲಿ ಅನ್ಯ ನೆಲೆಯಿಂದ ಬಂದ ವಲಸಿಗರು, ಅವರ ಧರ್ಮ ಸಂಸ್ಕೃತಿಗಳನ್ನು ಸ್ಥಳೀಯ ಸಮಾಜ ಅಷ್ಟು ಸುಲಭವಾಗಿ ಒಳಗೆ ಬಿಟ್ಟುಕೊಳ್ಳುತ್ತಿರಲಿಲ್ಲವೆಂಬುದು ಸತ್ಯ. ಅಲ್ಲಿ ಸಾಂಸ್ಕೃತಿಕ ಮುಖಾಮುಖಿ ಉಂಟಾಗಿ ಒಂದು ಒಡಂಬಡಿಕೆಯ ಸೂತ್ರ ರೂಪಿತವಾಗುತ್ತಿತ್ತೆಂದು ಊಹಿಸಬಹುದು.

## ೪.೩. ಸ್ತ್ರೀಯರ ಸ್ಥಾನಮಾನ

ಭಾರತೀಯ ಸ್ತ್ರೀ ಚರಿತ್ರೆ ಕಾಲಕಾಲಕ್ಕೆ ಅನೇಕ ಏರಿಳಿವುಗಳನ್ನು ಕಂಡಿದೆ. ಇಲ್ಲಿನ ನಾಗರಿಕತೆಯ ಮೂಲದಲ್ಲಿ ಮಾತೃ ಪ್ರಧಾನ ಸಮಾಜದ ಇತಿಹಾಸವಿದೆ. ಬೇರೆ ಬೇರೆ ನಾಗರಿಕತೆಯಲ್ಲಿದ್ದಂತೆಯೇ ಸಿಂಧೂ ಕಣಿವೆಯ ನಾಗರಿಕತೆಯ ಬುನಾದಿಯಲ್ಲಿ ಮಾತೃ ಪ್ರಧಾನ ಯುಗದ ಲಕ್ಷಣಗಳು ಸೇರಿಕೊಂಡಿದೆ. ಇಲ್ಲಿನ ಭಗ್ನಾವಶೇಷಗಳಲ್ಲಿ ಮಾತೃ ಮೂರ್ತಿಗಳು ದೊರಕಿವೆ. ಪುರುಷ ಪ್ರಧಾನ ಆರ್ಯ ಸಂಸ್ಕೃತಿಯ ಬೆರಕೆಯೊಂದಿಗೆ ಇಲ್ಲಿನ ಸ್ತ್ರೀಯರ ಸ್ಥಾನಮಾನದಲ್ಲಿ ಪಲ್ಲಟ ಉಂಟಾಗ ತೊಡಗಿದಾಗ ಅವರು ತಮ್ಮ ಸ್ವತಂತ್ರ್ಯವಾದ ವ್ಯಕ್ತಿತ್ವವನ್ನು ಕಳೆದುಕೊಂಡರು. ಕರ್ನಾಟಕದಲ್ಲಿ ೧೨ನೇ ಶತಮಾನದ ಸಮಾಜೋಧಾರ್ಮಿಕ ಕ್ರಾಂತಿ ಸ್ತ್ರೀ ಸಮಾಜದಲ್ಲಿ ಒಂದು ಪುನಶ್ಚೇತನ ತರುವ ಪ್ರಯತ್ನವನ್ನು ಮಾಡಿತು.

ಶಾಸನಗಳಲ್ಲಿ ಬಿಂಬಿತವಾಗಿರುವ ಸ್ತ್ರೀಯರ ಬದುಕಿನ ಎಳೆಗಳಿಗೂ ಸಾಮಾಜಿಕ ವ್ಯವಸ್ಥೆಗೂ ಸಂಬಂಧವಿದೆ. ಸಾಮಾಜಿಕ ರೂಢಿಗಳನ್ನು ನಡವಳಿಕೆಗಳನ್ನು ಸಾಹಿತ್ಯ, ಶಾಸನಗಳು, ನೀತಿ ಸಂಹಿತೆಗಳು ಪ್ರತಿಬಿಂಬಿಸುತ್ತವೆ ಮತ್ತು ಪುನರ್ ಸೃಷ್ಟಿಸುತ್ತವೆ. ಅಂದಾಗ ಆ ಮೂಲಕ ಸಿದ್ಧವಾಗುವ ಸ್ತ್ರೀತ್ವದ ಪರಿಕಲ್ಪನೆಯ ಆಯಾಮಗಳು ಯಾವುವು? ಶಾಸನಗಳು ಕಟ್ಟಿಕೊಡುವ ಸ್ತ್ರೀಸಮಾಜದ ವಿವಿಧತೆ ಎಂಥದ್ದು? ಅಂಥ ಸ್ತ್ರೀ ಜಗತ್ತು ನಿರ್ಮಾಣವಾಗುವುದರ ಹಿಂದಿನ ಒತ್ತಡಗಳೇನು? ಹಾಗೆ ರೂಪಿತಗೊಂಡ ಸ್ತ್ರೀಯರ ಬದುಕು ಮತ್ತು ಸಾಮಾಜಿಕ ಸಂಬಂಧಗಳು ಎಂಥವು? ಕಾಲಕಾಲಕ್ಕೆ ಬದಲಾದ ಸಾಮಾಜಿಕ ಮೌಲ್ಯಗಳು ಸ್ತ್ರೀ ಸಮಾಜದಲ್ಲಿ ಉಂಟು ಮಾಡಿದ ಏರುಪೇರುಗಳು, ಸಂಭ್ರಮ, ಸಂಘರ್ಷ ಸಂಚಲನಗಳೇನು ಎಂಬುದನ್ನು ಅರಿಯುವ ಅಗತ್ಯವಿದೆ. ಈಗಾಗಲೇ ಈ ನಿಟ್ಟಿನಲ್ಲಿ ವಿದ್ವಾಂಸರು ಕೆಲಸ ಮಾಡಿದ್ದಾರೆ. ಸಮಾಜದಲ್ಲಿ ಒಪ್ಪಿತವಾದ ಪರಿಚಿತ ಸ್ತ್ರೀ ಜೀವನ ಮೌಲ್ಯಗಳನ್ನೇ ಮಾದರಿಗಳನ್ನೇ ಶಾಸನಗಳು ಬಿಂಬಿಸಿವೆ. ಲಿಂಗಸಂಬಂಧಿ ನೈತಿಕತೆಯ ಪ್ರಶ್ನೆ ಅದರಿಂದುಂಟಾದ ಮಾನವ ಸಂಬಂಧಗಳು ಹುಟ್ಟಿಕೊಳ್ಳುವ ಸನ್ನಿವೇಶಗಳು, ಒತ್ತಡಗಳು ಶಾಸನಗಳಲ್ಲಿ ಅಲ್ಲಲ್ಲಿ ಆನುಷಂಗಿಕವಾಗಿ ಕಾಣಿಸಿಕೊಂಡಿವೆ. ವಿವಾಹ ಸಂಸ್ಥೆ ಹಾಗೂ ಸ್ತ್ರೀ ಪುರುಷ ಸಂಬಂಧವೇ ಕೇಂದ್ರ ಬಿಂದುವಾಗಿ ಇಲ್ಲಿನ ಸ್ತ್ರೀ ಚಿತ್ರಣ ಅದರ ಸುತ್ತಲೇ ಸುತ್ತುವುದನ್ನು ಕಾಣುತ್ತೇವೆ.

ಕುಟುಂಬ ಹಾಗೂ ಸಾಮಾಜಿಕ ನೆಲೆಯಲ್ಲಿ ಸಾಂಪ್ರದಾಯಿಕ ಚಟುವಟಿಕೆಗಳಲ್ಲಿ ಸ್ತ್ರೀಯರು ತೊಡಗಿಕೊಂಡಿರುವುದನ್ನು ಇಲ್ಲಿನ ಶಾಸನಗಳು ಚಿತ್ರಿಸಿವೆ. ಸ್ತ್ರೀತ್ವದ ನಿಷ್ಕರ್ಷೆಯಲ್ಲಿ ತಾಯ್ತನವು ಬಹಳ ಪ್ರಮುಖ ಸ್ಥಾನ ಪಡೆದಿದೆ. ಆದರೆ ಈ ತಾಯ್ತನವು ಕುಟುಂಬದಲ್ಲಿ ವಿವಾಹದ ಚೌಕಟ್ಟಿನೊಳಗಿದ್ದಾಗ ಅದಕ್ಕೆ ಪುರಸ್ಕಾರವಿರುತ್ತಿತ್ತು. ತಾಯಿಯರ ಹೆಸರಿನಲ್ಲಿ ಪ್ರಭುವರ್ಗ ಅಧಿಕಾರಿಗಳು, ಸಿರಿವಂತರು ಕೆರೆಗಳನ್ನು ಗ್ರಾಮಗಳನ್ನು ನಿರ್ಮಾಣ ಮಾಡಿ ಗೌರವ ಸಲ್ಲಿಸಿದ್ದಾರೆ.[೨೧೧] ಸೋದರಿಯರಾಗಿ ಗೌರವದೊಂದಿಗೆ ಆಸ್ತಿಯ ಒಡೆತನವನ್ನು ಪಡೆದಿದ್ದಾರೆ. ಒಡ ಹುಟ್ಟಿದವರಿಗಾಗಿ ತಾವು ಗೌರವ ತೋರಿದ್ದಾರೆ. ದೇವಾಲಯ ನಿರ್ಮಿಸಿದ್ದಾರೆ. ಮಡದಿಯಾಗಿ ತಮ್ಮ ಸೌಂದರ್ಯ ಕಲಾನೈಪುಣ್ಯತೆ ಪ್ರಭಾವೀ ವ್ಯಕ್ತಿತ್ವದಿಂದ ಸ್ಥಾನಮಾನ ಗೌರವವನ್ನು ಗಳಿಸಿದ್ದಾರೆ.[೨೧೨] ಅದೇ ರೀತಿ ಬಹುಪತ್ನಿತ್ವದ ಒತ್ತಡಗಳಿಗೆ ಸಿಕ್ಕಿ ತಮ್ಮ ಅಸ್ಮಿತೆ ಉಳಿಸಿಕೊಳ್ಳಲು ಹೆಣಗಿದ್ದಾರೆ. ಪಟ್ಟದ ಕುವರರನ್ನು ಪಡೆದು ಕೊಡಲಾರದ್ದಕ್ಕಾಗಿ ಮೂಲೆಗುಂಪಾಗಿದ್ದಾರೆ. ಆ ಭಾಗ್ಯ ಪಡೆದಷ್ಟರಿಂದಲೇ ಮತ್ತೆ ಮತ್ತೆ ಹೊಗಳಿಕೆಗೆ ಪಾತ್ರರಾಗಿದ್ದಾರೆ. ಗಂಡನನ್ನು ಕಳೆದುಕೊಂಡು ಪಾತಿವ್ರತ್ಯಕ್ಕಾಗಿ ಮಹಾಸತಿಯರಾಗಿದ್ದಾರೆ. ಸತಿಯಾಗದೆ ಗಂಡನ ಸ್ಮಾರಕ ನಿಲ್ಲಿಸಿ ಗೌರವ ಸೂಚಿಸಿದ್ದಾರೆ. ವಿಧವೆಯಾಗಿ ಗಂಡನ ಸಾಲಕ್ಕೆ ಬಾಧ್ಯಸ್ಥಳಾಗಿದ್ದಾಳೆ. ಗಂಡನ ಸಾವಿನ ನಂತರ ಸ್ಥಾನಮಾನ ಒಡೆತನಕ್ಕಾಗಿ ನ್ಯಾಯವನ್ನು ಹೋರಾಟ ಮಾಡಿ ಪಡೆದಿದ್ದಾಳೆ. ವಿಧವೆಯಾದರೂ ಪ್ರಭುವರ್ಗದ ಅಧಿಕಾರೀ ವರ್ಗದ ಸ್ತ್ರೀಯರು ಆಡಳಿತಾತ್ಮಕ, ಧಾರ್ಮಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡವರಿದ್ದಾರೆ. ಕುಲಸ್ತ್ರೀಯೆನಿಸಿ

ಸಂಭ್ರಮಿಸಿದವರಿದ್ದಾರೆ. ವಾರಾಂಗನೆಯರಾಗಿ ಪಾತ್ರ ಭೋಗದವರಾಗಿ ಸಂಪತ್ತನ್ನು ಮೆಚ್ಚುಗೆಯನ್ನು ಪಡೆದಿದ್ದಾರೆ. ವೇಶ್ಯೆಯರಾಗಿ ಪುರುಷರ ಭೋಗ ವಸ್ತುವಾದದ್ದಲ್ಲದೆ ಅದರ ದ್ವೇಷಾಸೂಯೆಗಳಿಗೆ ಸಿಕ್ಕಿ ಸಾವಿಗೂ ಒಳಗಾಗಿದ್ದಾರೆ. ತಮ್ಮ ಕಲಾ ನೈಪುಣ್ಯತೆಯೊಂದಿಗೆ ಭೋಗ ವಸ್ತುವಾದ್ದರಿಂದಲೇ ಭೂಮಿ ಒಡೆತನವನ್ನು ಹೆಚ್ಚಿನ ಆದಾಯವನ್ನು ಪಾತ್ರದವರು ಪಡೆದರೆ, ಬಾಣಸುಗಿತ್ತಿಯಾಗಿ ವರುಷಕ್ಕೆ ೩ ಜೀವಿತ ಗದ್ಯಾಣಕ್ಕಾಗಿ ದುಡಿಯುವ ಸ್ತ್ರೀಯನ್ನು ನೋಡಬಹುದು. ದೇವಾಲಯ ಕೆರೆ ಕಟ್ಟೆಗಳನ್ನು ನಿರ್ಮಿಸುವಷ್ಟು ಆರ್ಥಿಕ ಸಬಲತೆ ಮತ್ತು ಸ್ವಾತಂತ್ರ್ಯವಿದ್ದ ಸ್ತ್ರೀಯರಂತೆ ಕೇವಲ ಒಂದೋ ಎರಡೋ ಗದ್ಯಾಣಗಳನ್ನಾದರೂ ದೈವಕ್ಕೆ ನೀಡಿ ಪುಣ್ಯಕ್ಕಾಗಿ ಹಂಬಲಿಸುವ ಸ್ತ್ರೀಯರನ್ನು ನೋಡಬಹುದು. ಸಿರಿವಂತ ಹಾಗೂ ಅಧಿಕಾರಿ ವರ್ಗದ ಸ್ತ್ರೀಯರ ಚಟುವಟಿಕೆಗಳು ಹೆಚ್ಚಾಗಿ ತಮ್ಮ ಮನೆವಾರ್ತೆಗಷ್ಟೇ ಸೀಮಿತವಾಗಿದ್ದು, ಸಾಮಾನ್ಯ ವರ್ಗದ ಕೃಷಿಕಮಹಿಳೆಯರು, ಬಾಣಸುಗಿತ್ತಿ, ಮಾಲೆಕಾರ್ತಿಯರು, ತೈಲಿಗ ಸ್ತ್ರೀಯರು ಮುಂತಾದ ವೃತ್ತಿವಂತ ಸ್ತ್ರೀಯರು, ಅರಮನೆ ದೇವಾಲಯ, ಸಿರಿವಂತರ ಪರಿಚಾರಕರಾಗಿ, ಪಾತ್ರಭೋಗದವರಾಗಿ ಪೂಜಾರಿಣಿಯರಾಗಿ ನಾನಾ ಉದ್ಯೋಗ ಹಿಡಿದು ಕುಟುಂಬದಿಂದ ಹೊರಗೂ ಚಟುವಟಿಕೆಯಿಂದಿದ್ದುದು ಕಂಡುಬರುತ್ತದೆ. ರಾಜ್ಯದಲೆಲ್ಲಾ ಆಯಾವೃತ್ತಿಗಳಲ್ಲಿ ತೊಡಗಿದ ಪರಿಣತರನ್ನು ಆಯ್ಕೆ ಮಾಡಿ ಅರಮನೆಯ ಸೇವೆಯಲ್ಲಿ ತೊಡಗಿಸಲಾಗುತ್ತಿತ್ತೆಂದು ಪೋರ್ಚುಗೀಸ್ ಪ್ರವಾಸಿ ಬಾರ್ಬೊಸಾ ಹೇಳಿದ್ದಾನೆ. ನಾಲ್ಕು ಸಾವಿರಕ್ಕೂ ಮಿಕ್ಕಿ ಹೆಂಗಸರು ಅರಮನೆಯ ಸೇವೆಯಲ್ಲಿರುತ್ತಿದ್ದು, ಅವರಲ್ಲಿ ಲೆಕ್ಕಪತ್ರ ತಪಾಸಿಗರು, ನ್ಯಾಯಾಧೀಶರು, ಪಡಿಯರತಿಯರು, ವಿವಿಧ ವಾದ್ಯಗಳನ್ನು ನುಡಿಸುವವರು ಮಹಿಳಾ ಮಲ್ಲರು, ಜೋತಿಷಿಗಳು... ಅರಸು ಮನೆತನದವರನ್ನು ಮೇನೆಯಲ್ಲಿ ಹೊತ್ತೊಯ್ಯಲು ಬಲಿಷ್ಠರಾದ ಹೆಂಗಳೆಯರು, ದಾದಿಯರು, ಮಾಲೆಕಾರ್ತಿಯರು ಬಗೆಬಗೆಯ ಸುಗಂಧಗಳನ್ನು ತಯಾರಿಸುವ ಘಟ್ಟಿವಳ್ತಿಯರು. ಮಸಾಜು ಮಾಡುವ, ಅಭ್ಯಂಜನ ಮಾಡಿಸುವ, ಹೊಲಿಗೆ, ಹೆಣಿಗೆ ಮಾಡುವ ಮತ್ತು ಆ ವೃತ್ತಿಯಲ್ಲಿ ತರಬೇತಿ ನೀಡುವ ನಿಷ್ಣಾತೆಯರೆಲ್ಲ ಅರಮನೆಯಲ್ಲಿರುತ್ತಿದ್ದರು.[೨೧೩] ಉತ್ತಮ ಅವಕಾಶಗಳು ದೊರೆತಲ್ಲಿ ಶ್ರೇಷ್ಠ ವಿದ್ಯಾವಂತೆಯರೂ ಕಲಾವಿದೆಯರೂ ಆಡಳಿತಗಾರ್ತಿಯರೂ ಆಗಿ ತಮ್ಮ ಸಾಮರ್ಥ್ಯವನ್ನು ಪ್ರಭುವರ್ಗ ಮತ್ತು ಅಧಿಕಾರೀ ವರ್ಗದ ಸ್ತ್ರೀಯರು ನಿರೂಪಿಸಿದ್ದಾರೆ. ಅದೇ ರೀತಿ ಧಾರ್ಮಿಕ ಸ್ವಾತಂತ್ರ್ಯವನ್ನು ಪಡೆದು ಆಧ್ಯಾತ್ಮ ಕ್ಷೇತ್ರದಲ್ಲೂ ಸೈ ಎನಿಸಿಕೊಂಡಿರುವ ಮಹಿಳೆಯರನ್ನು ಶಾಸನಗಳು ಬಿಂಬಿಸಿವೆ.

### ೪.೩.೧. ಸ್ತ್ರೀಯರು-ರಾಜಕೀಯ, ಧಾರ್ಮಿಕ ಆಡಳಿತ ಮತ್ತು ಆರ್ಥಿಕ ಸ್ವಾತಂತ್ರ್ಯ

ಸ್ತ್ರೀ ಸ್ವಾತಂತ್ರ್ಯಕ್ಕೆ ಅರ್ಹಳಲ್ಲವೆಂದು ಮನು ಹೇಳಿದ್ದರೂ ಕರ್ನಾಟಕದ ಮಟ್ಟಿಗೆ ಕೆಲವು ಸ್ತ್ರೀಯರು ಸ್ವಾತಂತ್ರ್ಯವನ್ನು ಪಡೆದು ಉತ್ತಮ ಆಡಳಿತಗಾರ್ತಿಯಾರಾಗಿರುವ ಸತ್ಯವನ್ನು ಶಾಸನಗಳು ಹೇಳುತ್ತವೆ. ಮಧ್ಯಕಾಲೀನ ಕರ್ನಾಟಕದ ರಾಣಿಯರಿಗೆ ದೊರೆತ ಅವಕಾಶ ಅದೇ ಕಾಲದ ಉತ್ತರ

ಭಾರತದ ಯಾವ ರಾಣಿಯರಿಗೂ ದೊರೆತಿರಲಿಲ್ಲವೆಂದು ಪಿ.ಬಿ.ಮಜುಂದಾರ್ ಅಭಿಪ್ರಾಯಪಟ್ಟಿದ್ದಾರೆ.[೨೧೪] 'ಕೆರಸಿ, ಕಾವಲಿ ತಂಬುಗೆ ಹುಟ್ಟು, ಸಟ್ಟುಗ ಕೊಡ ಬರಲು ಅಕ್ಕಿ ಇವುಗಳ ಬಗೆಗೇ ಚಿಂತಿಸಿ ಕೋಟಲೆಗೊಳ್ಳುವ ಗೃಹಿಣಿಯರು [೨೧೫] ಮತ್ತು ಸುಖ ಸಂಕಥಾ ವಿನೋದದಲ್ಲಿ ಮುಳುಗಿದ ಪ್ರಭುವರ್ಗದ ಸ್ತ್ರೀಯರು ಶೇಕಡ ೯೮ ಭಾಗವಿದ್ದರೆ ಸ್ವತಂತ್ರ ವ್ಯಕ್ತಿತ್ವವನ್ನು ಬೆಳೆಸಿಕೊಂಡು ಸಾಧನೆ ಮಾಡಲು ಅವಕಾಶ ಪಡೆದವರು ಕೇವಲ ೨ ಭಾಗವೆಂದು ಹೇಳಬಹುದಷ್ಟೇ.

ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ರಾಣಿಯರು ಆಡಳಿತಗಾರ್ತಿಯರಾಗಿ ಕಾರ್ಯ ನಿರ್ವಹಿಸಿದ್ದಾರೆ. ಹೊಯ್ಸಳ ಎರೆಯಂಗನ ರಾಣಿ ಮಹಾದೇವಿಯು ಅರಸೀಕೆರೆ ಭಾಗಕ್ಕೆ ಒಡತಿಯಾಗಿದ್ದು ಅವಳ ಅಧಿಕಾರಿಗಳಾದ ಹೆಗ್ಗಡೆ ಬಿಟ್ಟಿಮಯ್ಯ ಮತ್ತು ಕಾಡುವಿಟ್ಟಿ ಹಾಗೂ ಸ್ತ್ರೀ ಅಧಿಕಾರಿಣಿ ಸೋಜೆದೆಯಬ್ಬೆಯರ ಉಲ್ಲೇಖವಿದೆ.[೨೧೬] ವಿಷ್ಣುವರ್ಧನನ ರಾಣಿ ಬೊಮ್ಮಲಾದೇವಿ ಆಸಂದಿ ಐದುನೂರು ಹಾಗೂ ನೀರ್ಗುಂದ ಮುನ್ನೂರು ನಾಡುಗಳನ್ನು ಸುಖದಿಂದ ಪ್ರತಿಪಾಳಿಸುತ್ತಿದ್ದಳು.[೨೧೭] ಇಮ್ಮಡಿ ವೀರ ಬಲ್ಲಾಳನ ರಾಣಿ ಅರಸೀಕೆರೆಯ ರಾಜ್ಯಾಧ್ಯಕ್ಷದ ಹೆಗ್ಗಡೆ ಕೇಶವಯ್ಯನ ಮಗಳು ಶ್ರೇಷ್ಠರಾದ ಅಧಿಕಾರಿಗಳಾದ ಮಹಾಪ್ರಧಾನ ಪಂಡಿತಯ್ಯ ದಂಡನಾಯಕ, ಬಲುಮನುಷ್ಯ ಹೆಗ್ಗಡೆ ಕಲ್ಲಯ್ಯ ಇವರ ಸಹಾಯದಿಂದ ಮಗರೆ ೩೦೦ನ್ನು ನೀರ್ಗುಂದ ನಾಡನ್ನು ಆಳುತ್ತಿದ್ದಳು.[೨೧೮] ಇಮ್ಮಡಿ ಬಲ್ಲಾಳನು ಯುದ್ಧಗಳಲ್ಲಿ ತೊಡಗಿದ್ದ ಸಂದರ್ಭದಲ್ಲಿ ಈಕೆ ದೋರ ಸಮುದ್ರದಲ್ಲಿದ್ದು ಆಳ್ವಿಕೆ ನಡೆಸುತ್ತಿದ್ದಳು.[೨೧೯] ವೀರ ಬಲ್ಲಾಳನ ಮತ್ತೊಬ್ಬ ರಾಣಿ ಬಮ್ಮಲಾದೇವಿ ದೋರ ಸಮುದ್ರದಲ್ಲಿ ಆಳುತ್ತಿದ್ದಳೆಂದು ಈಕೆ ಮಲೆಪರಕುಲವನ್ನು ಬೇರುಸಮೇತ ಕಿತ್ತಳೆಂದು ಶಾಸನ ಹೇಳಿದೆ.[೨೨೦] ಇವಳನ್ನು ಮಹಾಮಂಡಳೇಶ್ವರಿ ಎಂದೂ ಶಾಸನಗಳು ಕರೆದಿವೆ.[೨೨೧]

ಇವರಲ್ಲಿ ಕೆಲವರು ಕೇವಲ ಆಡಳಿತದಿಂದಷ್ಟೇ ಸಂತೃಪ್ತರಾಗದೆ ಸೈನಿಕ ಕಾರ್ಯಾಚರಣೆಯಲ್ಲೂ ಆಸಕ್ತಿ ತೋರಿರುವುದು ಕಂಡುಬರುತ್ತದೆ. ಅರಸಿ ಉಮಾದೇವಿಯು ಬಲ್ಲಾಳನಂತೆಯೇ ಧೀರೆಯಾಗಿದ್ದು ಮೂರು ಮಹತ್ವ ಪೂರ್ಣವಾದ ಗೋಗ್ರಹಣಗಳನ್ನು ಕೈಗೊಂಡಿದ್ದಾಳೆ.[೨೨೨] ರಭಸವಾಗಿ ಕುದುರೆ ಸೈನ್ಯದೊಂದಿಗೆ ಬಂದು ಒಮ್ಮೆಲೇ ಎರಗುತ್ತಿದ್ದ ಅವಳ ಯುದ್ಧ ನೈಪುಣ್ಯತೆಗೆ ಅನೇಕ ಧೀರರು ಪ್ರಾಣತೆತ್ತಿದ್ದಾರೆ. ಈ ಆಕ್ರಮಣಗಳಲ್ಲಿ ಅವಳಿಗೆ ಸೋಲಾಗಿದ್ದರೂ 'ಕಾದಿಕೆಟ್ಟು' ಹೋಗುವಾಗ ದಾರಿಯ ಗ್ರಾಮದ ಹಟ್ಟಿಯ ದನಗಳನ್ನು ಹಿಡಿದು ಕೊಂಡೊಯ್ಯುವ ಅವಳ ಯುದ್ಧ ನೀತಿ ದೌರ್ಜನ್ಯ ಪುರುಷ ಆಕ್ರಮಣಕಾರರಿಗಿಂತ ಬೇರೆಯಲ್ಲ.

ನೀರ್ಗುಂದ ನಾಡಿನ ಕೆಂಬಾಳಿನಲ್ಲಿ ಆಳ್ವಿಕೆ ಮಾಡುತ್ತಿದ್ದ ಇಮ್ಮಡಿ ಬಲ್ಲಾಳನ ಪಿರಿಯರಸಿ ಪಟ್ಟ ಮಹಾದೇವಿ ಚೋಳ ಮಹಾದೇವಿಯು ದುಷ್ಟಕಷ್ಟರ ಮಾತನ್ನು ಕೇಳಿ ದುಡುಕಿ ಬೇವೂರನ್ನು ಮುತ್ತಿಸಿ ಗೋಗ್ರಹಣ ಮಾಡಿಸುತ್ತಾಳೆ. ಈ ಅನ್ಯಾಯದ ವಿರುದ್ಧ ಸ್ವಾಭಿಮಾನದಿಂದ ಹೋರಾಡಿದ ಕೇತಮಲ್ಲನೆಂಬ

ವೀರನ ಸಾವಾಗುತ್ತದೆ.[೨೩] ಇದನ್ನು ಗಮನಿಸಿದಾಗ ಸ್ತ್ರೀಯರೂ ಕೂಡ ಯುದ್ಧ ಪ್ರಿಯರೂ ಹಿಂಸಾರುಚಿಗಳೂ ಆಗಿ ಕಾಣುತ್ತಾರೆ. ಪ್ರಭುತ್ವ ಎಂಬುದು ಪುರುಷನ ಕೈಯಲ್ಲಿರಲಿ ಅಥವಾ ಸ್ತ್ರೀಯ ಕೈಯಲ್ಲಿರಲಿ, ಅದು ತನ್ನೆಲ್ಲಾ ಅಹಂ ಮತ್ತು ಧಮನಕಾರೀ ಪ್ರವೃತ್ತಿಯನ್ನು ಹೊಂದಿ ಚಲಾವಣೆಗೊಳ್ಳುತ್ತದೆ. ಅದಕ್ಕೆ ಲಿಂಗ ವ್ಯತ್ಯಾಸವಿಲ್ಲ. ಸ್ತ್ರೀಯರ ಈ ಆಕ್ರಮಣ ಶೀಲತೆಗೂ ಪ್ರಭುತ್ವದ ದರ್ಪವೇ ಕಾರಣ. ಯುದ್ಧದಲ್ಲಾಗುವ ಪ್ರಾಣಹಾನಿ ತಮ್ಮ ಪುರುಷರನ್ನೂ ಮಕ್ಕಳನ್ನು ಕಳೆದುಕೊಂಡು ಅನಾಥವಾದ ಸ್ತ್ರೀ ಸಮುದಾಯದ ಬಳೆಗಳಿಲ್ಲದೆ ಕೈ ಕಿವಿ ಮೂಗುಗಳಲ್ಲಿ ಆಭರಣವಿಲ್ಲದೆ ಒಪ್ಪಗೆಟ್ಟ 'ಪಗೆವರ ಪೆಂಡಿರ ಕಣ್ಣಿಂದೊಗೆ ವಂಜನಪಂಕಜ'ದಲ್ಲಿ ಯಶಸ್ಸಿನ ಬೆಳಕನ್ನು ಕಾಣುವ, ಪರಾಕ್ರಮದ ಸಾರ್ಥಕತೆಯನ್ನು ಕಾಣುವ ಅರಸರು ಎಂದೂ ಯುದ್ಧಾನಂತರ ಪಶ್ಚಾತ್ತಾಪ ಪಟ್ಟ ವಿವರಗಳಿಲ್ಲ. (ಅಶೋಕನನ್ನು ಹೊರತುಪಡಿಸಿ) ಆದರೆ ಚೋಳಮಹಾದೇವಿ ತನ್ನ ದುಡುಕಿನಿಂದಾದ ಹಾನಿಗೆ ಪಶ್ಚಾತ್ತಾಪ್ಪ ಪಟ್ಟು 'ಯಮ್ಮ ಮಕ್ಕಳ ನಾವು ನೋಯಿಸಿದೆವು' ಎಂದು ಮರುಗಿ ಆ ಕುಟುಂಬಕ್ಕೆ ಅಭಯವನ್ನು ನೀಡಿರುವ ಪ್ರಸಂಗ ಸ್ತ್ರೀ ಮನೋಲೋಕದ ಸೂಕ್ಷ್ಮ ಸಂವೇದನೆಗಳನ್ನು ತೆರೆದಿಟ್ಟಿದೆ.

ಸೈನಿಕ ಕಾರ್ಯಾಚರಣೆಗಳಷ್ಟೇ ಅಲ್ಲದೆ ಸೈನ್ಯದ ಅತಿಮುಖ್ಯ ಬಲವಾದ ಅಶ್ವಗಳ ತರಬೇತಿ ಶಾಲೆಯ ಉಸ್ತುವಾರಿಯನ್ನೂ ಹೊಯ್ಸಳ ರಾಣಿಯರು ವಹಿಸಿಕೊಂಡಿದ್ದರು. ಕ್ರಿ.ಶ.೧೧೫೬ರ ಒಂದು ಶಾಸನದಿಂದ ಅಶ್ವಹೃದಯವನ್ನು ಚೆನ್ನಾಗಿ ಬಲ್ಲ ಸಾವಿತ್ರ ಕುಳತಿಲಕರಾದ, ತುರೆಯ ರೇವಂತರಾದ ಅನಂತ ಪಾಳ ಸಾಹಣಿಯ ಕುಟುಂಬದವರು ಈ ಶಾಲೆಯಲ್ಲಿ ತರಬೇತುದಾರರಾಗಿದ್ದರು ಎಂದು ತಿಳಿದುಬರುತ್ತದೆ.[೨೪] ಈ ಅನಂತಪಾಳ ಸಾಹಣಿಯನ್ನು ವಿಮಲಾದೇವಿಯರ ಪಟ್ಟಸಾಹಣಿ ಎಂದು ಕರೆಯದಿರುವುದರಿಂದ ಈ ವಿಮಲಾದೇವಿ ೧೧೫೬ರಲ್ಲಿ ಅರಸನಾಗಿದ್ದ ಒಂದನೇ ನರಸಿಂಹನ ರಾಣಿಯಾಗಿರುವ ಸಾಧ್ಯತೆಯಿದೆ.* ರಾಣಿಯರು, ರಾಜಕುಮಾರಿಯರು ಆಡಳಿತ ನಿರ್ವಹಿಸಿರುವ ಉಲ್ಲೇಖಗಳಂತೆ ಅಧಿಕಾರಿ ಪ್ರಭುವರ್ಗದ ಮಹಿಳೆಯರ ಆಡಳಿತದ ಉಲ್ಲೇಖಗಳು ಇಲ್ಲಿನ ಶಾಸನಗಳಲ್ಲಿ ಇಲ್ಲ. ಆದರೆ ಹಲುಕೂರಿನ ಪ್ರಭುಗಾವುಂಡರ ಮನೆತನದ ನಾಯಕನ ಸಾವಿನ ನಂತರ ಶ್ರೀಮತು ಪಸಾಯತ ಈಟಿಕಾರ ಬೊಮ್ಮವ್ವೆ ನಾಯಕಿಯು ಗೌಡಿಕೆಯನ್ನು ಪಡೆದ ಉಲ್ಲೇಖವಿದೆ. ಇಲ್ಲಿನ ಅವಳ ಪಸಾಯತ ಈಟಿಕಾರ ಇತ್ಯಾದಿ ವಿಶೇಷಣಗಳು ಅವಳ ಪತಿಯ ವಿಶೇಷಣಗಳಾಗಿರಬಹುದೆಂದು ಊಹಿಸಲು ಅವಕಾಶವಿದ್ದರೂ, ಬೊಮ್ಮವ್ವೆ ಸಮರ್ಥಳಾಗಿದ್ದುದರಿಂದಲೇ ಗ್ರಾಮ ಸಮಸ್ತರೂ ಮುಖ್ಯರೂ ಸೇರಿ ಅವಳಿಗೆ ಗೌಡಿಕೆ

---

* ವಿಲಿಯಮ್ ಕೊಯೆಲ್ಹೋ ಅವರು ಈ ಅಶ್ವತರಬೇತಿ ಶಾಲೆಯನ್ನು ವಿಷ್ಣುವರ್ಧನನ ರಾಣಿ ಬೊಮ್ಮಲಾದೇವಿ ನಡೆಸುತ್ತಿದ್ದಳೆಂದು ಹೇಳಿ, ಶಾಸನ ಕಾಲವನ್ನು ೧೧೪೦ಕ್ಕೆ ನಿಗಧಿ ಮಾಡಿದ್ದಾರೆ. ಅವರಿಗೆ ಶಾಸನದ ತೇದಿಯಿರುವ ಭಾಗದ ಸಮರ್ಪಕವಾದ ಪೂರ್ಣಪಾಠ ಲಭ್ಯವಿರಲಿಲ್ಲ. ಪರಿಷ್ಕೃತ ಆವೃತ್ತಿ ಎ.ಕ.ಅರಸೀಕೆರೆ ತಾಲ್ಲೂಕಿನ ೧೧೬ನೇ ಶಾಸನದಲ್ಲಿ ಪೂರ್ಣಪಾಠ ಲಭ್ಯವಿದ್ದು ತೇದಿ ನರಸಿಂಹನ ಕಾಲಕ್ಕೆ ಹೊಂದಿಕೆಯಾಗುತ್ತದೆ. ಆದರೆ ನರಸಿಂಹನ ಹೆಸರಿಲ್ಲ. ರಾಣಿಯ ಹೆಸರೂ ಬದಲಾಗಿದೆ.

ವಹಿಸಿಕೊಟ್ಟಿದ್ದಾರೆ. "ಗೌಡಿಕೆಯು ನಾಯಕನ ಹೆಂಣು ಗಂಡಿಗೆ ಸಲುವುದು" ಎಂಬ ತೀರ್ಮಾನವನ್ನು ಮಾಡಿ ಶಾಸನವನ್ನು ಹಾಕಿಸಿರುವುದನ್ನು ಗಮನಿಸಿದಾಗ ಕೆಲವು ಸ್ತ್ರೀಯರಾದರೂ ಪ್ರಭುಗಾವುಂಡಿಯರಾಗಿ ಆಳ್ವಿಕೆ ಮಾಡಿರಬಹುದೆಂದು ಊಹಿಸಲು ಅವಕಾಶವಿದೆ.[೨೨೫]

ರಾಣಿಯರು ಸಮಾಜ ಕಲ್ಯಾಣಕಾರಿ ಕೆಲಸಗಳು ಹಾಗೂ ಆರ್ಥಿಕ ವಿಚಾರಗಳಿಗೆ ಸಂಬಂಧಿಸಿದಂತೆ ನೀತಿ ನಡಾವಳಿಗಳನ್ನು ರೂಪಿಸುವಲ್ಲಿಯೂ ತಮ್ಮ ಅಧಿಕಾರವನ್ನು ಬಳಸಿದ್ದಾರೆ. ರಾಣಿ ಉಮಾದೇವಿ ಕ್ರಿ.ಶ.೧೧೯೦ರಲ್ಲಿ ಅರಸೀಕೆರೆಯ ಹಿರಿಯಕೆರೆಯ ಕೋಡಿಯ ನಡೆಸುವ ಧರ್ಮಕ್ಕೆ ಅಲ್ಲಿಯ ಸಮಸ್ತ ತಿಪ್ಪೆಸುಂಕ ಆಲೆಸುಂಕ ಇತ್ಯಾದಿ ಅನೇಕ ಸುಂಕಗಳನ್ನು ಬಿಟ್ಟಿದ್ದಾಳೆ. ಕ್ರಿ.ಶ.೧೨೨೦ರಲ್ಲಿ ಬಲ್ಲಾಳರಾಯನ ನಿಧನದ ನಂತರವೂ ರಾಜಮಾತೆಯಾಗಿ ಪ್ರಭಾವಶಾಲಿಯಾಗಿದ್ದ ಆಕೆ ಸೌಭಾಗ್ಯ ಪುರದ ಪ್ರಸಂನ್ನ ಕೇಶವ ದೇವರ ಹದಿನೈದು ವೃತ್ತಿಗಳು ನಷ್ಟಿಯಾಗಿ ಶ್ರೀಕಾರ್ಯ ನಡೆಯದೆ ಕೆಟ್ಟಿದ್ದ ಸಂದರ್ಭದಲ್ಲಿ ಅಲ್ಲಿನ ಮಹಾಜನರು ಹದಿನೆಂಟು ನಾಡ ವೈಷ್ಣವರನ್ನು ಮುಂದಿಟ್ಟುಕೊಂಡು ದೇವರಿಗೆ ಎರಡು ವೃತ್ತಿಗಳನ್ನು ಸರ್ವಮಾನ್ಯವಾಗಿ ನೀಡಿ ಉಳಿದವನ್ನು ಬ್ರಾಹ್ಮಣರಿಗೆ ವಿತ್ತಿಯಾಗಿ ನೀಡಿ ಸಿದ್ಧಾಯ ನಿಗಧಿಪಡಿಸಿ ಹೊಸ ಏರ್ಪಾಡು ಮಾಡಿದ್ದಾಳೆ. ಅದೇ ರೀತಿ ಕ್ರಿ.ಶ.೧೨೨೭ರಲ್ಲಿ ಪುಷ್ಪಗಿರಿಯ ದೇವರ ಆಣೆಗನ ಹಳ್ಳಿ ಮತ್ತು ಕಿತ್ತನ ಕೆರೆಯ ವೃತ್ತಿಗಳು ನಷ್ಟಕ್ಕೆ ಒಳಗಾಗಿದ್ದಾಗ ಅಲ್ಲಿ ಹಿರಿಯ ಮಹಾಜನರಿಗೆ ವಹಿಸಿಕೊಟ್ಟು ಎಂಟುವರ್ಷಗಳವರೆಗೆ ತೆರಿಗೆಮಾನ್ಯ ಮಾಡಿ ಅನಂತರ ಸಿದ್ಧಾಯ ನೀಡುವಂತೆ ಏರ್ಪಾಟು ಮಾಡಿದ್ದಾಳೆ. ಹಲವಾರು ದೇವಾಲಯಗಳಿಗೆ ದಾನ ದತ್ತಿಯನ್ನು ನೀಡಿದ್ದಾಳೆ.[೨೨೬] ಇಮ್ಮಡಿ ವೀರಬಲ್ಲಾಳನ ಮಗಳು ರಾಜಕುಮಾರಿ ಸೋವಲದೇವಿಯು ಕ್ರಿ.ಶ.೧೨೩೪ರಲ್ಲಿ ಮಹಾಗ್ರಹಾರ ಹಾರನಹಳ್ಳಿಯನ್ನು ಶ್ರೇಷ್ಠ ವಿದ್ಯಾಕೇಂದ್ರವಾದ ವಲ್ಲಭಿಗೆ ಸಮನಾದ ವಿದ್ಯಾಕೇಂದ್ರವನ್ನಾಗಿ ಮಾಡಿ ಅವಶ್ಯಕವಾದ ವ್ಯವಸ್ಥೆಯನ್ನು ಮಾಡಿದ್ದಾಳೆ.[೨೨೭] ಇಂಥ ಸಂದರ್ಭಗಳಲ್ಲಿ ಅರಸಿಯರ ತೀರ್ಮಾನಗಳನ್ನು ಸಮಸ್ತ ಪ್ರಜೆಗಳು, ಗಾವುಂಡುಗಳು, ಅಧಿಕಾರಿಗಳು, ಮಹಾಜನರು ಒಪ್ಪಿ ಗೌರವಿಸಿ ಅದಕ್ಕೆ ಬದ್ಧರಾಗಿರುತ್ತಿದ್ದುದು ರಾಣಿಯರ ರಾಜಕೀಯ ಸ್ಥಾನಮಾನದ ಮೇಲೆ ಬೆಳಕು ಚೆಲ್ಲುತ್ತದೆ.

**ಅರಸಿಯರ ವೈವಾಹಿಕ ಸಂಬಂಧಗಳು** : ಅರಸಿಯರು ಅರಸರೊಂದಿಗೆ ಆಡಳಿತ ಜವಾಬ್ದಾರಿಯನ್ನು ಹಂಚಿಕೊಳ್ಳುತ್ತಿದ್ದು, ಯಶಸ್ವಿಯಾಗಿ ನಿಭಾಯಿಸುತ್ತಿದ್ದುದರಿಂದ ರಾಜರು ನಿಶ್ಚಿಂತೆಯಿಂದ ರಾಜ್ಯ ವಿಸ್ತಾರಕ್ಕಾಗಿ ತಮ್ಮ ದಿಗ್ವಿಜಯ ಯಾತ್ರೆಗಳನ್ನು ಕೈಗೊಳ್ಳಲು ಬಿಡುವು ಮಾಡಿಕೊಡುತ್ತಿದ್ದರೆನ್ನಬಹುದು. ಅಂತಹ ಸಂದರ್ಭಗಳಲ್ಲಿ ಏಳುತ್ತಿದ್ದ ಸಣ್ಣಪುಟ್ಟ ತೊಂದರೆಗಳನ್ನು ಸೀಮಾ ಸಂಬಂಧಿ ಯುದ್ಧ ಗೋಗ್ರಹಣಗಳನ್ನು ನಿಭಾಯಿಸಿ ಸಮಯ ಸಾಧಕರನ್ನು ಯಶಸ್ವಿಯಾಗಿ ತಮ್ಮ ಅಧಿಕಾರಿಗಳ ಸಹಾಯದಿಂದ ಬಗ್ಗು ಬಡಿಯುತ್ತಿದ್ದರು. ರಾಣಿಯರ ಮೇಲೆ ಪೂರ್ಣವಿಶ್ವಾಸವಿಟ್ಟು ಗುರುತರವಾದ ಜವಾಬ್ದಾರಿಯನ್ನು ಯಾವ

ಹಿಂಜರಿಕೆಯೂ ಇಲ್ಲದೆ ಅವರಿಗೆ ವಹಿಸಿಕೊಡುತ್ತಿದ್ದುದಕ್ಕೆ ಬಹಳ ಮುಖ್ಯ ಕಾರಣ, ರಾಣಿಯರ ಕೌಟುಂಬಿಕ ಹಿನ್ನೆಲೆ, ವೈವಾಹಿಕ ಸಂಬಂಧಗಳನ್ನು ಬೆಳೆಸುವಾಗ ಅರಸರು ವಹಿಸುತ್ತಿದ್ದ ಎಚ್ಚರ. ಅತ್ಯಂತ ನಿಷ್ಠಾವಂತರಾದ ಸಾಮಂತರ, ಮಂತ್ರಿ, ದಂಡನಾಯಕರ ಕುವರಿಯರನ್ನು ವಿವಾಹವಾಗುವುದರ ಮೂಲಕ ವಿದ್ರೋಹಕ್ಕಾಗಲೀ ಅಸಮರ್ಥತೆಗಾಗಲೀ ಅವಕಾಶವಿರುತ್ತಿರಲಿಲ್ಲ.

ಏರೆಯಂಗನ ರಾಣಿ ಮಹಾದೇವಿ ಸಮರ್ಥನಾದ ತೇಜರಾಯ ಪಾಂಡ್ಯನ ಮೊಮ್ಮಗಳು.[೨೨೮] ಒಂದನೇ ಬಲ್ಲಾಳ ಮರಿಯಾನೆ ದಂಡನಾಯಕನ ಪುತ್ರಿಯರನ್ನು ವಿವಾಹವಾಗಿದ್ದ[೨೨೯] ವಿಷ್ಣುವರ್ಧನ ಮಾಂಡಳಿಕ ಮಂಚಿಯರಸನ ಸೋದರ ಸೊಸೆಯರಾದ ರಾಜಲೆ ಬೊಮ್ಮಲೆಯರನ್ನು ವಿವಾಹವಾಗಿದ್ದ[೨೩೦] ವೀರ ಪ್ರತಾಪ ನರಸಿಂಹನ ಅನೇಕ ರಾಣಿಯರಲ್ಲಿ ಅವನ ಶ್ರೇಷ್ಠ ಅಂಗರಕ್ಷಕ ಪಸಾಯಿತ ಬೆಳ್ಳಪ್ಪನ ಮಗಳು ಗೌರಿಯೂ ಒಬ್ಬಳು.[೨೩೧] ಬಲ್ಲಾಳನ ರಾಣಿ ಉಮಾದೇವಿ ಅರಸೀಕೆರೆಯ ನಿಷ್ಠಾವಂತ ಅಧಿಕಾರಿಗಳಾದ ಮಹಾಮಂತ್ರಿ ಹರಿಹರನ ಮೊಮ್ಮಗಳು, ಪ್ರಸಿದ್ಧ ರಾಜ್ಯಾಧ್ಯಕ್ಷದ ಹೆಗ್ಗಡೆ ಕೇಶವಯ್ಯನ ಮಗಳು. ಮತ್ತೊಬ್ಬ ರಾಣಿ ಬಮ್ಮಲಾದೇವಿ, ನಿಷ್ಠಾವಂತ ಅಧಿಕಾರಿ ಪಸಾಯಿತ ನೀರ್ಗುಂದ ನಾಡಿನ ಹುಲಿಕಲ್ಲನ್ನು ಆಳುತ್ತಿದ್ದ ಮೊಖರಿ ಲಕ್ಕಯ್ಯನ ಮಗಳು, ಹಲಕೂರಿನ ಬಂಡಾರವಾಡದ ಅಧಿಕಾರಿ ಬಲ್ಲಾಳನ ಸೋದರ ಸೊಸೆ[೨೩೨] ನೀರ್ಗುಂದ ನಾಡಿನ ಕೆಂಬಾಳನ್ನು ಆಳುತ್ತಿದ್ದ ರಾಣಿ ಚೋಳವಂಶದ ರಾಜಕುಮಾರಿ[೨೩೩] ಮತ್ತೊಬ್ಬ ಅರಸಿ ತುಳುವಲ ದೇವಿ ಗುತ್ತವಂಶದ ವಿಕ್ರಮಾದಿತ್ಯನ ಮಗಳು[೨೩೪] ಪದ್ಮಲಾದೇವಿ ಪಾಂಡ್ಯ ರಾಜಕುಮಾರಿ[೨೩೫] ಮೂರನೇ ಬಲ್ಲಾಳ ಅಳೂಪರ ಚಿಕ್ಕಾಯಿ ತಾಯಿಯನ್ನು ಮದುವೆಯಾಗಿದ್ದ.

ಶ್ರೇಷ್ಠರಾದ ಅಧಿಕಾರಿಗಳ ಸಾಮರ್ಥ್ಯ ಮತ್ತು ಸಾಮಂತರ ವರ್ಚಸ್ಸುಗಳು ಆಯ್ಕೆಯ ಮಾನದಂಡವಾಗಿದ್ದು, ಅಂತಹವರೊಂದಿಗೆ ವೈವಾಹಿಕ ಸಂಬಂಧ ಬೆಳೆಸಿ ಮತ್ತಷ್ಟು ವಿಧೇಯತೆಗೆ ಒಳಪಡಿಸಿ ರಾಜ್ಯದ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಅವರನ್ನು ನೇಮಿಸಿ ಉತ್ತಮ ಸ್ಥಾನಮಾನಗಳನ್ನು ನೀಡಿ ಪ್ರೋತ್ಸಾಹಿಸಲಾಗುತ್ತಿತ್ತು. ಹಾಗಾಗಿ ಇಲ್ಲಿ ವಿವಾಹವು ಸ್ತ್ರೀಯರ ಆಯ್ಕೆ ಅಪೇಕ್ಷೆಗಳಿಗಿಂತ ರಾಜಕೀಯ ನೀತಿಗೆ ಒಳಪಟ್ಟ ಏರ್ಪಾಟಾಗಿತ್ತು. ಅಂತಃಪುರಗಳು ಸ್ತ್ರೀಯರಿಂದ ತುಂಬಿರುತ್ತಿದ್ದವು. ಅರಸರು ಅಧಿಕಾರಿಗಳು ಸಿರಿವಂತರಲ್ಲಿ ಬಹುಪತ್ನಿತ್ವ ಸಾಮಾನ್ಯವಾಗಿತ್ತು.

**ಧಾರ್ಮಿಕ ಆಡಳಿತ ಮತ್ತು ಆರ್ಥಿಕ ಸ್ವಾತಂತ್ರ್ಯ** : ಸ್ತ್ರೀಯರು ರಾಜಕೀಯ ಆಡಳಿತವಷ್ಟೇ ಅಲ್ಲ ಧಾರ್ಮಿಕ ಆಡಳಿತವನ್ನು ನಿರ್ವಹಿಸಿರುವುದು ಕಂಡುಬರುತ್ತದೆ. ಈ ಪ್ರದೇಶದ ಕೆಲವು ಶಾಸನಗಳು ಶೈವ ಸ್ಥಾನಗಳಲ್ಲಿ ಸ್ತ್ರೀಯರಿಗೆ ದೊರಕಿದ್ದ ಪ್ರಾಮುಖ್ಯತೆಯನ್ನು ಹೇಳುತ್ತದೆ. ಸೋಮರಾಶಿ ಪಂಡಿತನು ಬೆಳ್ಳಿಗುಂಬದ ಬ್ರಹ್ಮೇಶ್ವರ ಸ್ಥಾನದ ಒಡೆತನವನ್ನು ಹಿರಿಯ ಮಗಳು ಹರ್ಮಿಕಬ್ಬೆಗೆ ಮೂಲಸ್ಥಾನದ ಕಲಿದೇವರ

ಸ್ಥಾನವನ್ನು ಕಿರಿಯ ಮಗಳು ಮಾಚವ್ವೆಗೆ ಆ ದೇವಾಲಯಗಳಿಗೆ ಬಿಟ್ಟಿದ್ದ ಭೂದಾನ ವಿವರಗಳನ್ನು ಸ್ಪಷ್ಟಪಡಿಸಿ ಹಂಚಿಕೊಟ್ಟಿದ್ದಾನೆ. ಇದರ ತೇದಿ ೧೧೩೯-೪೦ ಆಗಿದ್ದು ವೀರಶೈವ ಚಳುವಳಿಗಿಂತ ಮೊದಲೇ ಶೈವಸ್ಥಾನಗಳಲ್ಲಿ ಇದ್ದ ಸ್ತ್ರೀ ಪ್ರಾಮುಖ್ಯತೆಯನ್ನು ಹೇಳುತ್ತದೆ.[೨೩೬] 'ಬಸವ ಪೂರ್ವಯುಗದಲ್ಲಿ ಶೈವಧರ್ಮವು ಮಹಿಳೆಯರಿಗೆ ನೀಡಿದ್ದ ಗೌರವಕ್ಕೆ ಅನೇಕ ಶಾಸನೋಲ್ಲೇಖಗಳು ಸಾಕ್ಷಿಯಾಗಿವೆ. ಶೈವಧರ್ಮ ಬಿತ್ತಿದ ಸ್ತ್ರೀಯರ ಸ್ವಾತಂತ್ರ್ಯ ಸಮಾನತೆಯ ಬೀಜ ವೀರಶೈವ ಕಾಲಕ್ಕೆ ಹೂವಾಗಿ ಅರಳಿ ಮಹಾದೇವಿಯಕ್ಕ, ನೀಲಮ್ಮ, ಗಂಗಮ್ಮ, ಅಕ್ಕನಾಗಮ್ಮರಂತಹ ನೂರಾರು ಪಕ್ವ ಫಲಗಳನ್ನು ನೀಡಿ ಸಾರ್ಥಕತೆ ಪಡೆಯಿತೆಂದು ಹೇಳಬೇಕಾಗುತ್ತದೆ.[೨೩೭] ಹಲಕೂರಿನ ಕಲಿದೇವರ ದೇವಾಲಯಕ್ಕೆ ದಾನ ಬಿಡುವ ಸಂದರ್ಭದಲ್ಲಿ ಲಾಕುಳಾಗಮ ಸಮಯ ಸಮುದ್ಧರಣರಾದ ಏಕ್ಕೋಟಿ ಮುನೀಂದ್ರ... ಕಾಳಾಮುಖ ಪ್ರತಿಬದ್ಧರಾದ ಶಿಷ್ಯಪರಂಪರೆಯ ಮುನಿಸಮೂಹದಲ್ಲಿ ದೇವೇಂದ್ರ ಶಕ್ತಿ ಪಂಡಿತರ ಗುಡ್ಡಿ ಪ್ರತ್ಯಕ್ಷಗಂಗೆ ದೇಕವ್ವೆಯೂ ಇದ್ದು ಪಾದ ಪೂಜೆಯನ್ನು ಪಡೆದಿದ್ದಾಳೆ. ಇಲ್ಲಿ ಆಕೆಗೆ ಬಳಸಿರುವ ವಿಶೇಷಣ ಮತ್ತು ದೊರೆತಿರುವ ಗೌರವ ಅವಳ ಆಧ್ಯಾತ್ಮ ಸಿದ್ಧಿಯನ್ನೂ ಶುದ್ಧ ಚಾರಿತ್ರ್ಯವನ್ನೂ ಬಿಂಬಿಸಿದೆ.[೨೩೮] ಮುದುಡಿಯ ಅಮೃತೇಶ್ವರ ದೇವಾಲಯದ ಪೂಜಾರಿಣಿಯಾಗಿದ್ದ ಸಾತವ್ವೆ ಆ ಶೈವ ಸ್ಥಾನದ ಇತರ ಜೀಯರುಗಳೊಂದಿಗೆ ದಾನ ಸ್ವೀಕರಿಸಿದ್ದಾಳೆ.[೨೩೯] ಉಂಡಿಗನಾಳಿನ ಕೇಸವೇಶ್ವರ ದೇವರ ಭೂಮಿಯನ್ನು ಅಲ್ಲಿ ಕಲಜೀಯನ ಮಕ್ಕಳು ಹಂಚಿಕೊಂಡಿದ್ದು, ಆ ನಾಲ್ವರಲ್ಲಿ ನಾಗಜೀಯನೆಂಬುವವನ ಮಕ್ಕಳು ತಮ್ಮ ತಂಗಿ ಬೊಮ್ಮವ್ವೆಗೆ ಹಂಚಿಕೊಟ್ಟಿದ್ದಾರೆ. ಮುಂದೆ ಅವಳ ಮಗ ಆ ಪುದಾವಳಿಗೆ ಹಕ್ಕುದಾರನೆಂದು ತಿಳಿದುಬರುತ್ತದೆ.[೨೪೦] ಇದೇ ರೀತಿ ನಾಗವೇದಿಯ ಬೊಂಮೇಶ್ವರ ದೇವರ ಸ್ಥಾನದ ಭೂಮಿಯೂ ಸ್ಥಾನಿಕರಲ್ಲಿ ಮೂರು ಭಾಗವಾಗಿ ಹಂಚಿಕೆಯಾಗಿದ್ದು, ಒಂದು ಭಾಗವನ್ನು ಚಿಕ್ಕಜೀಯನು ತನ್ನ ತಂಗಿ ಸಾಂತವ್ವೆಗೆ ಅಳಿಯನಾದ ಅವಳ ಮಗನಿಗೆ ತನ್ನ ಭಾಗದ ಗದ್ದೆ ಬೆದ್ದಲೆ, ಕಳ, ಮನೆ ಅಷ್ಟಭೋಗಭಾಗ್ಯ ಸಾಮ್ಯವನ್ನೂ ವಹಿಸಿಕೊಟ್ಟಿದ್ದಾನೆ. (ತಂಗಿಯ ಮಗನಿಗೆ ಮಗಳನ್ನು ಕೊಟ್ಟಿರಬಹುದು.)[೨೪೧]

ಮುತ್ತನ ಹೊಸ ಊರಿನ ಕುಂಜೇಶ್ವರ ದೇವಾಲಯದ ಒಡತಿಯಾಗಿ ವಿಭೂತಿಪಟ್ಟವನ್ನು ಪಡೆದಿದ್ದ ಗಣಕುಮಾರಿ ಚಂದವ್ವೆ[೨೪೨] ದೇವಾಲಯದ ಸಮಸ್ತ ಆರ್ಥಿಕ ಧಾರ್ಮಿಕ ಚಟುವಟಿಕೆಗಳನ್ನು ನಡೆಸುತ್ತಿದ್ದಳು. ಹೊಯ್ಸಳ ರಾಜಧಾನಿಯ ರಾಜಗುರು ರುದ್ರಶಕ್ತಿ ಮುಖ್ಯರಾದ ನೂರಿಪ್ಪತ್ತು ಸ್ಥಾನಾಚಾರ್ಯರು, ಕಂಪಣಾಚಾರ್ಯರು, ಭಕ್ತಗಣಗಳು ಒಪ್ಪಿ ಅವಳಿಗೆ ಈ ವಿಭೂತಿ ಪಟ್ಟವನ್ನು ಕಟ್ಟಿ ಆಶೀರ್ವಧಿಸಿದ್ದರೆಂಬುದು ಮುಖ್ಯ. ಇದಕ್ಕೆ ಎರಡು ಕಾರಣಗಳನ್ನು ಗುರುತಿಸಬಹುದು. ಮೊದಲನೆಯದಾಗಿ ಚಂದವ್ವೆಯ ಕುಟುಂಬ ಕೇರಳ ಮೂಲದ ಮಾತೃಮೂಲ ಅಳಿಯ ಸಂತಾನ ಕಟ್ಟಿನದಾಗಿದ್ದು, ಸಹಜವಾಗಿ ತಾಯಿಯಿಂದ ಹೆಣ್ಣು ಮಕ್ಕಳಿಗೆ ಆಸ್ತಿ ಒಡೆತನ ಲಭ್ಯವಾಗುತ್ತಿತ್ತು. ಆ ಕಾರಣಕ್ಕಾಗಿ ಅವಳು ಆ

ಕುಟುಂಬದ ಆಸ್ತಿಗೆ ಹಕ್ಕುದಾರಳಾಗಿದ್ದಳು. ಎರಡನೆಯದಾಗಿ ಕಲ್ಯಾಣದಲ್ಲಿ ನಡೆದ ಶರಣರ ಸಮಾಜೋ ಧಾರ್ಮಿಕ ಕ್ರಾಂತಿಯು ೧೨ನೇ ಶತಮಾನದ ಸಮಾಜದಲ್ಲಿ ಉಂಟು ಮಾಡಿದ ಸಂಚಲನ ಸ್ತ್ರೀಯರ ಬದುಕಿನಲ್ಲೂ ಮಹತ್ವ ಪೂರ್ಣ ಬದಲಾವಣೆಯನ್ನು ತಂದಿತ್ತು. ಸತಿಪತಿಗಳೊಂದಾದ ಬಕುತಿಯ ಹಿತವಾದ ಕಲ್ಪನೆ, ಸ್ತ್ರೀ ಪುರುಷರಲ್ಲಿನ ಭೇದವಳಿಸುವ ನಡುವೆ ಸುಳಿವಾತ್ಮನು ಗಂಡೂ ಅಲ್ಲ ಹೆಣ್ಣು ಅಲ್ಲ 'ವೆಂಬ ಸಮಭಾವ ಮಹಾಮನೆಯಲ್ಲಿ ಸ್ತ್ರೀಯರಿಗೆ ದೊರೆತ ಪ್ರಾಧಾನ್ಯತೆ ಶೈವ ಸಮಾಜದಲ್ಲಿ ಹೊಸ ಪರಿವರ್ತನೆಯನ್ನು ತರುವಲ್ಲಿ ಯಶಸ್ವಿಯಾಯಿತು. ಗಣಕುಮಾರಿ ಚಂದವ್ವೆಯ ಕುಟುಂಬ ವೀರಶೈವ ಧರ್ಮದ ದಟ್ಟ ಪ್ರಭಾವಕ್ಕೆ ಒಳಗಾಗಿತ್ತು. ಅವಳ ಸೋದರ ಕುಂಜನು ತನುವನ್ನು ಜಂಗಮರ ಸೇವೆಗಾಗಿ ಮನವನ್ನು ಶಿವನಲ್ಲಿ ಲೀನಗೊಳಿಸಿಕೊಂಡ ಶರಣನಾಗಿದ್ದ. ಅತ್ಯಂತ ಸಿರಿವಂತ ವ್ಯಾಪಾರೀ ಕುಟುಂಬದ ಮಕ್ಕಳಾಗಿದ್ದರೂ ಅವರ ಮನಸ್ಸು ಶಿವಭಕ್ತಿಯ, ಸರಳ ಬದುಕಿಗೆ ಒಲಿದಿತ್ತು. ಹಾಗಾಗಿ ಚಂದವ್ವೆಗೆ ವೀರಶೈವ ದೀಕ್ಷೆಯೊಂದಿಗೆ ವಿಭೂತಿ ಪಟ್ಟವೂ ವೀರಶೈವ ಮಠಗಳಲ್ಲಿ ಗಣಕುಮಾರರಿಗೆ ದೊರಕುವ ಸ್ಥಾನಮಾನ ಕರ್ತವ್ಯಗಳನ್ನೂ ವಹಿಸಿಕೊಡಲಾಯಿತು.

### ೪.೩.೨. ಸ್ತ್ರೀಯರು, ಆಸ್ತಿ ಒಡೆತನ, ಧರ್ಮಶ್ರದ್ಧೆ ದಾನದತ್ತಿ

ಮೇಲಿನ ಕೆಲವು ಉಲ್ಲೇಖಗಳಿಂದ ಸ್ತ್ರೀಯರಿಗೆ ಕೇವಲ ಗೌರವದ ಸ್ಥಾನಮಾನಗಳಷ್ಟೇ ಅಲ್ಲ ಆರ್ಥಿಕ ಸ್ವಾತಂತ್ರ್ಯವೂ ಆಸ್ತಿ ಒಡೆತನಕ್ಕೂ ಅವಕಾಶವಿತ್ತೆಂಬುದು ತಿಳಿದುಬರುತ್ತದೆ. ಮತ್ತಷ್ಟು ಉಲ್ಲೇಖಗಳಿಂದ ಇದನ್ನು ಸ್ಪಷ್ಟಪಡಿಸಿಕೊಳ್ಳಬಹುದು. ಕೋಡಿಹಳ್ಳಿಯ ಮಾಳಕ್ಕ ಎಂಬುವವಳು ಚಿಕ್ಕ ಕೆರೆಯ ಕೆಳಗಿನ ತನ್ನ ಹತ್ತು ಕೊಳಗ ಗದ್ದೆಯಲ್ಲಿ ಕೆಲವು ಕೊಳಗ ಗದ್ದೆಯನ್ನು ದಾಮಸಮುದ್ರದ ಕೆರೆಯ ಕೆಳಗೆ ೫ ಕೊಳಗ ಗದ್ದೆಗೆ ಆಯ್ತ ಗಾವುಂಡನಿಂದ ಭೂಪರಿವರ್ತನೆ ಮಾಡಿಕೊಂಡಿದ್ದಾಳೆ. ಭೂ ಒಡೆತನವಿದ್ದಾಗ ಮಾತ್ರ ಈ ರೀತಿ ಪರಿವರ್ತನೆ ಸಾಧ್ಯವೆಂಬುದು ಸ್ಪಷ್ಟವಾಗಿದೆ. ಸಾಲಪತ್ರದಲ್ಲಿ ಸಾಲಿಗನ ವಿಧವೆಯ ಹೆಸರು ಕಡ್ಡಾಯವಾಗಿ ಉಲ್ಲೇಖಗೊಂಡಿದೆ. ಗುಬ್ಬಿ ಕಲ್ಲಯ್ಯ ಸಾಲಿಗ ಅವನ ಇಬ್ಬರು ಗಂಡು ಮಕ್ಕಳಲ್ಲಿ ಹಿರಿಯವನು ಪೋತಗೌಡ ಎರಡನೆಯ ಮಗ ಸಿಂಗಯ್ಯನ ಹೆಸರಿನ ಬದಲು ಆತನ ಮದವಳಿಗೆ ಚಾವುಡಾದೇವಿಯ ಹೆಸರಿದೆ[೨೪೩] ಜೀಮೂತ ವಾಹನನ 'ದಾಯ ಭಾಗ' ಪದ್ಧತಿಯಲ್ಲಿ ಅವಿಭಕ್ತ ಕುಟುಂಬದ ವಿಧವೆಗೆ ನಿಧನ ಹೊಂದಿದ ಪತಿಯ ಆಸ್ತಿ ಪಾಲಿನ ಹಕ್ಕನ್ನು ಕೊಡಮಾಡಲಾಗಿತ್ತು.[೨೪೪] ಗೀಜಿ ಹಳ್ಳಿಯ ಒಂದು ಶಾಸನದಲ್ಲಿ ಗಂಡ ಹೆಂಡತಿ ಯಾರಿಗಾದರೂ ಭೂಮಿಯ ಒಡೆತನ ಸಲ್ಲುವುದೆಂದು ಹೇಳಲಾಗಿದೆ. ಈ ವಂಶದವರ ಹೆಸರುಗಳನ್ನು ಗಮನಿಸಿದರೆ ಇವರು ಅಳಿಯ ಸಂತಾನ ಕಟ್ಟಿನ ಮೂಲದವರೆನಿಸುತ್ತದೆ.[೨೪೫] ಹಲಕೂರಿನ ಪ್ರಭು ಗೌಡುಗಳ ಕುಟುಂಬದಲ್ಲಿ ನಾಯಕನ ಸಾವಿನಿಂದ ಗೌಡಿಕೆಯ ಒಡೆತನದ ಬಗೆಗೆ ಭಿನ್ನಾಭಿಪ್ರಾಯವೇರ್ಪಟ್ಟು ಆ ಗ್ರಾಮದ ಸಮಸ್ತ ಪ್ರಜೆಗಳು ಎಲ್ಲ

ದೇವಾಲಯದ ಸ್ಥಾನಿಕರು ಸಮಸ್ತ ಜೇಡಗೊತ್ತಳಿ ಹನ್ನೆರಡು ಹಿಟ್ಟಿನ ಬೆಸಮಕ್ಕಳು ಮುಖ್ಯವಾಗಿ ಸಮಸ್ತ ಗೌಡರನ್ನು ಸೇರಿಸಿ ಶ್ರೀಮತು ಪಸಾಯತ ಇಟಿಕಾರ ಬೊಮ್ಮವ್ವೆ ನಾಯಕಿತಿಯು ಗೌಡಿಕೆಯನ್ನು ಪಡೆದ ಮಹತ್ವದ ವಿಷಯ ಉಲ್ಲೇಖಗೊಂಡಿದೆ.[೨೪೬] ಗೌಡಿಕೆಯಾಗಿ ೮ ಸಲಗೆ ಗದ್ದೆ ೮೦೦ ಕಂಬ ಬೆದ್ದಲು ಕಳ, ಮನೆ ಇವುಗಳನ್ನು ಆಕೆ ಪಡೆದುದಲ್ಲದೆ, 'ಗೌಡಿಕೆ ನಾಯಕನ ಹೆಂಣು ಗಂಡಿಗೆ ಸಲುವುದು' ಎಂಬ ಮಹತ್ವಪೂರ್ಣ ತೀರ್ಮಾನ ಶಾಸನಸ್ಥವಾಗಿದೆ. ಇನ್ನು ಮುಂದೆ ೫ ಬಣವಾಗಿದ್ದ ಗೌಡರು ಆರು ಬಣವಾಗಿ ಕೂಡಿ ನಡೆಯಬೇಕೆಂಬ ಆದೇಶವನ್ನು ಮಾಡಲಾಗಿದೆ. ಪ್ರಸಿದ್ಧ ವ್ಯಾಪಾರಿ ಕಂಡನಂಬಿ ತನ್ನ ಹಿರಿಯ ಮಗಳು ಸೊವಕ್ಕನಿಗೆ ಗದ್ದೆ ತೋಟಸ್ಥಳ ಬೆದ್ದಲು ಸೇರಿ ೧೦೦೦ ಕಂಬ ಭೂಮಿಯನ್ನೂ ೧೦ ಕಂಬದ ಎರಡು ಮನೆಯನ್ನು ೧೦ ಕಂಬ ಕಳ'ವನ್ನೂ ಹಂಚಿಕೊಟ್ಟಿದ್ದಾನೆ.[೨೪೭]

**ಧರ್ಮಶ್ರದ್ಧೆ ದಾನದತ್ತಿ** : ಧರ್ಮ, ಧಾರ್ಮಿಕತೆ ಎಂಬ ಪರಿಕಲ್ಪನೆಗಳು ಹುಟ್ಟಿಕೊಳ್ಳುವುದಕ್ಕೆ ಮೊದಲೇ ಜಗತ್ತಿನ ಅಸ್ತಿತ್ವಕ್ಕೆ ಕಾರಣವಾದ ಫಲವಂತಿಕೆಯ ಶಕ್ತಿಯನ್ನು ಹೊಂದಿದ ಭೂಮಿ ಮತ್ತು ಹೆಣ್ಣುಗಳು ಸಮೀಕರಣಗೊಂಡು ಕೃಷಿಕ ಆಚರಣೆಗಳಲ್ಲಿ ಸ್ತ್ರೀಗೆ ಪ್ರಾಧಾನ್ಯತೆಯಿತ್ತು. ಈ ಆಚರಣೆಗಳು ಧರ್ಮದ ಚೌಕಟ್ಟಿನ ಒಳಗೆ ವಿಕಾಸಗೊಂಡು ಫಲವಂತಿಕೆಯ ಶಕ್ತಿಯು ದೇವಿಯರ ಅವತಾರಕ್ಕೆ ಕಾರಣವಾಯಿತು. ಭೌತಿಕವಾದ, ಯೋಗ ಸಾಧನೆಗಳಿಗೆ ಪ್ರಾಮುಖ್ಯತೆ ಒದಗಿದ್ದ ಕಾಲದಲ್ಲಿ ಹೆಣ್ಣು ವಿಭಿನ್ನ ರೀತಿಯಲ್ಲಿ ಧಾರ್ಮಿಕ ಆಚರಣೆಗಳಲ್ಲಿ ಪ್ರಾಮುಖ್ಯತೆ ಪಡೆದಳು.

ಪ್ರಾಚೀನ ಬೌದ್ಧ ಧರ್ಮದ ವಜ್ರಯಾನ ಪಂಥವು ವಿಶೇಷವಾಗಿ ಯೋಗಿಣಿಯರಿಗೆ ಅವಕಾಶಗಳನ್ನು ಒದಗಿಸಿಕೊಟ್ಟಿತ್ತು.[೨೪೮] ಶಾಕ್ತರು, ಕಾಪಾಲಿಕರು ನಾಥಸಿದ್ಧ ಪಂಥಗಳಲ್ಲಿ ಹೆಣ್ಣು ಯೋಗಿಕ ಪ್ರಕ್ರಿಯೆಗಾಗಿ ಅಗತ್ಯ ಸಾಧನೆಯಾಗಿದ್ದಳು. ತಂತ್ರ ಸಾಧನೆಯ ಬಹುಮುಖ್ಯ ಕೇಂದ್ರವಾಗಿದ್ದ ಶ್ರೀ ಶೈಲದಲ್ಲಿ ಯೋಗಿನಿಯರ ಮೇಳವೇ ಸೇರಿದ್ದು ಆ ಭಾಗಕ್ಕೆ ಸ್ತ್ರೀ ರಾಜ್ಯವೆಂಬ ಸಂಜ್ಞೆ ಕೂಡ ರೂಢಗೊಂಡಿತ್ತು.[೨೪೯] ಕಣಿಕಟ್ಟೆಯ ಪಾಳು ನೀಲೇಶ್ವರ ದೇವಾಲಯದ ಶಾಸನವೊಂದು ಯೋಗಿನೀಶ್ವರ ಭಕ್ತರ ಹಾಗೂ ಮಾತೆಯ ಉಲ್ಲೇಖ ಮಾಡಿದೆ.[೨೫೦]

ಈ ರೀತಿ ತಾಂತ್ರಿಕ ಪಂಥಗಳು ಪಂಚ ಮಕಾರಗಳಲ್ಲಿ ಸ್ತ್ರೀಯರನ್ನೂ ಸೇರಿಸಿಕೊಂಡಿದ್ದುದನ್ನು ಸ್ತ್ರೀಗೆ ದೊರಕಿದ್ದ ಪ್ರಾಮುಖ್ಯತೆ ಎನ್ನಲಾಗದು. ಆ ಪ್ರಾಮುಖ್ಯತೆ ಅವಳ ಬೌದ್ಧಿಕ ಸಾಧನೆಗೆ ಅವಕಾಶ ಮಾಡಿಕೊಟ್ಟಿತ್ತೆ? ಇದನ್ನು ಧಾರ್ಮಿಕ ಸ್ವಾತಂತ್ರ್ಯವೆನ್ನಬಹುದೇ? ಅಥವಾ ಲೈಂಗಿಕತೆಯ ಸ್ವೇಚ್ಛಾಚಾರವಾಗಿತ್ತೇ? ಎಂಬುದು ಚರ್ಚಾಸ್ಪದವಾದ ವಿಚಾರ.

ಜೈನ ಧರ್ಮವು ಸ್ತ್ರೀಯನ್ನು ಪತನ ಮುಖಿ, ಸ್ತ್ರೀ ಜನ್ಮ ಮೋಕ್ಷಕ್ಕೆ ಅರ್ಹವಲ್ಲವೆಂಬ ಅಭಿಪ್ರಾಯವನ್ನು ಹೊಂದಿದ್ದರೂ, ಮುಂದೆ ಕೆಲವು ಬದಲಾವಣೆಗಳನ್ನು ಮಾಡಿಕೊಂಡು ಸ್ತ್ರೀಯರಿಗೂ

ಸಾಧನೆಗೆ ಅವಕಾಶ ಮಾಡಿಕೊಟ್ಟಿತ್ತು. ಕಂತಿಯರಿಗೆ, ಅಜ್ಜಿಯರಿಗೆ, ಶ್ರಾವಕಿಯರಿಗೆ ವ್ರತನೊಂಪಿ, ತಪಸ್ಸುಗಳಿಗೆ ಅವಕಾಶ ಮಾಡಿಕೊಟ್ಟಿದ್ದರಿಂದ ಅನೇಕ ಸಾಧಕಿಯರನ್ನು ಈ ಧರ್ಮದಲ್ಲಿ ಕಾಣಬಹುದು. ಶ್ರದ್ಧಾಭಕ್ತಿಯಿಂದ ಪಂಚಾಣು ವ್ರತಗಳನ್ನು ಪಾಲಿಸುತ್ತ ಜಿನಮುನಿಗಳ ಅತಿಥಿಗಳ ಸೇವೆ ಮಾಡುವುದು ಪುರಾಣ ಶ್ರವಣ, ಜಿನಪೂಜೆ ಆಹಾರ ದಾನ ಶಾಸ್ತ್ರದಾನಗಳಲ್ಲಿ ಅತ್ಯಂತ ಚಟುವಟಿಕೆಯಿಂದ ತೊಡಗಿಕೊಳ್ಳಲು ಜೈನ ಮಹಿಳೆಯರಿಗೆ ಅವಕಾಶವಿತ್ತು. ಬದುಕಿನಲ್ಲಿ ವೈರಾಗ್ಯತಾಳಿ ಸಲ್ಲೇಖನ ವ್ರತವನ್ನು ಸ್ವೀಕರಿಸಿ ಮುಡಿಪಿದ ಶ್ರಾವಕಿಯರೂ, ಕಂತಿಯರೂ, ಗುಡ್ಡಿಯರೂ, ದಾನಿಗಳು ಇತರ ಸ್ತ್ರೀಯರಿಗೆ ಮಾದರಿಗಳಾಗಿ ಬದುಕನ್ನು ಸಾರ್ಥಕ ಮಾಡಿಕೊಂಡರೆಂದು ಶಾಸನಗಳು ಜೈನ ಸಾಹಿತ್ಯವೂ ಚಿತ್ರಿಸಿವೆ.

ಪ್ರಸ್ತುತ ಅಧ್ಯಯನ ಪ್ರದೇಶದ ಸೋಮ ಶೆಟ್ಟಿಹಳ್ಳಿಯ ಬಂಡೆಗಲ್ಲಿನ ಮೇಲೆ ಸುಮಾರು ಒಂಬತ್ತು ಹತ್ತನೇ ಶತಮಾನಕ್ಕೆ ಸೇರಿದ ಸ್ತ್ರೀಯರ ನಿಸಿಧಿ ಶಾಸನಗಳು ಇವೆ. ನಲ್ಲೂರ ದೇವ ಸೇನ ಸಿದ್ಧಾಂತ ಭಟಾರರ ಶಿಷ್ಯಿತಿಯ ಶಿಷ್ಯೆ ಪೆಸುವಿರನ್ತಿ ಎಂಬ ಜೈನಸ್ತ್ರೀ ಇಲ್ಲಿ ಮುಡಿಪಿದ್ದಾಳೆ.[೨೫೧] ಅದೇ ಬಂಡೆಯ ಮೇಲೆ ಚನ್ದಮ್ಮ ಗಾವುಂಡಿಯರ ಪೊನ್ನವ್ವೆ ಎಂಬ ಸ್ತ್ರೀಯ ಹೆಸರಿದೆ. ಈ ಬಂಡೆಯ ಮೇಲೆ ನಿಸಿಧಿ ಶಾಸನಗಳೇ ಇರುವುದರಿಂದ ಈ ಪೊನ್ನವ್ವೆ ಕೂಡ ಜೈನ ಧರ್ಮೀಯಳಾಗಿದ್ದು, ಇಲ್ಲಿ ಮುಡಿಪಿದ್ದಾಳೆಂದು ತೋರುತ್ತದೆ.[೨೫೨]

ಕ್ರಿ.ಶ.೮ನೇ ಶತಮಾನಕ್ಕೆ ಸೇರುವ ಒಂದು ತಾಮ್ರ ಶಾಸನವು[೨೫೩] ಪ್ರಸ್ತುತ ಅಧ್ಯಯನ ಪ್ರದೇಶವಾದ ನೀರ್ಗುಂದ ವಿಷಯದ ಶ್ರೀಪುರ ಗ್ರಾಮದಲ್ಲಿ ಕುಂದಾಚ್ಚಿಯು ಲೋಕತಿಲಕ ಜಿನಾಲಯವನ್ನೆತ್ತಿಸಿದ್ದನ್ನು ತಿಳಿಸುತ್ತದೆ. ಇವಳು ಪರಮಗೂಳ ಪ್ರಥುವಿ ನೀರ್ಗುಂದರಾಜನ ಮಡದಿ, ಪಲ್ಲವಾದಿ ರಾಜನ ಅಳಿಯನಾದ ಮಾರುವರ್ಮನ ಮಗಳೆಂದು ತಿಳಿದುಬರುತ್ತದೆ.

ಕೆಲ್ಲಂಗೆರೆಯ ಬಿದುಗ ಜಿನಾಲಯದ ಇತರ ಮುನಿಗಳೊಂದಿಗೆ ಪರಮಬ್ಬೆ ಕನ್ತಿಯೂ ಪಾದಪೂಜೆಗೊಂಡು ದಾನ ಸ್ವೀಕರಿಸಿರುವುದು ಆಕೆಗಿದ್ದ ಸ್ಥಾನಮಾನ ಗೌರವವನ್ನು ಸೂಚಿಸುತ್ತದೆ.[೨೫೪] ಜೈನ ಸಾಹಿತ್ಯದಲ್ಲಿ ಪ್ರಸಿದ್ಧರಾದ ಜಿನಸೇನ ಮತ್ತು ಗುಣಭದ್ರದೇವರ ಶಿಷ್ಯತಿ ಕಾಡಬ್ಬೆಕನ್ತಿಯು ಗಂಡಸಿ ಶಾಸನದಲ್ಲಿ ಉಲ್ಲೇಖಗೊಂಡಿದ್ದಾಳೆ. ಆಕೆ ಯಾವುದೋ ದಾನ ನೀಡಿರುವ ಸಾಧ್ಯತೆಯಿದೆ.[೨೫೫]

ಹಂಸಕ್ಕ ಎಂಬ ಜಿನಭಕ್ತೆ ಸಹಸ್ರಕೂಟ ಜಿನ ಬಸದಿಗೆ ಪಂಚಪರಮೇಷ್ಠಿಗಳ ವಿಗ್ರಹವನ್ನು ಮಾಡಿಸಿಕೊಟ್ಟಿದ್ದಾಳೆ.[೨೫೬] ಕ್ರಿ.ಶ.೧೧೦೩ರಲ್ಲಿ ಸಹಸ್ರ ಕೂಟ ಬಸದಿಯಾಗಲಿ ಅರಸೀಕೆರೆಯ ನಖರ ಜಿನಾಲಯವಾಗಲೀ ನಿರ್ಮಾಣವಾಗಿರಲಿಲ್ಲವಾದ್ದರಿಂದ ಈ ಚಿಕ್ಕ ಪಂಚಪರಮೇಷ್ಠಿ ವಿಗ್ರಹವನ್ನು ಬೇರೆಡೆಯಿಂದ ಇಲ್ಲಿಗೆ ತಂದಿರುವ ಅಥವಾ ಅರಸೀಕೆರೆಯಲ್ಲಿದ್ದಿರಬಹುದಾದ ಹಳೆಯ ಬಸದಿಗೆ ಸೇರಿದ್ದಾಗಿರುವ ಸಾಧ್ಯತೆಯಿದೆ.

ಜೈನ ಸ್ತ್ರೀ ಸಮಾಜಕ್ಕೆ ಅತ್ತಿಮಬ್ಬೆ ಆದರ್ಶವಾಗಿದ್ದಳು. ಅವಳ ಧಾರ್ಮಿಕ ಶ್ರದ್ಧೆ. ದಾನಗುಣ ಜಿನಭಕ್ತಿ ಅನೇಕ ಜೈನ ಸ್ತ್ರೀಯರ ಬದುಕಿಗೊಂದು ದಾರಿ ದೀಪವಾಗಿತ್ತು. ಮರಿಯಾನೆ ದಂಡನಾಯಕನ ಮಗಳಾದ ಬಮ್ಮಲದೇವಿಗೆ ಚಿಕ್ಕಂದಿನಿಂದಲೂ ಶ್ರದ್ಧಾವಂತ ಜೈನ ಧಾರ್ಮಿಕ ವಾತಾವರಣ, ಕುಟುಂಬದಲ್ಲೇ ಇತ್ತು. ಅದರೊಂದಿಗೆ ಅವಳು ಕೈ ಹಿಡಿದ ಪತಿ ಪಟ್ಟಸಭಂಡಾರಿ ಪಾರ್ಶ್ವನಾಥನ ಕುಟುಂಬವೂ ಶ್ರದ್ಧಾವಂತ ಜೈನರಾದ ಸಂಧಿವಿಗ್ರಹಿ ಚಾವುಂಡರಾಯ ಮತ್ತು ಯಕ್ಷಾಂಬಿಕೆಯರ ಮಗನಾಗಿದ್ದು ಎರಡೂ ಕುಟುಂಬಗಳು ಜೈನ ಬಸದಿಗಳನ್ನು ನಿರ್ಮಾಣಮಾಡಿ ದಾನದತ್ತಿಗಳನ್ನು ಬಿಟ್ಟಿರುವುದು ತಿಳಿದು ಬರುತ್ತದೆ.[೨೫೭] 'ಪತಿಭಕ್ತಿಯೊಳಮಳಿನ ಜಿನಪತಿ ಭಕ್ತಿಯೊಳತ್ತಿಮಬ್ಬೆಯೆಂದೀ ಭುವನಂ ಸತತಂ ಬಮ್ಮಲದೇವಿಯನತಿ ಮುದದಿಂ ಪೊಗಳುತಿಪ್ಪುದಿರುಳುಂ ಪಗಲುಂ" ಎಂದು ಕವಿ ಹೇಳಿದ್ದಾನೆ. ಈಕೆಯು ಅತ್ತಿಮಬ್ಬೆಯಂತೆ ಗಂಡನನ್ನು ಕಳೆದುಕೊಂಡು ಮಗನ ಶ್ರೇಯಸ್ಸಿಗಾಗಿ ಹಾಗೂ ಬದುಕನ್ನು ಸಾರ್ಥಕ ಮಾಡಿಕೊಳ್ಳುವುದಕ್ಕಾಗಿ ಬದುಕಿದವಳು. ಪಟ್ಟಸ ಭಂಡಾರಿ ಪಾರ್ಶ್ವ ಆಹವಮಲ್ಲನೊಂದಿಗಿನ, ಕಾಳಗದಲ್ಲಿ ಮಡಿದಿದ್ದಾನೆ. ತಂದೆಯ ಹೆಸರಿನಲ್ಲಿ ಬಸದಿಯೊಂದನ್ನು ನಿರ್ಮಿಸಲು ಈಕೆ ಮಗನಿಗೆ ಪ್ರೇರಣೆಯಾಗಿದ್ದಳು.

ವಸುಧೈಕಬಾಂಧವ ರೇಚಿಮಯ್ಯ ದಣ್ಣಾನಾಯಕನ ಪತ್ನಿ ಗೌರಾದೇವಿಯು ತನ್ನ ನೋಂಪಿಯ ಉದ್ಯಾಪನೆಯ ನಿಮಿತ್ತ ಸಹಸ್ರಕೂಟ ಜಿನಾಲಯದ ಪ್ರತಿಷ್ಠೆಗೆ ಗಂಡನಿಗೆ ಪ್ರೇರಣೆಯಾಗಿದ್ದಳು.[೨೫೮] ಈ ಸಹಸ್ರಕೂಟ ಜಿನಾಲಯಕ್ಕೆ ಅನೇಕ ಭಕ್ತರು ನೀಡಿರುವ, ದಾನಗಳಲ್ಲಿ 'ಸಾಗರನಂದಿ ಸಿದ್ಧಾಂತ ದೇವರ ಸಿಸಿತಿ ಮರುದೇವಿ ಅಜ್ಜಿಯರು' ಹತ್ತು ಗದ್ಯಾಣಗಳನ್ನು, 'ಸುತಕೀರ್ತಿ ಭಟ್ಟಾರಕರ ಸಿಸಿತಿ ಜಯಿತಿಸಿರಿಯವೆ' ಒಂಬತ್ತು ಗದ್ಯಾಣಗಳನ್ನು ದಾನ ಮಾಡಿದ್ದಾರೆ.[೨೫೯]

ಇಮ್ಮಡಿ ಬಲ್ಲಾಳ ದೇವನ ಮಗಳು ರಾಜಕುಮಾರಿ ಸೋವಲದೇವಿ ಇತರರೊಂದಿಗೆ ಸೇರಿ ಸಹಸ್ರಕೂಟ ಜಿನಾಲಯಕ್ಕೆ ಭೂದಾನ ನೀಡಿದ್ದಾಳೆ.[೨೬೦] ರಾಜಕೀಯ ಕಾರಣಕ್ಕಾಗಿ ಚೋಳಮಹಾರಾಜ ರಾಜರಾಜನನ್ನು ವಿವಾಹವಾಗಿದ್ದ ಆಕೆ ತನ್ನ ಸೋದರ ನರಸಿಂಹನ ಮಗ ಸೋಮೇಶ್ವರನನ್ನು ಅತ್ಯಂತ ಪ್ರೀತಿಯಿಂದ ಸಾಕಿಸಲಹಿದವಳು. ಹಾರನಹಳ್ಳಿಯಲ್ಲಿ ಸೋಮೇಶ್ವರ ಅಗ್ರಹಾರವನ್ನು ಸ್ಥಾಪಿಸಿ ಶ್ರೇಷ್ಠ ವಿದ್ಯಾಕೇಂದ್ರವನ್ನಾಗಿ ರೂಪಿಸಲು ಸಹಾಯಕಳಾದಳು.[೨೬೧] ಅವಳು ಸೋದರ ಪ್ರೇಮಕ್ಕೆ, ಕೊಡುಗೈ ದಾನಕ್ಕೆ ಹೆಸರಾಗಿದ್ದಳು.[೨೬೨] ಆಕೆ ವೈದಿಕ ಧರ್ಮಕ್ಕೆ ಪ್ರೋತ್ಸಾಹ ನೀಡಿರುವುದರೊಂದಿಗೆ ಜೈನ ಬಸದಿಗೂ ದಾನ ನೀಡಿ ಧರ್ಮಸಮನ್ವಯ ಮೆರೆದಿದ್ದಾಳೆ.

ವೈದಿಕ ಧರ್ಮದಲ್ಲಿ ಸ್ತ್ರೀಯರಿಗೆ ಪ್ರಾಧಾನ್ಯತೆ ಇರದಿದ್ದರೂ ಉನ್ನತ ವರ್ಗದ ಸ್ತ್ರೀಯರು ಸಾಮಾನ್ಯ ಸ್ತ್ರೀಯರು ದಾನಕಾರ್ಯ ನಿರ್ಮಾಣಕಾರ್ಯದಲ್ಲಿ ಕುಟುಂಬದವರೊಂದಿಗೆ ಭಾಗಿಗಳಾಗಿರುವುದು ಕಂಡುಬರುತ್ತದೆ. ನೀರ್ಗುಂದ ನಾಡೊಳಗಣ ಬೆನಚಟಿಗೆರೆಯಲ್ಲಿ ವಿಷ್ಣುವರ್ಧನನ ರಾಣಿ ಪಲ್ಲವ

ರಾಜಕುಮಾರಿ ಬ್ರಹ್ಮಪುರವೆಂಬ ಅಗ್ರಹಾರಸ್ಥಾಪಿಸಿ ಬ್ರಹ್ಮಲೇಶ್ವರ ದೇವರಿಗೆ ಬ್ರಾಹ್ಮಣರಿಗೆ ಪೂಜಾರಿ ಬಾಣಸುಗಿತ್ತಿ, ದವಸಗಿತ್ತಿ, ತೋಟಿಗ ಮುಂತಾದವರಿಗೆ ದಾನ ನೀಡಿದ್ದಾಳೆ. ತಮ್ಮ ತಾಯಿ ನೀಡಿದ ಈ ಧರ್ಮವನ್ನು ಮಗಳು ರಾಜಲದೇವಿ ಪ್ರತಿಪಾಲಿಸುವಳೆಂದು ಶಾಸನ ಹೇಳಿದೆ.[೨೬೩] ಕ್ರಿ.ಶ.೧೧೩೫ರಲ್ಲಿ ಬೊಮ್ಮಲದೇವಿ ನಾಗಮಂಗಲದಲ್ಲಿ ಶಂಕರ ನಾರಾಯಣ ದೇವಾಲಯಗಳ ನಿರ್ಮಾಣ ಮತ್ತು ಜೀರ್ಣೋದ್ಧಾರ ಮಾಡಿದ್ದಾಳೆ. ಸ್ತ್ರೀಯರ ಶಿವಾಲಯ ನಿರ್ಮಾಣ ಹಾಗೂ ದಾನ ಹೆಚ್ಚಾಗಿ ಈ ಪ್ರದೇಶದಲ್ಲಿ ಕಂಡುಬಂದಿದೆ. ವಿಷ್ಣುವರ್ಧನನ ಮತ್ತೊಬ್ಬ ಮಡದಿ ಚಿಕ್ಕ ಶಾಂತಲೆಯು ತನ್ನ ವಿಶೇಷ ಸೌಂದರ್ಯ ಮತ್ತು ಕಲೆಯಿಂದ ಅರಸನ ಮನ ಗೆದ್ದಿದ್ದಳು. ಇವಳು ನೀರುಗುಂದ ನಾಡಿನ ಯಲಗುಂದದ ನಾಯಕರತ್ನ ಕೇತಯ ನಾಯಕ ಮತ್ತು ಶಿವಧರ್ಮ ಶ್ರೀ ತಿಲಕಳೆಂದು ಪ್ರಸಿದ್ಧಳಾದ ಜಕ್ಕಿಯಬ್ಬೆಯ ಮಗಳು. ಚಿಕ್ಕ ಶಾಂತಲೆ ತನ್ನ ಮಗಳು ಬೊಪ್ಪಲೆಯೊಂದಿಗೆ ಅಕಾಲ ಮರಣಕ್ಕೆ ತುತ್ತಾದಾಗ. ಮಗಳು ಮೊಮ್ಮಗಳ ಪರೋಕ್ಷ ವಿನಯಕ್ಕಾಗಿ ಚಕ್ಕಿಯಬ್ಬೆ ನಿರ್ಮಾಣ ಮಾಡಿಸಿದ ಶಾಂತಲೇಶ್ವರ ಬೊಪ್ಪಲೇಶ್ವರ ದೇವಾಲಯಗಳಿಗೆ ವಿದ್ಯಾರ್ಥಿ ಖಂಡಿಕಕ್ಕೆ ದಾನ ನೀಡಿದ ವಿಚಾರ ದಾಖಲಾಗಿದೆ. ಈ ದಾನಕ್ಕಾಗಿ ಚಕ್ಕಿಯಬ್ಬೆ ಅಳಿಯನಾದ ಚಕ್ರವರ್ತಿ ವಿಷ್ಣುವರ್ಧನನಿಂದ ವೃತ್ತಿಗಳನ್ನು ಪಡೆದಿದ್ದಾಳೆ.[೨೬೪]

ಒಂದನೇ ನರಸಿಂಹನ ಮಡದಿ ಗೌರಲದೇವಿ ಎಂಬುವವಳು ಮಗ ಕುಮಾರ ಎರೆಯಂಗದೇವ ನೊಂದಿಗೆ ಕೆಂಬಾಳನ್ನು ಆಳುತ್ತಿದ್ದು. ಕೆಂಬಾಳಿನ ಮಲ್ಲಿಕಾರ್ಜುನ ದೇವರಿಗೆ ಭೂಮಿ ದಾನ ನೀಡಿದ್ದಾಳೆ.[೨೬೫]

ಇಮ್ಮಡಿ ಬಲ್ಲಾಳನ ರಾಣಿ ಬೊಮ್ಮಲಾದೇವಿಯ ತಾಯಿ ಸೋಮವ್ವೆ ತಾವರೆಕೆರೆಯಲ್ಲಿ ಅಮೃತೇಶ್ವರ ದೇವಾಲಯ ಮಾಡಿಸಿದ್ದಾಳೆ.[೨೬೬] ಉಮಾದೇವಿಯ ಧಾರ್ಮಿಕ ಕಾರ್ಯಗಳನ್ನು ಈಗಾಗಲೇ ಗಮನಿಸಿದ್ದೇವೆ. ಮಗರೆ ಮುನ್ನೂರರ ಚಳುಕೆಯ ವ್ರಿತ್ರಿಯ ಕೇಸೀಹಳ್ಳಿಯನ್ನು ಇಮ್ಮಡಿ ಬಲ್ಲಾಳನ ರಾಣಿ ಬೈಚಲದೇವಿ ತನ್ನ ತಾಯಿ ಮಾದಿಯಕ್ಕನ ಹೆಸರಿನಲ್ಲಿ ಪ್ರಸನ್ನ ಮಾದವಪುರವೆಂಬ ಅಗ್ರಹಾರವಾಗಿ ಪರಿವರ್ತಿಸಿ, ಪ್ರಸನ್ನ ಮಾಧವನ ದೇವಾಲಯವನ್ನು ನಿರ್ಮಿಸಿ ೪೨ ವೃತ್ತಿಗಳನ್ನು ಬ್ರಾಹ್ಮಣರಿಗೆ ದಾನಮಾಡಿದ್ದಾಳೆ.[೨೬೭] ಅಧಿಕಾರೀ ವರ್ಗದ ಸ್ತ್ರೀಯರೂ ದೇವಾಲಯ ನಿರ್ಮಾಣಕ್ಕೆ ಪ್ರೋತ್ಸಾಹಿಸಿ ದಾನ ಕಾರ್ಯಗಳಲ್ಲಿ ತೊಡಗಿಕೊಂಡಿದ್ದಾರೆ. ಬೀರಯ್ಯ ದಂಡನಾಯಕರ ಮಡದಿ ತಾಯಿಯಮ್ಮ ತಮ್ಮ ಅರಮನೆಯ ವೈದ್ಯ ದೇವರಾಜಪಿಳ್ಳೆಯ ಪ್ರಾರ್ಥನೆಯ ಮೇರೆಗೆ ಜೀರ್ಣವಾಗಿದ್ದ ಚೆನ್ನಕೇಶವ ದೇವಾಲಯವನ್ನು, ಹೊರಥರವನ್ನು ಇಟ್ಟಿಗೆಯಿಂದಲೂ ಕಟ್ಟಿಸಿ ಕಳಶವನ್ನು ಮಾಡಿಸಿ ರಂಗಮಂಟಪವನ್ನು ಮರವೆಸನಾಗಿ ಮಾಡಿಸಿ ಸುಧೆಯನ್ನು ಇಕ್ಕಿಸಿ ಸಂತರ್ಪಣೆಯನ್ನು ಏರ್ಪಡಿಸಿದ್ದಾಳೆ.[೨೬೮] ಅಷ್ಟೇ ಅಲ್ಲ ಬಳ್ಳೆಯ ಕೆರೆಯು ಏರಿ ಒಡೆದು ಹಾಳಾಗಿದ್ದರಿಂದ ಆ ಕೆರೆಯ ವಡವನ್ನು ಕಟ್ಟಿಸಿ ದೇವರಿಗೆ ಸಂಪ್ರೋಷಣೆ ಮಾಡಿಸಿದ್ದಾಳೆ. ಈ ತಾಯಿಯಮ್ಮ ಆ ಪ್ರದೇಶದಲ್ಲಿ ಅಮ್ಮನವರೆಂದು ವಿಶೇಷ ಗೌರವಕ್ಕೆ ಪಾತ್ರಳಾಗಿದ್ದಳು.

ಪೆರ್ಗಡೆ ಶಂಕರನ ನಂದನೆ ಬುದಸೇವ್ವ ಚಂದ್ರಮೌಳಿಯ ಸೋದರಿ ಗೌರೀದೇವಿ ತಳಿರೂರಿನಲ್ಲಿ ತಟಾಕವನ್ನು ಕಟ್ಟಿಸಿದ್ದಾಳೆ.[೨೧೯]

ಮಹಾ ಸಾಮಂತಾಧಿಪತಿ ನೀರ್ಗುದದ ಚಟ್ಟಯ್ಯ ನಾಯಕನ ಮನೋವಲ್ಲಭೆ ಚಂದೌವ್ವೆ ನಾಯಕಿಯು ಮಗಳು ಕಾಚವ್ವೆ ಮತ್ತು ಅಳಿಯ ಮಲ್ಲಯ್ಯ ನಾಯಕನನ್ನು ಮುಂದಿಟ್ಟುಕೊಂಡು ಚಟ್ಟಯ್ಯನಾಯಕನ ಪರೋಕ್ಷ ವಿನಯಕ್ಕಾಗಿ ಹಾಗೂ ಮಗಳು ಅಳಿಯನ ಶ್ರೇಯೋಭಿವೃದ್ಧಿಗಾಗಿ ಶಿವಾಲಯವನ್ನು ಮಾಡಿಸಿದ್ದಾಳೆ.[೨೨೦]

ಕೆಲ್ಲಂಗೆರೆಯ ತೆಲ್ಲಿಗ ಹೆಣ್ಣು ಮಗಳು ಜಕ್ಕವ್ವೆ ತನ್ನ ಪ್ರೀತಿಯ ತಮ್ಮ 'ತನ್ನ ಮನ ತೀಡಲು' ಅಕಾಲಿಕ ಮರಣ ಹೊಂದಿದ ಸಂದರ್ಭದಲ್ಲಿ ಅವನ ಪರೋಕ್ಷ ವಿನಯಕ್ಕೆ ಶಿವಾಲಯವನ್ನೆತ್ತಿಸಿ ಲಿಂಗ ಪ್ರತಿಷ್ಠೆ ಮಾಡಿಸಿದ್ದಾಳೆ. ಆ ಗ್ರಾಮೇಶ್ವರ ದೇವಾಲಯವು ತೆಲ್ಲಿಗರ ಮುಖಕೆ ಕನ್ನಡಿಯೂ ತೆಲ್ಲಿಗರ ಕುಲಕೆ ಕಳಶ ಪ್ರಾಯವೂ ಆಗಿತ್ತು.[೨೨೧]

ಅಮ್ರಿತೇಶ್ವರ ದೇವರಿಗೆ ಚಟ್ಟಗವುಡನ ಮಗಳು ಮುದ್ದಗೌಡಿಯು ಒಂದು ಪಣವನ್ನು ಬೀಜ ಹೊನ್ನಾಗಿ ನೀಡಿದ್ದಾಳೆ.[೨೨೨] ಅರಸೀಕೆರೆಯ ಪ್ರಸನ್ನ ಚನ್ನಕೇಶವ ದೇವರ ನಂದಾದೀವಿಗೆಯ ಎಣ್ಣೆಗೆ ಬಾಚವ್ವೆ, ಬಾಚಕಬ್ಬೆ ಒಂದು ಗದ್ಯಾಣವನ್ನೂ, ತಿಪ್ಪವ್ವೆ, ರೇಚವ್ವೆ ಐದೈದು ಪಣಗಳನ್ನು ನೀಡಿದ್ದಾರೆ.[೨೨೩] ಇವರು ಸಾಮಾನ್ಯ ಸ್ತ್ರೀಯರಾದರೂ ಸ್ವತಂತ್ರವಾಗಿ ದಾನ ನೀಡುವ ಆರ್ಥಿಕ ಶಕ್ತಿ, ಸ್ವಾತಂತ್ರ್ಯ ಪಡೆದಿದ್ದರು! ಎಂಬುದು ಮುಖ್ಯವಾಗುತ್ತದೆ.

ಮನಸೊಪ್ಪಿದ ಧರ್ಮವನ್ನು ಅನುಸರಿಸಲು ಪುರುಷರಂತೆ ಸ್ತ್ರೀಯರಿಗೂ ಅವಕಾಶವಿರುತ್ತಿತ್ತು. ಅದಕ್ಕೆ ಶಾಸನಗಳು ಸಾಹಿತ್ಯ ಕೃತಿಗಳಿಂದ ಅನೇಕ ಉದಾಹರಣೆಗಳು ದೊರಕುತ್ತವೆ. ಕೆಲವು ಅರಸರು ಅಧಿಕಾರಿಗಳು ಸರ್ವಧರ್ಮ ಸಮನ್ವಯ ಭಾವವನ್ನು ತಮ್ಮ ರಾಜ್ಯದಲ್ಲೂ ತಮ್ಮ ಕುಟುಂಬದಲ್ಲೂ ಆಚರಣೆಗೆ ತಂದಿದ್ದರು. ಹೊಯ್ಸಳ ವಿಷ್ಣುವರ್ಧನನ ರಾಣಿಯರಲ್ಲಿ ಶಾಂತಲೆ ಜೈನಳು. ಲಕ್ಷ್ಮಿ ವೈಷ್ಣವ ಧರ್ಮದವಳು. ಬಮ್ಮಲೆ, ರಾಜಲೆ ಮತ್ತು ಚಿಕ್ಕ ಶಾಂತಲೆಯರು ಶೈವಮತೀಯರಾಗಿದ್ದುದು ತಿಳಿದುಬರುತ್ತದೆ. ವಿಷ್ಣುವರ್ಧನನ ಮಗಳು ಹರಿಯಬ್ಬರಸಿ ಶ್ರದ್ಧಾವಂತ ಜೈನಳಾಗಿದ್ದಳು. ಅಳಿಯ ಸಿಂಘರಸ ಶೈವನಾಗಿದ್ದ.[೨೨೪] ಇಮ್ಮಡಿ ವೀರ ಬಲ್ಲಾಳನ ಮಂತ್ರಿ ಚಂದ್ರಮೌಳಿಯಣ್ಣನು ಶೈವನಾದರೆ,[೨೨೫] ಅವನ ಮಡದಿ ಅಚಿಯಕ್ಕ ಜೈನಳಾಗಿದ್ದಳು.[೨೨೬] ಇಂತಹ ಉದಾಹರಣೆಗಳು ಪ್ರಭುವರ್ಗ ಅಧಿಕಾರೀ, ಸಿರಿವಂತವರ್ಗದಲ್ಲಿ ಕಂಡುಬರುತ್ತದೆ. ಸಾಮಾನ್ಯರ ಕುಟುಂಬಗಳಲ್ಲಿಯೂ ಇಂತಹ ಭಿನ್ನ ಮತಶ್ರದ್ಧೆಗಳಿದ್ದವೇ ಎಂಬುದನ್ನು ಕುರಿತು ಶಾಸನಗಳಿಂದ ತಿಳಿಯುವುದಿಲ್ಲ.

ಸ್ತ್ರೀಯರ ಇಂತಹ ಧಾರ್ಮಿಕ ಸ್ವಾತಂತ್ರ್ಯದಿಂದ ಅವರ ವೈಯಕ್ತಿಕ ಬದುಕಿನಲ್ಲಿ ಯಾವ ಬದಲಾವಣೆ ಅಥವಾ ಉನ್ನತಿಕೆ ಒದಗಿ ಬಂದಿತೆಂಬುದರ ಸ್ಪಷ್ಟ ಚಿತ್ರಣ ಶಾಸನದಲ್ಲಿ ದೊರೆಯದಿದ್ದರೂ ಅವರು ಆ ಸ್ವಾತಂತ್ರ್ಯದಿಂದ ಮಾಡಿರುವ ದಾನ ಧರ್ಮ, ದೇವಾಲಯ; ಬಸದಿಗಳ ಹಾಗೂ ಕೆರೆ ಕಟ್ಟೆಗಳ ನಿರ್ಮಾಣ ಕಾರ್ಯಗಳಿಂದ ಅವರಿಗೊಂದು ಸಾಮಾಜಿಕ ಗೌರವ ಹಾಗೂ ಐಡೆಂಟಿಟಿ ದೊರಕಿತ್ತೆಂಬುದನ್ನು ನಾವು ಗುರುತಿಸಬೇಕಾಗುತ್ತದೆ. ಸ್ತ್ರೀಗೆ ದೊರಕುವ ಯಾವುದೇ ಸ್ವಾತಂತ್ರ್ಯವಾಗಲೀ ಅವಳು ಕೈಗೊಳ್ಳುವ ಕಾರ್ಯಗಳಾಗಲೀ ಒಂದು ಸಾರ್ಥಕತೆಯನ್ನು ಪಡೆಯುವುದು ಅದು ಅವಳಿಗೆ ಎಷ್ಟರಮಟ್ಟಿಗೆ ತನ್ನನ್ನು ಸ್ಥಾಪಿಸಿಕೊಳ್ಳಲು ತನ್ನತನವನ್ನು ಉಳಿಸಿಕೊಳ್ಳಲು ಸಹಾಯಕವಾಯಿತು ಎಂಬುದರಲ್ಲಿರುತ್ತದೆ. ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿನ ಸು.೩೫೦ ಶಾಸನಗಳಲ್ಲಿ ಸ್ತ್ರೀದೇವತೆ ಪೌರಾಣಿಕ ಸ್ತ್ರೀಯರನ್ನು ಬಿಟ್ಟು ಸುಮಾರು ೨೮೦ಕ್ಕೂ ಹೆಚ್ಚು ಮಹಿಳೆಯರ ಉಲ್ಲೇಖವಾಗಿದೆ. ಸಾಮಂತ, ಮಾಂಡಲಿಕ, ದಂಡನಾಯಕ ನಾಳ್ಗಾವುಂಡ ಮತ್ತು ಗಾವುಂಡರ ಕುಟುಂಬವರ್ಗದ ಸ್ತ್ರೀಯರು ಹೆಚ್ಚಾಗಿ ಕಾಣಿಸಿಕೊಂಡಿದ್ದಾರೆ. ರಾಣಿಯರು, ಸ್ಥಾನಿಕರ ಕುಟುಂಬದ ಸ್ತ್ರೀಯರು, ಸಾಮಾನ್ಯ ಸ್ತ್ರೀಯರು, ಪಾತ್ರದವರು ಕಂತಿಯರು ಮುಂತಾದವರಲ್ಲಿ ಕೆಲವೇ ಸ್ತ್ರೀಯರು ಪ್ರಭಾವೀ ವ್ಯಕ್ತಿತ್ವವನ್ನು ಬೆಳೆಸಿಕೊಂಡು ಒಂದು ಸಾಮಾಜಿಕ ಅಸ್ಮಿತೆಯನ್ನು ಪಡೆದಿದ್ದರೆಂದು ಹೇಳಬೇಕಾಗುತ್ತದೆ.

### ೪.೩.೩. ಸ್ತ್ರೀಯರು-ಸೇವೆ, ಬಲಿದಾನ, ವ್ಯಕ್ತಿತ್ವ ಚಿತ್ರಣ

ತಾಯ್ತನ ಮತ್ತು ಸ್ತ್ರೀ ಲೈಂಗಿಕತೆ ಎಂಬುದು ಮುಕ್ತವಾಗಿದ್ದ ಸಾಮಾಜಿಕ ಘಟ್ಟದಲ್ಲಿ ಈ 'ದಾಸಿ' 'ಸೂಳೆ' ತೊತ್ತು ಇತ್ಯಾದಿ ಪದಗಳಿಗೆ ಅವಕಾಶವಿರಲಿಲ್ಲ ಕಾರಣ ಆ ಪದ್ಧತಿಗಳಿರಲಿಲ್ಲ. ನಾಗರಿಕತೆಯ ವಿಕಾಸದಲ್ಲಿ ಕುಟುಂಬ ವ್ಯವಸ್ಥೆ ಸ್ಥಾಪಿತಗೊಂಡು ಪತಿಯ ಯಾಜಮಾನ್ಯಕ್ಕೆ ಸ್ತ್ರೀ ಒಳಗಾಗಿ ಪಾತಿವ್ರತ್ಯ ಲೈಂಗಿಕ ನಿಷ್ಠೆ, ಗರತಿತನಗಳ ವ್ಯವಸ್ಥಿತ ಚೌಕಟ್ಟಿಗೆ ಹೆಣ್ಣು ಬಂಧಿಸಲ್ಪಟ್ಟ ಸಂದರ್ಭದಲ್ಲೇ ಆ ವ್ಯವಸ್ಥೆಯಿಂದಾಚೆಗೆ ಪುರುಷ ತನ್ನ ಲೈಂಗಿಕ ಸ್ವೈರಕ್ಕಾಗಿ ಮತ್ತೊಂದು ಪರ್ಯಾಯ ವ್ಯವಸ್ಥೆಯನ್ನು ರೂಪಿಸಿಕೊಂಡನು. ಅದೇ ಸೂಳೆ ಸಮಾಜ.

ಯುದ್ಧಗಳಲ್ಲಿ ಗಂಡನನ್ನು ಕಳೆದುಕೊಂಡ ದೇವತಾ ಸ್ತ್ರೀಯರು ದೇವ ಒಡೆಯನಾದ ಇಂದ್ರನಿಂದ ಆಜ್ಞಾಪಿಸಲ್ಪಟ್ಟು ವೇಶ್ಯಾಧರ್ಮವನ್ನು ಸ್ವೀಕರಿಸಬೇಕಾಗಿ ಬಂದ ವಿಚಾರ ಮತ್ಸ್ಯಪುರಾಣದಿಂದ ತಿಳಿದುಬರುತ್ತದೆ.[೨೨] ಸುಂದರಿಯರಾದ ಈ ಸ್ತ್ರೀಯರು ಯುದ್ಧದಲ್ಲಿ ಗಂಡಂದಿರನ್ನು ಕಳೆದುಕೊಂಡು ಶತ್ರುಗಳಿಂದ ಆಕ್ರಮಣಕ್ಕೆ ಒಳಗಾದಾಗ ಅಸಹಾಯಕ ಪರಿಸ್ಥಿತಿಯಲ್ಲಿ ಅವರನ್ನು ಅರಮನೆ, ದೇವಾಲಯಗಳಲ್ಲಿ ಭಕ್ತಿಯಿಂದ ವೇಶ್ಯಾಧರ್ಮವನ್ನು ಅನುಸರಿಸುವಂತೆ ಇಂದ್ರನು ನೀಡಿದ ಆಜ್ಞೆಯು ವೇಶ್ಯಾ ಸಮಾಜದ, ದೇವಾಲಯ ಸೂಳೆಯರ ಪದ್ಧತಿಯ ಹುಟ್ಟಿನ ಗುಟ್ಟನ್ನೇ ಸ್ಫೋಟಿಸುತ್ತಿದೆ.

ಮಧ್ಯಕಾಲೀನ ಸಮಾಜದಲ್ಲಿ ಹೆಚ್ಚಿದ ಯುದ್ಧಗಳು, ಆರ್ಥಿಕ ಅಭಿವೃದ್ಧಿಯಿಂದ ಸೃಷ್ಟಿಯಾದ ಸಂಪತ್ತು ಮತ್ತು ಸಿರಿವಂತ ವರ್ಗ ಅಧಿಕಾರಿ ಪ್ರಭುವರ್ಗ ಸಹಜವಾಗಿಯೇ ಭೋಗ ಜೀವನದ ಕಡೆಗೆ ಆಕರ್ಷಿತವಾದುದರಿಂದ, ಬಿಡುವು ಮನೋರಂಜನೆಗಳು ಅವಶ್ಯಕವೆನಿಸಿ ನೃತ್ಯ ಸಂಗೀತ ನಾಟಕ ಸ್ತ್ರೀಭೋಗ ಮುಂತಾದವುಗಳಿಗೆ ಬೇಡಿಕೆ ಹೆಚ್ಚಿದಂತೆ ಕಂಡುಬರುತ್ತದೆ. ದೇವದಾಸಿಯರು ಸೂಳೆಯರು, ಪಾತ್ರದವರು, ಓಲಗಿಕಾರ್ತಿಯರು, ಪೊಡ್ಡಿಯರು, ಗಣಿಕೆ, ವಾರಾಂಗನೆ ಇತ್ಯಾದಿ ಹೆಸರುಗಳಿಂದ ಇವರನ್ನು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. 'ಈ ಸೂಳೆ ಸಮಾಜವನ್ನು ವ್ಯಕ್ತಿ ಸೂಳೆ ದೇವಸೂಳೆ ಸಮಾಜಸೂಳೆ ಎಂದು ವರ್ಗೀಕರಿಸಬಹುದು.'[೨೭೮]

**ದೇವರ ತೊತ್ತು-ದಾಸಿಯರು :** ಸ್ತ್ರೀ ಗರತಿಯಾಗಿರಲಿ, ವಾರಾಂಗನೆಯಾಗಿರಲಿ ವೀರನ ಪತ್ನಿಯಾಗಿರಲಿ, ಪುರುಷ ದೌರ್ಜನ್ಯಕ್ಕೆ ಊರಳಿವು, ಪೆಣ್ ಪುಯಲ್, ಯುದ್ಧದ ಪರಿಣಾಮಗಳಿಗೆ ಸಿಕ್ಕಿಕೊಳ್ಳುತ್ತಿದ್ದಳು. ಜೊತೆಗೆ ಅನೇಕ ರೀತಿಯ ಧಾರ್ಮಿಕ ಕಟ್ಟುಪಾಟು, ಮೌಢ್ಯಗಳೂ ಅವಳನ್ನು ಅತಂತ್ರ ಸ್ಥಿತಿಗೆ ತಳ್ಳಿರುವುದನ್ನು ಬಲಿ ಮಾಡಿರುವುದನ್ನು ಶಾಸನಗಳು ಬಿಂಬಿಸಿವೆ. ದೇವಾಲಯಗಳಿಗೆ ದಾಸಿ, ತೊತ್ತು, ಸೂಳೆ, ಪಾತ್ರದವಳೆಂಬ ಹೆಸರಿನಲ್ಲಿ ಹೆಣ್ಣುಗಳನ್ನು ಬಿಟ್ಟು, ಅವರ ಪೋಷಣೆಗೆ ದಾನ ದತ್ತಿಗಳನ್ನು ನೀಡುತ್ತಿದ್ದರು.

ಹೆಗ್ಗಡೆ ಕೇಶವನೆಂಬುವವನು ತನ್ನ ಮಗಳನ್ನು ಅಮ್ರಿತೇಶ್ವರ ದೇವರ ಹೊಸಲಿಗಿಟ್ಟು ಸೂರ್ಯದೇವನನ್ನು ಒಲವಿನಿಂದ ಪ್ರತಿಷ್ಠೆ ಮಾಡಿಸಿದನೆಂದು ಒಂದು ಶಾಸನ ಹೇಳುತ್ತದೆ. ಈ ಶಾಸನವು ನಾಲ್ಕು ಅಡಿಯ ವೀರಗಂಬದ ಮೇಲೆ ಬರೆದಿದೆ. (ಅದನ್ನು ಬಲಿಗಂಬವೆಂದು ಸ್ಥಳೀಯರು ಹೇಳುತ್ತಾರೆ) ಶಾಸನದಲ್ಲಿ 'ಹೊಸಲಿಗಿಟ್ಟು' ಎಂಬುದು ಹರಕೆ ಸಲ್ಲಿಸಿ ಎಂಬ ಅರ್ಥದಲ್ಲಿಯೋ ಅಥವಾ ಬಲಿನೀಡಿ ಎಂಬ ಅರ್ಥದಲ್ಲಿಯೋ ಅಥವಾ ಅಮೃತೇಶ್ವರನಿಗೆ ದಾಸಿಯಾಗಿ (ತೊತ್ತಾಗಿ) ಬಿಟ್ಟು ಎಂಬ ಅರ್ಥದಲ್ಲಿ ಬಳಕೆಯಾಗಿದೆಯೋ ಎಂಬುದು ಸ್ಪಷ್ಟವಿಲ್ಲ. (ಆ ಕಂಬ ದೇವಾಲಯದ ಗರ್ಭಗುಡಿಯ ಎದುರಿಗೆ ನೇರವಾಗಿ ನಿಂತಿದೆ.) ಕನ್ಯೆಯರನ್ನು ದೇವಸ್ಥಾನಕ್ಕೆ ಸೂಳೆಯರೆಂದು ಬಿಡುತ್ತಿದ್ದುದರ ಬಗೆಗೆ ಉದಾಹರಣೆಗಳೊಂದಿಗೆ ಚೆನ್ನಕ್ಕ ಅವರು ಚರ್ಚಿಸಿದ್ದಾರೆ. ಬಹುಷಃ ಕೇಶವ ಹೆಗ್ಗಡೆ ತನ್ನ ಮಗಳನ್ನು ದೇವರ ತೊತ್ತಾಗಿ ಬಿಟ್ಟಿರುವ ಸಾಧ್ಯತೆಯಿದೆ.[೨೭೯]

ಕೆಂಬಾಳಿನ ಮಲ್ಲಿಕಾರ್ಜುನ ದೇವರ ದಾಸನಾದ ತಮ್ಮಡಿಯ ತಂಗಿ ಹೊನ್ನವ್ವೆ ಎಂಬುವವಳನ್ನು ದೇವರ ತೊತ್ತೆಂದು ಕರೆಯಲಾಗಿದೆ.[೨೮೦] ಜೊತೆಗೆ ಅವಳನ್ನು ಪುಣ್ಯವಂತೆ ಎಂದು ಹೊಗಳಿರುವುದು ವಿಪರ್ಯಾಸ, ಆದರೆ ಸಮಾಜವು ನಂಬಿದ ಇಂಥಹ ಪುಣ್ಯ ಕಾರ್ಯಗಳು ಇಂದು ಶೋಷಣೆಯಾಗಿ ಕಾಣುತ್ತವೆ. ಅಥವಾ ಅದು ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಇಂದಿಗೂ ನಡೆಯುತ್ತಿರುವ ಶೋಷಣೆ ಎಂಬ ಅರಿವು ಈಗ ಉಂಟಾಗುತ್ತಿದೆ.

**ಪಾತ್ರಭೋಗ** : ರಾಜಧಾನಿ ಭಂಡಾರವಾಡದ ಅರಸಿಯಕೆರೆಯ ಪ್ರಸನ್ನ ಚೆನ್ನಕೇಶವ ದೇವರ ಒಸಗೆಗೆ 'ಲಕ್ಷ್ಮೀನಾರಣದಾಸಿ' ಎಂಬ ಹೆಸರಿನಲ್ಲಿ ಹೆಣ್ಣು ಮಗಳೊಬ್ಬಳು ಎಂಟು ಗದ್ಯಾಣಗಳನ್ನು ದೇವರ ಭಂಡಾರಕ್ಕೆ ನೀಡಿದ್ದಾಳೆ. ಬಹುಷಃ ಈಕೆ ಆ ದೇವಾಲಯದ 'ದೇವದಾಸಿ' (ಪಾತ್ರದವಳು) ಇರಬಹುದು.[೨೮೧] ಒಬ್ಬ ಬಾಣಸುಗಿತ್ತಿಯ ವಾರ್ಷಿಕ ಜೀವಿತ ೩ ಗದ್ಯಾಣಗಳು ಮಾತ್ರವಿದ್ದ ಕಾಲದಲ್ಲಿ[೨೮೨] ದೇವದಾಸಿಯೊಬ್ಬಳು ೮ ಗದ್ಯಾಣಗಳ ದಾನ ನೀಡಿರುವುದು ಅವಳ ಆರ್ಥಿಕ ಸಾಮರ್ಥ್ಯವನ್ನು ತೋರಿಸುತ್ತದೆ.

ಅಂಗಭೋಗ ರಂಗಭೋಗಗಳಿಗೆ ದೇವಾಲಯಗಳಲ್ಲಿ ಸ್ತ್ರೀಯರನ್ನು ನೇಮಿಸಿಕೊಳ್ಳಲಾಗುತ್ತಿದ್ದು, ನೃತ್ಯ ಸಂಗೀತ ಸೇವೆಗಾಗಿ ನೇಮಿಸಲ್ಪಡುತ್ತಿದ್ದ ಕಲಾವಂತೆಯರು ವಿಶೇಷ ಮಾನ್ಯತೆಗೆ ಪಾತ್ರರಾಗಿರುತ್ತಿದ್ದರು. ಉಯಗೌಂಡಿಯ ಹಳ್ಳಿಯ ಗೌವುಡನ ಮಕ್ಕಳು ತಮ್ಮ ಊರಿನಲ್ಲೂ ದೇವರಿಗೆ ಪಾತ್ರಭೋಗ ಸೇವೆ ಬೇಕೆಂದು ಬಯಸಿ ತಳಿಲೂರಿನ ಮಹಾಜನರನ್ನು ವಾರ್ಷಿಕ ೪೧ ಗದ್ಯಾಣಗಳನ್ನು ಇಕ್ಕುತ್ತ ಬಹೆವೆಂಬ ಕರಾರಿನ ಮೇಲೆ ದೇವಾಲಯದ ರಂಗಭೋಗವನ್ನು ಏರ್ಪಡಿಸಿದರೆಂದು ತಿಳಿದುಬರುತ್ತದೆ.[೨೮೩] ತಳಲೂರು ಅಗ್ರಹಾರದಲ್ಲಿ ಅನೇಕ ದೇವಾಲಯಗಳಿದ್ದು ಅಲ್ಲಿನ ಚೆನ್ನಕೇಶವ (ಮಧುಸೂದನ) ದೇವಾಲಯದಲ್ಲಿ ಪಾತ್ರಭೋಗವಿದ್ದುದು ತಿಳಿದುಬರುತ್ತದೆ. ಈಗಲೂ ತಿಟ್ಟಮಲ್ಲೇಶನ ಗುಡಿಯ ಮುಂಭಾಗದ ಬಯಲಿನಲ್ಲಿ ಸೂಳೆ ಮಂಟಪವೆಂದು ಕರೆಯುವ ಮಂಟಪವನ್ನು ನೋಡಬಹುದು. ಇದೇ ತಳಲೂರಿನ ಮತ್ತೊಂದು ಶಾಸನದಲ್ಲಿ[೨೮೪] ಕೇಶವದೇವರ ಬೊಮ್ಮವ್ವೆಯ ತೋಟವನ್ನು ಕರೀದಿಸಿ ಅಜಿತೇಶ್ವರ ದೇವರಿಗೆ ದಾನ ಬಿಟ್ಟಿದ್ದನ್ನು ಹೇಳಿದೆ. ಬಹುಶಃ ಈಕೆ ಕೇಶವ ದೇವರ ದಾಸಿ ಪಾತ್ರಭೋಗದವಳು ಆಗಿದ್ದು ಆಕೆಯ ಹೆಸರಿನಲ್ಲಿ ತೋಟವೊಂದಿರುವುದು ಅವಳ ಆರ್ಥಿಕ ಸ್ಥಿತಿವಂತಿಕೆಯನ್ನು ಸೂಚಿಸುತ್ತದೆ. ಮತ್ತೊಂದು ಶಾಸನದಲ್ಲಿ[೨೮೫] ಹಾದರಿಯಕೆಯಿ ಕಂಬ ೪೨ನ್ನು ಹಿರಿಯ ಕೆರೆಯಕೆಳಗೆ ನೀಡಲಾಗಿದೆ. ಇದು ದೇವಸೂಳೆಯರಿಗೆ ಪಾತ್ರಭೋಗ ಅಥವಾ ರಂಗಭೋಗಕ್ಕೆ ನೀಡಿರುವ ಭೂಮಿಯಾಗಿರಬಹುದು.

**ಓಲಗಿಕಾರ್ತಿಯರು** : ಅತ್ಯಂತ ಸುಂದರಿಯರೂ ಶ್ರೇಷ್ಠ ಕಲಾವಿದೆಯರೂ ಆದ ಸ್ತ್ರೀಯರನ್ನೇ ಆರಿಸಿ ಅರಮನೆಯ ದೇವಾಲಯದ ಓಲಗದ ನರ್ತನ ಗಾಯನಗಳಿಗೆ ನೇಮಿಸಿಕೊಳ್ಳಲಾಗುತ್ತಿತ್ತು. ಇವರು ಅರಸರ ಪ್ರೀತಿಯನ್ನು, ಆಶ್ರಯವನ್ನು ಹೊಂದಿ ಸಿರಿವಂತೆಯರೂ ಪ್ರಭಾವೀ ಹೆಣ್ಣುಗಳು ಆಗಿರುತ್ತಿದ್ದರು. ಕಲ್ಯಾಣದ ಹಿರಿಯ ಹೆಮ್ಮಾಡಿ ರಾಯನನ್ನು ಓಲಗಿಸಲು ಹೋಗಿದ್ದ ಹೊಯ್ಸಳ ಬಿಟ್ಟಿದೇವನನ್ನು ಪ್ರಭಾವಿಸಿದ ಚಳುಕವ್ವೆ ಓಲಗಿಕಾರ್ತಿಯ ಬೇಡಿಕೆಯಂತೆ ಅವಳ ಸಂಬಂಧಿಗಳಾದ ಚಳುಕೆಯ್ಯನಾಯಕನನ್ನು ಡಿಂಗರಿಗನಾಗಿ ಸ್ವೀಕರಿಸಿ ಆ ವಂಶದವರಿಗೆ ಒಂದು ಆಡಳಿತ ವಿಭಾಗವನ್ನು ಬಿಟ್ಟಿದೇವನು ಆಳ್ವಿಕೆಗೆ ನೀಡಿದ್ದು ಓಲಗಿಕಾರ್ತಿಯೊಬ್ಬಳ ಪ್ರಭಾವ ಸಾಮರ್ಥ್ಯವನ್ನು ಮನಗಾಣಿಸುತ್ತದೆ.[೨೮೬]

**ವ್ಯಕ್ತಿ ಸೂಳೆ :** ಸೂಳೆಯರನ್ನು ಇಟ್ಟುಕೊಳ್ಳುವುದು ಪುರುಷ ಸಾಮರ್ಥ್ಯ ಪ್ರತಿಷ್ಠೆಯ ಕುರುಹಾಗಿ ಸಿರಿವಂತರು, ಅಧಿಕಾರಿವರ್ಗ ಅರಸರಲ್ಲಿ ಹೆಚ್ಚು ಕಾಣಿಸಿಕೊಳ್ಳುತ್ತದೆ. ಸಾಮಾನ್ಯರ ವಿಚಾರಗಳನ್ನು ಶಾಸನಗಳು ಹೇಳುವುದಿಲ್ಲ. ವೀರಗಲ್ಲೊಂದು[೨೮೭] ಸೂಳೆಯೊಬ್ಬಳ ಬದುಕಿನ ಬಗೆಗೆ ವಿಶೇಷ ಬೆಳಕನ್ನು ಚೆಲ್ಲುತ್ತದೆ. ರಾಜಕನೆಂಬಾತ ಬಿಟ್ಟಯ್ಯನ ಸೂಳೆಯನ್ನು ಕೊಂದು ಮೃತಪಟ್ಟ ವಿಷಯವನ್ನು ಅದು ತಿಳಿಸುತ್ತದೆ. ಈ ವೇಶ್ಯೆಯ ಕೊಲೆ ನಡೆದಿರುವುದು ತೊಂಡನೂರ ಬೀಡಿನಲ್ಲಿ. ಈಕೆಯನ್ನು ಬಿಟ್ಟಯ್ಯನೆಂಬುವವನ ಸೂಳೆ ಎಂದಿರುವುದರಿಂದ ಆಕೆ ಅವನ ವೈಯಕ್ತಿಕ ಹೆಣ್ಣಾಗಿದ್ದು, ತೊಂಡನೂರಿಗೆ ಹೋಗಿ ಬೀಡುಬಿಟ್ಟಿದ್ದ ಸೈನಿಕ ಬಿಟ್ಟಯ್ಯನೊಂದಿಗೆ ಈಕೆಯೂ ಹೋಗಿದ್ದಾಳೆ? ಈ ಸೂಳೆಯ ಕಾರಣದಿಂದ ಬೀಡಿನಲ್ಲಿ ಉಂಟಾಗಿರಬಹುದಾದ ಗೊಂದಲ ಅಥವಾ ಈರ್ಷೆ ಯಾವುದರ ಬಗೆಗೂ ಶಾಸನ ಹೇಳುವುದಿಲ್ಲ. ಇವಳನ್ನು ಕೊಂದ ಮೇಲೆ ರಾಜಕನನ್ನು ಬಹುಷಃ ಬಿಟ್ಟಯ್ಯ ಕೊಂದಿದ್ದಾನೆ. ಅವರಿಬ್ಬರ ನಡುವೆ ಹೋರಾಟ ನಡೆದಿರಬೇಕು. ರಾಜಕನೆಂಬ ಸೈನಿಕನನ್ನು ವೀರನೆಂದು ಪರಿಗಣಿಸಿ ಮಲೆಯಾಳ ಬಾಚೆಯ ನಾಯಕನ ಮಗ ಮತ್ತು ಬದ್ದೆಯನ ಅಳಿಯ ಬಮ್ಮೆಯನಾಯಕರು ವೀರಗಲ್ಲು ನಿಲ್ಲಿಸಿರುವುದನ್ನು ನೋಡಿದರೆ ಕೊಲೆಯ ಉದ್ದೇಶ ಶ್ರೇಷ್ಠವಾದದ್ದೇ ಆಗಿರಬಹುದೇ? ಏನೇ ಆಗಿರಲಿ ಪುರುಷರ ಈ ದ್ವೇಷಾಸೂಯೆಗಳಿಂದ ಹತಳಾದ ಸ್ತ್ರೀಯ ಬಗೆಗೆ ಚಕಾರವೆತ್ತದ ಶಾಸನ ಇದು. ರಾಜಕನನ್ನು ವೀರನೆಂದು ಪರಿಗಣಿಸಿ ವೀರಗಲ್ಲು ನಿಲ್ಲಿಸಿರುವುದು ಪುರುಷ ಪ್ರಧಾನ ವ್ಯವಸ್ಥೆಗೆ ಹಿಡಿದ ಕನ್ನಡಿಯಾಗಿದೆ.

**ಸಮಾಜ ಸೂಳೆ :** ಸಾರ್ವಜನಿಕರ ಕಾಮತೃಪ್ತಿಯ ಅವಶ್ಯಕತೆಗೆ ಅನುಗುಣವಾಗಿ ಈ ಸಮಾಜ ಸೂಳೆಗಾರಿಕೆ ಬೆಳೆಯಿತು. 'ಶಮನಗೊಳ್ಳದ ಮಾನವನ ಕಾಮ ಸೂಳೆಗೇರಿಯ ಆಶ್ರಯವಿರದಿದ್ದರೆ ಹುಚ್ಚಾಗಿ ಹರಿದು ಗೃಹಸ್ಥ ಸಮಾಜದ ಸ್ವಾಸ್ತ್ಯವನ್ನೇ ಅಲುಗಿಸಬಹುದಾದ್ದರಿಂದ ಇದು ಅವಶ್ಯಕ.'[೨೮೮] ಮನಶ್ಶಾಸ್ತ್ರಜ್ಞರೂ ಇದೇ ಅಭಿಪ್ರಾಯ ನೀಡುತ್ತಾರೆ. ಸಾಹಿತ್ಯದಲ್ಲಿ ವೇಶ್ಯಾವಾಟಿಕೆಯ ವರ್ಣನೆ ಹೆಚ್ಚಾಗಿ ಬಂದಿದೆಯಾದರೆ, ಶಾಸನಗಳು ಆ ವೇಶ್ಯೆಯರ ಮೇಲಿನ ತೆರಿಗೆಗಳ, ಅಧಿಕಾರಿಗಳ ವಿವರ ನೀಡುತ್ತವೆ. ವಿಜಯನಗರದ ಅರಸರ ಸೈನಿಕರ ಬೀಡಿನಲ್ಲಿ ಸುಂದರಿಯರಾದ ಹೆಣ್ಣುಗಳನ್ನು ಒದಗಿಸುತ್ತಿದ್ದರೆಂದು ಸೈನಿಕರಲ್ಲಿ ಉತ್ಸಾಹ ತುಂಬಲು ಸಂಬಳದೊಂದಿಗೆ ಈ ಹೆಣ್ಣುಗಳು ಮುಖ್ಯರಾಗಿದ್ದರೆಂಬ ಪ್ರವಾಸಿ ಬಾರ್ಬೊಸಾನ ಹೇಳಿಕೆಯಿಂದ ಯುದ್ಧಗಳೂ ಕೂಡ ವೇಶ್ಯಾವೃತ್ತಿಯ ವೃದ್ಧಿಗೆ ಹೇಗೆ ಕಾರಣವಾಗಿದ್ದವೆಂಬುದು ತಿಳಿಯುತ್ತದೆ.[೨೮೯] ವಿಜಯನಗರಕ್ಕೆ ಭೇಟಿ ನೀಡಿದ ಅನೇಕ ಪ್ರವಾಸಿಗರು ಅಲ್ಲಿನ ಅಂತಃಪುರದ ಸ್ತ್ರೀಯರ, ವೇಶ್ಯೆಯರ ವೈಭವ, ಅವರಿಗೆ ಪ್ರತಿಷ್ಠಿತ ವ್ಯಕ್ತಿಗಳೊಂದಿಗೆ ಕೂರುವ ಅವಕಾಶಗಳಿದ್ದು, ಉತ್ತಮ ಸ್ಥಾನಮಾನವಿತ್ತೆಂದು ಹೇಳುತ್ತಾರೆ.[೨೯೦] ಆದರೆ ಆ ವೈಭವದ ಹಿಂದೆ ಮರೆಯಾಗಿದ್ದ ಸ್ತ್ರೀ ಶೋಷಣೆಯನ್ನು ಹೀನಾಯ ಸ್ಥಿತಿಯನ್ನು ಗುರುತಿಸಿಕೊಳ್ಳುವಲ್ಲಿ ವಿಫಲವಾಗಿದ್ದಾರೆ. ಎ.ಬಿ.ದೂಬ ಅಂತಹ ಶೋಷಣೆಯನ್ನು ಗುರುತಿಸಿದ್ದಾನೆ.[೨೯೧]

**ಬಲಿದಾನ - ಮಹಾಸತಿಯರು** : ಧಾರ್ಮಿಕ ಬಲಿಯಲ್ಲಿ ಪ್ರಾಣಿ ಬಲಿಯೊಂದಿಗೆ ನರಬಲಿಯೂ ರೂಢಿಯಲ್ಲಿತ್ತು. ಅನೇಕ ಭೈರವ ದೇವಾಲಯಗಳ ಮುಂದೆ ಬಿದ್ದಿರುವ ಬಲಿಪೀಠದ ಶಿಲ್ಪವನ್ನು ಗಮನಿಸಿದಾಗ ಪ್ರಾಣಿಗಳೊಂದಿಗೆ ಸ್ತ್ರೀ ಮತ್ತು ಪುರುಷರನ್ನೂ ಬಲಿನೀಡುವ ಪದ್ಧತಿ ಇದ್ದಂತೆ ಕಂಡುಬರುತ್ತದೆ. ಮುದುಡಿಯ ಕೇಶವ ಹೆಗ್ಗಡೆ ತನ್ನ ಮಗಳನ್ನು ಬಲಿ ನೀಡಿರಬಹುದೇ ಎಂಬ ಅನುಮಾನವೂ ಬರುತ್ತದೆ.[೨೮೨]

ಧಾರ್ಮಿಕ ಆತ್ಮ ಬಲಿಯಲ್ಲಿ ಜೈನ ಮಹಿಳೆಯರ ನಿಸಿಧಿಗಳನ್ನು ಗಮನಿಸಿದ್ದೇವೆ. 'ಮರಣ ಮುಖೇನ ಮುಕ್ತಿ ಪಡೆಯಲು ಹಿಂದೂ ಸ್ತ್ರೀಯರಿಗೆ ಸಹಗಮನ' ರಾಜಮಾರ್ಗವಾಗಿರುವ ಕಾರಣ ಅವರ ಗಮನ ಜಲ ಪ್ರವೇಶ, ಅಗ್ನಿಪ್ರವೇಶ ಊರ್ಧ್ವಪತನಗಳಂತಹ ಮರಣಗಳ ಕಡೆಗೆ ಹರಿದಿಲ್ಲ"ವೆಂದು ಚೆನ್ನಕ್ಕ ಅವರು ಅಭಿಪ್ರಾಯಪಡುತ್ತಾರೆ.[೨೮೩]

ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ಕೇವಲ ಮೂರು ಬರಹಸಹಿತ ಮಾಸ್ತಿ ದಾಖಲಾಗಿದ್ದರೆ ಅಸಂಖ್ಯ ಮಾಸ್ತಿ ಘಟನೆಗಳನ್ನು ಇಲ್ಲಿನ ಬರಹರಹಿತ ಸ್ಮಾರಕಗಳು ದಾಖಲಿಸಿವೆ. ಐತಿಹ್ಯಗಳಾಗಿ ಜನಪದರ ನೆನಪಿನಲ್ಲುಳಿದಿವೆ. ಜಟ್ಟಿ ಮನೆತನವು ಆಳ್ವಿಕೆ ಮಾಡುತ್ತಿದ್ದ ಉಂಡಿಗನಾಳಿನ ಪರಿಸರದಲ್ಲಿ ಸುಮಾರು ೧೮ ಮಾಸ್ತಿ, ವೀರಮಾಸ್ತಿ ಕಲ್ಲುಗಳು ಕಂಡುಬರುತ್ತವೆ. ಇಲ್ಲಿನ ಚೌಡೇಶ್ವರಿ ದೇವಾಲಯದ ಆವರಣದಲ್ಲಿ ಸಾಲಾಗಿ ನಿಂತಿರುವ ಮಾಸ್ತಿ ಕಲ್ಲುಗಳಲ್ಲಿ ಒಂದು ಮಾತ್ರ ಬರಹವುಳ್ಳದ್ದಾಗಿದೆ. ರಾಜಜೀಯನೆಂಬುವನ ಮಗಳನ್ನು ಹುಲಿಬಾಯಿಂದ ಉಳಿಸಿ ಹುಲಿಯೊಡನೆ ಕಾದಿ ಬೊಂಮಚೆಟ್ಟಿಯ ಅಣ್ಣ ಮಡಿದಾಗ ಅವನ ಹೆಂಡತಿ 'ಕಿಚ್ಚ ಪಾಯಿದಳು' ಎಂಬ ಘಟನೆ ಒಂದು ಹೆಣ್ಣಿನ ಜೀವವುಳಿಸಿದ ಸಾರ್ಥಕ ಸಾಹಸವನ್ನು ತ್ಯಾಗವನ್ನು ಹೇಳುವುದರೊಂದಿಗೆ ಮತ್ತೊಬ್ಬ ಮುಗ್ಧಳ ಬದುಕಿನ ಅಸಹಾಯಕ ಮರಣವನ್ನು ಏಕಕಾಲದಲ್ಲಿ ಮನಮುಟ್ಟಿಸುತ್ತದೆ.[೨೮೪]

ಇದೇ ರೀತಿ ಮಾವಟಿಗ ವಂಶದ ಹೊಯ್ಸಳ ಅಧಿಕಾರಿಗಳು ಹೋರಾಟಗಾರರು ನೆಲೆಸಿದ್ದ ಕೋಳಿಗುಂದ ಮಾವುತನ ಹಳ್ಳಿಯಲ್ಲಿ ಹೆಚ್ಚಿನ ಸಂಖ್ಯೆಯ ಮಾಸ್ತಿ, ವೀರಮಾಸ್ತಿ ಕಲ್ಲುಗಳಿದ್ದು, ಇಂದಿಗೂ ಪೂಜೆಗೊಳ್ಳುತ್ತಿವೆ. ಅಲ್ಲಿನ ಹೊನ್ನಮ್ಮನ ಗುಡಿ ಮತ್ತು ಮಾರಿಯಮ್ಮನ ಗುಡಿಯಲ್ಲಿ ಇವುಗಳನ್ನು ನೋಡಬಹುದು. ಸ್ಥಳೀಯರು 'ಮಾವುತಮ್ಮ'ನೆಂದು ಹೇಳುವ ವೀರ ಮಾವಟಿಗ ದಂಪತಿ ಶಿಲ್ಪ ಹಾಗೂ ಮಾಸ್ತ್ಯಮ್ಮನ ಶಿಲ್ಪ ವಿಶೇಷವಾಗಿ ಪೂಜೆಗೊಳ್ಳುತ್ತವೆ. ವೀರನಿಗಿಂತ ಮಾಸ್ತಿಗೆ ಹೆಚ್ಚಿನ ಪ್ರಾಧಾನ್ಯತೆಯಿದೆ.

'ಹೊಯ್ಸಳ ನರಸಿಂಹದೇವನರಾಜ್ಯದಲ್ಲಿ ದೇವನೂರ ಬೀಡ ಕಟ್ಟಿ ಇದ್ದಲ್ಲಿ' ಬೀರೋಜನ ಮಗ ಮಡಿದಾಗ ಸೊಸೆ ಮಹದೇವಿ ತನ್ನ ಗಂಡನ ಕೊಣ್ಡು ಸುರಲೋಕ ಪ್ರಾಪ್ತಿಯಾದಳೆಂದು ಶಾಸನ ದಾಖಲಿಸಿದೆ.[೨೮೫] ಬಹುಷಃ ಮಹದೇವಿ ಪತಿಯ ಮೃತದೇಹದೊಂದಿಗೆ ಚಿತೆ ಏರಿರಬೇಕು.

ಶಂಕರನ ಹಳ್ಳಿಯ ವೀರಸ್ಥಂಭ ಮಾಸ್ತಿ ಶಾಸನ[೨೯೬] ವಿಶೇಷವಾಗಿದೆ. ಶ್ರೀಮತು ಸುರಿಗೆಯ ನಯಚನ ಮಗಳು ಚಿಯಕನು ಸಾಯಿಯ ನಾಯಕನ ಮಗ ವೀರಪ್ಪನ ಕೂಡೆ ಕಿಚ್ಚ್ಚಹಗಲು ಶ್ರೀ ವೀರದ ಕಂಬ ಎಂಬ ಶಾಸನ ಪಾಠವು ಸುಮಾರು ನಾಲ್ಕು ಅಡಿ ಎತ್ತರದ ಕಂಬದ ಮೇಲಿದೆ. ತಲೆ ಭಾಗ ದುಂಡಾಗಿರುವ ಈ ಕಂಬ ಮಾನವಾಕೃತಿಯಂತೆ ನಡುಭಾಗ ಸ್ವಲ್ಪ ಸಣ್ಣದಾಗಿದ್ದು, ಕೆಳ ಮತ್ತು ಮೇಲು ಭಾಗ ದೊಡ್ಡದಾಗಿದೆ. ಕಂಬದ ಮಧ್ಯಭಾಗದಲ್ಲಿ ಚಪ್ಪರದ ಆಕಾರವಿದ್ದು, ಅದರಡಿಯಲ್ಲಿ ಕೈಮುಗಿದುಕೊಂಡು ಕುಳಿತಿರುವ ಸತಿಯನ್ನು ಶಿಲ್ಪಿಸಲಾಗಿದೆ. ಗಂಡನೊಡನೆ ಆಕೆ ಚಿತೆಯಲ್ಲಿ ಕುಳಿತು ಸತಿಯಾದಳೆಂದು ತೋರುತ್ತದೆ.

ಕೆಲ್ಲಂಗೆರೆ, ಉಂಡಿಗನಾಳು, ಸೊಪ್ಪಿನಹಳ್ಳಿ, ಶಾನೆಗೆರೆ, ಮಾವುತನಹಳ್ಳಿ, ಕಲ್ಗುಂಡಿ, ಚಿಕ್ಕಗಂಡಸಿಗಳಲ್ಲಿ ವೀರ ಮಾಸ್ತಿ ಶಿಲ್ಪಗಳಿವೆ. ಬಿಲ್ಲು, ಕತ್ತಿ, ಕಟಾರಿ ಇತ್ಯಾದಿ ಆಯುಧ ಹಿಡಿದ ವೀರರೊಂದಿಗೆ ಮಾಸ್ತಿಯರಿದ್ದು, ವೀರನ ಮರಣ ಹೋರಾಟದಲ್ಲಾಗಿದ್ದು, ಅವರ ಮಡದಿಯರು ಸತಿಯರಾಗಿದ್ದಾರೆಂದು ಹೇಳಬಹುದು. ಈ ವೀರರೊಂದಿಗೆ ಏಕಪತ್ನಿಯರು, ದ್ವಿಪತ್ನಿಯರು, ಸಹಗಮನ ಮಾಡಿರುವುದು ಕಂಡುಬರುತ್ತದೆ.

ಮಾಸ್ತಿಯರಲ್ಲಿ ಬಯಲು ಮಾಸ್ತಿ, ಕೋಡಿ ಮಾಸ್ತಿ, ಕಿರುಗುಡಿಯ ಮಾಸ್ತಿ, ಮಂಟಪದ ಮಾಸ್ತಿಯನ್ನು ನೋಡಬಹುದು. ಬಂದೂರಿನ ಮುಖ್ಯರಸ್ತೆಯ ಅಂಚಿನಲ್ಲಿ ಒಂದು ಕಿರು ಮಂಟಪದಲ್ಲಿ ನಾಲ್ಕು ಮಾಸ್ತಿ ಶಿಲ್ಪಗಳಿದ್ದು ೩ ಅಡಿ ಎತ್ತರವಾಗಿದ್ದು ಆಕರ್ಷಕವಾಗಿವೆ. ಚಿಕ್ಕ ಗಂಡಸಿಯ ಕೆರೆಯ ಕೋಡಿಯಲ್ಲಿ ವೀರ ಮತ್ತು ಮಾಸ್ತ್ಯಮ್ಮ ಇಬ್ಬರೂ ಇದ್ದು ಗುಡಿ ನಿರ್ಮಿಸಿ ಪೂಜಿಸಲಾಗುತ್ತಿದೆ. ಹಾರನಹಳ್ಳಿಯ ಕೋಡಮ್ಮ ಪ್ರಸಿದ್ಧ ದೇವತೆಯಾಗಿದ್ದಾಳೆ.

ಸಹಗಮನ ಖಡ್ಡಾಯವಾಗಿರಲಿಲ್ಲವೆಂಬುದಕ್ಕೆ ಉದಾಹರಣೆಯಾಗಿ ಮಡಿದ ವೀರರ ಪತ್ನಿಯರೇ ತಮ್ಮ ಪತಿಗೆ ವೀರಗಲ್ಲು ನಿಲ್ಲಿಸಿರುವುದು ಕಂಡುಬರುತ್ತದೆ. ಕಾಳಿಯನ ಪಟ್ಟಣದಲ್ಲಿ ಕದನವಾದಲ್ಲಿ ಪೆರ್ಗಡೆಯ ಪ್ರಸ್ತಾವದಲು ತಲೆಗೊಟ್ಟು ಮೃತನಾದ' ವೀರನ ಕುಲವದು ಮಸಣಕ್ಕ ಕಲ್ಲನ್ನು ನಿಲ್ಲಿಸಿದ್ದಾಳೆ.[೨೯೭] ಮುದುಡಿ ಹಾಗೂ ಬಾಗಡೆಯ ಸೀಮಾ ಸಂಬಂಧದಲ್ಲಿ ಏಚನು ಕಾದಿ ಸುರಲೋಕ ಪ್ರಾಪ್ತನಾದಲ್ಲಿ ಆತನ ಹೆಂಡತಿ ನಿಲ್ಸಿದ ವೀರಗಲ್ಲು' ಬಾಗಡೆಯಲ್ಲಿದೆ[೨೯೮] ಹಲಕೂರಿನ ತುರುಕಾಳಗದಲ್ಲಿ ಮಲ್ಲಿಸೆಟ್ಟಿ ಅವನ ಪುತ್ರ ಮಯಿಲಿಸೆಟ್ಟಿ ಅವನ ಭಾವ ಕಾವಿಸೆಟ್ಟಿ ಆತನ ತಮ್ಮ ಬೋಕಿಸೆಟ್ಟಿ ಹೀಗೆ ಒಂದೇ ಕುಟುಂಬದ ನಾಲ್ವರು ಮಡಿದಾಗ ಆ ಕುಟುಂಬದ ಬೋಕಿಕಬ್ಬೆಯ ಮಗಳು ಮಹದೇವಿ ವೀರಶಾಸನ ನಿಲ್ಲಿಸಿದ್ದಾಳೆ. ಮಡಿದವರಲ್ಲಿ ಅವಳ ಪತಿಯೂ ಇದ್ದಿರಬಹುದು.[೨೯೯] ಚಿಕ್ಕ ಕೊಂಡಿಯಲ್ಲಿ ಬಾಚಸಮುದ್ರವನ್ನು ಕಟ್ಟಿಸಿ ಸುಖದಿಂದಾಳುತ್ತಿದ್ದ ಸೋಮೆಯನಾಯಕನು ನಾರಸಿಂಘದೇವನ ಸ್ವಾಮಿ ಕಾರ್ಯಕ್ಕೆ ಹೋಗಿ ವೀರಾವೇಷದಿಂದ ಹೋರಾಡಿ ಮಡಿದಾಗ ಆತನ ಸತಿ ಮಾಚಿಯಕ್ಕ ಸತಿಯಾಗದೆ

ಅವನ ಗೌರವಾರ್ಥ ಅನೇಕ ಮಣಿರತುನ ಖಚಿತಮಪ್ಪ ಮಣಿಮಯ ಮಂಟಪದಲ್ಲಿ ತನ್ನ ಪತಿಯ ವೀರಗಲ್ಲುಶಾಸನವನ್ನು ನಿಲ್ಲಿಸಿದ್ದಾಳೆ. ಇದು ಆ ಕುಟುಂಬದ ಹಿರಿಮೆಯನ್ನು ಸಿರಿತನವನ್ನು ಬಿಂಬಿಸುತ್ತದೆ.[೩೦]

**ಸ್ತ್ರೀವ್ಯಕ್ತಿತ್ವ ಚಿತ್ರಣ** : ಶಾಸನಗಳು ಪುರುಷರಿಂದಲೇ ರಚಿತವಾಗಿರುವುದರಿಂದ ಅವಳ ವರ್ಣನೆ ತೀರ ಸಾಂಪ್ರದಾಯಿಕವಾಗಿ ಪುರುಷ ದೃಷ್ಟಿಕೋನದಿಂದ ಕೂಡಿದೆ. ಮೊದಲು ಅವಳ ರೂಪ ನಂತರ ಅವಳ ಗರತಿತನ ದೃಢತೆ ಆನಂತರದಲ್ಲಿ ಅವಳ ವಿಶೇಷ ಪ್ರತಿಭೆಗಳನ್ನು ಗುರುತಿಸುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಅಲ್ಲಿ ಕೇವಲ ಎರಡೇ ಮಾದರಿಗಳು ಕಾಣಸಿಗುತ್ತವೆ. ಒಂದು ಕುಲಸ್ತ್ರೀ ಪತಿವ್ರತೆ ಮತ್ತೊಂದು ಗಣಿಕೆ ಇಲ್ಲವೆ ಪತಿತೆ. ಪುರುಷನಿಗೆ ಪೂರಕವಾಗಿ ನೆರಳಿನಂತೆ ಚಿತ್ರಣಗೊಂಡಿದ್ದಾಳೆ. ಕೆಲವು ಬಾರಿ ತಾಯಿಯ ಹೆಸರಿನಿಂದ ಪುರುಷರನ್ನು ಗುರುತಿಸಿರುವ ಉದಾಹರಣೆಗಳಿವೆ.[೩೦೧] ಬೋಕಬ್ಬೆಯ ಬಂಮಯ್ಯ[೩೦೨] ಮಾಗುಡವ್ವೆಯ ಮಗ ಅನಂತಶಕ್ತಿ ಪಂಡಿತ[೩೦೩] ಇವರು ಸಾಮಾನ್ಯ ವರ್ಗದ ಸ್ತ್ರೀಯರಾಗಿದ್ದು ಬಹುಪತ್ನಿಯರಲ್ಲಿ ಯಾರ ಮಗನೆಂದು ಗುರುತಿಸಲು ಇಲ್ಲವೆ ವಿಧವೆಯಾಗಿ ಕಿರು ವಯಸ್ಸಿನಿಂದ ಮಗನನ್ನು ಸಾಕಿ ಬೆಳೆಸಿದ ಕಾರಣಕ್ಕೆ, ಪೂಜಾರಿಣಿಯೋ, ದೇವದಾಸಿಯೋ, ವೇಶ್ಯೆಯೋ ಆಗಿದ್ದಾಗ ಹೀಗೆ ಉಲ್ಲೇಖಗೊಂಡಿರಬಹುದೇ ಹೊರತು ತಾಯಿಯ ವಿಶೇಷತೆಯಿಂದಾಗಿಯಲ್ಲ. ಉಭಯ ಕುಲ ಶುದ್ಧತೆ, ಶುಭಲಕ್ಷಣ ಪಡೆದು ನಿಟ್ಟೆಯ್ದೆತನಕ್ಕಾಗಿ ನೋಂಪಿಹಿಡಿಯುವುದು ಸ್ತ್ರೀಯರ ಜೀವಿತದ ಪರಮ ಗಮ್ಯವೆಂದೇ ಚಿತ್ರಿಸಲಾಗಿದೆ. ಪುರುಷನ ಮಾನ-ಸಮ್ಮಾನ ಪುಣ್ಯದೊಂದಿಗೂ ಅವನ ಅಪಮಾನ ಪಾಪಗಳೊಂದಿಗೂ ಸದಾ ಸ್ತ್ರೀಯನ್ನು ತಳುಕು ಹಾಕಲಾಗುವುದು. ಅವನ ಹೊಗಳಿಕೆಯಲ್ಲೂ ತೆಗಳಿಕೆಯಲ್ಲೂ ಸ್ತ್ರೀ ಇರಲೇಬೇಕು. ಅವನು ಗಣಿಕಾಮನೋಜನಾದರೂ ಮೆಚ್ಚುಗೆಯೇ ಪರನಾರೀ ಸೋದರನಾದರೂ ಮೆಚ್ಚುಗೆಯೇ, ಅವನ ಪಾಪಗಳಲ್ಲಿ ಮಾತೃ ಗಮನವನ್ನು, ಮಾತೃ ಹತ್ಯೆಯನ್ನೂ[೩೦೪] ಮಡದಿಯನ್ನು ಅನ್ಯರ ಭೋಗಕ್ಕಾಗಿ ಹದಿನೆಂಟು ಜಾತಿಗಳ ಅದರಲ್ಲೂ ತನ್ನ ಬೆಸವರ ಭೋಗಕ್ಕೆ ಕೊಡುವುದನ್ನು ಪಾಪವೆಂದು ಹೇಳಲಾಗಿದೆ.[೩೦೫] ಈ ಎಲ್ಲಾ ಸಂದರ್ಭದಲ್ಲೂ ಸ್ತ್ರೀಯ ಮಾನಾಪಮಾನಗಳಾಗಲೀ, ಮನೋಲೋಕವಾಗಲೀ ಅನಾವರಣಗೊಂಡಿಲ್ಲ. ಯುದ್ಧಗಳಲ್ಲಿ ಪುರುಷರನ್ನು ಕಳೆದುಕೊಂಡ 'ಕಳಚಿದ ಕರ್ಣಕುಂಡಲಗಳ, ಕಿವಿನಡುಗಿಸುವಂತೆ ಗೋಳಿಡುತ್ತಿರುವ, ಎದೆ ಬಡಿದುಕೊಳ್ಳುತ್ತಿರುವ, ಸುರಿಯುತ್ತಿರುವ ಅತ್ಯುಷ್ಣ ಭಾಷ್ಪಗಳ, ಅಸ್ತವ್ಯಸ್ತ ಕೇಶದ ಬಿರುಮುಡಿಯ, ಗದ್ಗದಿತವಾದ, ಚೀರಾಡುತ್ತಿರುವ ಕಂಠದ ದಿಗ್ಭ್ರಾಂತರಂತೆ ನಿಂತುಬಿಟ್ಟಿರುವ ವೈರಿ ವಧೂ ಸಂತಾನ"ದ ದಾರುಣ ಚಿತ್ರಗಳು ಅಲ್ಲಲ್ಲಿ ಕಂಡುಬಂದರೂ ಅವೆಲ್ಲವೂ ವೀರನ ಪರಾಕ್ರಮದ ಪ್ರತಾಪವಾಗಿ ಬಂದಿವೆ.[೩೦೬]

ಒಟ್ಟಿನಲ್ಲಿ ಶಾಸನ ಕವಿಗಳು ಸ್ತ್ರೀವರ್ಣನೆಯಲ್ಲಿ ಅವಳ ಭೌತಿಕ ವರ್ಣನೆಗೆ ಹೆಚ್ಚಿನ ಗಮನಹರಿಸಿದ್ದು ಅವಳ ಬೌದ್ಧಿಕತೆಯನ್ನು ಸೂಕ್ಷ್ಮ ಸಂವೇದನೆಗಳನ್ನು ಕಡೆಗಣಿಸಿದ್ದಾರೆ.

**ಅಡಿಟಿಪ್ಪಣಿಗಳು**

೧. ವಿಜಯ್‌ಕುಮಾರ್ ಠಾಕೂರ್, ಅರ್ಬನೈಜೇಷನ್ ಇನ್ ಏನ್ಷಿಯಂಟ್ ಇಂಡಿಯಾ; ಅಪ್ಪಾದೊರೈ ಎಕನಾಮಿಕ್ ಕಂಡೀಶನ್ಸ್ ಇನ್ ಸದರನ್ ಇಂಡಿಯಾ; ಆರ್.ಚಂಪಕಲಕ್ಷ್ಮೀ, ಟ್ರೈಡ್ ಐಡಿಯಾಲಜಿ ಅರ್ಬನೇಜೇಷನ್ ಇನ್ ಸೌತ್ ಇಂಡಿಯಾ

೨. ಠಾಕೂರ್ ವಿ.ಕೆ., ಪೂರ್ವೋಕ್ತ, ಪು.೪೮-೬೧

೩. ರಿಚರ್ಡ್ ಭಾಷಮ್, ಅರ್ಬನ್ ಆಂಥ್ರೋಪಾಲಜಿ ಉದ್ಧೃತ ಹೊಯ್ಸಳರ ಕಾಲದಲ್ಲಿ ನಗರೀಕರಣ ಪ್ರಕ್ರಿಯೆ ಕಳಿಕಟ್ಟೆ ಒಂದು ವಿಶ್ಲೇಷಣೆ, ಇ.ದಸಂ ೧೩, ಪು.೨೧೦

೪. ಎ.ಕ.೧೦ (ಪರಿ) ಚ.ಪ.ಶಾ.ಸಂ.೯೪, ಅಗ್ರಹಾರ ಬೆಳಗುಲಿ, ಕ್ರಿ.ಶ.೧೨೦೯

೫. ಅದೇ ಅ.ಕೆ.ಶಾ.ಸಂ.೨೮೮, ಮೊಸಳೆ, ಕ್ರಿ.ಶ.೧೨೮೭, ೩೧೭ ಹಿರಿಯೂರು, ಕ್ರಿ.ಶ.೧೨೫೪

೬. ಒಕ್ಕುವುದಕ್ಕೆ ಎತ್ತಿಲ್ಲದೆ ಹೊರೆಯೆತ್ತಹೋಯಿತ್ತು...ಅವಸರದರೇಕಣ್ಣನ ವಚನ ಸಂಕೀರ್ಣ ವಚನ ಸಂ.೧, ಪು.೨೩೩

೭. ಎ.ಕ.೧೦.ಅ.ಕೆ.ಶಾ.ಸಂ.೨೪೧, ೩೧೭, ೩೬ ಕ್ರಿ.ಶ.೧೨-೧೩ನೇ ಶತಮಾನ

೮. ಅದೇ, ಶಾ.ಸಂ.೫೭, ಮನಗತ್ತೂರು, ಕ್ರಿ.ಶ.೧೧೦೧

೯. ಅದೇ, ಶಾ.ಸಂ.೩೪, ಅರಸೀಕೆರೆ, ಕ್ರಿ.ಶ.೧೩೪೮

೧೦. ಅದೇ, ಚ.ಪ.ಶಾ.ಸಂ.೨೨, ಸಾಗತವಳ್ಳಿ, ಕ್ರಿ.ಶ.೧೨೦೫

೧೧. ಮುರುಂಡಿ ಕನ್ನಡ ಶಾಲೆಯ ತಾಮ್ರ ಶಾಸನ ಕ್ರಿ.ಶ.೧೨೨೨, ಇ.ದ.ಸಂ.೨೧, ಪು.೬೮-೭೩

೧೨. ಎ.ಕ.೧೦ (ಪರಿ), ಅ.ಕೆ.ಶಾ.ಸಂ. ೧೩೪, ಕ್ರಿ.ಶ.೧೭೪೪, ಚ.ಪ.ಶಾ.ಸಂ.೪೪, ಕ್ರಿ.ಶ.೧೪೯೫

೧೩. ಕನ್ನಡ ವಿಷಯ ವಿಶ್ವಕೋಶ, ಪು.೫೨

೧೪. ಎ.ಕ.೧೦ಪರಿ ಅ.ಕೆ.ಶಾ.ಸಂ.೧೪೪, ೧೪೩, ಸೂಳೆಕೆರೆ ಕ್ರಿ.ಶ.೧೩-೧೫ನೇ ಶತಮಾನ

೧೫. ಅದೇ, ಶಾ.ಸಂ.೫೧, ೬೫, ೧೪೯, ೨೧೬, ೨೩೦, ೩೧೮, ಕ್ರಿ.ಶ.೧೨-೧೩ನೇ ಶತಮಾನ

೧೬. ಅದೇ, ಶಾ.ಸಂ.೧೩೪, ತಿರುಪತಿ, ಕ್ರಿ.ಶ.೧೭೪೪

೧೭. ಅದೇ, ಶಾ.ಸಂ.೯೬, ಜೆ.ಸಿ.ಪುರ, ಕ್ರಿ.ಶ.೧೧೭೭

೧೮. ಅದೇ, ಶಾ.ಸಂ.೨೯೨, ಮೊಸಳೆ, ಕ್ರಿ.ಶ.೧೨೮೮

೧೯. ಅದೇ, ಶಾ.ಸಂ.೨೮೬, ನೇರ್ಲಿಗೆ, ಕ್ರಿ.ಶ.೧೨೪೮

೨೦. ಅದೇ, ಶಾ.ಸಂ.೨೩, ಅರಸೀಕೆರೆ, ಕ್ರಿ.ಶ.೧೧೭೩

೨೧. ಅದೇ, ಶಾ.ಸಂ.೧೩೪, ಕ್ರಿ.ಶ.೧೭೪೪, ೧೫೦, ಕೆಲ್ಲಂಗೆರೆ, ೧೨ನೇ ಶತಮಾನ

೨೨. ಅದೇ ಶಾ.ಸಂ.೨೩, ಅರಸೀಕೆರೆ, ಕ್ರಿ.ಶ.೧೧೭೩

೨೩. ಅದೇ, ಶಾ.ಸಂ.೯೫, ಕಣಕಟ್ಟೆ, ಕ್ರಿ.ಶ.೧೧೪೩

೨೪. ಅದೇ, ಶಾ.ಸಂ.೧೫೩, ಕೆಲ್ಲಂಗೆರೆ, ಕ್ರಿ.ಶ.೧೩೬೭

೨೫. ಅದೇ, ಶಾ.ಸಂ.೯೫, ಕಣಕಟ್ಟೆ, ಕ್ರಿ.ಶ.೧೧೪೩

೨೬. ಎ.ಕ.೭ (ಪರಿ), ನಾಗಮಂಗಲ ೬೩ ಕ್ರಿ.ಶ.೧೧೬೫

೨೭. ಅದೇ ಶಾ.ಸಂ.೨೩, ೪೪, ೩೬, ಅರಸೀಕೆರೆ, ೧೨ನೇ ಶತಮಾನ

೨೮. ಅದೇ, ಅ.ಕೆ.ಶಾ.ಸಂ.೨೩೫, ಹಾರನಹಳ್ಳಿ, ಕ್ರಿ.ಶ.೧೧೩೮

೨೯. ಅದೇ, ಶಾ.ಸಂ.೫೭, ಮನಗತ್ತೂರು, ಕ್ರಿ.ಶ.೧೧೦೧

೩೦. ಅದೇ, ಶಾ.ಸಂ.೨೧೬, ಕ್ರಿ.ಶ.೧೨೨೭, ಮುದುಡಿ, ಬೆಂಡೆಕೆರೆ, ೫೧, ಕ್ರಿ.ಶ.೧೨೩೧

೩೧. ಅದೇ, ಶಾ.ಸಂ.೩೧೮, ಹಿರಿಯೂರು, ಕ್ರಿ.ಶ.೧೨೫೮

೩೨. ಅದೇ, ಶಾ.ಸಂ.೮, ಅರಸೀಕೆರೆ, ಕ್ರಿ.ಶ.೧೨೨೦

೩೩. ಅದೇ, ಶಾ.ಸಂ.೧೪೯, ಕೆಲ್ಲಂಗೆರೆ, ಕ್ರಿ.ಶ.೧೧೪೨

೩೪. ಅದೇ, ಶಾ.ಸಂ.೧೫೮, ಕೆಲ್ಲಂಗೆರೆ, ಕ್ರಿ.ಶ.೧೦ನೇ ಶತಮಾನ

೩೫. ಅದೇ, ಶಾ.ಸಂ.೧೫೨, ಕೆಲ್ಲಂಗೆರೆ, ಕ್ರಿ.ಶ.೧೧೭೫

೩೬. ಅದೇ, ಶಾ.ಸಂ.೧೪೯, ಕೆಲ್ಲಂಗೆರೆ, ಕ್ರಿ.ಶ.೧೧೪೨

೩೭. ಅದೇ, ಶಾ.ಸಂ.೧೨೧, ಜನ್ನಾವರ, ಕ್ರಿ.ಶ.೧೧೪೯

೩೮. ಅದೇ, ಶಾ.ಸಂ.೨೩೦, ಎಳವಾರೆ, ಕ್ರಿ.ಶ.೧೨೧೧

೩೯. ಅಭಿಲಷಿತಾರ್ಥಚಿಂತಾಮಣಿ (ಸಂ), ಆರ್.ಶಾಮಾಶಾಸ್ತ್ರಿ ಪ್ರಕರಣ ೧೩

೪೦. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೧೪೧, ಸೂಳೆಕೆರೆ, ಕ್ರಿ.ಶ.೧೨೯೭

೪೧. ಅದೇ, ಶಾ.ಸಂ.೪೪, ಅರಸೀಕೆರೆ, ಕ್ರಿ.ಶ.೧೧೪೯

೪೨. ಸ್ವಂತ, ಅನುಬಂಧ ಸಂಖ್ಯೆ ೧೧, ಮುರುಂಡಿ, ಕ್ರಿ.ಶ.೧೨೨೨

೪೩. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೧೩೪, ತಿರುಪತಿ, ಕ್ರಿ.ಶ.೧೭೪೪

೪೪. ಅದೇ, ಶಾ.ಸಂ.೧೬೦, ಕೆಲ್ಲಂಗೆರೆ, ಕ್ರಿ.ಶ.೧೧೬೧

೪೫. ಅದೇ, ಶಾ.ಸಂ.೧೩೪, ತಿರುಪತಿ, ಕ್ರಿ.ಶ.೧೭೪೪

೪೬. ಅದೇ, ಶಾ.ಸಂ.೩೬, ಅರಸೀಕೆರೆ, ಕ್ರಿ.ಶ.೧೧೯೦

೪೭. ಅದೇ, ಶಾ.ಸಂ.೧೬೦, ಕೆಲ್ಲಂಗೆರೆ, ಕ್ರಿ.ಶ.೧೧೬೧

೪೮. ಅದೇ, ಶಾ.ಸಂ.೨೦೮, ಚಿಕ್ಕಗಂಡಸಿ, ಕ್ರಿ.ಶ.೧೫-೧೬ನೇ ಶತಮಾನ

೪೯. ಅದೇ, ಶಾ.ಸಂ.೨೦೯, ಚಿಕ್ಕಗಂಡಸಿ, ಕ್ರಿ.ಶ.೧೫೭೬

೫೦. ಅದೇ, ಶಾ.ಸಂ.೨೧೦, ಕ್ರಿ.ಶ.೧೫೮೬, ಚಿಕ್ಕಗಂಡಸಿ

೫೧. ಎ.ಕ.೯ (ಪರಿ), ಬೇಲೂರು ಶಾ.ಸಂ.೩೩೩, ಹಳೇಬೀಡು, ಕ್ರಿ.ಶ.೧೧೩೯

೫೨. ಎ.ಕ.೧೦ಪರಿ, ಅ.ಕೆ.ಶಾ.ಸಂ.೧೩೪, ತಿರುಪತಿ, ಕ್ರಿ.ಶ.೧೭೪೪

೫೩. ಅದೇ, ಚ.ಪ.ಶಾ.ಸಂ.೭೫, ಬಳಗಟ್ಟೆ, ಕ್ರಿ.ಶ.೧೧೭೮

೫೪. ಅದೇ, ಅ.ಕೆ.ಶಾ.ಸಂ.೧೩೪, ತಿರುಪತಿ, ಕ್ರಿ.ಶ.೧೭೪೪

೫೫. ಅದೇ, ಅ.ಕೆ.ಶಾ.ಸಂ.೩೨೫, ಅರಸೀಕೆರೆ, ಕ್ರಿ.ಶ.೧೧೮೧

೫೬. ಅದೇ, ಅ.ಕೆ.ಶಾ.ಸಂ.೧೩೪, ೨೭೭, ಕ್ರಿ.ಶ.೧೧೪೯, ೩೬ ಕ್ರಿ.ಶ.೧೧೮೩

೫೭. ಅದೇ, ಅ.ಕೆ.ಶಾ.ಸಂ.೧೩, ೫೫, ೩೧೭, ೩೧೪

೫೮. ಅದೇ, ಚ.ಪ.ಶಾ.ಸಂ.೭೦, ಕೆಂಬಾಳು, ಕ್ರಿ.ಶ.೧೨೨೩

೫೯. ಕರ್ನಾಟಕ ವಿಷಯ ವಿಶ್ವಕೋಶ, ಪು.೭೩೯-೭೪೩

೬೦. ಹಾಫ್ ಇಯರ್ಲಿ ಜರ್ನಲ್ ಆಫ್ ಮೈಸೂರ್ ಯೂನಿವರ್ಸಿಟಿ, ಪು.೨೧೪

೬೧. ಕಾದ ಕಬ್ಬುನವ ಕಾಯದ ಕಬ್ಬುನದಲ್ಲಿ ಹಿಡಿದು ಅಡಿಯಲ್ಲಿಯೂ ತಾನಾಗಿ, ಮೇಲೆತ್ತಿ ಹೊಡೆಯುವುದೂ ತಾನಾಗಿ, ಹಿಡಿಯುವುದೂ ತಾನಾಗಿ' ಮಾರಿ ತಂದೆಯ ವಚನ ಸಂಕೀರ್ಣ ವಚನ ಸಂ.೧, ಪು.೧೬೩

೬೨. ಎಂ.ಎ.ಆರ್.ಕ್ರಿ.ಶ.೧೯೧೬, ಪು.೫೧

೬೩. ಒಕ್ಕಲಿಗ ಮುದ್ದಣ್ಣನ ವಚನಗಳು, ಸಂಕೀರ್ಣ ವಚನಗಳು, ಸಂ.೧, ಪು.೬೭೩

೬೪. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೮೮, ಮೊಸಳೆ, ಕ್ರಿ.ಶ.೧೨೮೭

೬೫. ಅದೇ, ಶಾ.ಸಂ.೨೯೧, ಮೊಸಳೆ, ಕ್ರಿ.ಶ.೧೨೮೮

೬೬. ಅದೇ, ಶಾ.ಸಂ.೧೪೭, ಹೊನ್ನಸೆಟ್ಟಿಹಳ್ಳಿ, ಕ್ರಿ.ಶ.೧೩೦೭

೬೭. ಅದೇ, ಶಾ.ಸಂ.೫೭, ಮನಕತ್ತೂರು, ಕ್ರಿ.ಶ.೧೧೦೧

೬೮. ಅದೇ, ಶಾ.ಸಂ.೧೩೪, ತಿರುಪತಿ, ಕ್ರಿ.ಶ.೧೭೪೪

೬೯. ಅದೇ, ಚ.ಪ.೭೦, ಕೆಂಬಾಳು, ಕ್ರಿ.ಶ.೧೨೨೩

೭೦. ಅದೇ, ಅ.ಕೆ.ಶಾ.ಸಂ.೨೧೬, ಮುದುಡಿ, ಕ್ರಿ.ಶ.೧೨೨೭

೭೧. ಅದೇ, ಅ.ಕೆ.ಶಾ.ಸಂ.೯೦, ಕಣಕಟ್ಟೆ, ಕ್ರಿ.ಶ.೧೧೨೭

೭೨. ಅದೇ, ಅ.ಕೆ.ಶಾ.ಸಂ.೧೩೪, ತಿರುಪತಿ, ಕ್ರಿ.ಶ.೧೭೪೪

೭೩. ಅದೇ, ಅ.ಕೆ.ಶಾ.ಸಂ.೧೩೪, ೩೬, ಅರಸೀಕೆರೆ, ಕ್ರಿ.ಶ.೧೨-೧೮ನೇ ಶತಮಾನ

೭೪. ಅದೇ,

೭೫. ಅದೇ, ಚ.ಪ.ಶಾ.ಸಂ.೪೦, ದಿಂಡಗೂರು, ಕ್ರಿ.ಶ.೧೨೨೯

೭೬. ಅದೇ, ಅ.ಕೆ.ಶಾ.ಸಂ.೩೧೮, ಹಿರಿಯೂರು; ೫೬, ಚಿಕ್ಕಾರೆಹಳ್ಳಿ, ೨೮೬; ನೇರ್ಲಿಗೆ

೭೭. ಎ.ಕ.೧೧ (ರೈಸ್), ಶಾ.ಸಂ.೬೧, ೬೩, ಚಿತ್ರದುರ್ಗ, ಭರಮಸಾಗರ, ತರವನೂರು, ಸಂ.೯ (ರೈಸ್), ಬೆಂಗಳೂರು, ನೆಲಮಂಗಲ, ಕುಲುವನಹಳ್ಳಿ

೭೮. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೩೧೮, ಹಿರಿಯೂರು, ಕ್ರಿ.ಶ.೧೨೫೮

೭೯. ಅದೇ, ಶಾ.ಸಂ.೩೮, ಅರಸೀಕೆರೆ, ಕ್ರಿ.ಶ.೧೧೯೦

೮೦. ಅದೇ, ಶಾ.ಸಂ.೨೩, ೩೧, ೪೪, ೩೮, ೩೨೫, ಅರಸೀಕೆರೆ, ೧೨ನೇ ಶತಮಾನ

೮೧. ಅದೇ, ಶಾ.ಸಂ.೩೯, ಅರಸೀಕೆರೆ, ಕ್ರಿ.ಶ.೧೧೮೩

೮೨. ಅದೇ, ಶಾ.ಸಂ.೪೪, ಅರಸೀಕೆರೆ, ಕ್ರಿ.ಶ.೧೧೮೯

೮೩. ಅದೇ, ಶಾ.ಸಂ.೩೯, ೩೧, ೪೪, ೨೩, ೩೨೫, ಅರಸೀಕೆರೆ, ೧೨ನೇ ಶತಮಾನ

೮೪. ಅದೇ, ಶಾ.ಸಂ.೫೫, ಬಾಣಾವರ, ಕ್ರಿ.ಶ.೧೧೮೭

೮೫. ಸಾಲೆತ್ತೊರೆ ಬಿ.ಎ., ಕರ್ನಾಟಕಸ್ ಟ್ರಾನ್ಸ್ ಓಷನಿಕ್‌ಕಾಂಟ್ಯಾಕ್ಟ್ಸ್, ಜಯಣ್ಣ ಕಡಲಾಚೆಯ ಸಂಪರ್ಕಗಳು

೮೬. ಎ.ಕ.೧೦ಪರಿ, ಅ.ಕೆ.೧೩೪, ತಿರುಪತಿ, ಕ್ರಿ.ಶ.೧೭೪೪

೮೭. ಅದೇ, ಅ.ಕೆ.ಶಾ.ಸಂ.೧೫೮, ಕೆಲ್ಲಂಗೆರೆ, ಕ್ರಿ.ಶ.೧೦-೧೧ನೇ ಶತಮಾನ

೮೮. ಅದೇ, ಶಾ.ಸಂ.೧೪೯, ಕ್ರಿ.ಶ.೧೧೪೨, ಕೆಲ್ಲಂಗೆರೆ, ೧೫೯, ಕ್ರಿ.ಶ.೧೨೮೮

೮೯. ಅದೇ, ಶಾ.ಸಂ.೧೫೩, ಕ್ರಿ.ಶ.೧೩೬೭, ೧೫೬, ಕೆಲ್ಲಂಗೆರೆ, ಕ್ರಿ.ಶ.೧೨೯೪

೯೦. ಅದೇ, ಶಾ.ಸಂ.೧೪೧, ೧೪೭, ೧೪೪, ಸೂಳೆಕೆರೆ, ಕ್ರಿ.ಶ.೧೩-೧೪ನೇ ಶತಮಾನ

೯೧. ಅದೇ, ಶಾ.ಸಂ.೧೫೪, ಕೆಲ್ಲಂಗೆರೆ, ಕ್ರಿ.ಶ.೧೩೧೮

೯೨. ಅದೇ, ಶಾ.ಸಂ.೧೫೩, ಕೆಲ್ಲಂಗೆರೆ, ಕ್ರಿ.ಶ.೧೩೬೭

೯೩. ಅದೇ, ಶಾ.ಸಂ.೧೫೫, ಕೆಲ್ಲಂಗೆರೆ, ಕ್ರಿ.ಶ.೧೩-೧೪ನೇ ಶತಮಾನ

೯೪. ಅದೇ, ಶಾ.ಸಂ.೩೧೬, ಅರಕೆರೆ, ಕ್ರಿ.ಶ.೯ನೇ ಶತಮಾನ

೯೫. ಅದೇ, ಶಾ.ಸಂ.೯೩, ಕಣಕಟ್ಟೆ, ಕ್ರಿ.ಶ.೧೨ನೇ ಶತಮಾನ

೯೬. ಅದೇ, ಶಾ.ಸಂ.೭೩, ಕಣಕಟ್ಟೆ, ಕ್ರಿ.ಶ.೧೧೨೯

೯೭. ಅದೇ, ಶಾ.ಸಂ.೮೫, ಕಣಕಟ್ಟೆ, ಕ್ರಿ.ಶ.೧೧೫೪

೯೮. ಅದೇ, ಶಾ.ಸಂ.೮೮, ೮೭, ಕಣಕಟ್ಟೆ, ಕ್ರಿ.ಶ.೧೨ನೇ ಶತಮಾನ

೯೯. ಅದೇ, ಶಾ.ಸಂ.೮೬, ಕಣಕಟ್ಟೆ, ಕ್ರಿ.ಶ.೧೧೫೩

೧೦೦. ಅದೇ, ಶಾ.ಸಂ.೯೨, ಕಣಕಟ್ಟೆ, ಕ್ರಿ.ಶ.೧೧೫೧

೧೦೧. ಅದೇ, ಶಾ.ಸಂ.೮೬, ೭೨, ಕಣಕಟ್ಟೆ, ಕ್ರಿ.ಶ.೧೨ನೇ ಶತಮಾನ

೧೦೨. ಅದೇ, ಶಾ.ಸಂ.೮೨, ೮೮, ೮೬, ಕಣಕಟ್ಟೆ, ಕ್ರಿ.ಶ.೧೨ನೇ ಶತಮಾನ

೧೦೩. ಅದೇ, ಶಾ.ಸಂ.೯೫, ೮೭, ೯೦, ಕಣಕಟ್ಟೆ, ಕ್ರಿ.ಶ.೧೨-೧೩ನೇ ಶತಮಾನ

೧೦೪. ಅದೇ, ಶಾ.ಸಂ.೮೯, ೯೦,೯೧, ಕಣಕಟ್ಟೆ, ಕ್ರಿ.ಶ.೧೨ನೇ ಶತಮಾನ

೧೦೫. ಅದೇ, ಶಾ.ಸಂ.೭೮, ಕಣಕಟ್ಟೆ, ಕ್ರಿ.ಶ.೧೪ನೇ ಶತಮಾನ

೧೦೬. ಅದೇ, ಶಾ.ಸಂ.೭೪,೭೫,೭೬ ಕಣಕಟ್ಟೆ, ಕ್ರಿ.ಶ.೧೫ನೇ ಶತಮಾನ

೧೦೭. ಅದೇ, ಶಾ.ಸಂ.೯೧, ಕಣಕಟ್ಟೆ, ಕ್ರಿ.ಶ.೧೨೭೪

೧೦೮. ಅದೇ, ಶಾ.ಸಂ.೮೯, ಕಣಕಟ್ಟೆ, ಕ್ರಿ.ಶ.೧೨೭೪

೧೦೯. ಅದೇ, ಶಾ.ಸಂ.೯೦,೮೭,೮೬,೯೫,೮೨, ಕಣಕಟ್ಟೆ, ಕ್ರಿ.ಶ.೧೧-೧೨ನೇ ಶತಮಾನ

೧೧೦. ಅದೇ, ಶಾ.ಸಂ.೩೧೬ ಅರಕೆರೆ, ೯ನೇ ಶತಮಾನ

೧೧೧. ಅದೇ, ಶಾ.ಸಂ.೩೨೧, ಕಾಟಿಕೆರೆ, ಕ್ರಿ.ಶ.೧೧೦೦

೧೧೨. ಅದೇ, ಶಾ.ಸಂ.೫೫, ಬಾಣಾವರ, ಕ್ರಿ.ಶ.೧೧೮೭

೧೧೩. ಅದೇ, ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೧೧೪. ಅದೇ, ಶಾ.ಸಂ.೩೧೭, ೩೧೮, ಹಿರಿಯೂರು, ಕ್ರಿ.ಶ.೧೧೫೪ - ೧೧೫೮

೧೧೫. ಅದೇ, ಶಾ.ಸಂ.೩೧೪, ಅರಕೆರೆ, ಕ್ರಿ.ಶ.೧೨೩೩

೧೧೬. ಅದೇ, ಶಾ.ಸಂ.೫೫, ಬಾಣಾವರ, ಕ್ರಿ.ಶ.೧೧೮೭, ೩೧೪, ಅರಕೆರೆ, ಕ್ರಿ.ಶ.೧೨೩೩

೧೧೭. ಅದೇ, ಶಾ.ಸಂ.೩೧೪, ಅರೆಕೆರೆ, ಕ್ರಿ.ಶ.೧೨೩೩

೧೧೮. ಅದೇ, ಶಾ.ಸಂ.೨೪೯, ೩೧೭, ೧೬೭, ೨೩, ಕ್ರಿ.ಶ.೧೧-೧೩ನೇ ಶತಮಾನ

೧೧೯. ಅದೇ, ಶಾ.ಸಂ.೧೬೭, ತಳಲೂರು, ಕ್ರಿ.ಶ.೧೩೬೮

೧೨೦. ಅದೇ, ಶಾ.ಸಂ.೩೧೮, ೨೩೩, ೧೫೪, ೨೮೩, ೧೬೧, ಕ್ರಿ.ಶ.೧೨-೧೩ನೇ ಶತಮಾನ

೧೨೧. ಅದೇ, ಶಾ.ಸಂ.೨೩೩, ಹಾರನಹಳ್ಳಿ, ೧೨೬೫, ೧೬೧, ತಳಲೂರು, ಕ್ರಿ.ಶ.೧೧೯೧

೧೨೨. ಅದೇ, ಶಾ.ಸಂ.೩೧೮, ಹಿರಿಯೂರು, ಕ್ರಿ.ಶ.೧೨೫೮

೧೨೩. ಅದೇ, ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೧೨೪. ಅದೇ, ಶಾ.ಸಂ.೩೧೭, ಹಿರಿಯೂರು, ೧೫೪ ಕೆಲ್ಲಂಗೆರೆ, ಕ್ರಿ.ಶ.೧೩-೧೪ನೇ ಶತಮಾನ

೧೨೫. ಎ.ಕ.ಸಂ.೧೨ (ಪರಿ), ಕಡೂರು, ಶಾ.ಸಂ.೧೭೭, ಮತ್ತಿಹಳ್ಳಿ, ಕ್ರಿ.ಶ.೧೨೭೫

೧೨೬. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೬೧, ಗಂಜಿಗೆರೆ, ಕ್ರಿ.ಶ.೧೧೯೭-೯೮

೧೨೭. ಎ.ಕ.೧೨ (ಪರಿ), ಕಡೂರು, ಶಾ.ಸಂ.೨೮, ಕಂಚಿಗಲ್ಲು, ಕ್ರಿ.ಶ.೧೨೧೬

೧೨೮. ಅದೇ, ಶಾ.ಸಂ.೨೮, ಕ್ರಿ.ಶ.೧೨೧೬, ಶಾ.ಸಂ.೨೪೭, ಕಂಚಿಗಲ್ಲು, ಕ್ರಿ.ಶ.೧೨೭೨

೧೨೯. ಅದೇ, ಶಾ.ಸಂ.೧೮೮, ಯಗಟಿ, ಕ್ರಿ.ಶ.೧೧೧೩

೧೩೦. ಅದೇ, ಶಾ.ಸಂ.೧೮೬, ಸಿಂಗಟಗೆರೆ, ಕ್ರಿ.ಶ.೧೧೫೩

೧೩೧. ಅದೇ, ಪರಿ, ಅ.ಕೆ.ಶಾ.ಸಂ.೬೧, ಗಂಜಿಗೆರೆ, ಕ್ರಿ.ಶ.೧೧೯೭-೯೮

೧೩೨. ಎ.ಕ.೧೨ (ಪರಿ), ಕಡೂರು, ಶಾ.ಸಂ.೧೭೬, ಕ್ರಿ.ಶ.೧೨೧೧, ೨೮, ಕ್ರಿ.ಶ.೧೨೧೬, ೧೮೫, ಕ್ರಿ.ಶ.೧೨೧೮

೧೩೩. ಅದೇ, ಶಾ.ಸಂ.೩೦, ಕ್ರಿ.ಶ.೧೨೫೨, ೩೧, ಕ್ರಿ.ಶ.೧೩ನೇ ಶತಮಾನ

೧೩೪. ಅದೇ, ಶಾ.ಸಂ.೨೪೭, ಹೇರಡಿಘಟ್ಟ, ಕ್ರಿ.ಶ.೧೨೭೨

೧೩೫. ಅದೇ, ಶಾ.ಸಂ.೨೪೯, ಕ್ರಿ.ಶ.೧೫೩೨

೧೩೬. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೭೩, ಕಣಕಟ್ಟೆ, ಕ್ರಿ.ಶ.೧೧೨೯

೧೩೭. ಅದೇ, ಶಾ.ಸಂ.೮೮, ಕಣಕಟ್ಟೆ, ಕ್ರಿ.ಶ.೧೧೮೯

೧೩೮. ಅದೇ, ಶಾ.ಸಂ.೭೩, ಕಣಕಟ್ಟೆ, ಕ್ರಿ.ಶ.೧೧೨೯, ಕ.ವಿ.ವಿ.ಶಾ.ಸಂ.೧, ಬಳ್ಳಾರಿ ಜಿ., ಹರಪನಹಳ್ಳಿ, ಶಾ.ಸಂ.೨೦೮, ಕ್ರಿ.ಶ.೧೧೧೧

೧೩೯. ಎ.ಕ.೧೧ (ಪರಿ) ಚಿ.ಮ.ಶಾ.ಸಂ.೧೮, ಮೂಡಿಗೆರೆ, ಕ್ರಿ.ಶ.೧೧೨೯

೧೪೦. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೮೫, ಕಣಕಟ್ಟೆ, ಕ್ರಿ.ಶ.೧೧೩೨

೧೪೧. ಅದೇ, ಶಾ.ಸಂ.೨೪೬, ಉಂಡಿಗನಾಳು, ಕ್ರಿ.ಶ.೧೧೩೯

೧೪೨. ಕನ್ನಡ ವಿಷಯ ವಿಶ್ವಕೋಶ, ಪು.೧೨೯

೧೪೩. ಎ.ಕ.೧೦ (ಪರಿ), ಅ.ಕೆ.೨೪೬, ಉಂಡಿಗನಾಳು, ಕ್ರಿ.ಶ.೧೧೩೯

೧೪೪. ಹಾಸನ ರಂಗಾಚೆಟ್ಟಿ ಸೋಮಸುಂದರಂ, ಕರ್ನಾಟಕದ ಜಟ್ಟಿಗಳು, ಪು.೨೨

೧೪೫. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೪೭, ಉಂಡಿಗನಾಳು, ಕ್ರಿ.ಶ.೧೨೨೩

೧೪೬. ಅದೇ, ಶಾ.ಸಂ.೨೪೮, ಉಂಡಿಗನಾಳು, ಕ್ರಿ.ಶ.೧೨೭೬

೧೪೭. ಸ್ವಂತ ಅನುಬಂಧ ಶಾ.ಸಂಖ್ಯೆ, ೮ ಉಂಡಿಗನಾಳು, ಕ್ರಿ.ಶ.೧೨ನೇ ಶತಮಾನ

೧೪೮. ಸ್ವಂತ ಅನುಬಂಧ ಶಾ., ಸಂಖ್ಯೆ ೬, ೭, ಉಂಡಿಗನಾಳು, ಕ್ರಿ.ಶ.೧೯ನೇ ಶತಮಾನ

೧೪೯. ಹಾಸನ ರಂಗಾಚೆಟ್ಟಿ, ಸೋಮಸುಂದರಂ, ಕರ್ನಾಟಕದ ಜಟ್ಟಿಗಳು, ಪು.೨೯-೩೧

೧೫೦. ಸ್ವಂತ ಅನುಬಂಧ ಶಾ.ಸಂಖ್ಯೆ ೬, ೭, ಉಂಡಿಗನಾಳು, ಕ್ರ.ಶ.೧೯ನೇ ಶತಮಾನ

೧೫೧. ವಕ್ಕ ಭವಾನಿಶಂಕರ ಚೆಟ್ಟಿ, ಕರಿಯಮ್ಮನ ಗರಡಿ, ಅರಸೀಕೆರೆ

೧೫೨. ಎ.ಕೆ.೧೦ ಪರಿ, ಅ.ಕೆ.ಶಾ.ಸಂ.೨೪೬, ೨೪೭, ೨೪೮, ೨೫೦, ಸ್ವಂತ ಅನುಬಂಧ ಶಾ.ಸಂ.೮

೧೫೩. ಡಾ.ಹಂಪನಾ, ಶಾಸನಗಳಲ್ಲಿ ಎರಡುವಂಶಗಳು, ಪು.೨೩

೧೫೪. ಎ.ಕ.೧೦ಪರಿ, ಅ.ಕೆ.ಶಾ.ಸಂ.೧೨೯, ಹಿರೇಕಲ್ಲುಬೆಟ್ಟ, ಕ್ರಿ.ಶ.೧೧೭೪

೧೫೫. ಅದೇ, ಶಾ.ಸಂ.೧೭, ೧೮, ಅರಸೀಕೆರೆ, ಕ್ರಿ.ಶ.೧೨೧೯

೧೫೬. ಎ.ಕ.೭ (ರೈಸ್), ಶಾ.ಸಂ.೧೯೭, ಶಿಕಾರಿಪುರ, ಕ್ರಿ.ಶ.೧೧೮೦

೧೫೭. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೩೧, ಅರಸೀಕೆರೆ, ಕ್ರಿ.ಶ.೧೨೧೯

೧೫೮. ಎ.ಕ.೩ (ಪರಿ), ಶ್ರ.ಬೆ.ಶಾ.ಸಂ.೫೨೯, ಜಿನನಾಥಪುರ, ಕ್ರಿ.ಶ.೧೨೨೦

೧೫೯. ಎ.ಕ.೭ (ರೈಸ್), ಶಿಕಾರಿಪುರ, ಶಾ.ಸಂ.೧೧೯, ೧೨೩, ೧೮೫, ೧೯೭, ೨೨೫

೧೬೦. ಸ್ವಾತಿದತ್ತ, ಮೈಗ್ರೆಂಟ್ ಬ್ರಾಹ್ಮನಾಸ್ ಇನ್ ನಾರ್ತರ್ನ್ ಇಂಡಿಯಾ

೧೬೧. ಶಾಂತಕುಮಾರಿ ಎಸ್.ಲೀಲಾ, ಹಿಸ್ಟರಿ ಆಫ್ ಅಗ್ರಹಾರಾಸ್ ಇನ್ ಕರ್ನಾಟಕ

೧೬೨. ಸ್ವಾತಿ ದತ್ತ, ಪೂರ್ವೋಕ್ತ

೧೬೩. ವಸಂತಲಕ್ಷ್ಮಿ ಕೆ., ಹಾಸನ ಜಿಲ್ಲೆಯಲ್ಲಿದ್ದ ಕಾಶ್ಮೀರಿ ಬ್ರಾಹ್ಮಣರು, ಇ.ದ.ಸಂ.೧೩

೧೬೪. ಸುಧಾಮಣಿ ಬಿ.ವಿ., ಸಂಕೇತಿ ಬ್ರಾಹ್ಮಣರ ವಲಸೆಯ ಕಾಲ, ದ.ಸಂ.೧೬

೧೬೫. ಲಲಿತಾಂಬ ಎಸ್.ಆರ್., ಹಾಸನ ಜಿಲ್ಲೆಯ ತೆಲುಗು ಶಾಸನಗಳು ಮತ್ತು ತೆಲುಗರ ವಲಸೆ, ವಿಜಯನಗರ ವಿಚಾರ ಸಂಕಿರಣ ಪ್ರಬಂಧ, ೨೦೦೬

೧೬೬. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೧೪೯, ಕೆಲ್ಲಂಗೆರೆ, ಕ್ರಿ.ಶ.೧೧೪೨

೧೬೭. ಅದೇ, ಅ.ಕೆ.ಶಾ.ಸಂ.೧೫೫, ೧೬೦, ಕೆಲ್ಲಂಗೆರೆ, ಕ್ರಿ.ಶ.೧೩-೧೪ನೇ ಶತಮಾನ

೧೬೮. ಅದೇ, ಅ.ಕೆ.ಶಾ.ಸಂ.೧೪೯, ೧೫೩, ೧೫೬, ೧೬೦, ಕೆಲ್ಲಂಗೆರೆ, ಕ್ರಿ.ಶ.೧೧-೧೪ನೇ ಶತಮಾನ

೧೬೯. ಅದೇ, ಅ.ಕೆ.ಶಾ.ಸಂ.೧೫೭, ೧೫೪, ಕೆಲ್ಲಂಗೆರೆ, ಕ್ರಿ.ಶ.೧೨-೧೩ನೇ ಶತಮಾನ

೧೭೦. ಅದೇ, ಚನ್ನರಾಯಪಟ್ಟಣ ೭೦, ಕೆಂಬಾಳು, ಕ್ರಿ.ಶ.೧೨೨೩

೧೭೧. ಅದೇ, ಅ.ಕೆ.ಶಾ.ಸಂ.೩೧೦, ಕೋಳಿಗುಂದ, ಕ್ರಿ.ಶ.೧೧೯೫

೧೭೨. ಅದೇ, ಅ.ಕೆ.ಶಾ.ಸಂ.೨೩೨, ಹಾರನಹಳ್ಳಿ, ಚನ್ನರಾಯಪಟ್ಟಣ ಶಾ.ಸಂ.೭೦, ಕ್ರಿ.ಶ.೧೨೨೩

೧೭೩. ಅದೇ, ಚನ್ನರಾಯಪಟ್ಟಣ, ಶಾ.ಸಂ.೭೦, ಕೆಂಬಾಳು, ಕ್ರಿ.ಶ.೧೨೩೫

೧೭೪. ಅದೇ, ಅ.ಕೆ.೨೩೨, ಹಾರನಹಳ್ಳಿ, ಚ.ಪ.೭೦, ಕೆಂಬಾಳು, ಕ್ರಿ.ಶ.೧೨೩೫

೧೭೫. ಅದೇ, ಅ.ಕೆ.ಶಾ.ಸಂ.೧೬೬, ತಳಲೂರು, ೩೧೭, ೩೧೮, ಹಿರಿಯೂರು, ಕ್ರಿ.ಶ.೧೨-೧೩ನೇ ಶತಮಾನ

೧೭೬. ಅದೇ, ಅ.ಕೆ.ಶಾ.ಸಂ.೧೫೭, ಕೆಲ್ಲಂಗೆರೆ, ೨೩೨, ಹಾರನಹಳ್ಳಿ, ಕ್ರಿ.ಶ.೧೧-೧೩ನೇ ಶತಮಾನ

೧೭೭. ಅದೇ, ಅ.ಕೆ.ಶಾ.ಸಂ.೧೧೫, ೧೯೮, ೧೯೭, ಕ್ರಿ.ಶ.೧೪-೧೫ನೇ ಶತಮಾನ

೧೭೮. ಅದೇ, ಅ.ಕೆ.ಶಾ.ಸಂ.೨೪೦, ಹಾರನಹಳ್ಳಿ, ೨೦೬, ಚಿಕ್ಕಗಂಡಸಿ, ಕ್ರಿ.ಶ.೧೫೩೫

೧೭೯. ಅದೇ, ಅ.ಕೆ.ಶಾ.ಸಂ.೨೪೯, ಮೊಸಳೆ, ಕ್ರಿ.ಶ.೧೨೮೭

೧೮೦. ಅದೇ, ಅ.ಕೆ.ಶಾ.ಸಂ.೨೯೩, ಮೊಸಳೆ, ಕ್ರಿ.ಶ.೧೨೮೮

೧೮೧. ಅದೇ, ಅ.ಕೆ.ಶಾ.ಸಂ.೨೭೧, ತಳಲೂರು, ಚನ್ನರಾಯಪಟ್ಟಣ, ಶಾ.ಸಂ.೧೦೮, ೧೯, ೧೧೦

೧೮೨. ಅದೇ, ಅ.ಕೆ.ಶಾ.ಸಂ.೨೮೪, ೧೪೦, ೨೨೪, ೨೧೮, ಕ್ರಿ.ಶ.೧೨-೧೪ನೇ ಶತಮಾನ

೧೮೩. ಶೆಟ್ಟರ್ ಎಸ್., ಹೊಯ್ಸಳ ಸ್ಕಲ್ಪ್ಚರ್ಸ್ ದಿ ಪೆರಿಗ್ರಿನೇಷನ್ ಆಫ್ ಮಿಡೀವಲ್ ಆರ್ಟಿಸ್ಟ್ಸ್ ಜೆ.ಐ.ಎಚ್.ಜುಬಿಲಿ ವಾಲ್ಯುಂ; ಕೆ.ಪದ್ಮನಾಭ ಹೊಯ್ಸಳ ಸ್ಕಲ್ಪ್ಚರ್ಸ್ ಎ ಕಲ್ಚರಲ್ ಸ್ಟಡಿ

೧೮೪. ಎ.ಕ.೧೦.ಅ.ಕೆ.ಶಾ.ಸಂ.೩೮, ಅರಸೀಕೆರೆ, ಕ್ರಿ.ಶ.೧೧೯೦

೧೮೫. ಅದೇ, ಚನ್ನರಾಯಪಟ್ಟಣ, ಶಾ.ಸಂ.೧೨೭, ಮಾದಲಗೆರೆ, ಕ್ರಿ.ಶ.೧೨-೧೩ನೇ ಶತಮಾನ

೧೮೬. ಎ.ಕ.೧೦ (ಪರಿ), ಅ.ಕೆ.ಶಾ.ಸಂ., ೯೨ ಕಣಕಟ್ಟೆ, ಕ್ರಿ.ಶ.೧೦ನೇ ಶತಮಾನ

೧೮೭. ಅದೇ, ಅ.ಕೆ.ಶಾ.ಸಂ.೧೮೭, ತಳಿರೂರು, ಕ್ರಿ.ಶ.೧೧೯೧

೧೮೮. ಅದೇ, ಅ.ಕೆ.ಶಾ.ಸಂ.೨೧೪, ಮುದುಡಿ, ಕ್ರಿ.ಶ.೧೧೯೫

೧೮೯. ಅದೇ, ಅ.ಕೆ.ಶಾ.ಸಂ.೩೧೯, ಹಿರಿಯೂರು, ಕ್ರಿ.ಶ.೧೨೦೭

೧೯೦. ಸೌ.ಇ.ಇ.೯ (೧) ೧೫೩, ಅಂಬಳಿ ಕೂಡ್ಲಿಗಿ ತಾ.ಬಳ್ಳಾರಿ ಜಿ., ಕ್ರಿ.ಶ.೧೦೮೩

೧೯೧. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೩೧೭, ೩೧೮, ೩೧೯, ೩೨೧, ೫೧, ಕ್ರಿ.ಶ.೧೧-೧೩ನೇ ಶತಮಾನ

೧೯೨. ಅದೇ, ಅ.ಕೆ.ಶಾ.ಸಂ.೩೨೧, ಕಾಟಿಕೆರೆ, ಕ್ರಿ.ಶ.೧೧೦೦-೦೧

೧೯೩. ಎಪಿಗ್ರಾಫಿಯಾ ಇಂಡಿಕಾ xiii, ಪು.೧೫೦, ಕ್ರಿ.ಶ.೧೦೮೭

೧೯೪. ಸೌ.ಇ.ಇ.೯ (೧), ೧೭೭, ಕ್ರಿ.ಶ.೧೧೦೮, ೧೮೯, ಕ್ರಿ.ಶ.೧೧೧೩, ೨೧೫, ಕ್ರಿ.ಶ.೧೧೨೬

೧೯೫. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೮೬, ನೇರ್ಲಿಗೆ, ಕ್ರಿ.ಶ.೧೧೯೩

೧೯೬. ಅದೇ, ಅ.ಕೆ.ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೧೯೭. ಅದೇ,

೧೯೮. ಅದೇ, ಅ.ಕೆ.ಶಾ.ಸಂ.೩೧೭, ೩೧೫, ಅರೆಕೆರೆ, ಕ್ರಿ.ಶ.೧೨೫೩

೧೯೯. ಅದೇ, ಅ.ಕೆ.ಶಾ.ಸಂ.೩೧೪, ಅರಕೆರೆ, ಕ್ರಿ.ಶ.೧೨೩೩

೨೦೦. ಅದೇ, ಅ.ಕೆ.ಶಾ.ಸಂ.೫೨, ಬೆಂಡೆಕೆರೆ, ಕ್ರಿ.ಶ.೧೨೩೨

೨೦೧. ನರಸಿಂಹಮೂರ್ತಿ ಎ.ವಿ., ದಿ ಸೇವುಣಾಸ್ ಆಫ್ ದೇವಗಿರಿ, ಪು.೧೧೯

೨೦೨. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೨೦೩. ಅದೇ,

೨೦೪. ಅದೇ, ಶಾ.ಸಂ.೩೧೭, ಕ್ರಿ.ಶ.೧೨೫೪, ೩೧೫, ಅರಕೆರೆ, ಕ್ರಿ.ಶ.೧೨೫೩

೨೦೫. ಎ.ಕ.೭ (ಪರಿ), ಮಂಡ್ಯ, ಶಾ.ಸಂ.೩೪, ಕ್ರಿ.ಶ.೧೨೫೧

೨೦೬. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೨೦೭. ಅದೇ, ಅ.ಕೆ.ಶಾ.ಸಂ.೮೯, ಕಣಕಟ್ಟೆ, ಕ್ರಿ.ಶ.೧೨೭೪

೨೦೮. ಅದೇ, ಅ.ಕೆ.ಶಾ.ಸಂ.೮೭, ಕಣಕಟ್ಟೆ, ಕ್ರಿ.ಶ.೧೨೨೭

೨೦೯. ಅದೇ, ಅ.ಕೆ.ಶಾ.ಸಂ.೧೬೧, ೧೬೫, ತಳಲೂರು, ಕ್ರಿ.ಶ.೧೧೯೧, ೧೨೭೧

೨೧೦. ಚೆನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ; ಸರಸ್ವತಿ ನಾಣಯ್ಯ, ದಿ ಪೊಜಿಷನ್ ಆಫ್ ವಿಮೆನ್ ಡ್ಯೂರಿಂಗ್ ವಿಜಯನಗರ ಪೀರಿಯಡ್; ಅಲ್ಟೇಕರ್ ಎಸ್., ದಿ ಪೊಜಿಷನ್ ಆಫ್ ವಿಮೆನ್ ಇನ್ ಹಿಂದೂ ಸಿವಿಲೈಜೇಷನ್

೨೧೧. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೧೯೮, ಗಂಡಸಿ, ೨೦೬ ಚಿಕ್ಕಗಂಡಸಿ ಕ್ರಿ.ಶ.೧೪೦೩-೧೫೩೫

೨೧೨. ಅದೇ, ಶಾ.ಸಂ.೨೩೫, ೬೩, ೯೬, ೩೨೧, ೭೨, ೧೬, ೪೪, ೨೪೧

೨೧೩. ಜೋತ್ಸ್ನಾ ಕಾಮತ್, ಮಹಿಳೆ ಒಂದು ಅಧ್ಯಯನ, ಪು.೪೭

೨೧೪. ಮಜುಂದಾರ್ ಪಿ.ಬಿ., ಸೋಷಿಯೋ ಎಕನಾಮಿಕ್ ಹಿಸ್ಟರಿ ಆಫ್ ನಾರ್ಥ್ ಇಂಡಿಯಾ, ಪು.೧೩೯

೨೧೫. ಕ.ಇ.iv ಸಾತೇನಹಳ್ಳಿ, ಹಿರಿಯೂರು, ಕ್ರಿ.ಶ.೧೨೦೪

೨೧೬. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೩೨೧, ೩೨೪, ಕಾಟಿಕೆರೆ, ಕ್ರಿ.ಶ.೧೧೦೦-೦೧

೨೧೭. ಅದೇ, ಅ.ಕೆ.ಶಾ.ಸಂ.೬೩, ಕಲ್ಲುಂಡಿ ಹಾರನಹಳ್ಳಿ, ೨೩೫, ಕ್ರಿ.ಶ.೧೧೩೫-೩೮

೨೧೮. ಸ್ವಂತ ಅನುಬಂಧ ಶಾ.ಸಂಖ್ಯೆ ೧, ನೀರ್ಗುಂದ, ಕ್ರಿ.ಶ.೧೨೧೨

೨೧೯. ಎ.ಕ.೭ (ರೈಸ್), ಹೊನ್ನಾಳಿ, ೩೭, ೩೮, ಬೆಳಗುತ್ತಿ, ಕ್ರಿ.ಶ.೧೧೯೬

೨೨೦. ಎ.ಕ.೧೦ (ಪರಿ), ಅ.ಕೆ.೯೬, ಚ.ಪ.೨೩, ಕ್ರಿ.ಶ.೧೧೭೪

೨೨೧. ಎ.ಕ.೧೨ (ರೈಸ್), ತಿಪಟೂರು, ಶಾ.ಸಂ.೩೫, ಕ್ರಿ.ಶ.೧೨ನೇ ಶತಮಾನ

೨೨೨. ಎ.ಕ.೭ (ರೈಸ್) ೩೭, ೩೮, ೪೦ ಬೆಳಗುತ್ತಿ, ಕ್ರಿ.ಶ.೧೧೯೬

೨೨೩. ಎ.ಕ.೧೦ (ಪರಿ), ಚಿ.ಪ.ಶಾ.ಸಂ.೭೨, ಕೆಂಬಾಳು, ಕ್ರಿ.ಶ.೧೨ನೇ ಶತಮಾನ

೨೨೪. ಅದೇ, ಅ.ಕೆ.ಶಾ.ಸಂ.೧೧೬, ಸಾಂತಗೆರೆ, ಕ್ರಿ.ಶ.೧೧೫೬

೨೨೫. ಅದೇ, ಅ.ಕೆ.ಶಾ.ಸಂ.೯೭, ಜೆ.ಸಿ.ಪುರ, ೧೨ನೇ ಶತಮಾನ

೨೨೬. ಅದೇ, ಅ.ಕೆ.ಶಾ.ಸಂ.೩೬, ೮೬, ಎ.ಕ.ಬೇಲೂರು ೧೦೭, ೪೧೫ ಕ್ರಿ.ಶ.೧೨-೧೩ನೇ ಶತಮಾನ

೨೨೭. ಅದೇ, ಅ.ಕೆ.ಶಾ.ಸಂ.೨೩೨, ಹಾರನಹಳ್ಳಿ, ಕ್ರಿ.ಶ.೧೨೩೪

೨೨೮. ಅದೇ, ಅ.ಕೆ.ಶಾ.ಸಂ.೩೨೧, ಕಾಟಿಕೆರೆ, ಕ್ರಿ.ಶ.೧೧೦೦-೦೧

೨೨೯. ಎ.ಕ.೭ (ಪರಿ)ನಾಗಮಂಗಲ, ಶಾ.ಸಂ.೩೨, ಕ್ರಿ.ಶ.೧೨ನೇ ಶತಮಾನ

೨೩೦. ಎ.ಕ.೧೨ (ಪರಿ), ಕಡೂರು, ೬೭ ಕೆರೆಸಂತೆ, ಕ್ರಿ.ಶ.೧೧೪೧

೨೩೧. ಎ.ಕ.೧೦ (ಪರಿ), ಚ.ಪ.೭೧, ಕೆಂಬಾಳು, ಕ್ರಿ.ಶ.೧೧೬೮

೨೩೨. ಅದೇ, ಚ.ಪ.೨೩, ೧೩೩ ಅ.ಕೆ.೯೬, ಕ್ರಿ.ಶ.೧೨ನೇ ಶತಮಾನ

೨೩೩. ಅದೇ ಚ.ಪ.೭೨, ಕೆಂಬಾಳು, ಕ್ರಿ.ಶ.೧೨ನೇ ಶತಮಾನ

೨೩೪. ಅದೇ, ಅ.ಕೆ.ಮುನ್ನುಡಿ, ಶಾ.ಸಂ.೨೭೭, ದ್ಯಾಮೇನಹಳ್ಳಿ, ಕ್ರಿ.ಶ.೧೧೮೯

೨೩೫. ಅದೇ, ಅ.ಕೆ.ಶಾ.ಸಂ.೨೮೬, ನೇರ್ಲಿಗೆ, ಕ್ರಿ.ಶ.೧೧೯೪

೨೩೬. ಅದೇ, ಅ.ಕೆ.ಶಾ.ಸಂ.೧೭೭, ಬೆಳಗುಂಬ, ಕ್ರಿ.ಶ.೧೧೩೯-೪೪

೨೩೭. ಚನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು.೧೭೫

೨೩೮. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೯೬, ಜೆ.ಸಿ.ಪುರ, ಕ್ರಿ.ಶ.೧೭೭

೨೩೯. ಅದೇ, ಅ.ಕೆ.ಶಾ.ಸಂ.೨೧೪, ಮುದುಡಿ, ಕ್ರಿ.ಶ.೧೧೭೭

೨೪೦. ಅದೇ, ಅ.ಕೆ.ಶಾ.ಸಂ.೨೪೭, ಉಂಡಿಗನಾಳು, ಕ್ರಿ.ಶ.೧೨೨೩

೨೪೧. ಅದೇ, ಶಾ.ಸಂ.೧೨೬, ನಾಗವೇದಿ, ಕ್ರಿ.ಶ.೧೩೩೭

೨೪೨. ಅದೇ, ಅ.ಕೆ.ಶಾ.ಸಂ.೩೧೭, ೩೧೮, ಹಿರಿಯೂರು, ಕ್ರಿ.ಶ.೧೨೫೪-೫೮

೨೪೩. ಅದೇ, ಅ.ಕೆ.ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೨೪೪. ಜೋತ್ಸ್ನಕಾಮತ್, ಮಹಿಳೆ ಒಂದು ಅಧ್ಯಯನ, ದಾಯಭಾಗ

೨೪೫. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೨೬, ಗೀಜಿಹಳ್ಳಿ, ಕ್ರಿ.ಶ.೧೨೨೭

೨೪೬. ಅದೇ, ಶಾ.ಸಂ.೯೭, ಜೆ.ಸಿ.ಪುರ, ಕ್ರಿ.ಶ.೧೨ನೇ ಶತಮಾನ

೨೪೭. ಅದೇ, ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೨೪೮. ಎ.ಕ೭ (ರೈಸ್), ಶಿಕಾರಿಪುರ, ಶಾ.ಸಂ.೧೭೦, ಬಳ್ಳಿಗಾವೆ, ಕ್ರಿ.ಶ.೧೦೬೫

೨೪೯. ರಾಮಚಂದ್ರ ಚಿಂತಾಮಣ ಢೇರೆ, ನಾಥಸಂಪ್ರದಾಯದ ಇತಿಹಾಸ (ಅನು), ಪು.೪-೧೧

೨೫೦. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೮೬, ಕಣಕಟ್ಟೆ, ಕ್ರಿ.ಶ.೧೧೫೩-೫೪

೨೫೧. ಅದೇ, ಅ.ಕೆ.ಶಾ.ಸಂ.೬೬, ಶೆಟ್ಟಿಹಳ್ಳಿ, ಕ್ರಿ.ಶ.೯ನೇ ಶತಮಾನ

೨೫೨. ಅದೇ, ಅ.ಕೆ.ಶಾ.ಸಂ.೬೯, ಶೆಟ್ಟಿಹಳ್ಳಿ, ಕ್ರಿ.ಶ.೯-೧೦ನೇ ಶತಮಾನ

೨೫೩. ಎ.ಕ.೭ (ಪರಿ), ನಾಗಮಂಗಲ, ಶಾ.ಸಂ.೧೪೯, ಕ್ರಿ.ಶ.೮ನೇ ಶತಮಾನ

೨೫೪. ಎ.ಕ.೧೦ (ಪರಿ), ಶಾ.ಸಂ.೧೪೬, ಕೆಲ್ಲಂಗೆರೆ, ಕ್ರಿ.ಶ.೯ನೇ ಶತಮಾನ

೨೫೫. ಅದೇ, ಅ.ಕೆ.ಶಾ.ಸಂ.೨೦೩, ಗಂಡಸಿ, ಕ್ರಿ.ಶ.೯ನೇ ಶತಮಾನ

೨೫೬. ಅದೇ, ಅ.ಕೆ.ಶಾ.ಸಂ.೨೧, ಅರಸೀಕೆರೆ, ಕ್ರಿ.ಶ.೧೧೦೩

೨೫೭. ಅದೇ, ಅ.ಕೆ.ಶಾ.ಸಂ.೨೪೧, ಕ್ರಿ.ಶ.೧೧೫೮, ಎ.ಕ.೭ (ಪರಿ), ನಾಗಮಂಗಲ ೩೨, ಅಳೇಸಂದ್ರ, ಕ್ರಿ.ಶ.೧೧೦೩

೨೫೮. ಅದೇ, ಅ.ಕೆ.ಶಾ.ಸಂ.೧೭, ಅರಸೀಕೆರೆ, ಕ್ರಿ.ಶ.೧೨೧೯-೨೦

೨೫೯. ಅದೇ, ಅ.ಕೆ.ಶಾ.ಸಂ.೩೩, ಅರಸೀಕೆರೆ, ಕ್ರಿ.ಶ.೧೩ನೇ ಶತಮಾನ

೨೬೦. ಅದೇ, ಅ.ಕೆ.ಶಾ.ಸಂ.೩೨, ಅರಸೀಕೆರೆ, ಕ್ರಿ.ಶ.೧೨೩೦

೨೬೧. ಅದೇ, ಅ.ಕೆ.ಶಾ.ಸಂ.೨೩೨, ಹಾರನಹಳ್ಳಿ, ಕ್ರಿ.ಶ.೧೨೩೪

೨೬೨. ಅದೇ, ಚ.ಪ.ಶಾ.ಸಂ.೯೩, ಅಗ್ರಹಾರ ಬೆಳುಗಲಿ, ಕ್ರಿ.ಶ.೧೨೧೯

೨೬೩. ಎ.ಕ.೧೨ (ರೈಸ್), ಗುಬ್ಬಿ ೧೩, ಬೆನಜಿಗೆರೆ, ಕ್ರಿ.ಶ.೧೧೪೦

೨೬೪. ಎ.ಕ.೮ (ಪರಿ), ಹಾಸನ ಶಾ.ಸಂ.೬೬, ಯಲಗುಂದ, ಕ್ರಿ.ಶ.೧೧೩೫

೨೬೫. ಎ.ಕ.೧೦ (ಪರಿ), ಚ.ಪ.೭೧, ಕೆಂಬಾಳು, ಕ್ರಿ.ಶ.೧೧೬೮

೨೬೬. ಅದೇ, ಚ.ಪ.೧೩೩, ಅತ್ತಿಹಳ್ಳಿ, ಕ್ರಿ.ಶ.೧೧೮೩

೨೬೭. ಅದೇ, ಶಾ.ಸಂ.೧೮೫, ಮಾದಾಪುರ, ಕ್ರಿ.ಶ.೧೨೧೮

೨೬೮. ಅದೇ, ಅ.ಕೆ.ಶಾ.ಸಂ.೨೮೮, ಮೊಸಳೆ, ಕ್ರಿ.ಶ.೧೨೮೭

೨೬೯. ಅದೇ, ಅ.ಕೆ.ಶಾ.ಸಂ.೨೬೧, ತಳಲೂರು, ಕ್ರಿ.ಶ.೧೧೮೫

೨೭೦. ಎ.ಕ.೧೨ (ಪರಿ), ಕಡೂರು, ಶಾ.ಸಂ.೨೦೦, ಕ್ರಿ.ಶ.೧೧೮೭-೮೮

೨೭೧. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೧೪೯, ಕೆಲ್ಲಂಗೆರೆ, ಕ್ರಿ.ಶ.೧೧೪೨

೨೭೨. ಅದೇ, ಶಾ.ಸಂ.೨೧೬, ಮುದುಡಿ, ಕ್ರಿ.ಶ.೧೧೯೫

೨೭೩. ಅದೇ, ಶಾ.ಸಂ.೨೩, ಅರಸೀಕೆರೆ, ಕ್ರಿ.ಶ.೧೧೭೩

೨೭೪. ಅದೇ, ಶಾ.ಸಂ.೮೫, ಕಣಕಟ್ಟೆ, ಎ.ಕ.೧೧ (ಪರಿ), ಮೂಡಿಗೆರೆ ೧೮, ಕ್ರಿ.ಶ.೧೧೨೯

೨೭೫. ಅದೇ, ಶಾ.ಸಂ.೧೬೧, ತಳಲೂರು, ಕ್ರಿ.ಶ.೧೧೮೨

೨೭೬. ಎ.ಕ.೨, ಶ್ರ.ಬೆ., ೪೪೪, ಕ್ರಿ.ಶ.೧೧೮೨

೨೭೭. ಮತ್ಸಪುರಾಣ ಸಂ.೩, ಅಧ್ಯಾಯ ೭೦, ಪು.೨೮

೨೭೮. ಚನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು.

೨೭೯. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೧೭, ಮುದುಡಿ, ಕ್ರಿ.ಶ.೧೪-೧೫ನೇ ಶತಮಾನ

೨೮೦. ಅದೇ, ಚ.ಪ.ಶಾ.ಸಂ.೭೧, ಕೆಂಬಾಳು, ಕ್ರಿ.ಶ.೧೧೬೮

೨೮೧. ಅದೇ, ಅ.ಕೆ.ಶಾ.ಸಂ.೨೪, ಅರಸೀಕೆರೆ, ಕ್ರಿ.ಶ.೧೧೭೩

೨೮೨. ಅದೇ, ಅ.ಕೆ.ಶಾ.ಸಂ.೨೨೭, ಮುರುಂಡಿ, ಕ್ರಿ.ಶ.೧೧೭೪

೨೮೩. ಅದೇ, ಅ.ಕೆ.ಶಾ.ಸಂ.೧೬೭, ತಳಲೂರು, ಕ್ರಿ.ಶ.೧೩೬೮

೨೮೪. ಅದೇ, ಅ.ಕೆ.ಶಾ.ಸಂ.೧೭೦, ತಳಲೂರು, ಕ್ರಿ.ಶ.೧೨೧೪

೨೮೫. ಅದೇ, ಅ.ಕೆ.ಶಾ.ಸಂ.೩೧೪, ಅರಕೆರೆ, ಕ್ರಿ.ಶ.೧೨೩೩

೨೮೬. ಎ.ಕ.೧೨, ಕಡೂರು, ಶಾ.ಸಂ.೨೮, ಕ್ರಿ.ಶ.೧೨೧೬

೨೮೭. ಎ.ಕ.೧೦, ಅ.ಕೆ.ಶಾ.ಸಂ.೨೩೮, ಹಾರನಹಳ್ಳಿ, ೧೨ನೇ ಶತಮಾನ

೨೮೮. ಚೆನ್ನಕ್ಕ ಎಲಿಗಾರ, ಪೂರ್ವೋಕ್ತ, ಪು.೭೩

೨೮೯. ಬಾರ್ಬೋಸಾ, ಸಂ.೧, ಪು.೨೦೮

೨೯೦. ಸೀವೆಲ್ ದಿ ಫರ್‌ಗಾಟನ್ ಎಂಪೈರ್

೨೯೧. ಪ್ರವಾಸಿ ಕಂಡ ಇಂಡಿಯಾ, ಸಂ.೮

೨೯೨. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೧೭, ಮುದುಡಿ, ೧೪-೧೫ನೇ ಶತಮಾನ

೨೯೩. ಚೆನ್ನಕ್ಕ ಎಲಿಗಾರ, ಪೂರ್ವೋಕ್ತ, ಪು.೨೧೪, ೨೧೫

೨೯೪. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೫೦, ಉಂಡಿಗನಾಳು, ಕ್ರಿ.ಶ.೧೨-೧೩ನೇ ಶತಮಾನ

೨೯೫. ಅದೇ, ಶಾ.ಸಂ.೩೫, ಅರಸೀಕೆರೆ, ೧೩ನೇ ಶತಮಾನ

೨೯೬. ಅದೇ, ಶಾ.ಸಂ.೧೧೨, ಶಂಕರನಹಳ್ಳಿ, ಕ್ರಿ.ಶ.೧೩ನೇ ಶತಮಾನ

೨೯೭. ಅದೇ, ಅ.ಕೆ.ಶಾ.ಸಂ.೧೨೩, ದೊಡ್ಡಘಟ್ಟ, ಕ್ರಿ.ಶ.೧೩ನೇ ಶತಮಾನ

೨೯೮. ಸ್ವಂತ, ಅನುಬಂಧ, ಶಾ.ಸಂ.೯, ಬಾಗಡೆ, ಕ್ರಿ.ಶ.೧೨೦೭

೨೯೯. ಎ.ಕ.ಪರಿ, ಅ.ಕೆ.ಶಾ.ಸಂ.೯೯, ಜಿ.ಸಿ.ಪುರ, ಕ್ರಿ.ಶ.೧೩೧೧

೩೦೦. ಅದೇ, ಶಾ.ಸಂ.೧೦೫, ಚಿಕ್ಕಕೋಡಿಹಳ್ಳಿ, ಕ್ರಿ.ಶ.೧೨೫೯

೩೦೧. ಅದೇ, ಶಾ.ಸಂ.೧೭೬, ೧೭೫, ಬೆಳಗುಂಬ, ಕ್ರಿ.ಶ.೧೧೯೬-೯೯

೩೦೨. ಅದೇ, ಶಾ.ಸಂ.೨೧೬, ಮುದುಡಿ, ಕ್ರಿ.ಶ.೧೨೨೭

೩೦೩. ಅದೇ, ಅ.ಕೆ.ಶಾ.ಸಂ.೨೪೪, ಗೋವಿಂದನಹಳ್ಳಿ, ಕ್ರಿ.ಶ.೧೧೩೬-೩೭

೩೦೪. ಅದೇ, ಚ.ಪ.ಶಾ.ಸಂ.೬೦, ಮರಗೂರು, ಕ್ರಿ.ಶ.೧೬-೧೭ನೇ ಶತಮಾನ

೩೦೫. ಅದೇ, ಚ.ಪ.ಶಾ.ಸಂ.೫೭, ಅಂಕನಹಳ್ಳಿ, ಕ್ರಿ.ಶ.೧೫೩೭

೩೦೬. ಅದೇ, ಚ.ಪ.ಶಾ.ಸಂ.೮೩, ಸಂತೆಶಿವರ, ಕ್ರಿ.ಶ.೧೨೨೩

## ಅಧ್ಯಾಯ ೫

# ಸಾಮಾಜಿಕ ನಿಯಂತ್ರಣ ಮತ್ತು ರಕ್ಷಣಾ ವ್ಯವಸ್ಥೆ

೫

# ಸಾಮಾಜಿಕ ನಿಯಂತ್ರಣ ಮತ್ತು ರಕ್ಷಣಾ ವ್ಯವಸ್ಥೆ

ಒಂದು ಸಾಂಸ್ಕೃತಿಕ ಪರಿಸರದಲ್ಲಿ ಜೊತೆಗೂಡಿ ವಾಸಿಸುವ ವ್ಯಕ್ತಿಗಳ ಸಮೂಹವೇ ಸಮಾಜ. ಹುಟ್ಟಿನಿಂದ ಸಾವಿನವರೆಗೆ ಜೀವನ ಪರ್ಯಂತ ತನ್ನ ಅಪರಿಮಿತ ಅಗತ್ಯಗಳನ್ನು ಪೂರೈಸಿಕೊಳ್ಳಲು ಯತ್ನಿಸುತ್ತ ಮಾನವ ಸಾಂಘಿಕ ಜೀವನವನ್ನು ನಡೆಸುತ್ತಾನೆ. ಒಂದು ವ್ಯವಸ್ಥೆ, ಪ್ರಕ್ರಮ ಹಾಗೂ ಸಮತೋಲನದಿಂದ ಕೂಡಿದ ಸಮಾಜ ನಿರ್ಮಾಣಕ್ಕೆ ಮತ್ತು ಅದರ ಸುರಕ್ಷತೆಗೆ ಉತ್ತಮ ನಿಯಂತ್ರಣ ವ್ಯವಸ್ಥೆ ಹಾಗೂ ರಕ್ಷಣಾ ವ್ಯವಸ್ಥೆ ಅತ್ಯಗತ್ಯವಾದುದು.

## ೫.೧. ಸಾಮಾಜಿಕ ನಿಯಂತ್ರಣಗಳು

ಸಮಾಜದಲ್ಲಿ ತನ್ನ ಸದಸ್ಯರ ವರ್ತನೆಯನ್ನು ತಿದ್ದಲು ಸಮಾಜದ ನೆಮ್ಮದಿಯನ್ನು, ಸಮತೋಲನವನ್ನು ಪುನಃಸ್ಥಾಪಿಸಲು ಭಿನ್ನ ಭಿನ್ನವಾದ ನಿಯೋಗಗಳನ್ನು ಸಮಾಜವು ಹೊಂದಿರುತ್ತದೆ. ಇಂಥ ನಿಯೋಗಗಳು ಔಪಚಾರಿಕ ಕ್ರಮಗಳಾದ ಕಾನೂನು, ಶಿಸ್ತುಪಾಲನೆ, ನಿರ್ಬಂಧಗಳು, ಬಲಪ್ರಯೋಗ, ಶಿಕ್ಷೆ, ದಂಡಗಳ ಮೂಲಕವೂ ಅನೌಪಚಾರಿಕ ಕ್ರಮಗಳಾದ ಲೋಕರೂಢಿ, ಲೋಕನೀತಿ, ಪದ್ಧತಿಗಳ ಮೂಲಕವೂ ಸಮಾಜದ ಸದಸ್ಯರ ಮೇಲೆ ಹಿಡಿತವನ್ನು ಸಾಧಿಸುತ್ತವೆ. ನಿಯಮಾವಳಿಗಳನ್ನು ಕಟ್ಟುನಿಟ್ಟಾಗಿ ಪಾಲಿಸಿದವರು ಸಮಾಜದ ಪುರಸ್ಕಾರಕ್ಕೆ ಅರ್ಹರಾಗುವರು. ಉಲ್ಲಂಘಿಸಿದವರು ಶಿಕ್ಷೆಗೆ ಗುರಿಯಾಗುವರಾದ್ದರಿಂದ ಈ ನಿಯಮಗಳು ಧನಾತ್ಮಕ ಮತ್ತು ಋಣಾತ್ಮಕವಾಗಿ ಕೆಲಸ ಮಾಡುತ್ತವೆ. ಶಾಸನಗಳಲ್ಲಿ ಉಕ್ತವಾದ ವಿಧಿ ನಿಷೇಧಗಳು, ಶಾಪಾಶಯ ಭಾಗಗಳು, ಅರ್ಥಶಾಸ್ತ್ರ, ಶುಕ್ರನೀತಿ, ಮನುಸ್ಮೃತಿ, ಮಿತಾಕ್ಷರ ಮುಂತಾದ ಗ್ರಂಥಗಳು ಹೇಳಿರುವ ಅಪರಾಧ ಮತ್ತು ಶಿಕ್ಷಾ ವಿಚಾರಗಳು ಇವೆಲ್ಲವೂ ಮಧ್ಯಕಾಲೀನ ಕರ್ನಾಟಕದ ಸಮಾಜವು ಯಾವೆಲ್ಲಾ ನಿಯಂತ್ರಣಕ್ಕೆ ಒಳಪಟ್ಟಿತ್ತು ಎಂಬುದನ್ನು ತಿಳಿಯಲು ಸಹಾಯಕವಾಗುತ್ತವೆ.

ರಾಜ್ಯದ ನ್ಯಾಯಾಂಗ, ಕಾನೂನು, ರಕ್ಷಣಾ ವ್ಯವಸ್ಥೆ ಮುಂತಾದುವು ಸಾಮಾಜಿಕ ನಿಯಂತ್ರಣವನ್ನೇ ತನ್ನ ಉದ್ದೇಶಿತ ಹಾಗೂ ಪ್ರತ್ಯಕ್ಷ ಕಾರ್ಯವಾಗಿ ನಿರ್ವಹಿಸುವ ಸಮಾಜದ ಘಟಕಗಳಾಗಿರುತ್ತವೆ. ಅಪವರ್ತನೆ, ಅಪರಾಧಗಳಿಗೆ ಶಿಕ್ಷೆಯನ್ನು ನೀಡುವ ಗ್ರಾಮ ಸಭೆಗಳು, ಚೌಗಾವೆಗಳು, ದೇವಾಲಯಗಳು, ಮಹಾಜನರು, ರಾಜಪ್ರತಿನಿಧಿಗಳು ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತಾರೆ.

## ೫.೧.೧. ಔಪಚಾರಿಕ-ಅನೌಪಚಾರಿಕ ನಿಯಂತ್ರಣ-ನಿಯಮ ನಿಬಂಧನೆಗಳು

**ಔಪಚಾರಿಕ ನಿಯಂತ್ರಣ ರಾಜಾಜ್ಞೆ :** ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಸಮಾಜದ ಪ್ರಧಾನ ನಿಯಂತ್ರಣ ಶಕ್ತಿ ಸಾರ್ವಭೌಮನಾದ ಅರಸನದಾಗಿತ್ತು. ಈ ಅರಸರಿಗೂ ತಮ್ಮ ಕರ್ತವ್ಯ ನಿರ್ವಹಿಸುವಲ್ಲಿ ಪಾಲಿಸಬೇಕಾದ ನೀತಿ ನಡಾವಳಿಗಳನ್ನು ಧರ್ಮಶಾಸ್ತ್ರಗಳು ನೀತಿ ಸಂಹಿತೆಗಳು ತಿಳಿಯಪಡಿಸುತ್ತಿದ್ದವು. ಹಾಗಾಗಿ ರಾಜನೂ ನಿರಂಕುಶನಾಗಿರಲು ಅವಕಾಶಗಳು ಕಡಿಮೆಯಿತ್ತು. ಆತನು ಸಮನ್ವಯ ನೀತಿಯನ್ನು ಅನುಸರಿಸಿ ಮತಧರ್ಮ, ಕಲೆ, ಸಂಪ್ರದಾಯ ಸಮುದಾಯಗಳ ಸಂಸ್ಕೃತಿ ಸಂರಕ್ಷಣೆಯಂತಹ ವ್ಯವಹಾರಗಳಲ್ಲಿ ಪಕ್ಷಪಾತ ಮಾಡದೆ, ಜನರಲ್ಲಿ ಒಡಕು, ಸಂಘರ್ಷಗಳುಂಟಾಗದಂತೆ ಎಚ್ಚರವಹಿಸಬೇಕಾಗುತ್ತಿತ್ತು. ಮಾನವನ ವರ್ತನೆಯನ್ನು ಅತ್ಯಂತ ಪರಿಣಾಮಕಾರಿಯಾಗಿ ನಿಯಂತ್ರಿಸಬಲ್ಲ ನಿಯೋಗವಾದ ಕಾನೂನಿನ ಮೂಲಕ ಪ್ರಭುತ್ವವು ತನ್ನ ಅಧಿಕಾರವನ್ನು ಚಲಾಯಿಸುತ್ತಿತ್ತು. ರಾಜಾಜ್ಞೆಗಳು ಅಥವಾ ಶಾಸನಗಳು ಹುಟ್ಟಿಕೊಂಡದ್ದೇ ಈ ಉದ್ದೇಶಕ್ಕಾಗಿ ಆದರೆ ಈ ಕಾನೂನುಗಳನ್ನು ಮಾಡುತ್ತಿದ್ದವರು ಸಮಾಜದ ಪ್ರತಿಷ್ಠಿತರು. ಹಾಗಾಗಿ ಅವು ಅವರ ಅನುಕೂಲವನ್ನು ಗಮನದಲ್ಲಿ ಇಟ್ಟುಕೊಂಡು ರೂಪಿತವಾಗುತ್ತಿದ್ದವು. ತಳಸ್ತರದವರೆಗೆ ನ್ಯಾಯ ದೊರಕುತ್ತಿತ್ತೆಂದು ಹೇಳಿದರೆ ಅದು ಸುಳ್ಳಾಗುತ್ತದೆ. 'ಕಾನೂನು ಎಂಬುದು ಶ್ರೇಷ್ಠ ವ್ಯಕ್ತಿಯು ನಿಕೃಷ್ಟ ವ್ಯಕ್ತಿಯ ಮೇಲೆ ಹೇರುವ ಆದೇಶವೇ ಆಗಿದೆ" ಎಂದು ಸಮಾಜಶಾಸ್ತ್ರಜ್ಞ ಆಸ್ಟಿನ್ ಹೇಳಿದ್ದಾನೆ.[೧] ಸಂಘರ್ಷ ನಿವಾರಣೆಯ ಕೆಲವು ತತ್ವಗಳನ್ನು ವಿಧಿವಿಧಾನಗಳನ್ನು ಸಹಜೀವನದ ಕೆಲವು ಸರಳ ನಿಯಮಗಳನ್ನು ಸ್ಥಾಪಿಸಲು ಹಾಗೂ ನಿರ್ವಹಿಸಲು ಈ ಕಾನೂನು ಕಟ್ಟಳೆ ಅತಿ ಅವಶ್ಯಕವೆಂಬುದು ನಿಜವಾದರೂ ಈ ಕಾನೂನು ಪ್ರಭುತ್ವ ಮತ್ತು ಪುರೋಹಿತಶಾಹಿಯ ಜಾಲವಾಗಿ ಇಡೀ ಸಮಾಜವನ್ನು ತನ್ನ ಮುಷ್ಠಿಯಲ್ಲಿ ಹಿಡಿಯುವ ಪ್ರಯತ್ನವನ್ನು ಮಾಡಿದಂತೆ ತೋರುತ್ತದೆ.

**ಅನೌಪಚಾರಿಕ ನಿಯಂತ್ರಣ-ಶಾಪಾಶಯಗಳು :** ಕಾನೂನು ಶಿಕ್ಷೆಗಳಂತಹ ಔಪಚಾರಿಕ ನಿಯಂತ್ರಣಗಳಿಗಿಂತಲೂ ಅನೌಪಚಾರಿಕ ನಿಯಂತ್ರಣಗಳ ವಿಚಾರಗಳು ಶಾಸನಗಳಲ್ಲಿ ವಿಶೇಷವಾಗಿ ಕಾಣಿಸಿಕೊಳ್ಳುತ್ತವೆ. ದಿನನಿತ್ಯದ ಜೀವನದ ಹತ್ತು ಹಲವಾರು ಚಟುವಟಿಕೆಗಳಲ್ಲಿ ಪಾಲಿಸಬೇಕಾಗಿ ಬರುವ ವರ್ತನಾ ಕ್ರಮಗಳೂ, ಪುರುಷಾರ್ಥ ಸಾಧನೆ, ದಾನ, ಧರ್ಮ, ಲೋಕಕಲ್ಯಾಣ, ಸೇವಾಭಾವ, ತಂದೆ ತಾಯಿ ಗುರು ಹಿರಿಯರಲ್ಲಿ ಭಕ್ತಿ, ಧರ್ಮಶ್ರದ್ಧೆ, ಸತೀತ್ವ, ಸ್ವಾಮಿನಿಷ್ಠೆ, ಶೌಚ, ಪಾತಿವ್ರತ್ಯ, ನನ್ನಿ, ತ್ಯಾಗ, ವೀರ, ಪುಣ್ಯಾರ್ಜನೆ, ಪರೋಪಕಾರ ಇತ್ಯಾದಿ ಮೌಲ್ಯಗಳು, ನೀತಿಗಳು ಅನೌಪಚಾರಿಕ ಸಾಮಾಜಿಕ ನಿಯಂತ್ರಣದ ನಿಯೋಗವಾಗಿ ಮಾನವನ ವರ್ತನೆಯನ್ನು ನಿಯಂತ್ರಿಸುವಲ್ಲಿ ಹೆಚ್ಚು ಪರಿಣಾಮಕಾರಿ ಕೆಲಸ ಮಾಡಿರುವುದನ್ನು ಶಾಸನಗಳು ಹೇಳುತ್ತವೆ. ಆ ಕಾಲದ ಜನಜೀವನವನ್ನು ಧರ್ಮಶಾಸ್ತ್ರಗಳು ನಿಯಂತ್ರಿಸುತ್ತಿದ್ದವು.

ಸಾಧ್ಯವಾದಷ್ಟು ಧರ್ಮಶಾಸ್ತ್ರಗಳಿಗೆ ಸಮ್ಮತವಾದ ಮಾರ್ಗದಲ್ಲಿ ನಡೆಯಬೇಕು ಎಂಬ ಆದರ್ಶ ಜನತೆಯ ಮುಂದಿತ್ತು. ಆ ಕಾರಣಕ್ಕಾಗಿಯೇ ಶಾಪಾಶಯ ಶ್ಲೋಕಗಳು ಎಲ್ಲಾ ಧರ್ಮದ ಶಾಸನಗಳಲ್ಲೂ ಕಂಡುಬರುತ್ತವೆ. ಪ್ರಸಿದ್ಧವಾದ ಧರ್ಮ ನೀತಿಬೋಧಕ ಶ್ಲೋಕಗಳನ್ನು ಸ್ಮೃತಿ ಪುರಾಣಗಳಿಂದ ಆರಿಸಿ ಶಾಸನಗಳಲ್ಲಿ ಬಳಸಲಾಗಿದೆ. ಸಂಸ್ಕೃತ ಶ್ಲೋಕಗಳೊಂದಿಗೆ ಸರಳವಾದ ಕನ್ನಡ ಗದ್ಯದಲ್ಲಿಯೂ ಮೃದುವಾಗಿಯೂ, ಕಠಿಣವಾಗಿಯೂ, ಬಯ್ಗುಳವನ್ನು ಬಳಸಿ ಸಮಾಜದಲ್ಲಿನ ಅಪವರ್ತನೆಯನ್ನು ನಿಯಂತ್ರಿಸಲು ಪ್ರಯತ್ನಿಸಿವೆ. ಕೆಲವು ಶಾಸನಗಳು ಸ್ವರ್ಗದ, ಪುಣ್ಯದ ಆಸೆಯನ್ನು, ನರಕದ, ಪಾಪದ ಅಲೌಕಿಕ ಭಯವನ್ನಿಟ್ಟರೆ ಮತ್ತೆ ಕೆಲವು ಶಾಸನಗಳು ಈ ಅಮೂರ್ತವಾದ ವಿಚಾರಗಳನ್ನು ಹೇಳದೆ ಈ ಲೋಕದಲ್ಲಿ ಈ ಜನ್ಮದಲ್ಲಿ ಬಂದೊದಗುವ ಅಪಕೀರ್ತಿ[೨] ನಿಂದನೆಯನ್ನು ಭಹಿಷ್ಕಾರವನ್ನು[೩] ಧರ್ಮಕ್ಕೆ ಧರ್ಮ ಗುರುಗಳಿಗೆ ಹೊರಗಾಗಬೇಕೆಂಬುದನ್ನು[೪] ಹೇಳುತ್ತವೆ. ಎಕ್ಕೋಟಿ ಮುನೀಂದ್ರರ ಹತ್ಯೆ, ಗೋಹತ್ಯೆ, ತಂದೆ ತಾಯಿಗಳ ಹತ್ಯೆ, ಬ್ರಹ್ಮಹತ್ಯೆಯ ಪಾಪವ್ಪೂ, ಲಿಂಗವನಳಿದ ಪಾಪ, ತಟಾಕ, ದೇವತಾಗ್ರಿಹ ವಿನಾಶ ಮಾಡಿದ ಪಾಪ, ತಪೋಧನರನ್ನು ಅಳಿದ ಪಾಪ, ಮಡದಿ, ತಾಯಿಯನ್ನು ಅನ್ಯರಿಗೆ ಇತ್ತ ಪಾಪ ಇತ್ಯಾದಿ ಶಾಪಗಳು ಎಲ್ಲ ಧರ್ಮದವರನ್ನೂ ಅವರವರ ದೈವಗಳ ಮೂಲಕವೇ, ನಂಬಿಕೆಗಳ ಮೂಲಕವೇ, ನಿಯಂತ್ರಿಸುವ ಪ್ರಯತ್ನ ಮಾಡಿರುವುದನ್ನು ನೋಡಬಹುದು.

## ನಿಯಮ ನಿಬಂಧನೆಗಳು

ಸಮಾಜ ವ್ಯವಸ್ಥೆಯನ್ನು ಕಾಪಾಡಲು ಪೂರಕವಾಗುವ ದಾನ-ಧರ್ಮ, ದೈವ-ದೇವಾಲಯ ನಿರ್ಮಾಣ, ಕೆರೆ-ಕಟ್ಟೆ ನಿರ್ಮಾಣ, ಕೃಷಿ ಭೂಮಿ, ಗಡಿ-ಮೇರೆ, ಆಚಾರ-ವಿಚಾರ ಪದ್ಧತಿಗಳಿಗೆ ಸಂಬಂಧಿಸಿ ದಂತೆ ಅನೇಕ ನೀತಿ ನಿಯಮಗಳನ್ನು ಗ್ರಾಮವಿರಲಿ, ಅಗ್ರಹಾರವಿರಲಿ, ಪಟ್ಟಣಗಳಿರಲಿ ಸ್ಥಳೀಯ ಸಭೆಗಳು ವಿಧಿಸುತ್ತಿದ್ದವು. ಆ ನಿಯಮಗಳನ್ನು ಮೀರಿ ನಡೆದವರನ್ನು ಶಿಕ್ಷೆಗೆ ಗುರಿಪಡಿಸಲಾಗುವುದೆಂದು ಹೇಳಿರುವ ಕೆಲವು ಶಾಸನಗಳನ್ನು ಪರಿಶೀಲಿಸಬಹುದು.

ಯಾವುದೇ ದೇವಾಲಯದಲ್ಲಿ ಪೂಜೆ ಪುರಸ್ಕಾರಗಳು, ಸೇವಾಕಾರ್ಯಗಳು ತಪ್ಪದಂತೆ, ದೇವಾಲಯ ಗಳಿಗೆ ನೀಡಿದ ದಾನಗಳು ಹಾಳಾಗದಂತೆ ಕಾಪಾಡುವ ಜವಾಬ್ದಾರಿಯನ್ನು ಸ್ಥಳೀಯ ಪ್ರಜೆ ಗಾವುಂಡುಗಳಿಗೆ, ಮಹಾಜನಗಳಿಗೆ, ಸ್ಥಾನಿಕರಿಗೆ ಅಧಿಕಾರಿಗಳಿಗೆ ಒಪ್ಪಿಸಲಾಗುತ್ತಿತ್ತು. ಯಾವುದೇ ಕಾರಣಕ್ಕೂ ಅದನ್ನು ಮೀರುವಂತಿರಲಿಲ್ಲ. ರಾಜನ ಆಣತಿಯಂತೆ ಹೊಸ ದಾನವನ್ನು ನೀಡಿ, ಹಿಂದಿನಿಂದ ನಡೆದುಕೊಂಡು ಬಂದಿದ್ದ ಪೂಜೆಯನ್ನು ನಿಲ್ಲಿಸದೆ ಪ್ರತಿಪಾಲಿಸುವಂತೆ ಸೂಚಿಸಿರುವುದನ್ನು ಕಣಕಟ್ಟೆಯ ಶಾಸನ[೫] ಹೇಳಿದೆ. ಗ್ರಾಮಸ್ಥರು ಮಾಡುತ್ತಿದ್ದ, ದೇವಾಲಯಗಳಿಗೆ ಸಂಬಂಧಿಸಿದ ಕೆಲವು ನಿಯಮಗಳು ಕೇವಲ ಜನಸಾಮಾನ್ಯ ರನ್ನಷ್ಟೇ ಅಲ್ಲ ಅರಸನನ್ನು ಕೂಡ ನಿಯಂತ್ರಿಸುತ್ತಿದ್ದವು. ಬಾಗಾವಾಳಿನ ಶಾಸನ[೬] 'ಅರ್ಸುಗಳು ಅರ್ಸಿನ

ಮನ್ನಿರುಗಳು ನಾಯಕರೊಳಗಾದ ಹಳ್ಳಿ ಹಿರಿಯೂರ ಪ್ರಜೆಗಳು ಮುಂತಾಗಿ ಈ ಧರ್ಮಕ್ಕೆ ಆರೊಬ್ಬರು ತಪ್ಪಿದರೆ ತಂಮ ತಾಯಿ ತಂದೆ ಗುರು ದೇವರನು ನರಕಕ್ಕೆ ಯಿಕ್ಕಿದವರು ಗಂಗೆಯ ತಡಿಯಲಿ ಕಪಿಲೆಯ ಕೊಂದ ಪಾಪದಲಿ ಹೋಹರು. ಕಾಶಿಯಲು ತಾಯಕೊಂದವರು...." ಎಂದು ನಿಯಮಿಸುತ್ತದೆ. ಒಬ್ಬ ಅರಸ, ಅಧಿಕಾರಿ, ಸಾಮಾನ್ಯರು ನೀಡಿರಬಹುದಾದ ದಾನದತ್ತಿಗಳನ್ನು ಮತ್ತೊಬ್ಬ ಅರಸ ಅಧಿಕಾರಿ ಊರ್ಜಿತ ಮಾಡದೆ ಅಪಹರಿಸುತ್ತಿದ್ದಿರಬೇಕು ಹಾಗಾಗಿ ಅಂತವರಿಗೆ ಇಲ್ಲಿ ನಿಯಂತ್ರಣ ಹೇರಲಾಗಿದೆ.

ತಪ್ಪಿತಸ್ಥರಿಗೆ ಅವರ ತಪ್ಪಿನ ಅರಿವು ಮೂಡಿಸಿ ಪ್ರಾಯಶ್ಚಿತ್ತ ಮಾಡಿಕೊಳ್ಳಲು ನಿಯಮಿಸಲಾಗುತ್ತಿತ್ತು. ವಿಠಲಯ್ಯನೆಂಬುವನು ಪ್ರಾಯಶ್ಚಿತ್ತಾರ್ತ್ಥವಾಗಿ ದೇವರಿಗೆ ಭೂಮಿದಾನ ಮಾಡಿದ್ದಾನೆ. ಈ ಪ್ರಾಯಶ್ಚಿತ್ತದ ದಂಡವು ಹಣದ ರೂಪದಲ್ಲೋ, ಭೂಮಿಯ ರೂಪದಲ್ಲೋ, ವಸ್ತು ರೂಪದಲ್ಲೋ ಇರಬಹುದಾಗಿತ್ತು. ಅದನ್ನು ದೇವಾಲಯಗಳಿಗೆ ಸೇರಿಸಲಾಗುತ್ತಿತ್ತು.[೭] ದೇವಾಲಯಗಳು ನ್ಯಾಯಾಲಯದ ಕಾರ್ಯವನ್ನು ಮಾಡುತ್ತಿದ್ದವು. ಅಪರಾಧವನ್ನು ನಿರ್ಣಯಿಸುವ ಪ್ರಾಚೀನ ಪದ್ಧತಿಗಳಲ್ಲಿ 'ದಿವ್ಯ'ವೂ ಒಂದು.[೮]

**ದೇವ ಭೂಮಿಯ ನಿಬಂಧನೆ :** ದೇವಾಲಯ ಭೂಮಿಗೆ ಸಂಬಂಧಿಸಿದಂತೆ ಕೃಷಿ ಗುತ್ತಿಗೆ ಹಿಡಿದ ಒಕ್ಕಲುಗಳಿಗೆ ಅನೇಕ ನಿಬಂಧನೆಗಳನ್ನು ಹೇರಿ ನಿಯಂತ್ರಿಸಲಾಗುತ್ತಿತ್ತು.[೯] ಹಾರನಹಳ್ಳಿಯ ಒಂದು ಶಾಸನದಲ್ಲಿ[೧೦] ಚೆನ್ನಕೇಶವ ದೇವಾಲಯಕ್ಕೆ ಸೇರಿದ್ದ ಭೂಮಿ ಕಾಣೆಗಳಿಗೆ ಸಂಬಂಧಿಸಿದಂತೆ ಪೂಜಾರಿ, ನಿಬಂಧಿಕಾರರು, ಭೂಮಿಗುತ್ತಿಗೆ ಹಿಡಿದವರ ನಡುವೆ ಅಸಮಾಧಾನಗಳುಂಟಾದ ಸಂದರ್ಭದಲ್ಲಿ ಏರ್ಪಟ್ಟ ಒಪ್ಪಂದ ಹಾಗೂ ವಿಧಿಸಿದ ನಿಬಂಧನೆಗಳು ವಿಶೇಷವಾಗಿವೆ. ಗದ್ದೆ, ತೋಟ ಬೆದ್ದಲಿನ ಸಿದ್ಧಾಯದ ಮೊತ್ತವನ್ನು ನಿಗದಿಪಡಿಸಲಾಗಿದೆ ಮತ್ತು ಕೃಷಿ ಕೆಲಸ ಕಾರ್ಯಗಳನ್ನು ಸಕಾಲಕ್ಕೆ ಮಾಡದೆ ಆಲಸ್ಯ ತೋರಿದರೆ ಅವರಿಗೆ ನೀಡಬೇಕಾದ ಪಡಿ ಜೀವಿತದಿಂದಲೇ ಈ ಮೊತ್ತವನ್ನು ನೀಡಬೇಕು ಅಥವಾ ಅದನ್ನು ಇಕ್ಕಿ ಬೇರೆಯವರಿಂದ ಆ ಕೆಲಸ ಮಾಡಿಸಬೇಕು ಎಂದು ಶಿಸ್ತು ಮಾಡಲಾಗಿದೆ. ಇಂತಹ ನಿಬಂಧನೆಗೆ ತಪ್ಪಿದರೆ ಅಂತಹ ಒಕ್ಕಲನ್ನು ಕಿತ್ತು ಬೇರೆಯವರನ್ನು ಆ ಕೆಲಸಗಳಿಗೆ ನೇಮಿಸಲಾಗುತ್ತಿತ್ತು.

**ಒಡೆತನ ಭೂಮಿ ಹಂಚಿಕೆ ನಿಯಮಗಳು :** ಕೆಲ್ಲಂಗೆರೆಯ ಬಿದುಗಜಿನಾಲಯಕ್ಕೆ ಹಳ್ಳಿಗಳು ಮತ್ತು ತೋಟಗಳನ್ನು ಬಿಟ್ಟಿದ್ದು, ಅದರ ಜವಾಬ್ದಾರಿಯು ಒಬ್ಬರ ಕೈಯಿಂದ ಮತ್ತೊಬ್ಬರಿಗೆ ಹಸ್ತಾಂತರ ಗೊಳ್ಳುತ್ತಿತ್ತು. ಲಾಗಬಸದಿಯ ಒಡೆತನ, ಸ್ಥಾನಾಚಾರ್ಯರು, ಆಡಳಿತಕ್ಕೆ ಸಂಬಂಧಿಸಿ ಗೊಂದಲ ಉಂಟಾದಾಗ ಕೆಲ್ಲಂಗೆರೆಯ ಗಾವುಂಡುಗಳು, ಬಳಂಜಿಗರಯ್ನೂರ್ವರು, ಬಿದುಗಜಿನಾಲಯಕ್ಕೆ ಸಂಬಂಧಿಸಿದ ಮುನಿಗಳು ಸೇರಿ ಹೊಸ ತೀರ್ಮಾನವೊಂದನ್ನು ಕೈಗೊಂಡುದನ್ನು ಒಂದು ಶಾಸನ ಹೇಳಿದೆ.[೧೧] ಮೊಸಳೆ, ಹಿರಿಯೂರು, ಬಾಗಡೆಗಳ ಶಿವಸ್ಥಾನಗಳ ಹಂಚಿಕೆ, ಭೂವಿವಾದ, ಅಸಮಾಧಾನಗಳಿಗೆ ಖುದ್ದಾಗಿ ರಾಜ ಗುರು ಮುಖ್ಯರಾದ ನೂರಿಪ್ಪತ್ತು ಶೈವ ಸ್ಥಾನಿಕರ ಮುಂದೆ ತೀರ್ಮಾನಗಳನ್ನು ಕೈಗೊಳ್ಳಲಾಗಿದೆ.[೧೨]

**ನೀರಿನ ಹಂಚಿಕೆಯ ನಿಬಂಧನೆಗಳು :** ಶೈವ ದೇವಾಲಯಕ್ಕೆ ಸಂಬಂಧಿಸಿದ ಘಟ್ಟದ ನೀರನ್ನು ವೈಷ್ಣವ ದೇವಾಲಯದ ತೋಟಭೂಮಿಗಳಿಗೆ ಬಳಸಿಕೊಳ್ಳಲು ನಿರ್ಬಂಧವನ್ನು ಹೇರಿದ್ದು ಆ ಪಂಥದ ನೀರನ್ನು ಬಿಡಬೇಕೆಂದು ಹೇಳುವವರನ್ನು ಶಿವದ್ರೋಹಿಯೆಂದೂ ಮೂವತ್ತಿರ್ಛಾಸಿರಕ್ಕೆ ಬಹಿಷ್ಕೃತರು ಎಂದು ಹೇಳಲಾಗಿದೆ.[೧೩] ಈ ನೀರಿನ ಪಂಥವು ತಳಲೂರಿನ ಮಹಾಜನರಿಗೂ ಅಲ್ಲಿನ ಶೈವ ಸ್ಥಾನಿಕರಿಗೂ ಸುಮಾರು ಎಂಬತ್ತು ವರ್ಷಗಳ ನಂತರ 'ನೀರ ಪಂಥವಿಲ್ಲೆಂದು ಒಡಂಬಡಿಕೆಯಾಗಿ ಮಹಾಜನಗಳು ತಾವು ನೀರು ಬಳಸುವ ಪ್ರತಿಯೊಂದು ವೃತ್ತಿಗೂ ಒಂದೊಂದು ಗದ್ಯಾಣದಂತೆ ವರ್ಷಂಪ್ರತಿ ನೆಲೆಯಾಗಿ ಕೊಡಬೇಕೆಂಬ ತೀರ್ಮಾನವಾದುದನ್ನು ಒಂದು ಶಾಸನ ಹೇಳುತ್ತದೆ.[೧೪]

**ದಾನ ನೀಡಿಕೆ, ದಾನದ ಸದ್ಬಳಕೆಯ ನಿಬಂಧನೆಗಳು :** ದೇವಾಲಯವೊಂದರ ದೀಪಾರಾಧನೆಗೆ "ಜಾವಗಲ್ಲಿನ ಬಾಣಾವರದ ಕಂದಾಚಾರದಲ್ಲಿ ವಾಲೈಸಿಕೊಂಡಿರುವ ಸೇರುಗಾರ್ರು, ವಂಟ್ರಿಗಾರ್ರು, ವಾಲೆಗಾರ್ರು ಜನವಂದಕ್ಕೆ ಒಂದು ಕಂಠೀರಾಯ ಹಣಪ್ರಕಾರ" ಪ್ರತಿವರ್ಷ ಅವರವರ ಸಂಬಳದಲ್ಲಿ ಒಪ್ಪಿಸಬೇಕೆಂಬ ಶಿಸ್ತಿನ ತೀರ್ಮಾನವೊಂದು ನಡೆದುದನ್ನು ಒಂದು ಬಿನ್ನಹ ಶಾಸನ ದಾಖಲಿಸಿದೆ.[೧೫]

ಇಂಥ ಶಿಸ್ತಿನ ತೀರ್ಮಾನಗಳು, ನಿಯಂತ್ರಣಗಳು ಹೊರಗಿನವರಿಗಷ್ಟೇ ಅಲ್ಲ ಸ್ವತಃ ಪೂಜಾರಿ, ಅರ್ಚಕರಿಗೂ ಇರುತ್ತಿತ್ತು. ಶಂಭು ಮೇಳೇಶ್ವರ ದೇವರ ಶ್ರೀ ಕಾರ್ಯಕ್ಕೆ ನಿಯಮಿತರಾದ ಹರಜೀಯ ಮೇಳ ಜೀಯರು 'ಎರಡೂ ಹೊತ್ತಿನ ಭೋಗನೈವೇದ್ಯ ಕುಂದಿದಡೆ ಹುಳು ಕುಪ್ಪೆಯಲಿ ಬೀಳ್ವರು' ಎಂದು[೧೬] ನಿಚ್ಚ ನಿವೇದ್ಯಂ ತಪ್ಪಲಾಗ ತಪ್ಪಿದಡೆ ತಮ್ಮಡಿ ನರಕದಲಿಳ್ಗು[೧೭] ಎಂದು ನೇರ ಶಾಪಾಶಯವಿದೆ.

**ದೇವಾಲಯ ಆಚಾರ, ವಿಚಾರದ ಕಟ್ಟುಪಾಡು :** ದೇವಾಲಯದ ಆಚಾರ ವಿಚಾರಗಳಿಗೆ ಸಂಬಂಧಿಸಿದಂತೆಯೂ ದೇವಾಲಯ ನಿರ್ಮಿಸಿದವರು, ದೇವಾಲಯಕ್ಕೆ ಕೆರೆ ನಿರ್ಮಿಸಿದವರು, ಸಾರ್ವಜನಿಕರಿಗೆ ನಿಯಮಗಳನ್ನು ವಿಧಿಸುತ್ತಿದ್ದುದನ್ನು ಕೆಲವು ಶಾಸನಗಳಿಂದ ತಿಳಿಯಬಹುದು. ಕರುಗುಂದದಲ್ಲಿ ಹೆಗ್ಗಡೆ ಮಾದಿಗೌಡನೆಂಬುವವನು ಮಾದೇಶ್ವರ ದೇವಾಲಯ ಕಟ್ಟಿಸಿ, ಊರ ಮುಂದೆ ಆ ದೇವಾಲಯಕ್ಕೆ ಎದುರು ಕೆರೆಯನ್ನು ನಿರ್ಮಿಸಿ ಆ ಊರೊಳಗಿನ ಒಕ್ಕಲು ಮೂರು ಭಾಗದೊಳಗೆ ಒಂದು ಭಾಗವನ್ನು ಮಾದೇಶ್ವರ ದೇವರಿಗೆ ನೀಡಬೇಕೆಂದೂ ಆ ದೇವರ ಭಾಗದೊಕ್ಕಲು ಸ್ನಾನ ನೈವೇದ್ಯ ನೋಂಪಿಯೇನಾದರೂ ಅಲ್ಲೇ ಮಾಡಬೇಕೆಂದು, ಮಾಡಲೀಯದೆ ಮರ್ಯಾದೆಯನ್ನು ಕೆಡಿಸಿದವರಿಗೆ ಎಚ್ಚರಿಕೆಯನ್ನು ಹೇಳಿ ಧರ್ಮಭಯವನ್ನಿಟ್ಟಿದ್ದಾನೆ.[೧೮]

ಯಡವನ ಹಳ್ಳಿಯ ಕಲಿದೇವರ ತೊತ್ತು ಮಾದಿಗೌವುಡನ ಮಗ ಕೇತಗವುಡನು ಲಿಂಗಪ್ರತಿಷ್ಠೆ ಮಾಡಿ 'ಸಮಸ್ತ ಜನಕಾಶ್ರಯವಾಗಿ ಕೆರೆಯನ್ನು ಕಟ್ಟಿಸುತ್ತಾನೆ. 'ಈ ಕೆಱೆಯಲು ಸತ್ತವರಿಗೆ ನೀರಿಳಿಯಲಾಗದು' ಎಂಬ ನಿಯಮ ವಿಧಿಸುತ್ತಾನೆ.[೧೯] ಅಂದರೆ ಸತ್ತ ಸೂತಕದವರ ಸ್ನಾನಾದಿಗಳಿಗೆ ಆ ನೀರನ್ನು

ಬಳಸುವಂತಿರಲಿಲ್ಲ. ಇಂತಹ ನಿಯಮಗಳು ಅನೌಪಚಾರಿಕ ನಿಯಂತ್ರಣಗಳಾದರೂ ಬಹಳ ಯಶಸ್ವಿಯಾಗಿ ಜಾರಿಗೊಳ್ಳುತ್ತಿದ್ದವು.

ಕೃಷಿ ಭೂಮಿಗಳ ಗಡಿಮೇರೆಗಳು, ವಿಕ್ರಯ, ಪರಿವರ್ತನೆ, ಹೊಸ ಕೆರೆ ಕಾಲುವೆ ನಿರ್ಮಾಣಗಳಿಂದ ನೀರೊತ್ತಾಗಿ ಸಂಭವಿಸಬಹುದಾದ ನಷ್ಟ, ಅನ್ಯಾಯಗಳನ್ನು ನಿಯಂತ್ರಿಸಲು ಅನೇಕ ರೀತಿಯ ನಿಯಮಗಳನ್ನು, ನಿಯಂತ್ರಣಗಳನ್ನು, ಪರಿಹಾರಗಳನ್ನು, ನೀಡಿ ಸಮಾಜದಲ್ಲಿ ಆರೋಗ್ಯಪೂರ್ಣ ಸಹಬಾಳ್ವೆಗೆ ಅವಕಾಶ ಮಾಡಿಕೊಡಲಾಗುತ್ತಿತ್ತು ಎಂಬುದನ್ನು ಹಿಂದಿನ ಅಧ್ಯಾಯದಲ್ಲಿ ಗಮನಿಸಲಾಗಿದೆ. ಇದಲ್ಲದೆ ವರ್ತಕ ವರ್ಗ ಅವರ ವ್ಯಾಪಾರ, ವ್ಯವಹಾರ, ತೆರಿಗೆ ನಿಯಮ ನಿಬಂಧನೆ ನಿಯಂತ್ರಣಗಳನ್ನು ಕುರಿತೂ ಶಾಸನಗಳು ಬೆಳಕು ಚೆಲ್ಲುತ್ತವೆ.

ಒಟ್ಟಿನಲ್ಲಿ ಸಾಮಾಜಿಕ ನಿಯಂತ್ರಣದ ಔಪಚಾರಿಕ ಮತ್ತು ಅನೌಪಚಾರಿಕ ನಿಯೋಗಗಳು ಸಾಮಾಜೀಕರಣ, ಶ್ರೇಣೀಕೃತ ವ್ಯವಸ್ಥೆ, ಆದರ್ಶವಾದಗಳು, ಸ್ಥಾಪಿತಹಿತಾಸಕ್ತಿಗಳ ಸಹಾಯವನ್ನು ಪಡೆದು ಮಾನವನು ಸಮಾಜದ ನಿಯಮಗಳಿಗೆ ಅನುವರ್ತಿಯಾಗಿರುವಂತೆ ಪ್ರೇರೇಪಿಸಿ, ಅಪವರ್ತನೆಯನ್ನು ತಡೆಯುವಲ್ಲಿ ಯಶಸ್ವಿಯಾಗುತ್ತಿದ್ದವು. ಇದರೊಂದಿಗೆ ರಕ್ಷಣಾ ವ್ಯವಸ್ಥೆಯೂ ಸಾಮಾಜಿಕ ಸುಭದ್ರತೆಗೆ ಅತಿ ಅವಶ್ಯಕವಾಗಿದ್ದು, ಅರಸರು ಅದರ ಬಗೆಗೆ ಹೆಚ್ಚಿನ ಕಾಳಜಿಯನ್ನು ವಹಿಸಿರುವುದನ್ನು ಶಾಸನಗಳು ಹೇಳುತ್ತವೆ.

### ೫.೨. ದುಷ್ಟ ಶಿಕ್ಷಣ, ಶಿಷ್ಟ ರಕ್ಷಣಾ ನೀತಿ

ವರ್ಣವ್ಯವಸ್ಥೆಯ ಮೂಲಭೂತ ತಳಹದಿಯ ಮೇಲೆ ನಿರ್ಮಾಣಗೊಂಡಿರುವ ಭಾರತೀಯ ಸಮಾಜವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ಸಮಾಜವನ್ನು ಪ್ರತ್ಯೇಕವಾಗಿ ವಿಂಗಡಿಸಿ ಭಿನ್ನ ಭಿನ್ನವಾದ ಕರ್ತವ್ಯಗಳನ್ನು ಪಾಲಿಸುವಂತೆ ನಿಯಮಿಸಿತ್ತು. ಇದು ಅಂದಿನ ಅವಶ್ಯಕತೆಗೆ ತಕ್ಕಂತೆ ರೂಪಿತವಾಗಿದ್ದ ಸಾಮಾಜಿಕ ವ್ಯವಸ್ಥೆಯಾಗಿತ್ತು. ಪ್ರತಿಯೊಂದು ಗುಂಪಿಗೂ ತನ್ನದೇ ಆದ ಮೌಲ್ಯ, ಸಂಪ್ರದಾಯ ಜವಾಬ್ದಾರಿ ನೀತಿ ನಡಾವಳಿಗಳೂ ವಿಧಿಸಲ್ಪಟ್ಟಿದ್ದವು. ಇದರಲ್ಲಿ ಸಮಾಜದ ರಕ್ಷಣೆಯ ಹಾಗೂ ಆಡಳಿತ ಪಾಲನೆಯ ಜವಾಬ್ದಾರಿ ಕ್ಷತ್ರಿಯರದಾಗಿದಾಗಿತ್ತು. ಅವರು ಅದಕ್ಕೆ ಅಗತ್ಯವಾದ ಹೋರಾಟದ ಮನಸ್ಥಿತಿಯನ್ನು, ಪ್ರಭುತ್ವದ ಘನತೆ ಹಮ್ಮುಗಳನ್ನು ಬೆಳೆಸಿಕೊಂಡರು. ಕ್ಷತ್ರಿಯ ಧರ್ಮವೆಂದರೆ ದುಷ್ಟ ಶಿಕ್ಷಣ ಶಿಷ್ಟ ರಕ್ಷಣೆ ಎಂದಾಯಿತು. ಸಾಮ್ರಾಜ್ಯ ನಿರ್ಮಾಣ ಹಾಗೂ ಅದರ ರಕ್ಷಣಾ ವ್ಯವಸ್ಥೆಯ ಹೊಣೆಹೊತ್ತ ಈ ವರ್ಗ ಯುದ್ಧವನ್ನು ರಾಜ್ಯಾಡಳಿತದ ಒಂದು ಅವಿಭಾಜ್ಯ ಅಂಗವಾಗಿ ಮಾಡಿಕೊಂಡಿತು.

## ೫.೨.೧. ಸೈನ್ಯವ್ಯವಸ್ಥೆ-ಯುದ್ಧಗಳು

ಸ್ಥಿರವಾದ ಆಳ್ವಿಕೆಗೆ ರಾಜನಿಗೆ ಅಪಾರವಾದ ಸೈನ್ಯಬಲದ ಅಗತ್ಯ ಉಂಟಾಯಿತು. ದಂಡನಾಯಕರು, ಪಡೆವಳರು, ನಿಷ್ಠಾವಂತ ಸೈನಿಕರು, ಕರಿತುರಗ ಸಾಹಣಿಗಳು, ಸುಸಜ್ಜಿತವಾದ ಸೈನ್ಯಪಡೆಯ ಮುಖ್ಯ ಅಂಗವಾಗಿದ್ದರು. ಇಂತಹ ಸೈನ್ಯವೊಂದನ್ನು ರೂಪಿಸುವುದು ಸುಲಭದ ಕೆಲಸವಲ್ಲ. ಅದಕ್ಕೆ ತಕ್ಕ ಪರಿಶ್ರಮ ಅರ್ಹತೆ ಉಳ್ಳವರನ್ನು ಆರಿಸಿ ಅವರನ್ನು ದೈಹಿಕವಾಗಿ ಮಾನಸಿಕವಾಗಿ ಸಿದ್ಧಪಡಿಸಬೇಕಾಗುತ್ತದೆ. ಸಾಮಾನ್ಯನೊಬ್ಬನನ್ನು ಯುದ್ಧ ಪ್ರಿಯನನ್ನಾಗಿ, ಹೋರಾಟಗಾರನನ್ನಾಗಿ ಸಿದ್ಧಗೊಳಿಸುವ ಕೆಲಸ ವ್ಯವಸ್ಥಿತವಾಗಿ ನಡೆಯಬೇಕಾಗುತ್ತದೆ.

ಪ್ರಾಚೀನ ಭಾರತೀಯರಿಗೆ ಯುದ್ಧವೆಂಬುದು ಪವಿತ್ರ ಕಾರ್ಯವಾಗಿತ್ತು. ಯುದ್ಧಮೂಲವಾದ ಯಜ್ಞ ಯಾಗಗಳು ತಪಸ್ಸುಗಳು ಸ್ವರ್ಗ ಪ್ರಾಪ್ತಿಗೆ ಸಾಧನವೆಂದು ನಂಬಲಾಗಿತ್ತು.[೨೦] ಇತಿಹಾಸ ಕಾಲದಲ್ಲಿ ತಪಸ್ಸು, ಯಜ್ಞಗಳು ಪ್ರಾಮುಖ್ಯತೆ ಕಳೆದುಕೊಂಡ ಮೇಲೆ ಸಾಮ್ರಾಜ್ಯಶಾಹಿಯು ಪುರೋಹಿತ ಶಾಹಿಯ ಸಹಾಯದಿಂದ ಯುದ್ಧನೀತಿಗೆ ಪೂರಕವಾದ ವೀರ ಸಿದ್ಧಾಂತವನ್ನು ರೂಪಿಸಿತು. ವೀರಮರಣ ವೀರಸ್ವರ್ಗ ಗಳನ್ನು ಪುಣ್ಯ ಪ್ರಾಪ್ತಿಗಳ ಪರಿಕಲ್ಪನೆಗಳನ್ನು, ನಂಬಿಕೆಗಳನ್ನು ಬಲವಾಗಿ ಬಿತ್ತಿ ವೀರಪರಂಪರೆಯೊಂದನ್ನು ಸೃಷ್ಟಿಸಿತು. ಯುದ್ಧಗಳಲ್ಲಿ ಭಾಗವಹಿಸಿ ಜಯವನ್ನು ತರುವುದು ಇಲ್ಲವೇ ವೀರಸ್ವರ್ಗವನ್ನು ಸೇರಿ ಸುಖಿಸುವುದು ವೀರನ ಮುಂದಿನ ಪ್ರಬಲವಾದ ಆಕರ್ಷಣೆಯಾಯಿತು. ಲೌಕಿಕ ಬದುಕಿನಲ್ಲಿ ವೀರನಿಗೆ, ಅವನ ಕುಟುಂಬಕ್ಕೆ ದೊರಕುತ್ತಿದ್ದ ಸೌಲಭ್ಯಗಳು, ಸ್ಥಾನಮಾನ, ಕೀರ್ತಿಯ ಆಕರ್ಷಣೆ ಒಂದು ಕಡೆಯಾದರೆ, ಕ್ಷಣ ವಿಧ್ವಂಸಿಯಾದ ಈ ದೇಹಕ್ಕೆ ಆಸೆ ಬೀಳದೆ ಶಾಶ್ವತ ಸುಖದಲ್ಲಿ ನಿಲ್ಲುವ ಅಲೌಕಿಕ ಸೆಳೆತ ಮತ್ತೊಂದೆಡೆ ಹಾಗೂ ವೀರನಾದವನು ಯುದ್ಧದಲ್ಲಿ ಸಾಯುವುದರಲ್ಲಿ ಸಾರ್ಥಕತೆಯಿದೆ ಎಂಬ ಸಂದೇಶವನ್ನು ಸಾರುವ ವೀರಗಾಥೆಗಳು, ವೀರ ಕಾವ್ಯಗಳು, ಸುಭಾಷಿತಗಳು ಹೆಚ್ಚಾಗಿ ಸೃಷ್ಟಿಯಾಗಿ ಬಳಕೆಗೊಳ್ಳತೊಡಗಿದವು.[೨೧] ಧಾರ್ಮಿಕ ಗ್ರಂಥಗಳು ಪುಣ್ಯಾರ್ಜನೆಯ, ತ್ಯಾಗ, ಅಲೌಕಿಕ ಆನಂದದ ಭ್ರಮೆಯನ್ನು ಸೃಷ್ಟಿಸಿದರೆ, ವೀರಕಾವ್ಯಗಳು ವೀರಶಾಸನಗಳು ಹೊಸರೀತಿಯ ಬದುಕಿನ ವೀರಮೌಲ್ಯಗಳನ್ನು ಎತ್ತಿಹಿಡಿದವು. ಇಂತಹ ಸಾಮ್ರಾಜ್ಯದಾಹಿಗಳು ನಿರ್ಮಿಸಿಕೊಟ್ಟ ಮೌಲ್ಯವನ್ನು ಒಪ್ಪಿದ ಸಾಮಾನ್ಯರು ಅಸಾಮಾನ್ಯರಾಗುವ ಹಂಬಲಹೊತ್ತು ಬದುಕಿನ ನಾನಾ ಒತ್ತಡಗಳ ಮಧ್ಯೆ ಮುನ್ನಡೆದರು ಎಂಬುದಕ್ಕೆ ಸಹಸ್ರ ಸಂಖ್ಯೆಯಲ್ಲಿ ದೊರೆತಿರುವ ವೀರಗಲ್ಲುಗಳೇ ಸಾಕ್ಷಿಯಾಗಿವೆ. ಜಾಜೂರು ಶಾಸನವೊಂದು[೨೨] ಅರಸರುಗಳ ಇಂತಹ ಹುನ್ನಾರವನ್ನು 'ಅರಸುಗಳೆಂಬುವರ್ ಬವರದೊಳ್ ಸೆರಗಿಂ ಪೆರಗಿರ್ಪ ಬುದ್ಧಿಯಿಂ ಅರನೆಲೆಯೆಂದು ಮಾಡಿ ಪೆರರಂ ಪೆರರಿನ್ದಮೆ ಗೆಲ್ವರ್" ಎಂದು ವಿಡಂಬಿಸಿದೆ. ಈ 'ಅರನೆಲೆಗಳು' ಸದಾ ಸುರಕ್ಷಿತವಾಗಿರುತ್ತಿದ್ದವು. ಸೈನ್ಯದ ವ್ಯೂಹ ರಚನೆಯಲ್ಲಿ ಅರಸನನ್ನು ಕಾಪಾಡುವುದಕ್ಕಾಗಿ ವಿಶೇಷ ವ್ಯವಸ್ಥೆ ಮಾಡಲಾಗುತ್ತಿತ್ತು. ಅನೇಕ ಅಂಗರಕ್ಷಕರನ್ನು, ಮೇಲಾಳುಗಳನ್ನು, ಬಂಟರನ್ನು

ಬಲುಮನುಷ್ಯರನ್ನು ಮುಂದಿಟ್ಟುಕೊಂಡು ಅವರ ಕಾಪಿನಲ್ಲಿ ತಾವಿದ್ದು ನೂರಾರು ಸೈನಿಕರ ರಕ್ತದೋಕುಳಿಯಲ್ಲಿ ಪಟ್ಟವೇರಿ ಮೆರೆಯುತ್ತಿದ್ದ ದೊರೆಗಳನ್ನು ವಿಡಂಬಿಸಿವೆ. ಹಾಗಲ್ಲದೇ ತಾವೇ ಮುಂದೆ ನಿಂತು ಹೋರಾಡುತ್ತಿದ್ದ ಅರಸರನ್ನು ಮುಕ್ತಕಂಠದಿಂದ ಶಾಸನಗಳು ಹೊಗಳಿವೆ.

**೫.೨.೧.೧. ಗಜ ಕಾಳಗ-ಗಜ ಸಾಹಣಿಗಳು**

ಪ್ರಾಚೀನ ಕಾಲದಲ್ಲಿ ಯುದ್ಧಗಳಲ್ಲಿನ ಚತುರಂಗ ಬಲದಲ್ಲಿ ಆನೆಯ ಸೈನ್ಯವು ಬಹಳ ಪ್ರಮುಖವಾಗಿತ್ತು. ಆನೆಗಳ ತವರಾದ ಕರ್ನಾಟಕದ ಸೈನ್ಯದಲ್ಲಿ ಬಲವರ್ಧನೆಗೆ ಆನೆಗಳನ್ನು ಬಳಸುತ್ತಿದ್ದುದಲ್ಲದೆ, ತಮ್ಮ ವೈಭವಕ್ಕೂ ಬಳಸಿಕೊಂಡಿರುವುದನ್ನು ಕಾವ್ಯಗಳಿಂದ ಶಾಸನಗಳಿಂದ ತಿಳಿಯಬಹುದು. ಆನೆ ಬೇಟೆ ಅವರ ಬಿಡುವಿನ ಮನರಂಜನೆಯಾಗಿತ್ತು. ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಗಂಗನೊಳಂಬರ, ಹೊಯ್ಸಳ-ಪಾಂಡ್ಯ-ಸೇವುಣರ ಯುದ್ಧಗಳನ್ನು ಕುರಿತ ಶಾಸನಗಳಿದ್ದು ಅವುಗಳ ವರ್ಣನೆಗಳಲ್ಲಿ ಆ ಕಾಲದ ವೀರಗಲ್ಲು ಶಿಲ್ಪಗಳಲ್ಲಿ ಆನೆ ಕಾಳಗವನ್ನು ಚಿತ್ರಿಸಲಾಗಿದೆ.

ಹೊಯ್ಸಳರ ಆಳ್ವಿಕೆಯಲ್ಲಿ ಅರಸೀಕೆರೆ ತಾಲ್ಲೂಕಿನ ಕೋಳಿಗುಂದ ಮಾವುತನಹಳ್ಳಿ, ಮುದುಡಿಗಳಲ್ಲಿ ಆನೆಗಳನ್ನು ಪಳಗಿಸಿ ಯುದ್ಧಕ್ಕೆ ಸಿದ್ಧಗೊಳಿಸುತ್ತಿದ್ದರು. 'ಗಜಬೇಂಟೆಕಾರ', 'ಗಜವೆಡಂಗ', 'ಗಜೇಂದ್ರ ಯೂಥವಿದಳ' ಎಂಬ ಬಿರುದುಗಳನ್ನುಳ್ಳ ಅರಸರು, ವೀರರು ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಉಂಡಿಗನಾಳಿನ ರಾಯಚೆಟ್ಟಿ ಎಂಬ ವೀರನನ್ನು 'ಭದ್ರಗಜ ಕರದೊಳು ರಾಯಚೆಟ್ಟಿ ಅವಗಡ ಭೀಮ'ನೆಂದು ಒಂದು ಶಾಸನ[೨೩] ಹೊಗಳಿದೆ. 'ಅನ್ಯಬೆರ್ೞರಗಾಗಲೊಂದೆ ಸಿಂಧುರದೊಳೆ'' ಬಲ್ಲಾಳನು ಸೇವುಣರನ್ನು ಗೆದ್ದನೆಂದು ಜಾಜೂರಿನ ಶಾಸನವೊಂದು[೨೪] ಹೊಗಳಿದೆ. ಅದೇ ಶಾಸನವು ಸೇವುಣರ ಸೈನ್ಯದಲ್ಲಿ ಏಳೆಂಟುನೂರು ಗಜಗಳ ಸೈನ್ಯವಿದ್ದಿತೆಂದು ಹೇಳಿದೆ. ಯುದ್ಧದಲ್ಲಿ ಎದುರಾದ ವೈರಿಗಳ ಮದದಾನೆಗಳ ಕೊಂಬನ್ನು ಉಡಿದು ದಂತದಿಂದ ಬಳೆಯನ್ನು ಮಾಡಿ ವಿಜಯಲಕ್ಷ್ಮಿಗೆ ತೊಡಿಸುತ್ತಿದ್ದನೆಂದು ನರಸಿಂಹನ ಪರಾಕ್ರಮವನ್ನು ಅನೇಕ ಶಾಸನಗಳು ಹೊಗಳಿವೆ.[೨೫] ಇದರಿಂದ ವೈರಿ ಮದಗಜಗಳನ್ನು ಕೊಂದು ಅವುಗಳ ದಂತವನ್ನು ಒಯ್ಯುವುದು ಪರಾಕ್ರಮದ ಸಂಕೇತವಾಗಿದ್ದಂತೆ ತೋರುತ್ತದೆ. ನೇರ್ಲಿಗೆ ಶಾಸನ[೨೬] ವಸಯ್ಯನೆಂಬ ವೀರ 'ಬಿಸುಗೆಯೆ ಕಳನಾಗಿ ಸುರಿಗಿೞಿದು' ಸತ್ತದ್ದನ್ನು ಹೇಳುತ್ತ, ಅವನು ವೀರಾವೇಶದಿಂದ ಹೋರಾಡಿ ಗಜಕಾಳಗದಲ್ಲಿ ಪ್ರಸಿದ್ಧರಾದ ನೊಳಂಬರ ಕಟ್ಟಾನೆ ಮಲ್ಲನನ್ನು, ಕಡುಗಟ್ಟಿಗನಾದ ಉತ್ತಿಗನನ್ನು, ಚಟ್ಟಿಗನನ್ನು, ತಟ್ಟುಳ್ತಿೞಿ'ದನೆಂದು ಹೊಗಳಿದೆ. ಹೊಯ್ಸಳ ರಾಮನಾಥ ಮತ್ತು ನರಸಿಂಹರ ನಡುವೆ ನಡೆದ ಘೋರ ಕಾಳಗವನ್ನು ಅನೇಕ ಶಾಸನಗಳು 'ಆನೆಕಾಳಗ'ವೆಂದೇ ಕರೆದಿವೆ.[೨೭] ಬಹುಶಃ ಕಣ್ಣಾನೂರಿನಲ್ಲಿದ್ದ ರಾಮನಾಥನ ಸೈನ್ಯದಲ್ಲಿ ಹೆಚ್ಚಾಗಿ ಆನೆಗಳಿದ್ದುದರಿಂದಲೇ ಈ ಕಾಳಗದಲ್ಲಿ ಸತ್ತವೀರರ ವೀರಗಲ್ಲುಗಳು ಈ ಯುದ್ಧವನ್ನು ಆನೆಕಾಳಗವೆಂದು ಕರೆಯಲು ಕಾರಣ.

ಆನೆ ಕಾಲಬಾಯಲಿ ಬಿದ್ದು' ಎಂಬ ಪ್ರಯೋಗ[೭೮] ಯುದ್ಧಗಳಲ್ಲಿ ಆನೆಗಳು ಎಷ್ಟು ಭೀಕರವಾಗಿ ಧ್ವಂಸಕಾರಿಗಳಾಗಿರುತ್ತಿದ್ದ ವೆಂಬುದನ್ನು ಮನ ಮುಟ್ಟಿಸುತ್ತದೆ. ಅವುಗಳು ವೈರಿ ಬಲದ ಮೇಲೆ ನುಗ್ಗಿದಾಗ ಆಗುತ್ತಿದ್ದ ಅನಾಹುತವನ್ನು 'ಛಟಛಟಛಳ್ಪಟಳ್ಪಟಯೆನಲ್ಕು ಱಿದತ್ತಿದಿರಾಂತ ಬೀರರಂ' ಎಂದು ಸಶಬ್ಧವಾಗಿ ಶಾಸನ ಕವಿ ವರ್ಣಿಸಿದ್ದಾನೆ.[೭೯]

ಅರಸನ ಆನೆಯ ಕಾಲ್ಗಾಪಿಗೆ ವಿಶೇಷ ವೀರಭಟರ ಪಡೆಯನ್ನು ನೇಮಿಸುತ್ತಿದ್ದುದನ್ನು ಒಂದು ಶಾಸನ[೮೦] ಹೇಳುತ್ತದೆ. ಆನೆಯ ಕುಂಭಸ್ಥಳಕ್ಕೆ ಶತ್ರುಗಳು ಬಿಟ್ಟ ಬಾಣಗಳು ನಾಟದಂತೆ ರಕ್ಷಾಕವಚವನ್ನು ಹಾಕುತ್ತಿದ್ದರೆಂಬುದು ನೇರ್ಲಿಗೆ ಮತ್ತು ಅರಕೆರೆ ವೀರಗಲ್ಲಿನ ಶಿಲ್ಪದಿಂದ ತಿಳಿಯುತ್ತದೆ. ಆನೆಯು ಆನೆಯೊಡನೆ 'ಅಂತು' ಹೋರಾಡುವುದರ ಜೊತೆಗೆ ಇತರ ಕಾಲಾಳುಗಳೂ ಕುದುರೆಯಾಳುಗಳೂ ಆನೆಗಳನ್ನು ಎದುರಿಸಿ ಹೋರಾಡುವುದನ್ನು ಈ ಶಿಲ್ಪಗಳಿಂದ ತಿಳಿಯಬಹುದು. ಹಿರಿಯ ಹೆಮ್ಮೆಯ ಮಾವಂತನೆಂಬ ಗಜವೀರನು ಮೊದಲು ಆನೆಗಳ ಮುಖಭಾಗ ಕುಂಭಸ್ಥಳಗಳನ್ನು ಆಕ್ರಮಿಸಿ ನಂತರ ಅದರ ಮೇಲೇರಿ 'ಬಿರುದ ವೀರರನ್ನು' ಮುರಿಯುತ್ತಿದ್ದನಂತೆ[೮೧] ಈ ರೀತಿ ಆನೆಯ ಬಿಸುಗೆಯನ್ನೇರಿ ವೈರಿಗಳನ್ನು ಕೊಲ್ಲುತ್ತಿದ್ದುದನ್ನೇ 'ಬಿಸುಗೆಯೆ ಕಳನಾಗಿ' ಹೋರಾಡುವುದೆಂದು ನೇರ್ಲಿಗೆ ಶಾಸನ ಹೇಳಿರುವುದು. ವೈರಿ ಸಿಂಧುರ ಘಟೆಗಳ ಮೊಗವನ್ನು ಉರವಣಿಸಿ ಅಡರಿ ಎರಿದು, ಔಂಕಿ ಎಂಬ ಪದ ಪ್ರಯೋಗಗಳು ಆನೆ ಕಾಳಗವನ್ನು ಕಣ್ಣಿಗೆ ಕಟ್ಟಿಸುತ್ತವೆ.

ಇಷ್ಟೊಂದು ಪ್ರಾಮುಖ್ಯತೆಯನ್ನು ಆನೆಗಳು ಪಡೆದಿದ್ದು ಅವುಗಳ ಸಂಖ್ಯೆ ಹೆಚ್ಚಾದಷ್ಟು ಅರಸ ಬಲಿಷ್ಠನೆನಿಸುತ್ತಿದ್ದುದನ್ನು ಗಮನಿಸಿದರೆ, ಕಾಡಾನೆಗಳನ್ನು ಹಿಡಿದು ಅವುಗಳನ್ನು ಪಳಗಿಸಿ ಯುದ್ಧ ತರಬೇತಿಯನ್ನು ನೀಡಲಾಗುತ್ತಿತ್ತೆಂಬುದರಲ್ಲಿ ಅನುಮಾನವೇ ಇಲ್ಲ. ಇಂತಹ ಗುರುತರವಾದ ಕಾರ್ಯಕ್ಕಾಗಿ ಆ ಕೆಲಸದಲ್ಲಿ ಪರಿಣತರಾದವರನ್ನು ಗುರುತಿಸಿ ಅವರಿಗೆ ಸಂಬಳ, ಉಂಬಳಿಗಳನ್ನು ಬಿರುದುಗಳನ್ನು ಮೈಜೀವಿತಕ್ಕೆ ಗ್ರಾಮಗಳನ್ನು ಕೊಡುಗೆಗಳಾಗಿ ನೀಡುತ್ತಿದ್ದುದನ್ನು ಶಾಸನಗಳು ದಾಖಲಿಸಿವೆ. ವಂಶ ಪಾರಂಪರ್ಯವಾಗಿ ಇಂತಹ ಕುಟುಂಬಗಳು ಅರಸರಿಗೆ ನಿಷ್ಠರಾಗಿ ನಡೆದುಕೊಂಡು ಬಂದಿರುವುದು ಕಂಡುಬರುತ್ತದೆ. ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ಅರಸೀಕೆರೆ ತಾಲ್ಲೂಕಿನ ಕೋಳಿಗುಂದ, ಮಾವುತನಹಳ್ಳಿ ಮುದುಡಿಗಳಲ್ಲಿ ಆನೆಗಳನ್ನು ಪಳಗಿಸಿ ಯುದ್ಧ ಶಿಕ್ಷಣವನ್ನು ನೀಡುತ್ತಿದ್ದ ಮಾವಂತರ ಕುಲಗಳು ಇದ್ದುದನ್ನು ಅಲ್ಲಿನ ಶಾಸನಗಳು ಹೇಳುತ್ತವೆ. ಈ ಮಾವಟಿಗರು ತಮ್ಮ ವೃತ್ತಿಯಲ್ಲಿ ನಿಪುಣರಾಗಿದ್ದರೆ ಮಾತ್ರ ಸಾಲದು, ಅವರು ಶೂರರಾಗಿರಬೇಕಾಗಿತ್ತು, ರಣರಂಗದಲ್ಲಿ ಹೋರಾಟಕ್ಕೆ ಹೊರಟ ಅರಸರ, ದಂಡನಾಯಕರ ಆನೆಗಳನ್ನು ಆಯವರಿತು ನಡೆಸುವ, ಹುರಿದುಂಬಿಸುವ, ಮುನ್ನುಗ್ಗಿಸುವ ಚಾಕಚಕ್ಯತೆಯೊಂದಿಗೆ ವೀರರನ್ನು ಕಾಪಾಡುವ ಹೊಣೆಗಾರಿಕೆಯೂ ಅವನಿಗಿತ್ತು. ವೀರರ ಆಜ್ಞೆ, ಅಪೇಕ್ಷೆಗಳನ್ನು ಸೂಕ್ಷ್ಮವಾಗಿ ಅರಿತು ಅದನ್ನು ಕಾರ್ಯಗತಗೊಳಿಸಲು ಆನೆಯನ್ನು ಪ್ರೇರೇಪಿಸಬೇಕಾಗಿತ್ತು.

ಎಷ್ಟೇ ಬಲಿಷ್ಠವಾದ ಮದಗಜವಾದರೂ ಮಾವತಿಗನ ಸನ್ನೆಯನ್ನರಿತು ನಡೆಯುವಂತೆ ತರಬೇತಿ ನೀಡಬೇಕಾಗಿತ್ತು. ಕೋಳಿಗುಂದ ಮತ್ತು ನೇರ್ಲಿಗೆಗಳ ಹತ್ತಿರ ಆನೆ ಸತ್ತ ಬೋರೆ ಎಂಬ ಸ್ಥಳ ಈಗಲೂ ಇದ್ದು, ಅಲ್ಲಿ ಮಾವತಿಗರು ಆನೆಗಳಿಗೆ ಹೋರಾಡಲು ಬಿಟ್ಟು ಯುದ್ಧ ಶಿಕ್ಷಣ ನೀಡುತ್ತಿದ್ದರೆಂದು ತಿಳಿದುಬರುತ್ತದೆ.[೩೨] ಇಭಶಿಕ್ಷಕರಿಂದ ಯುದ್ಧ ಶಿಕ್ಷಣವನ್ನು ಪಡೆಯುತ್ತಿದ್ದ ಆನೆಗಳ ಬಗೆಗೆ 'ನೆರೆದಿಭ ಶಿಕ್ಷಕರ್ ಕಲಿಸಲೇರ್ವಸನಂ ಕಲುತಿರ್ಪ ಗಂಧಸಿಂಧುರಚಯ' ಎಂದು ಕವಿ ರುದ್ರಭಟ್ಟ ಹೇಳಿದ್ದಾನೆ.[೩೩] ಕೋಳಿಗುಂದದ ದೊಡ್ಡ ಕೆರೆಯ ಒಂದು ಭಾಗವನ್ನು 'ಆನೆಕಡ' ಎಂದು ಕರೆಯುತ್ತಾರೆ ಬಹುಶಃ ಅದು ಆನೆಯ ಕಡಹು ಇರಬೇಕು. ಅಲ್ಲಿ ಆನೆಗಳನ್ನು ಮೀಯಲು ಬಿಡುತ್ತಿದ್ದಿರಬಹುದು.

ಕೋಳಿಗುಂದದ ಸಮೀಪದಲ್ಲೇ ಇರುವ ದೇಶಾಣಿಯ ಒಂದು ಶಾಸನ ಗಜವೈದ್ಯ ಜೆಯ್ತುವನ್ನು ಉಲ್ಲೇಖ ಮಾಡುತ್ತದೆ.[೩೪] ಇವನನ್ನು ವೈದ್ಯಾಭರಣನೆಂದೂ, ಗಜವೈದ್ಯ ವಿದ್ಯಾಪ್ರಸಿದ್ಧನೆಂದು ಕರೆದಿದೆ. ಇಂತಹವರನ್ನು ಅರಸರು ನೇಮಿಸಿಕೊಂಡು ಕಾಳಗಗಳಲ್ಲಿ ಆನೆಗಳಿಗೆ ಆಗುವ ಗಾಯಗಳ ಚಿಕಿತ್ಸೆಯನ್ನು ಮಾಡಿ ಅವುಗಳ ಆರೋಗ್ಯವನ್ನು ಕಾಪಾಡಲು ಎಚ್ಚರವಹಿಸುತ್ತಿದ್ದರೆಂದು ಊಹಿಸಬಹುದು. ಮುದುಡಿಯ ಶಾಸನವೊಂದರಲ್ಲಿ[೩೫] 'ಪಟ್ಟದ ಇಭ ದಾರುಕ'ರು ಎಂದು ಒಂದು ಮಾವತಿಗರ ಕುಲವನ್ನು ಕರೆದಿರುವುದರಿಂದ ಬಹುಶಃ ಈ ವಂಶದವರು ಕೇವಲ ಪಟ್ಟದ ಆನೆಗಳನ್ನು ನೋಡಿಕೊಳ್ಳುತ್ತಿದ್ದವರೆಂದು ಊಹಿಸಬಹುದು. ಯುದ್ಧದ ಆನೆಗಳನ್ನು, ಪಟ್ಟದಾನೆಗಳನ್ನು ಪಳಗಿಸುತ್ತಿದ್ದವರು ಮಾವಟಿಗರೇ. ಆದರೆ ಈ ಎರಡೂ ಆನೆಗಳ ಗುಂಪಿಗೆ ಬೇರೆ ಬೇರೆ ತರಬೇತಿ ನೀಡಲಾಗುತ್ತಿತ್ತೆ? ಪಟ್ಟದ ಆನೆಗಳನ್ನು ಯುದ್ಧಕ್ಕೆ ಒಯ್ಯುತ್ತಿದ್ದರೇ? ಪಟ್ಟದ ಆನೆಗಳು ಉತ್ಸವಾದಿಗಳಲ್ಲಿ ಭಾಗವಹಿಸುತ್ತಿದ್ದು, ಜನಗಳ ಮಧ್ಯೆ ಸದಾ ಶಾಂತವಾಗಿರಬೇಕಾದುದರಿಂದ ಇವುಗಳಿಗೆ ಬೇರೆ ರೀತಿಯ ತರಬೇತಿ ನೀಡಲಾಗುತ್ತಿತ್ತೆ? ಎಂಬುದರ ಬಗೆಗೆ ಶಾಸನಗಳಿಂದ ಏನೂ ತಿಳಿದುಬರುವುದಿಲ್ಲ. ರಾಣಿವಾಸದವರು ಹೆಣ್ಣಾನೆಗಳು ಹೊತ್ತ ಚಿನ್ನದ ಅಂಬಾರಿಯಲ್ಲಿ ಪ್ರಯಾಣಿಸುತ್ತಿದ್ದುದನ್ನು ಆನೆಗಳು ನಗರ ಪಟ್ಟಣ ಬೀದಿಗಳಲ್ಲಿ ಸಂಚರಿಸುವಾಗ ಆರೆಕಾರರು, ಕಾಲ್ಗಾಪಿನವರು ವಿಶೇಷವಾಗಿ ಎಚ್ಚರವಹಿಸುತ್ತಿದ್ದುದನ್ನು ರುದ್ರಭಟ್ಟ ಕವಿ ಹೇಳಿದ್ದಾನೆ.[೩೬]

### ೫.೨.೧.೨. ತುರಗ ಕಾಳಗ-ತುರಗ ಸಾಹಣಿಗಳು

ಗಜ ಸೇನೆಯಂತೆ ಅಶ್ವದಳವೂ ಸೈನ್ಯದ ಪ್ರಮುಖ ಭಾಗವಾಗಿತ್ತು. ಪ್ರಸ್ತುತ ಅಧ್ಯಯನದ ಪ್ರದೇಶದ ಶಾಸನಗಳು ವಿಶೇಷವಾಗಿ ಕೆಲವು ಅಶ್ವಾರೋಹಿ ವೀರರನ್ನು ಬಣ್ಣಿಸಿವೆ. ಅಲ್ಲದೆ ಇಲ್ಲಿನ ವೀರಗಲ್ಲುಗಳಲ್ಲಿ ಕುದುರೆ ಕಾಳಗದ ಶಿಲ್ಪಗಳು ಹೆಚ್ಚಾಗಿ ಕಂಡುಬರುತ್ತವೆ. ಜಾತಿ ಕುದುರೆಗಳನ್ನು ಬಹಿತ್ರದಿಂದ ತಂದು ಹೊಯ್ಸಳ ಅರಸರಿಗೆ ಒದಗಿಸುತ್ತಿದ್ದ ವ್ಯಾಪಾರಿಯನ್ನು ಬಾಣಾವರದ ಶಾಸನ[೩೭] ಉಲ್ಲೇಖಿಸುತ್ತದೆ. ಹೊರಗಿನಿಂದ ತರಿಸಿದ ಕುದುರೆಗಳನ್ನು ಪಳಗಿಸಿ ಯುದ್ಧ ಶಿಕ್ಷಣವನ್ನು ಅವುಗಳಿಗೆ

ನೀಡುವುದರೊಂದಿಗೆ ಯೋಧರಿಗೆ ಅಶ್ವಾರೋಹಣದ ಕಲೆಯನ್ನು ಕಲಿಸಿಕೊಡಲಾಗುತ್ತಿತ್ತು. 'ವಾಜಿ ಸಂಕುಳಮನಂತೊಲ್ದಳ್ತಿಯಿಂ ತಿರ್ದುವ' ವಿದ್ಯೆಯನ್ನು ಕಲಿಸುತ್ತಿದ್ದುದನ್ನು ರುದ್ರಭಟ್ಟ ಹೇಳುತ್ತಾನೆ.[೩೮] ಕುದುರೆಗಳನ್ನು ಒಲಿಸಿಕೊಂಡು ಸವಾರಿ ಮಾಡುವುದೂ ಒಂದು ಕಲೆಯೇ ಆಗಿತ್ತು. ಪೆಡಸುಳ್ಳ ಕುದುರೆಗಳನ್ನು ಬಗ್ಗಿಸಿ ಆರೂಢರಾಗುವ ವೀರರು ವಿಶೇಷ ಮೆಚ್ಚುಗೆಗೆ ಪಾತ್ರರಾಗುತ್ತಿದ್ದರು. ಅಂಥವರನ್ನು ಶಾಸನಗಳು 'ಅತಿ ವಿಷಮಹಯಾರೂಢ ಪ್ರೌಢ ರೇಖಾರೇವಂತ'ರೆಂದು ಕರೆದಿವೆ.[೩೯] ವಿಷ್ಣುವರ್ಧನನ ರಾಣಿಯಾದ ಬೊಮ್ಮಲದೇವಿಯ ನೇತೃತ್ವದಲ್ಲಿ ಕುದುರೆ ಸವಾರಿಯ ಶಿಕ್ಷಣವನ್ನು ನೀಡುವ ಶಾಲೆಯೊಂದನ್ನು ಸ್ಥಾಪಿಸಲಾಗಿತ್ತು. ಇಲ್ಲಿ 'ಅನನ್ತಪಾಲ ಸಾಹಣಿ' ಎಂಬುವನು ಉಳಿದ ಯೋಧರಿಗೆ ತರಬೇತಿಯನ್ನು ಕೊಡುವ ಮುಖ್ಯಸ್ಥನಾಗಿದ್ದನು.[೪೦] ಸಾತಂಗೆರೆಯ ಒಂದು ಶಾಸನ ಅಶ್ವವಿದ್ಯೆಯಲ್ಲಿ ಪ್ರಸಿದ್ಧರಾದ ಯೋಧರ ವಂಶವೊಂದನ್ನು ಉಲ್ಲೇಖಿಸಿದೆ.[೪೧] ಹೊಯ್ಸಳ ಒಂದನೇ ನರಸಿಂಹನ ರಾಣಿ ವಿಮಲದೇವಿಯರ ಪಟ್ಟ ಸಾಹಣದ ಅನನ್ತಪಾಳ ಸಾಹಣಿಯನ್ನು ಸಾವಿತ್ರ ಕುಳತಿಳಕ, ಗಣಪಾಳ, ತುರೆಯ ರೇವನ್ತ, ಹಯವಚ್ಚರಾಜ, ಚಾಪವಿದ್ಯಾ ಪ್ರಚಂಡನೆಂದು ಬಣ್ಣಿಸಿದೆ. 'ಶಾಲಿಹೋತ್ರ'ವು ಅಶ್ವಶಾಸ್ತ್ರವಾಗಿದ್ದು, ಪ್ರಾಚೀನ ಕರ್ನಾಟಕದ ವಿದ್ಯಾಭ್ಯಾಸದ ಒಂದು ಅಂಗವಾಗಿತ್ತು.[೪೨] ಈ ಅನಂತಪಾಳನ ವಂಶಸ್ಥರು ಅಶ್ವಶಾಸ್ತ್ರ ಪ್ರವೀಣರೂ, ಅಶ್ವವೈದ್ಯ ಬಲ್ಲವರೂ ಆಗಿದ್ದಿರಬಹುದು. ಈ ಅನಂತಪಾಳನ ತಂದೆ ಸಾಮಣಯ್ಯನಿಗೆ ವಾರಪಾಳನೆಂಬ ಬಿರುದಿತ್ತು. ಇವನ ಮೂರು ಮಕ್ಕಳು ಜಗಪಾಳ, ತಿಹುಣಪಾಲ ಸಾಹಣಿ, ಅನಂತಪಾಳ ಸಾಹಣಿ, ಅನಂತಪಾಳ ಸಾಹಣಿಯ ಮಗ ಹರಿಪಾಳ. ಇವರ ಹೆಸರುಗಳಾದ ಹರಿಪಾಳ, ವಾರಪಾಳ ಎಂಬುವು ಅವರ ಅಶ್ವವಿದ್ಯೆಯ ಸೂಚಕವೂ ಆಗಿದೆ.

ತುರೆಯ ರೇವಂತ ಹಯವತ್ಸರಾಜ ಎಂಬ ಬಿರುದುಗಳು[೪೩] ಮತ್ತೆ ಮತ್ತೆ ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತವೆ. ರೇವಂತನನ್ನೂ, ಹಯವತ್ಸ ರಾಜನನ್ನು ಮಧ್ಯಕಾಲೀನ ಕರ್ನಾಟಕದ ಅಶ್ವಾರೋಹಿ ವೀರರು ತಮ್ಮ ಆದರ್ಶವೆಂದು ಪರಿಗಣಿಸಿದಂತೆ ತೋರುತ್ತದೆ. ರೇವಂತ ಒಬ್ಬ ಅಶ್ವಾರೋಹಿ ಉಪದೇವತೆ. ಇವನು ಸೂರ್ಯ ಮತ್ತು ಸಂಜ್ಞಾಳ ಮಗ ಆಳರಸರೂ ಕುದುರೆ ಸವಾರರೂ ಸೇನಾದಿಪತಿಗಳೂ ಈ ಅಶ್ವದೇವತೆಯನ್ನು ಪೂಜಿಸಿ ಅಶ್ವ ವಿದ್ಯೆಯಲ್ಲಿ ಪ್ರಾವೀಣ್ಯ ಗಳಿಸಿಕೊಂಡವರಾಗಿ ಸ್ವತಃ ರೇವಂತರೆಂದು ಬಿರುದುಗಳೊಂದಿಗೆ ಗುರುತಿಸಲ್ಪಡುತ್ತಿದ್ದರು.

ಕುದುರೆ ಕಾಳಗದ ಸ್ವರೂಪವನ್ನು ವೀರಗಲ್ಲುಗಳ ಶಿಲ್ಪಗಳಿಂದ ತಿಳಿದುಕೊಳ್ಳಬಹುದು. ಬಿದ್ದವರನ್ನು ತುಳಿದುಕೊಂಡು ಮುನ್ನುಗ್ಗುತ್ತಿರುವ ಹಿಂಗಾಲಲ್ಲಿ ನಿಂತು ಹಾರುತ್ತಿರುವ ಕುದುರೆಗಳು ಯುದ್ಧದ ಭೀಕರತೆಯನ್ನು ಮನಮುಟ್ಟಿಸುತ್ತವೆ. ವೈರಿ ಕುದುರೆಗಳನ್ನು ಇರಿದು ತಾನೂ ಮಡಿದ ವೀರನನ್ನು ನೀರ್ಗುಂದದ ಶಾಸನವೊಂದು ಹೊಗಳಿದೆ.[೪೪] ಕಲ್ಗುಂಡಿಯ ಶಿಲ್ಪರಹಿತ ಶಾಸನವೊಂದು[೪೫] ಮಾರಗೌಡನೆಂಬ

ವೀರ ಗೊರವರ ಕಲ್ಲಿನವರೆಗೆ ಬಂದಿದ್ದ ತುರುಕರ ಸೈನ್ಯದೊಡನೆ ಕಾದಿ, ಕುದುರೆಯನ್ನು ಹಿಡಿದುದಕ್ಕೆ ಹೊಯ್ಸಳ ಪ್ರತಾಪ ಬಲ್ಲಾಳರಾಯನೂ, ಕಾಮೆಯ್ಯ ದಂಣಾಯಕನೂ ಮೆಚ್ಚಿ ಕಲ್ಲುಗುಂಡಿ ಮತ್ತು ಅದರ ಹಳ್ಳಿಗಳನ್ನು ಮೆಚ್ಚುಗೆಯ ನೆತ್ತರು ಕೊಡಗಿಯಾಗಿ ಕೊಟ್ಟಿದ್ದಾರೆ. ತುರುಕರ ಸೈನ್ಯದಲ್ಲಿ ಜಾತ್ಯಶ್ವಗಳಿರುತಿದ್ದು ಅವುಗಳನ್ನು ವಶಪಡಿಸಿಕೊಳ್ಳುವುದು ವಿಶೇಷ ಸಾಧನೆಯಾಗಿತ್ತು. ಇಂಥ ಜಾತ್ಯಶ್ವಗಳಿಗೆ ಬಹಳ ಬೇಡಿಕೆ ಇರುತ್ತಿತ್ತು. ನೇರ್ಲಿಗೆಯ ಶಾಸನ[೪೬] ನೊಳಂಬನ ಕೆರೆಯ ಕಾಳಗದಲ್ಲಿ 'ಮೇಲಾಳು ಕುದುರೆಯನಿಱಿದು' ಸ್ವರ್ಗಸ್ತನಾದ ವೀರನನ್ನು ಹೊಗಳಿದೆ. 'ಕುದುರೆ ಆಳ ಅಟ್ಟಿ ಸುರುಗಿಱಿದು' ಮಡಿದ ವೀರನನ್ನು ಮುದುಡಿ ಶಾಸನ ಹೇಳಿದೆ.[೪೭] ದೊಡ್ಡ ಯುದ್ಧಗಳಲ್ಲಿ ಆನೆಗಳೊಂದಿಗೆ ಕುದುರೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಬಳಸುತ್ತಿದ್ದರಾದರೂ ಸಣ್ಣ ಪುಟ್ಟ ಕಾಳಗಗಳಲ್ಲಿ ಕುದುರೆಗಳದ್ದೇ ಪ್ರಾಧಾನ್ಯತೆ. ಅದರಲ್ಲೂ ಊರಳಿವು ತುರುಗೋಳ್ ಕಾಳಗಗಳಲ್ಲಿ ವೇಗವಾಗಿ ಸಾಗುವ ಈ ಕುದುರೆಗಳಿಗೆ ಮೊದಲ ಸ್ಥಾನವಿದ್ದಂತೆ ತೋರುತ್ತದೆ. ಯುದ್ಧಕುದುರೆಗಳಿಗೆ ರಕ್ಷಣಾ ಕವಚಗಳನ್ನು ಹಾಕುತ್ತಿದ್ದರೆಂಬುದು ಶಿಲ್ಪಗಳಿಂದ ತಿಳಿಯುತ್ತದೆ.

### ೫.೨.೧.೩. ಒಂಟೆಗಳು

ಒಂಟೆಗಳ ಉಲ್ಲೇಖ ಈ ಪ್ರದೇಶದ ಶಾಸನಗಳಲ್ಲಿ ಕಂಡುಬಂದಿಲ್ಲ. ಎರಡನೇ ನರಸಿಂಹನು ತನ್ನ ಶತ್ರು ಪಕ್ಷದವರ ಒಂಟೆಗಳನ್ನು ಮತ್ತು ಆನೆಗಳನ್ನು ನಾಶಪಡಿಸಿದನೆಂದು ತಿಳಿದುಬರುತ್ತದೆ. ಇವು ಬಹುಶಃ ದೇವಗಿರಿಯ ಯಾದವರಿಂದ ದಕ್ಷಿಣಕ್ಕೆ ಪ್ರವೇಶ ಮಾಡಿರಬಹುದೆಂದು ತೋರುತ್ತದೆ.[೪೮] ನರಸಿಂಹನ ಕಾಲದಲ್ಲಿ ಮತ್ತು ಅವನ ಮಗ ಸೋಮೇಶ್ವರನ ಕಾಲದಲ್ಲಿ ನಿರ್ಮಿತವಾಗಿರುವ ದೇವಾಲಯದ ಭಿತ್ತಿ ಪಟ್ಟಿಕೆಗಳಲ್ಲಿ ಒಂಟೆಗಳನ್ನು ಕಾಣಬಹುದು. ಜಾವಗಲ್ಲಿನ ಲಕ್ಷ್ಮೀನರಸಿಂಹ ದೇವಾಲಯದ ಪಟ್ಟಿಕೆಗಳ ಯುದ್ಧ ವೀರರ ಮಧ್ಯೆ ಒಂಟೆಗಳಿದ್ದು ಅವು ಯುದ್ಧಗಳಲ್ಲಿ ಭಾಗವಹಿಸುತ್ತಿರುವುದನ್ನು ನೋಡಬಹುದು. ವಿಜಯನಗರ ಕಾಲದ ಬಾಣಾವರದ ವಿಶಿಷ್ಟವಾದ ಶಾಸನ ಶಿಲ್ಪದಲ್ಲಿ ಆನೆ ಮತ್ತು ಒಂಟೆಗಳೆರಡನ್ನು ಬಿಡಿಸಲಾಗಿದೆ. ಅವು ಯಾವುದೇ ಯುದ್ಧದಲ್ಲಿ ತೊಡಗಿಲ್ಲ.

### ೫.೨.೧.೪. ಪದಾತಿ ಸೈನ್ಯ-ವೃತ್ತಿ ವೀರರು

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಸೈನ್ಯದಲ್ಲಿ ಪದಾತಿಗಳ ಸಂಖ್ಯೆಯೇ ಅತಿ ಹೆಚ್ಚು. ಸೇವುಣರ ಸೈನ್ಯದಲ್ಲಿ ಏಳೆಂಟು ಲಕ್ಷ ಕಾಲಾಳುಗಳಿದ್ದರೆಂದು ಒಂದು ಶಾಸನ[೪೯] ತಿಳಿಸುತ್ತದೆ. ಈ ಪದಾತಿ ಸೈನ್ಯದಲ್ಲಿ ಶಸ್ತ್ರಾಸ್ತ್ರಗಳಲ್ಲಿ ಪರಿಣತರಾದ ಬಲಶಾಲಿಗಳಾದ ವೀರರ ಪಡೆಯೇ ಇರುತ್ತಿತ್ತು. ಯುದ್ಧವೆಂಬುದು ನಿರಂತರ, ಸಾರ್ವತ್ರಿಕ ಎಂಬಂತೆ ಒಂದಲ್ಲ ಒಂದು ರೀತಿಯಲ್ಲಿ ನಡೆಯುತ್ತಲೇ ಇದ್ದು ಇಂತಹ ವೀರರಿಗೆ ಸದಾ ಬೇಡಿಕೆ ಇರುತ್ತಿತ್ತು. ಅಲ್ಲದೆ ಸೈನ್ಯವೆಂಬುದು ಒಂದು ದೊಡ್ಡ ಉದ್ಯೋಗಾವಕಾಶವನ್ನು ಒದಗಿಸುತ್ತಿದ್ದ ವ್ಯವಸ್ಥೆಯಾಗಿತ್ತು. ನಿಷ್ಠೆ, ಶಸ್ತ್ರಾಸ್ತ್ರ ನೈಪುಣ್ಯತೆ, ಶೌರ್ಯಗಳೇ ಅರ್ಹತೆಗಳಾಗಿ ಮಕ್ಕಳು

ಮುದುಕರನ್ನು ಸ್ತ್ರೀಯರನ್ನು ಹೊರತುಪಡಿಸಿ ಆರೋಗ್ಯವಂತ ಯುವಕರಿಗೆ ಸೈನ್ಯದಲ್ಲಿ ಸದಾ ಅವಕಾಶವಿರುತ್ತಿತ್ತು. ಇಂತಹವರಿಗೆ ವಿಶೇಷ ತರಬೇತಿಯೂ ನಡೆಯುತ್ತಿತ್ತು.[೫೦] ಬಾಣಾವರ ಕೋಟೆಯ ಒಳಗೆ ಹಾಳು ಮಂಟಪವೊಂದರ ಹತ್ತಿರ ಉಗ್ರದೇವತೆಯ ಗುಡಿಯ ಮುಂದೆ ಇಪ್ಪತ್ತೈದರಿಂದ ಮೂವತ್ತು ಸಂಖ್ಯೆಯಲ್ಲಿ ಸುಮಾರು ಇಪ್ಪತ್ತು ಕೆ.ಜಿ.ತೂಗುವ ದುಂಡಾದ ಕಲ್ಲುಗಳಿದ್ದು ಅವುಗಳು ಎತ್ತುಗುಂಡುಗಳೆಂದು, ಅಲ್ಲಿ ಸೈನಿಕರ ತಾಲೀಮು ನಡೆಯುತ್ತಿತ್ತೆಂದು ತಿಳಿದುಬರುತ್ತದೆ.[೫೧] ಅರಸೀಕೆರೆಯಲ್ಲಿದ್ದ ದೊಡ್ಡ ಗರಡಿ ಮನೆಯಲ್ಲಿ ಯೋಧರಿಗೆ ವಿಶೇಷ ತಾಲೀಮು ನಡೆಯುತ್ತಿತ್ತೆಂದೂ ಉಂಡಿಗನಾಳಿನ ಜಟ್ಟಿ ಗರಡಿಗಳಲ್ಲಿ, ಚಿಕ್ಕ ನಾಯಕನ ಹಳ್ಳಿಯ ಜಟ್ಟಿಗರಡಿಗಳಲ್ಲಿ ಮೈಪಳಗಿಸಿ ವಜ್ರಕಾಯರಾದ ಯೋಧರಿಗೆ ಸೈನ್ಯದಲ್ಲಿ ಪ್ರಾಮುಖ್ಯತೆಯಿತ್ತೆಂದು ತಿಳಿದುಬರುತ್ತದೆ.[೫೨]

ಗಜಸೈನ್ಯವಿರಲಿ, ಅಶ್ವಸೈನ್ಯವಿರಲಿ ಪದಾತಿಗಳಿರಲಿ ಇವರನ್ನೆಲ್ಲಾ ವೃತ್ತಿ ವೀರರೆಂದು ಕರೆಯಬಹುದು. ಇಂತಹ ವೃತ್ತಿ ವೀರರ ಕರ್ತವ್ಯವನ್ನು ರನ್ನ ಕವಿ 'ಎರವೆಸ' ಎಂದು ಗುರುತಿಸಿದ್ದಾನೆ.[೫೩] ಈ ಎರವೆಸ ಸೈನಿಕರಿಗೆ ಕಡ್ಡಾಯವಾಗಿತ್ತು. ಅದರಿಂದ ತಪ್ಪಿಸಿಕೊಳ್ಳುವ ಪ್ರಯತ್ನ ಮಾಡುವವನನ್ನೂ, ರಾಜ ಕೊಟ್ಟ ಸವಲತ್ತುಗಳನ್ನು ಬಳಸಿಕೊಂಡು 'ಉಂಡುಟ್ಟು ಸಾಯಲಮ್ಮದ' ಹೇಡಿಗಳೆಂದು, ಭಾಷೆಗೆ ತಪ್ಪಿದವರೆಂದು ಶಾಸನಗಳು ವಿಡಂಬಿಸಿವೆ.[೫೪] ಯುದ್ಧ ಪರಿಣತರಾದ, ರಣಸಾಹಸಿಗಳಾದ ಇಂಥ ಸ್ವಾಮಿ ನಿಷ್ಠರ ಸೇವೆಯೇ ಅರಸರ ನಿಜವಾದ ಬಲವಾಗಿತ್ತು. ಅವರ ಏಳು ಬೀಳುಗಳು ಇವರ ಸೇವೆಯ ಮೇಲೆ ನಿಂತಿತ್ತು. ಹಾಗಾಗಿ ಅರಸರು ಇಂತಹ ವೀರರನ್ನು ಸೈನ್ಯಗಳಲ್ಲಿ ನೇಮಿಸಿಕೊಂಡು ಸಂಬಳದ ರೂಪದಲ್ಲೋ, ಜೋಳದ ರೂಪದಲ್ಲೋ ಉಂಬಳಿ, ಮೈಜೀವಿತಗಳನ್ನು ನೀಡಿ ಪ್ರೋತ್ಸಾಹಿಸುತ್ತಿದ್ದರು. ಈ ಎಜೆಯನ ಜೋಳದ ಋಣ ಅಥವಾ ಉಪ್ಪಿನ ಋಣವನ್ನು ಪ್ರಾಣವನ್ನು ಒತ್ತೆಯಿಟ್ಟು ತೀರಿಸುವುದು ಈ ವೀರರ ಗುರಿಯಾಗಿತ್ತು. ಈ 'ಒಡೆಯನ ಉಪ್ಪಿನ ಋಣಭಾರದ' ಪರಿಕಲ್ಪನೆಯು ಇಡೀ ನಮ್ಮ ಸಂಸ್ಕೃತಿಯ ಉದ್ದಕ್ಕೂ ಸೇವಕ ವರ್ಗವನ್ನು ತನ್ನ ಬಿಗಿ ಮುಷ್ಟಿಯಲ್ಲಿ ಹಿಡಿದುದನ್ನು ಕಾಣಬಹುದು. ಒಡೆಯನು ಇಂತಹ ಜೋಳವಾಳಿಗಳ ಮೇಲೆ ಇಟ್ಟ ವಿಶ್ವಾಸ ಪ್ರೀತಿಗೆ ಸರಿಸಮನಾದ, ಅದಕ್ಕೂ ಮೀರಿದ ಸ್ವಾಮಿನಿಷ್ಠೆಯನ್ನು ಈ ವೀರರು ಮೆರೆದಿರುವುದಕ್ಕೆ ಸಾಕ್ಷಿಗಳಾಗಿ ನೂರಾರು ಶಾಸನಗಳು ನಮ್ಮ ಕಣ್ಣ ಮುಂದಿವೆ.

ಈ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ದೊರಕಿರುವ, ಯುದ್ಧಗಳನ್ನು ಕಾಳಗಗಳನ್ನು ಹೇಳುವ ಶಾಸನಗಳಲ್ಲಿ ಗಂಗ ನೊಳಂಬರ ಹೋರಾಟದ ಶಾಸನಗಳೇ ಪ್ರಾಚೀನವಾದವು. ಗಂಗ ಶ್ರೀಪುರುಷನ ಯುದ್ಧವೊಂದರಲ್ಲಿ ಮಡಿದ ಬಞ್ಚಪಯ್ಯನೆಂಬ ವೀರನ ಶಾಸನ[೫೫] ಕತ್ತಿ ಅರಸನ ಬಂಟ ಬೀಚಗೌಡನು ಹೋರಾಡಿ ಸುರವಧುಮಿತ್ರನಾದನೆಂದು ಹೇಳುವ ಶಾಸನ[೫೬] ನೇರ್ಲಿಗೆಯ ಅಣ್ಣವಸಯ್ಯನ ಶಾಸನ[೫೭]ಗಳು ಮುಖ್ಯವಾದವು. ವಿನಯಾದಿತ್ಯನ ನೇರ್ಲಿಗೆ ಶಾಸನದಲ್ಲಿ[೫೮] ಪೆರ್ಗಡೆ ಆಲಮಯ್ಯನು ಐನೂರ್ವರು ವೀರರೊಂದಿಗೆ ಶತ್ರುಗಳನ್ನು ಎದುರಿಸಿ ಮೇಲಾಳು ಕುದುರೆಗಳನ್ನು ಇರಿದು ಮಡಿದುದನ್ನು ದಾಖಲಿಸಿದೆ.

ಒಂದನೇ ನರಸಿಂಹನ ವೀರ ಸುಭಟ ನಿಜಗರ್ಭ ಭುಜಬಳವೀರ ಮುಳುಗಿ ಎಂಬುವವನು 'ಮೆ ಇಮಾಡಿ ಮುಂದೆಕಲಿಗಾದಡೆ ಕನ್ನೆಗ್ರ್ಗಾದ'ನೆಂದು ತಿಳಿದುಬರುತ್ತದೆ.[೫೯] ಮುದುಡಿಯ ಸ್ಥಳೀಯ ಅಧಿಕಾರಿಗಳಾದ ಕೇತಗೌಡನ ಮಕ್ಕಳು, ಮೊಮ್ಮಕ್ಕಳನ್ನು ಪುರುಷರತ್ನ ಚಿಂತಾಮಣಿಗಳೆಂದು, ದ್ರೋಹ ಗರಟ್ಟರೆಂದೂ ಕರೆದು ಅವರು ಹೊಯ್ಸಳ ಬಲ್ಲಾಳನ ಯುದ್ಧಗಳಲ್ಲಿ ಎರವೆಸನವನ್ನು ಕೈಗೊಳ್ಳುತ್ತಿದ್ದುದನ್ನು ಶಾಸನಗಳು ತಿಳಿಸುತ್ತವೆ.[೬೦] ವೀರಬಲ್ಲಾಳನ ಕುರುಗೋಡಿನ ಲಗ್ಗೆಯಲ್ಲಿ, ಉಚ್ಚಂಗಿ ದುರ್ಗವನ್ನು ವಶಮಾಡಿಕೊಳ್ಳುವ ಘೋರ ಕೋಟೆಕಾಳಗದಲ್ಲಿ ತಮ್ಮ ಜೋಳದ ಪಾಳಿಯನ್ನು ತೀರಿಸಿದ ಅನೇಕ ವೀರರ ಶಾಸನಗಳು ದೊರಕುತ್ತವೆ.[೬೧]

'ಮಗರೆಯ ಮೇಲೆ ಹೇಳಿಕೆಯಾಗಿ' ಹೋಗಿ ಬವರದಲ್ಲಿ ಕಾದಿ ನಾರಸಿಂಹನಾಯಕನೆಂಬ ವೀರ ಮಡಿದಿದ್ದಾನೆ.[೬೨] ನಾರಸಿಂಘದೇವನ ಸ್ವಾಮಿಕಾರ್ಯಕ್ಕೆದಿ ಜಯದಿ ಕೋಪದಿ ಬಲದೊಡನೆ ಕಾದಿ ಸೋವೆಯ್ಯನಾಯಕ ಮಡಿದಿದ್ದಾನೆ.[೬೩] ಪಾಡಿಗಳೆತ್ತಿ ಬಂದು ಸಿಂಗೆಯ್ಯ ದಂಣ್ನಾಯಕನನ್ನು ಕಾದಿಕೊಂದಾಗ ಶಿವಶರಣ ದೀಕ್ಷೆ ಪುತ್ರನಾದ ಹರಗಣಂಗಳ ಬೃಂಗೀಶದಾಸರದಾಸನೂ ಆದ ಕಲ್ಲಯ್ಯನೆಂಬುವವನು ಹೋರಾಡಿ ಮಡಿದನೆಂದು. ತಳುತೊರೆ ಶಾಸನ[೬೪] ಹೇಳಿದೆ. 'ಪರಸತಿಗೆ ಆಸೆ ಮಾಡುವ ಕುಮಾರರ ಗಂಡ ಹಡಿಮೊಗದ ಘಾಯವಿಲ್ಲದ ವೀರರ ಗಂಡ'ನೆಂದು ಪ್ರಸಿದ್ಧನಾದ ಕಣ್ಣಯ್ಯನಾಯಕನೆಂಬ ವೀರನ ಮರಣವನ್ನು ಶಂಕರನಹಳ್ಳಿ ಶಾಸನ[೬೫] ಹೇಳಿದೆ. ಆಯುಧಗಳಿಂದಾದ ಗಾಯಗಳೇ ಆಭರಣವಾದ ಶೌರ್ಯವೂ ಶೌಚವೂ ಒಂದಾಗಿ ಬೆರೆತ ಇಂತಹ ವೀರರ ಪಟ್ಟಿಯನ್ನು ಕೊಡುತ್ತಾ ಹೋಗಬಹುದು. ತುರುಕ ಸೈನ್ಯದೊಂದಿಗಿನ ಕಾಳಗ, ಕುಮ್ಮಟ ದುರ್ಗದವರೊಂದಿಗಿನ ಕಾಳಗ, ಅಳುಪರೊಂದಿಗಿನ ಹೊಯ್ಸಳರ ಕಾಳಗಗಳು, ವಿಜಯನಗರದ ವೀರ ಕಂಪಣ್ಣೊಡೆಯನ ಬೇಲೂರಿನ ಮುತ್ತಿಗೆ ಇತ್ಯಾದಿ ಹೋರಾಟಗಳಲ್ಲಿ ಮಡಿದ ವೀರರ ಶಾಸನಗಳಿವೆ.[೬೬] ಮೇಲಿನ ಶಾಸನಗಳನ್ನು, ವೀರರ ಬಿರುದುಗಳನ್ನು ಗಮನಿಸಿದಾಗ ಅವರು ನಂಬಿ ನಡೆದ ವೀರ ಮೌಲ್ಯಗಳು, ಸಿದ್ಧಾಂತಗಳು, ಎರವೆಸಕ್ಕಾಗಿ ಪ್ರಾಣತೆತ್ತ ಅವರನಿಷ್ಠೆಯು ಮೆಚ್ಚುಗೆಯನ್ನು ಖೇದವನ್ನು ಏಕಕಾಲದಲ್ಲಿ ಉಂಟುಮಾಡುತ್ತದೆ.

### ೫.೨.೧.೫. ರಕ್ಷಣಾ ಕೋಟೆಗಳು-ಕೋಟೆಕಾಳಗಗಳು

ರಕ್ಷಣಾ ವ್ಯವಸ್ಥೆಯಲ್ಲಿ ಸೈನ್ಯದಷ್ಟೇ ಪ್ರಮುಖವಾದದ್ದು ಕೋಟೆಗಳು. ಕ್ರೂರ ಪ್ರಾಣಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಆದಿ ಮಾನವ ತನ್ನ ವಾಸಸ್ಥಳದ ಸುತ್ತ ಬೇಲಿಗಳನ್ನು ಕಟ್ಟಿಕೊಳ್ಳಲು ಕಲಿತ. ಮಣ್ಣಿನ ಗೋಡೆ, ಕಲ್ಲಿನ ಗೋಡೆಗಳನ್ನು ಕಟ್ಟಲು ತೊಡಗಿದವನು ಕಾಲಕ್ರಮದಲ್ಲಿ ಅಭೇದ್ಯವಾದ ವಿಸ್ತಾರವಾದ ಅನೇಕ ಸುತ್ತುಗಳ ಎತ್ತರವಾದ ಕೋಟೆಗಳನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದನು. ಕೋಟೆಗಳನ್ನು ಅವುಗಳ ಪರಿಸರ, ರಚನೆ, ರೀತಿಯನ್ನಾಧರಿಸಿ ಗಿರಿದುರ್ಗ ವನದುರ್ಗ, ಜಲದುರ್ಗ,

ನೆಲದುರ್ಗಗಳೆಂದು ವಿಂಗಡಿಸಲಾಗಿದೆ. ಇಡೀ ಬೆಟ್ಟವನ್ನು ಬಳಸಿದಂತಿರುವ ಕೆಳಕೋಟೆಯಿಂದಾರಂಭಿಸಿ ಬೆಟ್ಟದ ತುದಿಯಲ್ಲಿ ಅರಮನೆಯನ್ನು ಸುತ್ತುವರೆದಿರುವ ಕೋಟೆಗಳು ಗಿರಿದುರ್ಗಗಳೆನಿಸುತ್ತವೆ. ಸಹಜವಾದ ಬೆಟ್ಟ ದುರ್ಗಮ ಪ್ರದೇಶದಲ್ಲೇ ಇಂಥವು ನಿರ್ಮಾಣವಾಗುತ್ತವೆ. ನೀರಿನಿಂದಾವೃತವಾದ, ಹೊಳೆಯು ಬಳಸಿದ ಪ್ರದೇಶದಲ್ಲಿ ಸಹಜ ರಕ್ಷಣೆ ಒದಗಿ ಉಳಿದ ಭಾಗದಲ್ಲಿ ಗೋಡೆಗಳನ್ನು ಕಟ್ಟಿ ಜಲದುರ್ಗಗಳು ನಿರ್ಮಾಣವಾಗುತ್ತವೆ. ದಟ್ಟ ಕಾಡು ಪ್ರದೇಶಗಳಲ್ಲಿ, ಬಿದಿರು ಮೆಳೆಗಳನ್ನು ಸುತ್ತಲೂ ಬೆಳೆಸಿ ಮಧ್ಯದಲ್ಲಿ ನಿರ್ಮಿಸಿದ ಕೋಟೆಗಳು ವನದುರ್ಗಗಳು, ಇವ್ಯಾವ ಪರಿಸರವೂ ಇಲ್ಲದೆ ಗ್ರಾಮಗಳಲ್ಲಿ ಸುಭದ್ರವಾಗಿ ಕಲ್ಲಿನಿಂದ ಇಟ್ಟಿಗೆ ಗಾರೆ ಕಚ್ಚುಗಳನ್ನು ಬಳಸಿ ನಿರ್ಮಿಸಿದ ದುರ್ಗಗಳು ನೆಲದುರ್ಗಗಳು. ಈ ಪ್ರದೇಶದಲ್ಲಿ ಗರುಡನ ಗಿರಿ ಮತ್ತು ನಾಗಪುರಿ ಬೆಟ್ಟದಲ್ಲಿ ಕಂಡುಬರುವ ಕೋಟೆ ಗಿರಿದುರ್ಗಕ್ಕೆ ಉದಾಹರಣೆಯಾಗಿವೆ. ಜಾವಗಲ್ಲು ಹಾರನಹಳ್ಳಿ, ಬಾಣಾವರ ಇತ್ಯಾದಿ ಕೋಟೆಗಳು ನೆಲದುರ್ಗಗಳಿಗೆ ಉದಾಹರಣೆಯಾಗಿವೆ.

**ಸ್ಥಳೀಯ ಕೋಟೆಗಳು :** ಪ್ರಸ್ತುತ ಅಧ್ಯಯನದ ಪ್ರದೇಶದ ಪ್ರಮುಖ ಗ್ರಾಮಗಳ ಸುತ್ತ ಮಣ್ಣಿನ, ಕಲ್ಲಿನ ಕೋಟೆಗಳ ಆಳವಾದ ಅಗಳುಗಳ, ಹೆಬ್ಬಾಗಿಲುಗಳ ಅವಶೇಷಗಳನ್ನು ಈಗಲೂ ನೋಡಬಹುದು. ಹೊಯ್ಸಳರ ಕಾಲದಿಂದ ಹೈದರ್, ಟಿಪ್ಪುಗಳವರೆಗೆ ಈ ಪ್ರದೇಶದಲ್ಲಿ ಕೋಟೆಗಳನ್ನು ಕಟ್ಟುವ, ಭದ್ರಪಡಿಸುವ ಕಾರ್ಯಗಳು ನಡೆದಂತೆ ತೋರುತ್ತದೆ. ಹಿರಿಯೂರು, ಕೋಳಿಗುಂದ, ಮುದುಡಿ, ಹಾರನಹಳ್ಳಿ, ಜಾವಗಲ್ಲು, ಉಂಡಿಗನಾಳು ಯಲಗುಂದ, ನೀರ್ಗುಂದ ಇತ್ಯಾದಿಗಳಲ್ಲಿ ಹೊಯ್ಸಳರ ಕಾಲದ ಕೋಟೆಯ ಅವಶೇಷಗಳಿವೆ. ಕೆಲವು ಗ್ರಾಮಗಳಲ್ಲಿ ಎರಡೆರಡು ಕರುಗಲ್ಲು'ಗಳು ಹಳೆಕೋಟೆ, ಹೊಸಕೋಟೆ ಎಂಬ ಹೆಸರುಗಳು ಕಂಡುಬರುತ್ತವೆ. ಉಂಡಿಗನಾಳಿನಲ್ಲಿ ಹೊಯ್ಸಳರ ಕಾಲದ ಕೋಟೆಯನ್ನು ವಿಸ್ತರಿಸಿ ಕೆಳದಿ ಅರಸರ ಕಾಲದಲ್ಲಿ ಹೊಸ ಕೋಟೆ ಕಟ್ಟಲಾಯಿತೆಂದು ಹೇಳುತ್ತಾರೆ. ಇದೇ ರೀತಿ ಹಾರನಹಳ್ಳಿಯಲ್ಲಿ ಹಳೆಕೋಟೆಯನ್ನು ಹೈದರ್ ಟಿಪ್ಪುವಿನ ಕಾಲದಲ್ಲಿ ವಿಸ್ತರಿಸಿ ಕಟ್ಟಲಾಯಿತೆಂದು ಹೇಳುತ್ತಾರೆ. ಜಾವಗಲ್ಲಿನ ಕೋಟೆಯನ್ನು ಸಾಮಂತ ಭೈರನಾಯಕನ ಕಾಲದಲ್ಲಿ ಬಲಪಡಿಸಿ ಹೊಸದಾಗಿ ತೆಂಕಲ ಹೆಬ್ಬಾಗಿಲನ್ನು ತೆಗೆಸಿ ಅದನ್ನು ಕಲ್ಲಲ್ಲಿ ಕಟ್ಟಿಸಿ ಹೆಬ್ಬಾಗಿಲನ್ನು ಇಡಿಸಿದುದನ್ನು ಒಂದು ಶಾಸನ ಹೇಳುತ್ತದೆ.[೬೭] ಕಂಡನಂಬಿ ಶೆಟ್ಟಿಯರು ಮುತ್ತನಹೊಸವೂರನ್ನು ಶೆಟ್ಟಿ ಪಟ್ಟವಾಗಿ ಪಡೆದನಂತರ ಆ ಊರಿನಲ್ಲಿ ಎತ್ತರವಾದ ಕೋಟೆಯನ್ನು ಆಳವಾದ ಅಗಳನ್ನು ಮಾಡಿಸಿದ್ದನು.[೬೮] ಗರುಡನಗಿರಿ ಬಾಣಾವರಗಳಿಗೆ ಕಂಠೀರವನರಸರಾಜ ಒಡೆಯರ ಕಾಲದಲ್ಲಿ ತರೀಕೆರೆ ಪಾಳೇಗಾರರ ಕಾಲದಲ್ಲಿ ಹೆಚ್ಚು ಪ್ರಾಮುಖ್ಯತೆ ಬಂದು, ಬಾಣಾವರದ ಕೋಟೆ ಪ್ರಮುಖ ಆಡಳಿತ ಕೇಂದ್ರವಾಗಿ ಕಂಠೀರಾಯ ಪೇಟೆಗೆ ಹೆಸರಾಯಿತು.[೬೯] ಇಲ್ಲಿನ ಕೋಟೆಯು ವಿಜಯನಗರ ಶೈಲಿಯಲ್ಲಿದ್ದು ಆಯತಾಕಾರವಾಗಿದೆ. ಪೂರ್ವಪಶ್ಚಿಮವಾಗಿ ಸುಮಾರು ೨೫೦೦ ಅಡಿ ಹಾಗೂ ಉತ್ತರ ದಕ್ಷಿಣವಾಗಿ ೧೫೦೦ ಅಡಿ ವಿಸ್ತಾರವಾಗಿದೆ. ಪಶ್ಚಿಮ ಹಾಗೂ

ಉತ್ತರ ಭಾಗಗಳಲ್ಲಿ ಕೋಟೆಯ ಗೋಡೆಗಳು, ಬತೇರಿಗಳು ಕಂದಕಗಳನ್ನು (ಅಗಳು) ಕಾಣಬಹುದು. ಆಗ್ನೇಯ ಮೂಲೆಯಲ್ಲಿ ದೊಡ್ಡ ಪುಷ್ಕರಿಣಿಗಳು, ಅರಸಿನ ಬಾವಿ, ತುಳಸಿಬಾವಿ ಹಾಗೂ ಸೇದುವ ಬಾವಿಗಳು ಕೋಟೆಯೊಳಗೆ ಕಂಡುಬರುತ್ತವೆ. ಆಕ್ರಮಣಗಳ ಕಾಲದಲ್ಲಿ ನೀರಿನ ತೊಂದರೆ ಉಂಟಾಗದಂತೆ ಎಚ್ಚರವಹಿಸಿರುವುದು ಇದರಿಂದ ತಿಳಿದುಬರುತ್ತದೆ. ಸಾಮಾನ್ಯವಾಗಿ ಕೋಟೆಗಳಿಗೆ ಎರಡು ದ್ವಾರಗಳಿರುತ್ತಿದ್ದವು. ಬಾಣಾವರಕೋಟೆಗೆ ಪೂರ್ವದಿಕ್ಕಿನಲ್ಲಿದ್ದಿರ ಬಹುದಾದ ದ್ವಾರವು ಹಾಳಾಗಿದ್ದು ಉತ್ತರ ದಿಕ್ಕಿನಲ್ಲಿ ಮಹಾದ್ವಾರವು ಭದ್ರವಾಗಿದೆ. ಉಳಿದಿರುವ ಅವಶೇಷಗಳು ಕೋಟೆಯ ಸುಭದ್ರತೆಯು ಹೇಗಿತ್ತೆಂಬುದನ್ನು ಸೂಚಿಸುತ್ತವೆ. ಕೋಟೆಯಲ್ಲಿ ಬತೇರಿಗಳು ಬಹಳ ಮುಖ್ಯ. ಬೃಹತ್ ಬತೇರಿಗಳೆರಡು ವಾಯುವ್ಯ ಮೂಲೆಯಲ್ಲಿ ಉಳಿದುಕೊಂಡಿವೆ. ಈ ಕೋಟೆಯ ಮತ್ತೊಂದು ವಿಶೇಷತೆ ಎಂದರೆ ಹೊರಕೋಟೆ ಒಳಕೋಟೆ ಎಂಬ ಎರಡು ಹಂತಗಳ ರಕ್ಷಣಾ ವ್ಯವಸ್ಥೆಯಿರುವುದು ಉತ್ತರ ದಿಕ್ಕಿನ ಬಾಗಿಲಿನಿಂದ ೪೦-೫೦ ಅಡಿಗಳ ಅಂತರದಲ್ಲಿ ೨೦೦ x ೫೦ ಅಡಿ ಅಗಲದ ಒಳಕೋಟೆ ಇದೆ. ಇದನ್ನು ಸ್ಥಳೀಯರು ಉಗ್ರಾಣ, 'ಮಧ್ಯರಾಷ್ಟ್ರದ ಕೋಟೆ' ಎನ್ನುತ್ತಾರೆ. ಇದರ ಗೋಡೆ ಬುಡದಲ್ಲಿ ೮ ಅಡಿ ದಪ್ಪವಾಗಿ ಕಲ್ಲುಗಳಿಂದ ಕಟ್ಟಲ್ಪಟ್ಟಿದ್ದು ೨೦ ಅಡಿ ಎತ್ತರವಾಗಿದೆ. ತುದಿಯಲ್ಲಿ ಇಟ್ಟಿಗೆ ಗಾರೆಗಳಿಂದ ನಿರ್ಮಿತವಾದ ಕೋಟೆಯ ತೆನೆ ಕೋಟೆಗೆ ಆಕರ್ಷಕತೆಯನ್ನೂ, ಸೈನಿಕರು ಅಡಗಿ ಕುಳಿತು, ಬಾಣಗಂಡಿ(ಅಂಬುಗಂಡಿ)ಗಳಿಂದ ಶತ್ರುಗಳ ಮೇಲೆ ಬಾಣ ಪ್ರಯೋಗಿಸಲು ಅನುಕೂಲಕರವಾಗಿದೆ. ಈ ಕೋಟೆಯ ಒಳಗೆ ಮುಖ್ಯ ಅರಮನೆ ಭಂಡಾರಗಳು ಇದ್ದಿರಬಹುದಾದ ಸುಳಿವುಗಳನ್ನು ಅಲ್ಲಿನ ೨೦x೨೦ ಅಡಿ ಚದುರದ ಕಲ್ಲು ಮಂಟಪ, ಮಣ್ಣು ದಿಬ್ಬಗಳು ನೆಲಬಾವಿಗಳು, ನಾಡ ಹೆಂಚು ಇತ್ಯಾದಿಗಳು ನೀಡುತ್ತವೆ. ಈ ಒಳಕೋಟೆಯ ವಾಯುವ್ಯದಲ್ಲಿರುವ ಈ ಕಲ್ಲು ಮಂಟಪವು ಸುಭದ್ರವಾಗಿದೆ. ನೈರುತ್ಯದಲ್ಲಿ ಒಂದೇ ದ್ವಾರವಿದ್ದು ಒಳಕೋಟೆ ಹೆಚ್ಚು ಸುರಕ್ಷಿತವಾಗಿತ್ತೆಂಬುದನ್ನು ಸೂಚಿಸುತ್ತದೆ. ಈ ಒಳಕೋಟೆಯ ಆಗ್ನೇಯ ದಿಕ್ಕಿಗೆ ಉಗ್ರಾಣವೆಂದು ಗುರುತಿಸುವ ಹಳೆಯ ಕಟ್ಟಡ ಭಾಗವಿದ್ದು, ಒಂದು ವಿಶಾಲವಾದ ಮಂಟಪವಿದೆ. ಅಲ್ಲಿ ಸೈನ್ಯ ತರಬೇತಿ ನಡೆಯುತ್ತಿತ್ತೆಂದು ತರೀಕೆರೆಯ ಪಾಳೆಯಗಾರರಿಗೆ ಈ ಕೋಟೆ ಸೇರಿದ್ದೆಂದು ಸ್ಥಳೀಯರು ಹೇಳುತ್ತಾರೆ. ಕೋಟೆಯ ಭೌತಿಕ ಚಹರೆಗಳು ಒಳಗಿನ ವ್ಯವಸ್ಥೆ, ಭಿನ್ನ ಭಿನ್ನ ಕೇರಿಗಳು, ಅಂಗಡಿ ಬೀದಿಗಳು ದೇವಾಲಯಗಳು ಇತ್ಯಾದಿಗಳನ್ನು ಗಮನಿಸಿದಾಗ ಕಾವ್ಯಗಳಲ್ಲಿ ವರ್ಣಿತವಾದ ಕೋಟೆಯಿಂದ ರಕ್ಷಿಸಲ್ಪಡುವ ಸುವ್ಯವಸ್ಥಿತ ರಾಜಧಾನಿಯನ್ನು ಇದು ಹೋಲುತ್ತದೆ. ಬಾಣಾವರದಿಂದ ೧೧ ಕಿ.ಮೀಟರ್ ಈಶಾನ್ಯದಲ್ಲಿರುವ ಗರುಡನ ಗಿರಿಯು ಅಲ್ಲಿನ ಗಿರಿದುರ್ಗದಿಂದಾಗಿ ಪ್ರಸಿದ್ಧವಾಗಿತ್ತು. ನೊಣಬನಕಲ್ಲೆಂದು ಕರೆಯಲಾಗುತ್ತಿದ್ದ ಈ ಬೆಟ್ಟವು ಕ್ರಿ.ಶ.೧೬೬೦ರಲ್ಲಿ ಮೈಸೂರು ಅರಸರು ತಮ್ಮ ರಾಜ್ಯದ ಗಡಿ ರಕ್ಷಣೆಗಾಗಿ ಕೋಟೆ ಕಟ್ಟಿಸಿದ ಮೇಲೆ 'ಗರಡನಗಿರಿ' ಎಂಬ ಹೆಸರು ಪಡೆಯಿತು. ೧೭೭೦ರಲ್ಲಿ ಹೈದರಾಲಿಯ ವಶದಲ್ಲಿದ್ದ ಈ ಕೋಟೆಯನ್ನು

ತ್ರಯಂಬಕ ಮಾಮ ಹೈದರಾಲಿಯನ್ನು ಸೋಲಿಸಿ ವಶಪಡಿಸಿಕೊಂಡ ನಂತರದ ಶಾಂತಿ ಸಂಧಾನದಲ್ಲಿ ಮೈಸೂರು ರಾಜ್ಯದ ವಶಕ್ಕೆ ಬಂದು, ಟಿಪ್ಪುವಿನ ನಂತರ ಬ್ರಿಟೀಷರ ವಶವಾಗಿ ಮೈಸೂರು ಸೈನ್ಯದ ಠಾಣ್ಯವಾಗಿತ್ತು.

**ಕೋಟೆ ಕಾಳಗಗಳು** : ಶಾಸನಗಳಲ್ಲಿ ಅನೇಕ ಕೋಟೆ ಕಾಳಗಗಳ ಉಲ್ಲೇಖಗಳು ಬರುತ್ತವೆ. ಬಲಿಷ್ಠವಾದ ನಿಡುಗಲ್ಲು ಕೋಟೆ ಕಾಳಗವನ್ನು[೭೦] ಬಲ್ಲಾಳನ ಉಚ್ಚಂಗಿ ದುರ್ಗದ ಕೋಟೆ ಕಾಳಗವನ್ನು ಶಾಸನಗಳು ಅನೇಕ ಬಾರಿ ಉಲ್ಲೇಖಿಸುತ್ತವೆ.[೭೧] ಚೋಳನಿಗೆ ಹನ್ನೆರಡು ವರ್ಷಗಳ ಸತತ ಪ್ರಯತ್ನದಿಂದಲೂ ಕೈಸೇರದ ಬಲಿಷ್ಠ ಉಚ್ಚಂಗಿ ದುರ್ಗವನ್ನು ಬಲ್ಲಾಳನು ವಶಪಡಿಸಿಕೊಂಡು ಗಿರಿದುರ್ಗಮಲ್ಲನೆಂಬ ಬಿರುದು ಪಡೆದುದನ್ನು ವಡಗರಹಳ್ಳಿ[೭೨] ಶಾಸನ ಹೇಳಿದೆ. ಲೊಕ್ಕಿಗುಂಡಿಯ ಕೋಟೆಯ ವರ್ಣನೆಯು ವಿಶಿಷ್ಠವಾಗಿದೆ. 'ಪುದಿದಿರ್ದ ಅಟ್ಟಳೆ ಪೆಚ್ಚಿದಾಳು... ಮೇಲ್ಗೊತ್ತಳಂ ಕದನಕ್ಕದುಬುತಮಪ್ಪ ಡೆಂಕಣಿ, ಕರಂ ಗುಂಪುಳ್ಳ ಅಗಳು ಕಾದಿ ಹೋಗದೆನಿಪ್ಪ ಅಗ್ಗದ ದುರ್ಗ''ದೊಂದು ಬಲದಿಂದ ಜೈತುಗನು ಆತ್ಮ ವಿಶ್ವಾಸದಿಂದ ಕಾದುತ್ತಿದ್ದನೆಂದು ಅದನ್ನು ಬಲ್ಲಾಳನು ಬೇಗನೆ ಕೊಂಡನೆಂದು ಹೇಳಿದೆ. ಇಲ್ಲಿ ಕೊಟೆಯ ವಿವಿಧ ಭಾಗಗಳನ್ನು ವಿವರಿಸಿ ಅವು ಹೇಗೆ ಅಭೇದ್ಯವಾಗಿತ್ತೆಂದು ವರ್ಣಿಸಲಾಗಿದೆ.[೭೩] ಕೋಟೆಗಳನ್ನು ಲಗ್ಗೆ ಹತ್ತಲು, ರಕ್ಷಣೆ ಮಾಡಿಕೊಳ್ಳಲು ವಿಶೇಷ ತರಬೇತಿಯನ್ನು ಸೈನಿಕರಿಗೆ ನೀಡಲಾಗುತ್ತಿತ್ತೆಂದು ತೋರುತ್ತದೆ. ಇದಕ್ಕಾಗಿ ವಿಶೇಷ ಪಡೆಗಳು ಇದ್ದಿರಬಹುದು ಶಂಕರನ ಹಳ್ಳಿಯ ಒಂದು ಶಾಸನ[೭೪] ಮಲ್ಲೆಯನಾಯಕ ಮುಖ್ಯವಾದ ಹದಿನೆಂಟು ಕೊಟ್ಟದಾಳುಗಳು ಶಂಕರಶೆಟ್ಟಿ ಹಳ್ಳಿಯನ್ನು ಮುತ್ತಿದ್ದನ್ನು ಉಲ್ಲೇಖಿಸಿದೆ. 'ಕೊಟ್ಟ' ಎಂಬ ಪದಕ್ಕೆ ಕೋಟೆ ಎಂಬ ಅರ್ಥವಿದ್ದು,[೭೫] ಈ ಕೊಟ್ಟದಾಳುಗಳು ವಿಶೇಷವಾಗಿ ಕೋಟೆ ಕಾಳಗ ಮತ್ತು ಕೋಟೆ ರಕ್ಷಣೆಯಲ್ಲಿ ತರಬೇತಿ ಪಡೆದ ವೀರರೆಂದು ಊಹಿಸಬಹುದು. ಅನೇಕ ಸಾಧನಗಳನ್ನು ಬಳಸಿಕೊಂಡು ಕೋಟೆ ಏರುವ ನಿಪುಣರನ್ನು, ಅವರನ್ನು ನಿವಾರಿಸಲು ಬಿಲ್ಲುಬಾಣ, ಎತ್ತುಗಲ್ಲು, ಕಾದಮರಳು, ಗಂಜಿ, ಸಾಸಿವೆ, ಕುದಿಎಣ್ಣೆ, ಅಣ್ಣೆಕಲ್ಲು, ಈಟಿ ಇತ್ಯಾದಿಗಳನ್ನು ಬಳಸುತ್ತಿದ್ದ ರಕ್ಷಣಾದಳದ ನೈಪುಣ್ಯತೆಗಳನ್ನು ಕಾವ್ಯಗಳು ವಿಶೇಷವಾಗಿ ವರ್ಣಿಸುತ್ತವೆ.[೭೬]

ಪಿರಂಗಿ, ಸಿಡಿಮದ್ದುಗಳ ಬಳಕೆಯಿಂದ ಕೋಟೆ ಕಾಳಗದಲ್ಲಿ ಮತ್ತಷ್ಟು ಭೀಕರತೆಗೆ ಎಡೆಯಾಯಿತು. ಇವು ರಕ್ಷಣೆಗೆ ಪೂರಕವಾದಷ್ಟೇ ವಿಧ್ವಂಸಕಾರಿಯೂ ಆಗಿದ್ದವು. 'ಬಿಡದೆ ಬಳಸಿದ ಕಾವಲ ಹೊಡೆಯ ಮೇಲಿಡುವ ಫಿರಂಗಿಯ ತವಗ... ಕಡು ಭಯಂಕರವ ಬೀರಿದವು.[೭೭] ಎಂಬ ವರ್ಣನೆಯಿದೆ. ಈ ಫಿರಂಗಿ ತವಗಗಳು ತೊಪುಗಳನ್ನು ಇರಿಸುವುದಕ್ಕೆ ರಚಿಸಿದ ಎತ್ತರವಾದ ಪೀಠಗಳು. ಇವನ್ನು ಕೋಟೆಯ ಕಾವಲಿನ ತೆನೆಯ ಮೇಲೆ ಇಡುತ್ತಿದ್ದರು. ಹಾರನಹಳ್ಳಿಯ ಕೋಟೆಯಲ್ಲಿ ಇಂಥ ಫಿರಂಗಿ ತವಕಗಳ ಬಳಕೆಯಾಗುತ್ತಿತ್ತು. ಹದಿನೇಳನೇ ಶತಮಾನದ ಶಾಸನವೊಂದು[೭೮] ದಳವಾಯಿಯವರ ಊಳಿಗದ ರಂಗಂಣನವರ ಗುರ್‍ತನದಲ್ಲಿ

ಪಿರಂಗಿತವಗವನ್ನು ಕಟ್ಟಿಸಿದ್ದುದನ್ನು ಹೇಳುತ್ತದೆ. ಕೋಟೆಯೊಳಗೆ ನುಗ್ಗಲು ನೆಲಗನ್ನವಿಕ್ಕುವುದನ್ನೂ, ಆ ಸುರಂಗದೊಳಗೆ ಸಿಡಿಮದ್ದು ತುಂಬಿ ಆ ಪ್ರಯತ್ನವನ್ನು ವಿಫಲಗೊಳಿಸುವುದನ್ನು ಸಿರುಮನೃಪಾಲನ ಕಾವ್ಯದಲ್ಲಿ ವರ್ಣಿಸಿದೆ. ಇವೆಲ್ಲ ಬದಲಾದ ಯುದ್ಧ ಸ್ವರೂಪವನ್ನು ಸೂಚಿಸುತ್ತವೆ. ಅರಸೊತ್ತಿಗೆ ಮಾಯವಾದನಂತರ ಕೋಟೆಗಳು ಪ್ರಾಮುಖ್ಯತೆಯನ್ನು ಕಳೆದುಕೊಂಡು ಜೀರ್ಣಾವಸ್ಥೆಯಲ್ಲಿವೆ.

### ೫.೨.೨. ರಕ್ಷಣಾ ವ್ಯವಸ್ಥೆಯ ಅಂಗವಾಗಿ ವೀರ ಪಡೆಗಳು ಮತ್ತು ವೀರ ಪರಂಪರೆ

ಕರ್ನಾಟಕದ ಉದ್ದಗಲಕ್ಕೂ ಹರಡಿರುವ ಶಾಸನಗಳನ್ನು ಗಮನಿಸಿದಾಗ ಶಸ್ತ್ರಾಸ್ತ್ರ ಪರಿಣತರಾದ ಬಲಶಾಲಿಗಳಾದ ಪದಾತಿ ಪಡೆಯೊಂದಿಗೆ ರಾಜರ ನೆಚ್ಚಿನ ಬಂಟರಾಗಿ ಪ್ರಾಮಾಣಿಕ ಹೋರಾಟಗಾರರಾಗಿ ವಿಶಿಷ್ಟವಾದ 'ವೀರಪಡೆ'ಗಳು ವೀರ ಕುಟುಂಬಗಳೂ ಇದ್ದು, ವೀರ ಪರಂಪರೆಯೊಂದರ ಅಸ್ತಿತ್ವಕ್ಕೆ ಕಾರಣರಾದುದು ಕಂಡುಬರುತ್ತದೆ. ಪ್ರಾಚೀನ ಕುಲಪುತ್ರ, ಪ್ರಿಯಪುತ್ರ, ವೇಳವಾಳಿ, ಜೋಳವಾಳಿ ಇತ್ಯಾದಿ ಹೆಸರುಗಳಿಂದ ಗುರುತಿಸಲ್ಪಟ್ಟ ಸ್ವಾಮಿನಿಷ್ಠ ವೀರರ ವೀರಪರಂಪರೆಯು ಮಧ್ಯಕಾಲೀನ ಕರ್ನಾಟಕದ ಹೊಯ್ಸಳರ ಕಾಲದಲ್ಲಿ ವಿಶೇಷವಾಗಿ ವಿಜೃಂಭಿಸಿದ್ದನ್ನು ಕಾಣುತ್ತೇವೆ. ಕಲ್ಯಾಣ ಚಾಲುಕ್ಯರ ಕಾಲದವರೆಗೆ ಬಳಕೆಗೊಂಡ 'ವೇಳೆವಾಳಿ' 'ಜೋಳವಾಳಿ' ಪಾರಿಭಾಷಿಕ ಪದಗಳಿಗೆ ಪರ್ಯಾಯವಾಗಿ ಕಲಚೂರಿ ಹೊಯ್ಸಳರ ಕಾಲಕ್ಕೆ ಅಂಕ, ಲೆಂಕಯೆಂಬಿವು ಬಳಕೆಯಲ್ಲಿ ಬರತೊಡಗಿದವು. ಹೊಯ್ಸಳರ ಕಾಲದಲ್ಲಿ 'ಗರುಡ' ಎಂಬ ಪದ ಅರಸನ ಸಾವಾದಾಗ ಆತ್ಮ ಬಲಿದಾನ ಮಾಡಿಕೊಳ್ಳುವವರಿಗೆ ಬಳಸುತ್ತಿದ್ದ ಪಾರಿಭಾಷಿಕ ಪದವೆಂಬ ಚಿದಾನಂದಮೂರ್ತಿಯವರ ಅಭಿಪ್ರಾಯವನ್ನು ಒಪ್ಪಲು ಸಾಧ್ಯವಿಲ್ಲವೆಂದು, ಕುವರಲಕ್ಷ್ಮನ ಶಾಸನದಲ್ಲಿ ಪೊರೆದಮಗಂ, ಪ್ರಿಯಪುತ್ರ, ವೇಳೆ, ಲೆಂಕ ಎಂಬ ಪದಗಳು ಬಳಕೆಯಾಗಿದ್ದು ಇವು ಸಮಾನಾರ್ಥವನ್ನು ಕೊಡುತ್ತವೆ, ಪತಿಭಕ್ತಿಗೆ ಗರುಡನನ್ನು ಲಕ್ಷ್ಮನಿಗೆ ಉಪಮಾನವಾಗಿ ಬಳಸಲಾಗಿದೆ ಎಂದು ಎಂ.ಎಂ.ಕಲಬುರ್ಗಿಯವರು ಅಭಿಪ್ರಾಯಪಡುತ್ತಾರೆ.[೭೮] ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿರುವ ಅರಸೀಕೆರೆಯ ಶಾಸನಗಳಲ್ಲಿ ಹೊಯ್ಸಳರ ಶಾಸನಗಳೇ ಅಧಿಕವಾಗಿದ್ದು ಇಂಥ ವೀರರನ್ನು ಗರುಡರೆಂದೂ ಎಲ್ಲೂ ಕರೆದಿಲ್ಲದಿರುವುದೂ ವೇಳೆವಾಳಿ, ಲೆಂಕವಾಳಿ ಜೋಳವಾಳಿಗಳ ಪ್ರಸ್ತಾಪ ಇಲ್ಲದಿರುವುದು ಗಮನಿಸಬೇಕಾದ ಅಂಶ. ಹಲುಕೂರಿನ ಒಂದು ವೀರಗಲ್ಲಿನ ಪಾಠವು ಪೂರ್ಣ ಹಾಳಾಗಿದ್ದು ವಿವರಗಳು ದೊರೆಯುವುದಿಲ್ಲ. ಆದರೆ ಶಾಸನ ಶಿಲ್ಪದಲ್ಲಿ ೪೨ ಜನರ ಸಾವಾಗಿರುವುದನ್ನು ಖಂಡರಿಸಲಾಗಿದೆ. ಸ್ವರ್ಗಾರೋಹಣ ಮಂಟಪದಲ್ಲಿ ಮಧ್ಯದಲ್ಲಿ ನಾಯಕ ಎರಡೂ ಪಕ್ಕಗಳಲ್ಲಿ ಇಬ್ಬರು ಬಂಟರು ಇದ್ದು ಮಂಟಪದ ಹೊರಭಾಗದಲ್ಲಿ ಇತರ ಪಟ್ಟಿಕೆಗಳಲ್ಲಿ ಬಿಲ್ಲು ಹಿಡಿದು ನಿಂತ ವೀರರೂ, ಕೈಮುಗಿದು ಕುಳಿತ ವೀರರ ಸಾಲು ಕಂಡುಬರುತ್ತದೆ. ಇದು ಯುದ್ಧದಲ್ಲಿ ಮಡಿದ ವೀರರಿಗೆ ಸಾಮೂಹಿಕವಾಗಿ ಹಾಕಿರುವ ವೀರಗಲ್ಲೆಂಬುದಕ್ಕಿಂತ ಯುದ್ಧದಲ್ಲಿ ಮಡಿದ ಒಡೆಯನಿಗೆ ವೇಳೆಗೊಂಡ ಲೆಂಕರಿರಬಹುದೆಂದು ಊಹಿಸುವುದು ಸಾಧುವಾದುದು.

ಪತಿ ಭಕ್ತರಾದ ವೀರರನ್ನು ಕೂಸ, ಪುತ್ರ, ಅಣುಗ, ಡಿಂಗರಿಗ, ಮಕ್ಕಳ್ , ಬೆಸಮಕ್ಕಳ್ , ಪ್ರಿಯಪುತ್ರ ಇತ್ಯಾದಿ ಪದಗಳಿಂದ ಈ ಪ್ರದೇಶದ ಶಾಸನಗಳು ಕರೆದಿವೆ. ವೀರ ವೃತ್ತಿಯೇ ಜೀವನಾಧಾರವಾದ ಕೆಲವು ವೀರರ ಪಡೆಗಳು ಅಥವಾ ಆಯುಧ ಜೀವಿಗಳು ಇಲ್ಲಿನ ಶಾಸನಗಳಲ್ಲಿ ಕಂಡುಬರುತ್ತಾರೆ. ಅವರನ್ನು ಭೇರುಂಡನ ಮೊತ್ತದ ಕೂಸುಗಳು, ಎಕ್ಕಟಿಗರು, ಮೈಮೆಟ್ಟಿಗಳು, ತುಳಿಲ ಸಂದರು ಇತ್ಯಾದಿ ಹೆಸರುಗಳಲ್ಲಿ ಉಲ್ಲೇಖಿಸಲಾಗಿದೆ. ಅವುಗಳನ್ನು ಒಂದೊಂದಾಗಿ ಚರ್ಚಿಸಬಹುದು.

### ೫.೨.೨.೧. ಭೇರುಂಡದ ಮೊತ್ತದ ಕೂಸುಗಳು

ಕೂಸರ ಉಲ್ಲೇಖ ೧೨-೧೩ನೇ ಶತಮಾನದ ಹೊಯ್ಸಳ ಅರಸರ ಶಾಸನಗಳಲ್ಲಿ ಬೇಲೂರು, ಅರಸೀಕೆರೆ, ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಹೆಚ್ಚಾಗಿ ಕಾಣಿಸಿಕೊಂಡಿದೆ. ಹಾಸನ, ತರೀಕೆರೆ, ಶಿವಮೊಗ್ಗ, ನೆಲಮಂಗಲ, ನಾಗಮಂಗಲಗಳಲ್ಲಿ ಒಂದೊಂದು ಶಾಸನ ದೊರಕಿದೆ.

ವೀರಸಿದ್ಧಾಂತವನ್ನು ಸ್ವಾಮಿನಿಷ್ಠೆಯನ್ನು ಮೈಗೂಡಿಸಿಕೊಂಡ ವೀರ ವೃತ್ತಿಯನ್ನು ಪಾಲಿಸಿದ ಈ ಕೂಸರು ಕೂಡ ಇತರ ವೀರರಂತೆ ಸ್ವಾಮಿನಿಷ್ಠ ಅಣುಗರಾಗಿ ಹೊಯ್ಸಳ ಅರಸರ ಸೇವೆ ಮಾಡಿದ್ದಾರೆ. ಅನ್ನದ ಋಣಕ್ಕಾಗಿ ಪ್ರಾಣ ನೀಡಿದ್ದಾರೆ.

ಕೂಸ ಎಂಬುದು ಕೆಲವು ವೀರರ ಹೆಸರಿನಲ್ಲಿ ಪೂರ್ವ ಪದವಾಗಿ ಬಳಕೆಯಾಗಿದೆ. ಕೂಸಕಾಳಯ್ಯನೆಂಬ ವೀರಭಟ "ಸ್ವಾಮಿಕಾರ್ಯಕ್ಕೆ ತಲೆಗೊಟ್ಟ"ನೆಂದು ದುದ್ದದ ವೀರಗಲ್ಲೊಂದು ತಿಳಿಸುತ್ತದೆ.[೭೯] ವೀರಬಲ್ಲಾಳನು ಕುರುಗೋಡು ಕೊಪ್ಪದ ಕೋಟೆಗೆ ಲಗ್ಗೆ ಇಟ್ಟಾಗ ಕೂಸ ರಾಮಯ್ಯ ಹೋರಾಡಿ ಮಡಿದಿದ್ದಾನೆ. ಇವನ ತಂದೆ ಅಜ್ಜ ಹೊಯ್ಸಳ ರಾಜರ ಮೈಗಾವಲಿನ ಲೆಂಕರೆಂದು ಈ ಶಾಸನ ಹೇಳಿದೆ.[೮೦] ಇದೇ ಕೋಟೆಯ ಲಗ್ಗೆಯಲ್ಲಿ ಕೂಸ ಬೋಕಣ್ಣನೆಂಬ ವೀರ "ವೀರವೆಸರು ಕರಮೊಪ್ಪಿರೆ ನರ... ಕರಿಯ ಮಾಂಸಮಂ ಭೂತಗಣಕ್ಕೆ ಭೂತ ಭೋಜನ" ಮಾಡಿಸಿ ವೀರಸ್ವರ್ಗ ಸೇರಿದ್ದಾನೆ.[೮೧]

ಕೂಸರ ಹೆಸರಿನ ಬಿಡಿಯಾದ ಉಲ್ಲೇಖಗಳಲ್ಲದೆ, ಅವರ ವಿಶೇಷ ವೀರಪಡೆಯ ಉಲ್ಲೇಖವೂ ಶಾಸನಗಳಲ್ಲಿ ಕಂಡುಬಂದಿದೆ. ಅದನ್ನು 'ಭೇರುಂಡದ ಮೊತ್ತ' ಎಂದು ಕರೆಯಲಾಗಿದೆ. ಅರಸೀಕೆರೆಯ ಮೂರು ಶಾಸನಗಳು ಈ ವೀರ ಪಡೆಗೆ ಸೇರಿದ್ದ ಭೇರುಂಡನ ಮೊತ್ತದ ಘಂಟೆಯ ಸಿಂಗಯ್ಯ ನಾಗಯ್ಯ[೮೨] ಭೇರುಂಡನ ಮೊತ್ತದ ಕೂಸ ದಲ್ಲಯ್ಯ[೮೩] ಎಂಬ ಇಬ್ಬರು ಪ್ರಮುಖರನ್ನು ಕುರಿತಿವೆ. ಚನ್ನರಾಯಪಟ್ಟಣದ ನವಿಲೆಯ ಶಾಸನವೊಂದು[೮೪] ಕ್ರಿ.ಶ.೧೨೧೮ರಲ್ಲಿ ಇಮ್ಮಡಿ ವೀರ ಬಲ್ಲಾಳನು ಭೇರುಂಡದ ಮೊತ್ತದ ಕೂಸುಗಳಿಗೆ ಉಂಬಳಿಯಾಗಿ ನವಿಲೆ ಗ್ರಾಮವನ್ನು ನೀಡಿದನೆಂದು ಅದನ್ನು ಆ ಕೂಸುಗಳೆಲ್ಲರೂ ಏಕಮತ್ಯವಾಗಿ ಅಗ್ರಹಾರವನ್ನಾಗಿ ಮಾಡಿದ್ದನ್ನು ಹೇಳುತ್ತದೆ. ಅಲ್ಲಿ ಅನೇಕ ಪ್ರಮುಖ ಕೂಸರನ್ನು ಹೆಸರಿಸಿದೆ. ಅವರಲ್ಲಿ ಹೆಚ್ಚಿನವರು ಆ ನವಿಲೆಯ ಆಸು ಪಾಸಿನ ಗ್ರಾಮಕ್ಕೆ ಸೇರದವರೆಂದು ಇವರ ಊರುಗಳ ಹೆಸರಿನಿಂದ ತಿಳಿಯಬಹುದು.

ಈ ಶಾಸನದ ಎರಡನೆಯ ಭಾಗ ಸಂಸ್ಕೃತದಲ್ಲಿದ್ದು ಅದು ಇಮ್ಮಡಿ ವೀರ ನರಸಿಂಹನ ಕಾಲದಲ್ಲಿ ರಚಿತವಾಗಿದೆ. ಇಲ್ಲಿ ಈ ವೀರ ಪಡೆಯನ್ನು 'ಭೇರುಂಡದ ವರ್ಗ' ಎಂದು ಕರೆದಿದೆ. ಇಲ್ಲಿನ ವಿಶೇಷವೆಂದರೆ ಇದು ಭೇರುಂಡನ ಮೊತ್ತದ ಅಥವಾ ವರ್ಗದವರ ಕಾರ್ಯಚಟುವಟಿಕೆಗಳ ಮೇಲೆ ಬೆಳಕು ಚೆಲ್ಲುತ್ತದೆ. ಇಮ್ಮಡಿ ವೀರ ನರಸಿಂಹ ಪಟ್ಟಕ್ಕೆ ಬಂದ ಮೇಲೆ ಮೊದಲು ಕೈಗೊಂಡ ಮಗರೆಯ ದಿಗ್ವಿಜಯದಲ್ಲಿ ಈ ವೀರ ಭೇರುಂಡನ ಮೊತ್ತ ಅವನೊಂದಿಗೆ ವಿಶೇಷ ಸಾಹಸವನ್ನು ಮೆರೆಯಿತೆಂದು ಆ ಶಾಸನ ಹೇಳುತ್ತದೆ. ಅಷ್ಟೇ ಅಲ್ಲ ಕಂಚಿಯನ್ನು ಗೆದ್ದ ಮೇಲೆ ಅಲ್ಲಿ ಯಾವುದೇ ರೀತಿಯ ದಂಗೆಗೆ ಅವಕಾಶವಾಗದಂತೆ ಈ ಭೇರುಂಡವರ್ಗವು ಕೆಲವು ಕಾಲ ತಂಗುವಂತೆ ವೀರನರಸಿಂಹ ಆಜ್ಞಾಪಿಸುತ್ತಾನೆ. ಅದರಂತೆ ಅಲ್ಲಿ ನೆಲೆಸಿದ ಈ ಭೇರುಂಡರು ಶಾಂತಿ ಪಾಲನೆಯ ಕರ್ತವ್ಯವನ್ನು ನಿಭಾಯಿಸುತ್ತಿದ್ದು, ಆ ಸಂದರ್ಭದಲ್ಲಿ ಅಲ್ಲಿನ ಅಲ್ಲಾಳನಾಥನ ಭೃತ್ಯರಾಗಿ ಶಂಖ ಚಕ್ರಗಳ ಮುದ್ರೆಯನ್ನು ತಮ್ಮ ಭುಜಗಳಿಗೆ ಹಾಕಿಸಿಕೊಂಡರು ಎಂದಿದೆ. ಇದು ಬಹುಷಃ ಅವರು ವೈಷ್ಣವ ದೀಕ್ಷೆಯನ್ನು ಕೈಗೊಂಡರೆಂಬುದನ್ನು ಹೇಳುತ್ತದೆ. ಕೆಲವು ಕಾಲ ಅಲ್ಲಿ ತಂಗಿದ್ದ ನಂತರ ಅರಸನ ಆಜ್ಞೆಯನ್ನು ಪಡೆದು ಸ್ವದತ್ತ ಗ್ರಾಮಕ್ಕೆ ಹಿಂದಿರುಗಿ ಅಲ್ಲಿನ ಅಲ್ಲಾಳ ನಾಥನಿಗೆ ದಾನ ಬಿಟ್ಟಿದ್ದಾರೆ. ಇದೇ ರೀತಿ ಮೂರನೇ ಬಲ್ಲಾಳನು ಬಾರಕೂರಿನಲ್ಲೊಂದು ವಿಶೇಷ ದಂಡನ್ನಿಟ್ಟಿದ್ದು, ಆ ಪಡೆಯ ಮುಖ್ಯಸ್ಥನಾಗಿದ್ದ ಅಂಕೆಯ ದಂಡನಾಯಕ ಕೂಸದ ಬಾಗಿವಾಳಿನವನೆಂದು ಒಂದು ಶಾಸನ ತಿಳಿಸುತ್ತದೆ.[೮೫] ಇದನ್ನು ಗಮನಿಸಿದಾಗ ಈ ಕೂಸರು ನಿರ್ಭಯವಾಗಿ ಯಾವುದೇ ಪ್ರದೇಶಕ್ಕೆ ಬೇಕಾದರೂ ಹೋಗಿ ನೆಲಸುತ್ತಿದ್ದು ಶಾಂತಿಪಾಲನೆಯ ಕಾರ್ಯವನ್ನು ಕೈಗೊಳ್ಳುತ್ತಿದ್ದರೆಂಬುದು ತಿಳಿದುಬರುತ್ತದೆ.

ಇವರಿಗೆ ಭೇರುಂಡದ ಮೊತ್ತವೆಂದು ಕರೆಯಲು ಕಾರಣವೇನು? ಗಂಡಭೇರುಂಡ ಮತ್ತು ಭೇರುಂಡ ಒಂದೇ ಪಕ್ಷಿಯ ಭಿನ್ನ ಹೆಸರಷ್ಟೆ.[೮೬] ಗಂಡಭೇರುಂಡ ಪಕ್ಷಿಯು ಯಾವೆಲ್ಲಾ ಗುಣಲಕ್ಷಣಗಳ ಪ್ರತೀಕವಾಗಿ ನಮ್ಮ ಜೈನ, ಬೌದ್ಧಸಾಹಿತ್ಯ ಮತ್ತು ವೈದಿಕ ಪುರಾಣಗಳಲ್ಲಿ ಚಿತ್ರಣಗೊಂಡಿದೆ ಎಂಬುದನ್ನು ವ್ಯಾಲೆಂಟೀನ ಸ್ಟ್ಯಾಚೆ ರೊಸೆನ್ ಅವರು ಚರ್ಚಿಸಿದ್ದಾರೆ.[೮೭] "venerable Mahavira was always watchful like the fabulous bird Bharunda'' 'Though other sleep be thou awake!... be always on the alert... be always watchful like a Bharunda bird'' ಎಂಬ ಕಲ್ಪಸೂತ್ರದ ಕೆಲವು ವಾಕ್ಯಗಳು ಭೇರುಂಡ ಪಕ್ಷಿಯ ವಿಶಿಷ್ಟ ಗುಣವಾಗಿ ಎಚ್ಚರ ಮತ್ತು ಜಾಗರೂಕತೆಯನ್ನು ಹೇಳುತ್ತವೆ. ಭೇರುಂಡ ಪಕ್ಷಿಯ ಒಂದು ತಲೆಯು ನಿದ್ದೆ ಮಾಡುವಾಗ ಮತ್ತೊಂದು ಎಚ್ಚರವಿದ್ದು ಕಾಯುವುದರಿಂದ ಅದನ್ನು ಯಾರೂ ಜಯಿಸಲು ಸಾಧ್ಯವಿಲ್ಲವೆನ್ನುವ ನಂಬಿಕೆಯಿರುವ ಕಥೆಗಳಿವೆ.[೮೮] ಈ ಎಚ್ಚರ (ಅಲರ್ಟ್‌ನೆಸ್) ಜಾಕರೂಕತೆ (ವಿಜಿಲೆನ್ಸ್)ಗಳು ಭೇರುಂಡದ ಪ್ರಧಾನ ಗುಣ. ಅದರೊಂದಿಗೆ ಭೇರುಂಡದ ಇನ್ನೂ ಇತರ ನಾಲ್ಕು ಪ್ರಧಾನ ಗುಣಗಳನ್ನು ಶಾಸನಗಳು ತಿಳಿಸುತ್ತವೆ.

'ಧರ್ಮೇಣ ಶೌರ್ಯ ಸತ್ಯೇನ ತ್ಯಾಗೇನಚ ಮಹಿತಲೆ
ಗಂಡಭೇರುಂಡ ಸದೃಶೋ ನಭೂತೋ ನಭವಿಶ್ಯತಿ"

ಎಂದು ಬಳ್ಳಿಗಾವೆಯ ೧೦೪೭ರ ಶಾಸನವು ಹೊಗಳಿದೆ.[೮೯] ಇಲ್ಲಿ ಧರ್ಮ ಶೌರ್ಯ ಸತ್ಯ ತ್ಯಾಗಗಳು ಗಂಡಭೇರುಂಡದ ವಿಶೇಷ ಗುಣಗಳಾಗಿ ಪ್ರತೀತವಾಗಿದೆ. ಧರ್ಮ, ಶೌರ್ಯ, ಸತ್ಯ, ತ್ಯಾಗ ಮತ್ತು ವೀರನಿಗೆ ಅತ್ಯಂತ ಅವಶ್ಯಕವಾದ ಜಾಗರೂಕತೆ ಸದಾ ಮುನ್ನುಗ್ಗಲು ಸಿದ್ಧವಾದ ಎಚ್ಚರ ಈ ಗುಣಗಳು ಅಂದಿನ ಕ್ಷಾತ್ರಯುಗದಲ್ಲಿ ವಿಶೇಷವಾಗಿ ಪ್ರಾಮುಖ್ಯತೆಯನ್ನು ಪಡೆದಿದ್ದುದು ಸಾಹಿತ್ಯದಿಂದ, ಶಾಸನಗಳಿಂದ ತಿಳಿದುಬರುತ್ತದೆ. ಗಂಡಭೇರುಂಡನೆಂಬ ಬಿರುದನ್ನು ಧರಿಸಲು ಈ ಕಾರಣಕ್ಕಾಗಿಯೇ ಅರಸರು ವೀರರು ಬಯಸುತ್ತಿದ್ದರು. ಕೇವಲ ಅರಸರಷ್ಟೇ ಅಲ್ಲ ಅವರ ಕೈಕೆಳಗಿನ ವೀರ ಅಧಿಕಾರಿಗಳು, ರೂವಾರಿಗಳಿಗೂ ಇಂತಹ ಬಿರುದಿದ್ದುದು ಕಂಡುಬರುತ್ತದೆ.

೧೦-೧೧ನೇ ಶತಮಾನದ ಕಾಲದಲ್ಲಿ ಮಾನವ ದೇಹದ ಪಕ್ಷಿತಲೆಯ ಭೇರುಂಡದ ಶಿಲ್ಪಗಳು ದಾನಶಾಸನಗಳಲ್ಲಿ,[೯೦] ವೀರಗಲ್ಲುಗಳಲ್ಲಿ[೯೧] ಕಾಣಿಸಿಕೊಳ್ಳುವುದಕ್ಕೆ ಪ್ರಾರಂಭವಾದವು. ಗಂಡಭೇರುಂಡ ಪಕ್ಷಿ ಮತ್ತು ಗರುಡ ಒಂದೇ ಸತ್ವವನ್ನೇ ಪ್ರತಿನಿಧಿಸುತ್ತವೆಯೇನೋ ಎನಿಸುತ್ತದೆ. ಒಂದು ಬೌದ್ಧ ಪುರಾಣ ಕಥೆಯಲ್ಲಿ ಈ ಭೇರುಂಡ ಪಕ್ಷಿಯ ಒಂದು ತಲೆಯನ್ನು ಗರುಡ ಎಂದೂ ಮತ್ತೊಂದು ತಲೆಯನ್ನು ಉಪಗರುಡ ಎಂದೂ ಕರೆಯಲಾಗಿದೆ. ಭೇರುಂಡನೂ ಗರುಡನೂ ಮುಖ್ಯವಾಗಿ ಸ್ವಾಮಿನಿಷ್ಠರಾಗಿ, ವಾಹನಗಳಾಗಿ ಗುರುತಿಸಲ್ಪಟ್ಟಿದ್ದಾರೆ.[೯೨]

ಈ ಹಿನ್ನೆಲೆಯಲ್ಲಿ ಹೊಯ್ಸಳ ಅರಸರು ಗಂಡಭೇರುಂಡರೆಂಬ ಬಿರುದನ್ನು ತಾವು ಧರಿಸಿರುವುದಲ್ಲದೆ, ತಮ್ಮ ನಿಷ್ಠಾವಂತ ವೀರಪಡೆಯನ್ನು ಈ ಹೆಸರಿನಿಂದ ಕರೆದಿದ್ದಾರೆ. ಸ್ವಾಮಿನಿಷ್ಠರೂ ಸಾಹಸಿಗರೂ ಆದ ಈ ವೀರರು ಧರ್ಮ, ಶೌರ್ಯ, ದಯ, ಸತ್ಯ, ತ್ಯಾಗ ಮತ್ತು ಯೋಧನಿಗಿರಬೇಕಾದ ಜಾಗರೂಕತೆಯ ಗುಣಗಳನ್ನು ಹೊಂದಿದ್ದುದರಿಂದ ಇವರನ್ನು ಭೇರುಂಡದ ಮೊತ್ತ ಅಥವಾ ವರ್ಗವೆಂದು ಕರೆಯಲಾಗಿದೆ.

ಇವರನ್ನು 'ಭೇರುಂಡದ ಮೊತ್ತದ ಕೂಸರು' ಎಂದಿರುವುದು ವಿಶೇಷ. ಈ ವೀರರು ಕೂಸರು ಅಂದರೆ ಭೇರುಂಡದ ಮರಿಗಳು (ಯಂಗ್ ಮಿಲಿಟೆಂಟ್ಸ್) ಎಂದು ಅರ್ಥೈಸಬಹುದು. ಕೂಸ ಚಟ್ಟನೆಂಬುವವನನ್ನು 'ಕೂಸನೊಡನಾಡುವೆಡೆಯೊಳ್ ಭಾಸುರ ಸುರಮಂತ್ರಿ ಮಂತ್ರದೊಳ್ ರಿಪುತಂತ್ರೋಗ್ರಾಸುರ ರಣರಂಗಾಗ್ರದೊಳ್ ..." ಎಂದು ಸ್ವಾಮಿ ಸಂಪತ್ಪರಿಪೂರ್ಣನಾದ ಹನುಮಂತನಂತೆ ಒಂದನೇ ಹೊಯ್ಸಳ ನರಸಿಂಹನ ಅಣುಗನಾಗಿದ್ದನೆಂದು ಹೊಗಳಲಾಗಿದೆ.[೯೩] ಕೂಸರನ್ನು ಅಣುಗರೆಂದು ಸ್ವಾಮಿಕಾರ್ಯಕ್ಕೆ ತಲೆಗೊಟ್ಟವರೆಂದು ಆಚಳಿತವಾಕ್ಯರೆಂದು ಕರೆದಿರುವುದನ್ನು ಗಮನಿಸಿದಾಗ ಕರ್ನಾಕಟದ ವೀರ ಪರಂಪರೆಯಲ್ಲಿ ಸ್ವಾಮಿಕಾರ್ಯಕ್ಕೆ ಒದಗಿ ಪ್ರಸಿದ್ಧರಾದ ವೀರಭಟರು, ಪ್ರೇಮಾಲಯಸುತನ್, ಮನೆಮಗತಿನ್, ಪ್ರಿಯಪುತ್ರ, ವೇಳೆವಾಳಿ, ಜೋಳವಾಳಿ, ವೀರ ಸಿದ್ಧಾಂತಿಗಳೆಂದು ಪ್ರಸಿದ್ಧರಾದ

ತುಳಿಲಾಳ್‌ಗಳು, ಗರುಡನಿಗೆ ಸರಿದೊರೆಯಾದ ಲೆಂಕರ ಪರಂಪರೆಯಲ್ಲಿ ಇನ್ನು ಮುಂದೆ ಈ ಕೂಸರನ್ನು ಸೇರ್ಪಡೆ ಮಾಡಬೇಕಾಗುತ್ತದೆ.

ವೈಷ್ಣವ ಧರ್ಮದ ವಿಶೇಷ ಪ್ರಭಾವಕ್ಕೆ ಒಳಗಾದ ದಕ್ಷಿಣ ಕರ್ನಾಟಕದ ಭಾಗದಲ್ಲಿ ಸ್ವಾಮಿಕಾರ್ಯಕ್ಕೆ ಪ್ರಾಣವನ್ನು ಮುಡಿಪಾಗಿಟ್ಟ ಇಂಥ ವೀರರನ್ನು ಸ್ವಾಮಿ ಕಾರ್ಯಧುರಂಧರರಾದ ವಿಷ್ಣುವಿನ ಭಕ್ತ, ಬಂಟ ಗರುಡನಿಗೂ ರಾಮನ ಬಂಟ ಹನುಮಂತನಿಗೂ ಹೋಲಿಸಿ ವಿಶೇಷವಾಗಿ ವರ್ಣಿಸಿ ಉತ್ಪ್ರೇಕ್ಷಿಸಲಾಗಿದೆ. ಊಳಿಗಮಾನ್ಯ ವ್ಯವಸ್ಥೆಯುಳ್ಳ ಸಾಮಾಜಿಕ ಸಂರಚನೆಯು ಇಂತಹ ಸೇವಕ ವರ್ಗವೊಂದು ವ್ಯಾಪಕವಾಗಿ ಬೆಳೆಯುವಂತೆ ಪ್ರೋತ್ಸಾಹ ನೀಡಿದ್ದನ್ನು ಶಾಸನಗಳು ತೆರೆದು ತೋರಿಸುತ್ತವೆ. ಇಂತಹ ಸೇವಕ ವರ್ಗದ ಸುಭಟರು ಬಂಟರೆಂದು ಕರೆಸಿಕೊಂಡು ಮೈಗಾವಲಿನವರಾಗಿ ನಿಷ್ಠಾವಂತ ಲೆಂಕರಾಗಿ ಸೇವೆಸಲ್ಲಿಸಿದ್ದಾರೆ. 'ಭೇರುಂಡನ ಮೊತ್ತ'ವೆಂಬ ಕೂಸರ ವೀರ ಪಡೆಯನ್ನು ಶಾಸನಗಳು ಸ್ಪಷ್ಟವಾಗಿ ಉಲ್ಲೇಖಿಸಿವೆಯಾದ್ದರಿಂದ ಹೊಯ್ಸಳರ ವಿಶೇಷ ಸೈನ್ಯ ಪಡೆಯನ್ನು ಇನ್ನು ಮುಂದೆ 'ಭೇರುಂಡನ ಮೊತ್ತ' ಅಥವಾ 'ಭೇರುಂಡನ ವರ್ಗ'ವೆಂದೇ ಕರೆಯಬೇಕಾಗುತ್ತದೆ. ಗರುಡನಂತೆ ನಿಷ್ಠರಾದ ಲೆಂಕರು ಅರಸರೊಂದಿಗೆ ಪ್ರಾಣ ನೀಗಿಕೊಂಡು ವೇಳೆವಾಳಿಗಳಾದರೆ, ಈ ಭೇರುಂಡನ ಮೊತ್ತದ ಕೂಸರು ಜೋಳವಾಳಿಗಳೆನ್ನಬಹುದು. ಹಾಗಾಗಿ ಕೂಸರು, ಕೂಸುಗಳು ಹೊಯ್ಸಳರ ಕಾಲದಲ್ಲಿ ಕಂಡುಬಂದ ಅರಸರ ನೆಚ್ಚಿನ ವೀರಭಟರು, ಮಕ್ಕಳು, ಅಣುಗರು ಎಂದು ಹೇಳಬೇಕಾಗುತ್ತದೆ.

ಕೆಲವು ಕೂಸರು ಅರಸರಿಗಷ್ಟೇ ಅಲ್ಲದೆ ಸಿರಿವಂತ ವರ್ತಕರಿಗೂ ಸೇವೆ ಸಲ್ಲಿಸುತ್ತಿದ್ದಂತೆ ತೋರುತ್ತದೆ. ತೆಲ್ಲಿಗ ಬಿಟ್ಟಿಮಯ್ಯನ ಮಗ ತೆಲ್ಲಿಗ ಬರ್ಮಣ್ಣನ ಬಂಟನೊಬ್ಬನನ್ನು ಕೂಸನೆಂದು ಒಂದು ಶಾಸನ ಕರೆದಿದೆ.[೯೪]

ಒಟ್ಟಿನಲ್ಲಿ ವೀರ ಯೋಧರಾದ ಈ ಕೂಸರು ತಮ್ಮ ಒಡೆಯರಿಗೆ ಸಲ್ಲಿಸಿದ ಸೇವೆಗಾಗಿ ಅಣುಗ ಜೀವಿತವೆಂದೂ ಮೈಜೀವಿತವೆಂದೂ ಆಸಿಯಮಾನಿ[೯೫] ಎಂದೂ ಕೊಡಗಿ ಗ್ರಾಮಗಳನ್ನೂ[೯೬] ಉತ್ತಮ ಸ್ಥಾನಮಾನಗಳನ್ನೂ, ಪಡೆದಿದ್ದುದನ್ನು ಶಾಸನಗಳು ಹೇಳುತ್ತವೆ. ಅಲ್ಲದೆ ಅವರು ಅನೇಕ ಸಾಮಾಜಿಕ ಧಾರ್ಮಿಕ ಕಾರ್ಯಗಳನ್ನೂ ಕೈಗೊಂಡಿದ್ದಾರೆ. ಪ್ರಸಿದ್ಧನಾದ ಕೂಸ ಚಟ್ಟನೆಂಬುವವನು ಚಟ್ಟೇಶ್ವರ ದೇವರಿಗೆ 'ಭುವನಭೂಷಣ' ಎಂಬ ಮಂದಿರವನ್ನೂ 'ಚಟ್ಟಸಮುದ್ರ'ವೆಂಬ ಕೆರೆಯನ್ನು ಕಟ್ಟಿಸಿದನೆಂದು ಹೇಳಿದೆ.[೯೭] ಹಿರಿಯ ಭೇರುಂಡನ ಮೊತ್ತದ ಕೂಸ ಘಂಟೆಯ ಸಿಂಗಯ್ಯ ನಾಗಯ್ಯನೆಂಬುವವನು ಮಹಾಪಸಾಯ್ತನಾಗಿ ತನಗೆ ಸರ್ವ ಬಾಧಾಪರಿಹಾರವಾಗಿ ಬಂದ ಸಾತಿಯಬ್ಬೆಗೆರೆಯನ್ನು ಮೈಜೀವಿತಕ್ಕೆ ಆಳುತ್ತಿದ್ದನು. ತನ್ನ ಹೆಸರಿನಲ್ಲಿ ಹಳ್ಳಿಯೊಂದನ್ನು ನಿರ್ಮಿಸಿ ತಂದೆಯ ಹೆಸರಿನಲ್ಲಿ ಮಾಚಸಮುದ್ರವೆಂಬ ಕೆರೆಯನ್ನೂ ಸೋಮನಾಥ ದೇವಾಲಯವನ್ನೂ ಕಟ್ಟಿಸಿದ್ದಾನೆ.[೯೯] ಮತ್ತೊಂದು ಶಾಸನ ಅವನು ನಿರ್ಮಿಸಿದ

ಹಳ್ಳಿಯಲ್ಲಿ ಸಾಸಮುನಿಯೆಂಬುವವನು ಈ ಸಿಂಗಯ್ಯನ ಹೆಸರಿನ ದೇವಾಲಯವನ್ನು ಕಟಿಸಿದನೆಂದು ಅದಕ್ಕೆ ಈ ಸಿಂಘಯ್ಯನು ಅಪಾರವಾದ ದಾನ ಬಿಟ್ಟಿದ್ದನ್ನು ಹೇಳುತ್ತದೆ. ಈ ಘಂಟೆಯ ಸಿಂಘನೆಂಬುದು ನಾಗಯ್ಯನ ಬಿರುದಿರಬಹುದು.

ಮಹಾಪಸಾಯ್ತ ಪರಮ ವಿಶ್ವಾಸಿ ಸ್ವಾಮಿದ್ರೋಹರಗಂಡ ಮಚ್ಚರಿಪರಗಂಡ ಭೇರುಂಡನ ಮೊತ್ತದ ಕೂಸ ದಲ್ಲಯ್ಯ ನೀರಗುಂದನಾಡ ಕುಮಾರ ವ್ರಿತ್ತಿಯ ಹಿರೇವಾಳಹಳ್ಳಿಯಲ್ಲಿ ಕೆರೆಯೊಂದನ್ನು ಕಟ್ಟಿಸಿ ಕೆರೆ ಕೊಡಗಿಯನ್ನು ಪಡೆದಿದ್ದಾನೆ.[೧೦೦] ಯೆರೆಯಣ್ಣನು ಹಗಮಗೆರೆಯ ಹೊಲೆಯರ ಜೀವದ ಸಾಲಿನ... ಬಾಲವಣವನ್ನು ಬಲ್ಲಾಳ ಜೀಯರಿಗೆ ದತ್ತಿ ಬಿಟ್ಟಿದ್ದಾನೆ.[೧೦೧]

ಕೂಸರ ಪ್ರಾಚೀನತೆಯನ್ನು ಎಷ್ಟು ಹಿಂದಕ್ಕೆ ಒಯ್ಯಬಹುದು ಎಂದು ಹುಡುಕಾಟ ನಡೆಸಿದಾಗ, ಕ್ರಿ.ಶ.ಸು.ಮೂರನೇ ಶತಮಾನದ ಸಂಘಂ ಸಾಹಿತ್ಯದಲ್ಲಿನ ಉಲ್ಲೇಖದಿಂದ ಕೋಶರ್ ಎಂಬ ಆಯುಧ ಜೀವಿಗಳ ಸಂಚಾರಿ ವೀರ ಪಡೆ ಇದ್ದು, ದಕ್ಷಿಣದ ಅರಸರುಗಳಲ್ಲಿ ಕೂಲಿ ಸಿಪಾಯಿಗಳಾಗಿ ದುಡಿಯುತ್ತಿದ್ದರೆಂದು ತಿಳಿದುಬರುತ್ತದೆ. ಇವರು ನಾಲ್ಕು ಭಾಷೆಗಳನ್ನು ಬಲ್ಲವರಾಗಿದ್ದರೆಂದು ಬಹುಷಃ ಅವು ದಕ್ಷಿಣಭಾರತದ ಕನ್ನಡ, ತಮಿಳು, ತೆಲುಗು, ತುಳು ಭಾಷೆಗಳೇ ಇರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅವರನ್ನು "ಸುವರ್ಣಾಭರಣಗಳಿಂದ ಅಲಂಕೃತರಾದ ಕೋಶರ್ ಜನಾಂಗದ... ತುಳುನಾಡು" ಎಂದು ತುಳುನಾಡಿನೊಂದಿಗೆ ಗುರುತಿಸಲಾಗಿದೆ. ಕಪ್ಪು ಕಂಗಳ ಕೋಶರರ ಮುಖದಲ್ಲಿ ಕಬ್ಬಿಣದ ಆಯುಧಗಳಿಂದಾದ ಗಾಯದ ಕಲೆಗಳನ್ನು ಕಾಣಬಹುದೆಂದು, ಈ ಕೋಶರ್ ಯುವಕರು ಹಲಸಿನ ಮರದ ಕಾಂಡದಲ್ಲಿ ಗುರುತು ಮಾಡಿ ಈಟಿಯ ಗುರಿ ಹಿಡಿಯುತ್ತಿದ್ದರೆಂದು ತಿಳಿಸಿದೆ. ಕೋಶರರು ಪ್ರಾಮಾಣಿಕತೆಗೂ ಶೌರ್ಯ ಪರಾಕ್ರಮಗಳಿಗೂ ಹೆಸರು ವಾಸಿಗಳಾಗಿದ್ದರೆಂದೂ ತುಳುನಾಡಿನಲ್ಲಿ ಮಾತ್ರವಲ್ಲದೆ ತಮಿಳು ನಾಡಿನ ಬೇರೆ ಬೇರೆ ಸಂಸ್ಥಾನಗಳಲ್ಲಿ ನೆಲೆಸಿ ಅಲ್ಲಲ್ಲಿಯ ಸೇನೆಗಳಲ್ಲಿ ಸೇರಿ ಕೂಲಿ ಸಿಪಾಯಿಗಳಾಗಿ ಸೇವೆ ಸಲ್ಲಿಸುತ್ತಿದ್ದರೆಂದೂ ಸಂಘಂ ಕಾಲದ ಇತರ ಪದ್ಯಗಳಿಂದ ತಿಳಿದುಬರುತ್ತದೆ.[೧೦೨]

೮ನೇ ಶತಮಾನದ ಜೈನ ದಾನಶಾಸನಗಳಲ್ಲಿ 'ಅದರ್ಕೆ ತೊಳ್ಳರಾ ಕೋಸಿಗರು ಎಟ್ಪಿತ್ತರು ಸಾನ್ದಾರುಂ ಸಾಕ್ಷಿಯು ನರಶಾಸನಮಾಗೆ"' ಅದರಕೆ ಸಾಕ್ಷಿ ತೊಳಲ ಕಾಸಿಕರೆಟ್ಪಿತರ್ " ಎಂಬ ಉಲ್ಲೇಖ ಕಂಡುಬರುತ್ತದೆ.[೧೦೩] ಆ ದಾನಕ್ಕೆ ಸಾಕ್ಷಿಯೂ, ಕಾಪೂ ಆಗಿರುವ ತೊಳಲಕಾಸಿಗರ್ , ತೊಳಲಕೋಶಿಗರ್ ಎಟ್ಪಿತರ್ ಎಂಬ ವೀರರ ಗುಂಪೊಂದಿದ್ದು ಅವರನ್ನು 'ನರಶಾಸನ'ಗಳೆಂದು ಪ್ರಸಿದ್ಧರಾಗಿದ್ದರೆಂದು ಹೇಳಿರುವುದರಿಂದ ಇವರು ವೀರಸಿದ್ಧಾಂತವನ್ನು ಮೈಗೂಡಿಸಿಕೊಂಡಿದ್ದ ವೀರರೆಂದು ಹೇಳಬಹುದು.

ಈ ಪ್ರಾಚೀನ ಕೋಶರರ ಲಕ್ಷಣಗಳು ಹಾಗೂ ಮಧ್ಯಕಾಲೀನ ಕೂಸರ ಅನೇಕ ಲಕ್ಷಣಗಳಲ್ಲಿ ಹೋಲಿಕೆ ಕಂಡುಬರುತ್ತದೆಯಾದರೂ ಅವರ ನಡುವಿನ ಸಂಬಂಧಗಳನ್ನು ಪುಷ್ಟೀಕರಿಸುವುದಕ್ಕೆ ಆಧಾರಗಳು

ಸಾಲದು. ೧೭ನೇ ಶತಮಾನದ ಶಾಸನಗಳಲ್ಲಿ ಕೂಸನೆಂಬುದು ನಾಮದೇಯವಾಗಿ ಬಳಸಲ್ಪಟ್ಟಿದೆ. ಇಲ್ಲಿ ಕೂಸಪ್ಪನ ದೇವಾಲಯಕ್ಕೆ ಬಿಟ್ಟ ಸ್ವಾಸ್ಥೆ ಬಗ್ಗೆ ಉಲ್ಲೇಖ ಬಂದಿದ್ದು ಈ ದೇವಾಲಯವನ್ನು ಕೂಸಣ್ಣನೆಂಬುವವನು ಕಟ್ಟಿಸಿದ್ದಾನೆ.

ಇನ್ನು ಕೂಸರ ಅರ್ವಾಚೀನತೆಯ ಬಗ್ಗೆ ಹೇಳುವುದಾದರೆ ಅತ್ಯಂತ ವಿರಳ ಜನಸಂಖ್ಯೆಯುಳ್ಳ ಕೂಸರೆಂಬ ಒಂದು ಉಪಪಂಗಡ ಇವತ್ತಿಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇರುವುದನ್ನು ಗುರುತಿಸಲಾಗಿದೆ.[೧೦೫] ಕುಂದಾಪುರ ಕಡೆಯ ಕೆಲವು ಬಂಟರ ಮನೆಗಳಲ್ಲಿ ಕೂಸಾಳುಗಳು ಎಂದು ಕರೆಯುವ ಜನ ಆಳುತನವನ್ನು ಮಾಡಿಕೊಂಡು ಇಂದಿಗೂ ಇದ್ದಾರೆ.[೧೦೬] ಆದರೆ ಇವರನ್ನು ಮಧ್ಯಕಾಲೀನ ಕರ್ನಾಟಕದ ವೀರ ಕೂಸರ ಪಳೆಯುಳಿಕೆ ಎಂದು ಹೇಳುವುದಕ್ಕೆ ಬೇರೆ ಯಾವ ಆಧಾರಗಳು ಸಿಕ್ಕಿಲ್ಲ. ಕೋಶರ್ ಮತ್ತು ಕೂಸ ಜನಾಂಗದ ಬಗೆಗೆ ವಿಶೇಷ ಅಧ್ಯಯನಗಳಾದರೆ ಹೆಚ್ಚಿನ ಮಾಹಿತಿ ದೊರೆಯುವ ಸಾಧ್ಯತೆಯಿದೆ.

**೫.೩.೨.೨. ಎಕ್ಕಟಿಗರಂಗರಕ್ಕರ್**

ಎಕ್ಕೆ, ಎಕ್ಕು, ಎಕ್ಕಲ, ಎಕ್ಕುವ, ಎಗ್ಗಲ, ಎಗ್ಗುಡು, ಎಕ್ಕಟಿಗ ಇತ್ಯಾದಿ ಪದಗಳು ದ್ರಾವಿಡ ಭಾಷೆಯಲ್ಲಿವೆ. ಇವುಗಳಿಗೆ ಹೆಚ್ಚು, ಹೆಚ್ಚಾದ, ಪ್ರಖ್ಯಾತ, ಪ್ರತಿಷ್ಠೆ, ಉನ್ನತ, ಶ್ರೇಷ್ಠ ಎಂಬ ಅರ್ಥವಿದೆ. ಎಕ್ಕಟಿಗ ಎಂಬುದು ಶ್ರೇಷ್ಠ ವ್ಯಕ್ತಿ, ಪ್ರತಿಷ್ಠಿತ ವ್ಯಕ್ತಿ ಎಂಬ ಅರ್ಥವನ್ನು ಹೊಂದಿದೆ.[೧೦೭] ಅಂಗರಕ್ಕರ್ ಎಂಬುದು ಅಂಗರಕ್ಷಕ ದಳವನ್ನು ಸೂಚಿಸುತ್ತದೆ. ಯುದ್ಧದಲ್ಲಿ ಶತ್ರುಗಳನ್ನು ಉರವಣಿಸಿ ಗೆಲ್ಲುವ ಠಕ್ಕು ತಿಳಿದಿರಬೇಕು ಮತ್ತು ವೈರಿ ಸಮೂಹದ ಕುಟಿಲ ವ್ಯೂಹವನ್ನು ಬೇಧಿಸಿ ತನ್ನ ಪತಿಯ ಅಂಗರಕ್ಷೆಯನ್ನು ಮಾಡುವುದೇ ಅಂಗರಕ್ಷಕನ ನಿಜಕಾರ್ಯವೇ ಹೊರತು ಬೇರೆ ಅಲ್ಲ ಎಂದು ಕ್ರಿ.ಶ.೧೧೮೭ರ ಕುರುವಂಕದ ಶಾಸನವು[೧೦೮] ಅಂಗರಕ್ಷಕರ ಲಕ್ಷಣವನ್ನು ಹೇಳಿದೆ. ಈ ರೀತಿ ಹೊಯ್ಸಳ ಧರಣೀಶರು ಮೆಚ್ಚುವಂತೆ ಪಗೆಗಳನ್ನು ಗೆಲ್ಲುವ ಅದಟು ಈ ಧರೆಯಲ್ಲಿ ಯೆಕ್ಕಟಿಗ ಅಂಗರಕ್ಷಕರ್ ನಾಲ್ವಂದಿಂಬರ್' ಗಲ್ಲದೆ ಬೇರೆಯವರಿಗೆ ಶೋಭಿಸುವುದಿಲ್ಲವೆಂದು ಶಾಸನ ಅವರನ್ನು ಹೊಗಳಿದೆ. ಈ 'ನಾಲ್ವಂದಿಂಬರ್' ಎಂಬುದು ಈ ಅಂಗರಕ್ಷಕರ ಸಂಖ್ಯೆಯನ್ನು ಹೇಳುತ್ತಿದ್ದು ಇವರ ಪಡೆಯು ಹೊಯ್ಸಳ ವೀರ ಬಲ್ಲಾಳನ ನೆಚ್ಚಿನ ಆಳು 'ಏಸುವರಾದಿತ್ಯನೆಂದೂ ಕಣಂಬಿನಾಥನೆಂದೂ ಪ್ರಸಿದ್ಧನಾದ ಮಹದೇವರಸನ ಕೈಕೆಳಗಿತ್ತು. ಇವನು, ಆರನೇ ವಿಕ್ರಮಾದಿತ್ಯನಿಂದ ಕಣ್ಣಂಬಿನಾಥನೆಂಬ ಬಿರುದು ಪಡೆದ ಆಸಂದಿಗಂಗರಸ ವೈಜರಸನ ಸಂತತಿಯವನಿರಬೇಕು.[೧೦೯] ಪತಿಯೂ ಧರೆಯೂ ತಮ್ಮ ಗುಣಗಳನ್ನು ಸತತವಾಗಿ ಮೆಚ್ಚಿ ಹೊಗಳುವಂತೆ ಕಳುವ ಮಲ್ಲೆಯನೆಂಬ ನಾಯಕನನ್ನು ಒಳಗೊಂಡ ಈ ನಲವತ್ತು ಜನ ಎಕ್ಕಟಿಗ ಅಂಗರಕ್ಷಕರಿದ್ದರೆಂದು ಕುರುವಂಶದ ಶಾಸನ[೧೧೦] ಹೇಳುತ್ತದೆ. ಕಣಕಟ್ಟೆಯ ಶಾಸನವೊಂದು[೧೧೧] ಅಱುವತ್ತು ಮಾನಸ ಎಕ್ಕಟಿಗರ ಕೀರ್ತಿಯನ್ನು ಹೊಗಳಿದೆ. ಇವರನ್ನು ಅಱಿಕೆಯ ಬೋವರೆಂದು ಕರೆದಿದೆ. ಇವರು

ಬರಸಿಡಿಲಿನಂತವರೆಂದೂ ಕರ್ಣನಂತೆ ದಾನಿಗಳೆಂದೂ, ನುಡಿದಂತೆ ಗಂಡರೆಂದೂ ಶಿವಪೂಜಾಪುರಂದರರೆಂದೂ ಕರೆದಿದೆ. ಈ ಅರವತ್ತು ಮಾನಸ ಎಕ್ಕಟಿಗರಲ್ಲಿ ದುಗ್ಗಬ್ಬೆಯ ಕೇತಣ್ಣ ಕಲ್ಲೆಯರು ಮುಖ್ಯರಾಗಿದ್ದರು.

ಪ್ರಸ್ತುತ ಎರಡೂ ಶಾಸನಗಳ ಉಲ್ಲೇಖಗಳನ್ನು ಗಮನಿಸಿದಾಗ ಮಂಡಳೇಶ್ವರರ, ಅರಸರ ಪಾದಪದ್ಮೋಪ ಜೀವಿಗಳಾಗಿ ಸ್ಥಳೀಯ ಪ್ರದೇಶಗಳನ್ನು ಆಳ್ವಿಕೆ ಮಾಡುತ್ತಿದ್ದ ಸಾಮಂತ ಅರಸರು ತಮ್ಮದೇ ಆದ ವಿಶಿಷ್ಟವಾದ ವೀರರ ಕಾಯ್ದಿಟ್ಟ ಅಂಗರಕ್ಷಕರ ಪಡೆಯೊಂದನ್ನು ಹೊಂದಿರುತ್ತಿದ್ದರು ಮತ್ತು ಈ ಪಡೆಯು ಸ್ವಾಮಿ ಕಾರ್ಯ ದುರಂಧರರಾಗಿದ್ದು, ವಿಶೇಷ ನಿಷ್ಠೆ ಪರಾಕ್ರಮಗಳಿಂದ ಕಾಳಗದಲ್ಲಿ ಅವರನ್ನು ರಕ್ಷಿಸುವ ಹಾಗೂ ಶತ್ರುವ್ಯೂಹವನ್ನು ಭೇದಿಸುವ ವಿಶಿಷ್ಟ ತರಬೇತಿ ಪಡೆದವರಾಗಿರುತ್ತಿದ್ದರು. ಇವರನ್ನು ಅರಿಕೆಯ ಬೋವರು' ಎಂದಿರುವುದು ವಿಶೇಷವಾಗಿದೆ. ಹಳೇಬೀಡಿನ ಶಾಸನವೊಂದರಲ್ಲಿ ನರಸಿಂಹದೇವ ಹಾಗೂ ಬಿಜ್ಜಳರ ನಡುವಿನ ಬವರದಲ್ಲಿ ಆನೆಯ ಕಾಲ್ಗಾಪಿಂಗೆ' ಕಳುವ ಮಾಚಯ್ಯನ ಸಂಗಡದ ಎಕ್ಕಟಿಗರನ್ನು ಕರದು ನಿಯೋಜಿಸಲಾಗಿದ್ದನ್ನು ಹೇಳಿದೆ.[೧೧೨] ಅಂದರೆ ಇವರು ಕರೆಯಮೇರೆಗೆ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದ ವಿಶೇಷ ಪಡೆ ಎನ್ನಬಹುದು. ಇಮ್ಮಡಿ ವೀರ ಬಲ್ಲಾಳನ ಶಾಸನದಲ್ಲಿ[೧೧೩] ಕಣಿಕಟ್ಟಿಯ ಅರವತ್ತು ಮಾನಸ ಎಕ್ಕಟಿಗರನ್ನು ಬಲ್ಲಾಳದೇವನ ಪಾದಾರಾದಕರೆನಿಸಿ ನೆಗಳ್ದವರು' ಎಂದಿದೆ.

ಒಂದನೇ ನರಸಿಂಹ ಮತ್ತು ಬಲ್ಲಾಳರ ಕಾಲದಲ್ಲಿ ಈ ಪಡೆ ಹೆಚ್ಚು ಪ್ರಾಮುಖ್ಯತೆ ಪಡೆದಂತೆ ತೋರುತ್ತದೆ. ಈ ಸಮೂಹದಲ್ಲಿ ಮುಖ್ಯ ನಾಯಕನಿದ್ದು ಅವನ ಮಾರ್ಗದರ್ಶನದಲ್ಲಿ ಇವು ಕಾರ್ಯ ನಿರ್ವಹಿಸುತ್ತಿದ್ದವೆನಿಸುತ್ತದೆ. ಈ ನಾಯಕರು ಅರಸನ ನೆಚ್ಚಿನ ಆಳುಗಳು, ಅಣುಗರೂ ಎನಿಸಿಕೊಂಡ ನಂಬಿಗಸ್ಥ ವೀರರಾಗಿರುತ್ತಿದ್ದರು. ಕುರುವಂಕದ ಎಕ್ಕಟಿಗರ ನಾಯಕ ಮಹದೇವರಸನನ್ನು ಹೊಯ್ಸಳಾಧೀಶನ ನೆಚ್ಚಿನ ಆಳೆಂದು ಕರೆದಿದೆ[೧೧೪] 'ಪತಿಯು ವರ್ಣ್ನಿಪ್ಪ ತೆರದೆ' ನಡೆಯುವ ಅಂಗರಕ್ಕಪಡೆ'ಯ ಅಧಿಪತಿ ಎಕ್ಕಟಿಗ ಕಳುವ ಮಲ್ಲೆಯನೆಂದು ಶಾಸನ ವಿವರಿಸಿದೆ. ಈ ಎಕ್ಕಟಿಗರ ಪಡೆಯ ನಾಯಕರ ಹೆಸರಿನೊಂದಿಗೆ ಕಳುವ ಎಂಬ ಉಪನಾಮ ಅಥವಾ ವಿಶೇಷಣ ಕಂಡುಬರುತ್ತದೆ.[೧೧೫] ಈ ಕಳುವ' ಪದದ ಅರ್ಥ ಸ್ಪಷ್ಟವಾಗುವುದಿಲ್ಲ. ಎಕ್ಕಟ್ಟಿಗರೆಂಬ ಉಲ್ಲೇಖ ಈ ಪ್ರದೇಶದ ಶಾಸನಗಳಲ್ಲಿ ವಿಷ್ಣುವರ್ಧನನ ಎಕ್ಕಟಿಗ ಮಸಣಯ್ಯನ ವೀರಗಲ್ಲಿನಲ್ಲಿ[೧೧೬] ಮೊದಲು ಕಾಣಿಸಿಕೊಂಡಿದೆ. ವಿಷ್ಣುವರ್ಧನನ ಮಗ ನರಸಿಂಹನ ಯೆಕ್ಕಟಿಗ ಮುದ್ದೆಯ್ಯನಾಯಕನೆಂಬುವವನನ್ನು ಒಂದು ಶಾಸನ ಉಲ್ಲೇಖಿಸುತ್ತದೆ.[೧೧೭] ಈ ಶಾಸನಗಳಿಂದ ದೊರೆಗಳು ಅಂಗರಕ್ಷಕದಳವಲ್ಲದೆ, ಪ್ರತ್ಯೇಕ ಅಂಗರಕ್ಷಕವೊಬ್ಬನನ್ನು ತಮ್ಮ ಸುರಕ್ಷತೆಗಾಗಿ ನೇಮಿಸಿಕೊಳ್ಳುತ್ತಿದ್ದರೆಂದು ಊಹಿಸಬಹುದು. ಎಕ್ಕಟಿಗ ಎಂಬುದಕ್ಕೆ ಒಂಟಿಗ, ಸಿಟ್ಟಿನವನು ಎಂಬ ಅರ್ಥವೂ ಎಕ್ಕಟಿ ಎಂದರೆ ಏಕಾಂತ ಎಂಬ ಅರ್ಥವೂ ಇದೆ.[೧೧೮] ಬಹುಷಃ ಎಕ್ಕಟಿಗರು ನಿರ್ವಹಿಸುತ್ತಿದ್ದ ಅತ್ಯಂತ

ಗುರುತರವಾದ ಹೊಣೆಗಾರಿಕೆಯಿಂದಾಗಿ ಅವರು ಬಹಳ ಗಂಭೀರ ಪ್ರವೃತ್ತಿಯವರೂ, ಶಿಸ್ತಿನ ಮನುಷ್ಯರೂ ಆಗಿರುತ್ತಿದ್ದುದರಿಂದ ಸಾಮಾನ್ಯರಿಗೆ ಸಿಟ್ಟಿನವರಂತೆ ತೋರುತ್ತಿದ್ದರೆನಿಸುತ್ತದೆ.

ವಂಶ ಪಾರಂಪರ್ಯವಾಗಿ ಎಕ್ಕಟಿಗರಾಗಿದ್ದ ಮನೆತನವನ್ನು ಅವರು ಕಾಳಗಗಳಲ್ಲಿ ತೋರಿದ್ದ ಅದ್ಭುತ ಸಾಹಸವನ್ನು ಒಂದು ವೀರಗಲ್ಲು[೧೧೯] ವಿರೋಚಿತವಾಗಿ ವರ್ಣಿಸಿದೆ. ಜನನಾಯಕನ ಮೊಮ್ಮಗನೂ, ಕೇತಮಲ್ಲನ ಮಗನೂ ಆದ ಜಸಪಾಳದೇವ ಎಕ್ಕಟಿಗನು ಹೊಯ್ಸಳ ನರಸಿಂಹ ದೇವನ ಆನೆಯ ಕಾಲ್ಗಾಪಿನ ಎಕ್ಕಟಿಗನಾಗಿದ್ದು 'ಬವರವು ಅನೋಜೆಯಾಗೆ ಆನೆಯಂ ಪಿಂತಿಕ್ಕಿ" ತನ್ನ ಕುದುರೆಯನ್ನು ಅರಿಸಿರದ ತೆರಗದ ಮೇಲೆ ನುಗ್ಗಿಸಿ ಅಟ್ಟಿಮೇಲಾಳುಗಳನ್ನು ಇರಿದು ಒಡ್ಡವನ್ನು ಮುರಿದು ಬಿಜ್ಜಳನ ದಳವನ್ನು ಕೆಡಿಸಿ ಕುದುರೆಯನ್ನು ಬಾಳ್ದಲೆಯನ್ನೂ ತಂದೊಪ್ಪಿಸಿ ಮತ್ತೆ ಹೋರಾಟಕ್ಕೆ ನುಗ್ಗಿದಾಗ ಸುರಲೋಕ ಪ್ರಾಪ್ತನಾಗಿದ್ದಾನೆ. ಇಲ್ಲಿನ ಹೋರಾಟವನ್ನು ಗಮನಿಸಿದಾಗ ಈ ಎಕ್ಕಟಿಗರು ಕೇವಲ ರಕ್ಷಣಾತ್ಮಕ ಹೋರಾಟದಲ್ಲಿ ನಿಪುಣರಷ್ಟೇ ಅಲ್ಲ ಮುನ್ನುಗ್ಗಿ ವೈರಿ ಸೇನೆಯ ಒಡ್ಡನ್ನು ಬೇಧಿಸುವುದರಲ್ಲೂ ನಿಪುಣರಾಗಿದ್ದರೆಂಬುದು ವ್ಯಕ್ತವಾಗುತ್ತದೆ. ಇದನ್ನೇ ಕುರುವಂಕದ ಶಾಸನ ಎಕ್ಕಟಿಗನ ಲಕ್ಷಣವೆಂದು ಹೇಳಿರುವುದು. ಮಹಾಪ್ರಧಾನ ಹಿರಿಯ ನಾಯಕ ಮಂಚ್ಚಯ್ಯಗಳ ಬೆಸದಿಂ ಮಲ್ಲಿಸೆಟ್ಟಿಯ ಮಗನೆಕ್ಕಟಿಗ ಚಿಕ್ಕಣ ಬವರಲ್ಲಿ ಹೋರಾಡಿ ಮಡಿದುದನ್ನು ಒಂದು ಶಾಸನ ದಾಖಲಿಸಿದೆ.[೧೨೦] ಇಲ್ಲಿ ಎಕ್ಕಟಿಗ ಚಿಕ್ಕಣ್ಣನನ್ನು ಮಲ್ಲಿಸೆಟ್ಟಿಯ ಮಗ ಎಂದಿರುವುದು ಮನೆಮಗ ಅಥವಾ ಬಂಟನೆಂಬ ಅರ್ಥದಲ್ಲಿ. ಇವನು ಸೆಟ್ಟಿಯ ಅಂಗರಕ್ಷಕನೆಂಬುದು ಸ್ಪಷ್ಟವಾಗುತ್ತದೆ. ವಿಜಯಸೋಮನಾಥಪುರದ ಅಗ್ರಹಾರದ ಕೇಶವ ದೇವಾಲಯದ ಪರಿವಾರ ವರ್ಗಕ್ಕೆ ಬಿಟ್ಟ ದಾನಗಳಲ್ಲಿ ಇಬ್ಬರು ಅಂಗರಕ್ಷಕರಿಗೆ ಎಂಟುಗದ್ಯಾಣಗಳನ್ನು ನೀಡಲಾಗಿದೆ[೧೨೧] ಮತ್ತು ಇವರಿಗೆ ನೀಡಿರುವ ದಾನ ಪೂಜಾರಿಯನ್ನು ಹೊರತುಪಡಿಸಿ ಉಳಿದ ಪರಿವಾರದವರಿಗಿಂತ ಹೆಚ್ಚಿರುವುದು ಗಮನಾರ್ಹ. ದೇವಾಲಯಗಳು ಸಂಪದ್ಭರಿತವಾಗಿದ್ದು ಅವುಗಳನ್ನು ಕಾಪಾಡುವುದು ಜವಾಬ್ದಾರಿಯ ಕೆಲಸವಾಗಿತ್ತು.

ಈ ಎಕ್ಕಟಿಗರು ಉತ್ತಮ ಸ್ಥಾನಮಾನ ಗೌರವಗಳನ್ನು ಪಡೆದು ಕೆಲವರು ಆರ್ಥಿಕವಾಗಿಯೂ ರಾಜಕೀಯವಾಗಿಯೂ ಪ್ರಭಾವಶಾಲಿಗಳಾಗಿದ್ದರೆಂದು ಕೆಲವು ಶಾಸನಗಳಿಂದ ತಿಳಿದುಬರುತ್ತದೆ. ಒಂದನೇ ನರಸಿಂಹನ ಎಕ್ಕಟಿಗ ತನ್ನ ಹೆಸರಿನಲ್ಲಿ ಮುದ್ದೇಶ್ವರ ದೇವಾಲಯವನ್ನು ನಿರ್ಮಿಸಿ ದಾನ ಬಿಟ್ಟಿದ್ದಾನೆ.[೧೨೨] ಬಿಟ್ಟಿಬೋವನೆಂಬ ಎಕ್ಕಟಿಗ ನಾಯಕ ನಿಲೇಶ್ವರ ದೇವಾಲಯವನ್ನು ಕೆರೆಯನ್ನು ಕಟ್ಟಿಸಿದ್ದಾನೆ.[೧೨೩] ಬೆಳ್ಳಪ್ಪನೆಂಬ ಅಂಗರಕ್ಷಕನು ತೋರಿದ ಸದ್ಭಕ್ತಿಗೆ ಪರಾಕ್ರಮಕ್ಕೆ ಮೆಚ್ಚಿದ ನರಸಿಂಘದೇವನು ಅವನ ಶೌರ್ಯದ ಉದ್ಧಾಮತೆಗೆ ಅಕ್ಕರೆಯಿಂದ ಅಂಗರಕ್ಷೆ, ಬಂಡಾರದರಕ್ಷೆ, ಸಜ್ಜೆರಕ್ಷೆ ಎಲ್ಲವನ್ನು ಅವನಿಗೆ ವಹಿಸಿಕೊಟ್ಟು ಪಸಾಯಿತನನ್ನಾಗಿ ಮಾಡಿದ್ದಾನೆ. ಅಂತಃಪಸಾಯ್ತ ಸ್ಥಾನಪಡೆದ ಈ ಬೆಳ್ಳಪ್ಪನ ಮಗಳು

ಗೌರಲದೇವಿಯನ್ನು ಅರಸ ವಿವಾಹವಾಗಿದ್ದಾನೆ. ಅವಳ ಮಗ ಕುಮಾರ ಎರೆಯಂಗದೇವನು ಕೆಂಬಾಳನ್ನು ಆಳುತ್ತಿದ್ದುದನ್ನು ಶಾಸನವೊಂದು ದಾಖಲಿಸಿದೆ.[೧೨೪]

### ೫.೨.೨.೩. ಮೆಯಿ ಮೆಟ್ಟಿಗಳು

ಮೆಯಿ ಮೆಟ್ಟಿ, ಮೈಮೆಟ್ಟಿ, ಮಾಯಿಮೇಟಿ ಇತ್ಯಾದಿ ಎಂಟು ಉಲ್ಲೇಖಗಳು ಶಾಸನಗಳಲ್ಲಿ ಕಂಡುಬಂದಿವೆ.[೧೨೫] ಜೊತೆಗೆ ಮೆಯಿಮೆಟ್ಟಿ ಕಳ್ಪು, ಮೇಲಾಳಿಕೆ ಮೈಮೆಟ್ಟಿ ಇತ್ಯಾದಿ ಪ್ರಯೋಗಗಳಿವೆ. ಈ ಪ್ರಯೋಗದ ಪೂರ್ವಾರ್ಧಕ್ಕೆ ದೇಹವೆಂಬ ಅರ್ಥ ಸ್ಪಷ್ಟವಾಗಿದೆ. ಮೆಟ್ಟಿ, ಕಳ್ಪು ಪದಗಳು ಭೂತಕ್ರಿಯಾಸೂಚಕಗಳಾಗಿವೆ. ಮೆಟ್ಟಿ ಎಂದರೆ ತುಳಿದು, ಒತ್ತಿ ಎಂಬ ಅರ್ಥವೂ ಕಳ್ಪು ಎಂಬುದು ಅಪಹರಿಸುವ, ವಶಪಡಿಸುವ ಕ್ರಿಯೆಯನ್ನು ಸೂಚಿಸುತ್ತದೆ. ಪೆಣನಂ ಮೆಟ್ಟಿ, ಪೆಣದ ಬಣಂಬೆಯಂ ತುಳಿದು, ಮೈಯಂ ಮಾಡಿ ಮುಂದೆ ಕಲಿಗಾದಡೆ[೧೨೬] ಇತ್ಯಾದಿ ಪ್ರಯೋಗಗಳ ಹಿನ್ನೆಲೆಯಲ್ಲಿ ಈ ಪದವನ್ನು ವಿವರಿಸಿಕೊಳ್ಳಬಹುದೇ? ನಾಮಪದವಾಗಿ ಮೆಟ್ಟಿ ಎಂಬುದಕ್ಕೆ ತಮಿಳು, ತೆಲಗು ಕನ್ನಡ ಮೂರು ಭಾಷೆಯಲ್ಲಿ ಕಾಲುಂಗುರವೆಂಬ ಅರ್ಥವಿದೆ.[೧೨೭] ಕಾಲುಂಗರವನ್ನು ಸುತ್ತುಕಾಲುಂಗರವೆಂದು ಕರೆಯುವ ವಾಡಿಕೆಯೂ ಇದೆ. ಈ ಹಿನ್ನೆಲೆಯಲ್ಲಿ ಮೈಸುತ್ತ ಇರುವ ಉಂಗುರ, ರಕ್ಷಣೆ, ಮೈಗಾಪು ಎಂಬ ಅರ್ಥಮಾಡಬಹುದೆನಿಸುತ್ತದೆ.

ಮೈಮೇಟಿ ಎಂಬುದಕ್ಕೆ 'ಸಂವಾಹ ಅಂಗಮರ್ದಿ' (A Chief body servant) ಎಂಬ ಅರ್ಥವಿದೆ.[೧೨೮] ಅಂದರೆ ಪ್ರಸ್ತುತ ಶಾಸನದ ಮೈಮೆಟ್ಟಿಗಳನ್ನು ಅರಸರ ಅಂಗ ಮರ್ಧನ ಇತ್ಯಾದಿಗಳಿಂದ ಅರಸರ ದೇಹಪೋಷಣೆ ಮಾಡುತ್ತಿದ್ದ ಪರಿಣತರೆಂಬ ಅರ್ಥದಲ್ಲಿ ನೋಡಬಹುದು. ಸಾಮಾನ್ಯವಾಗಿ ಈ ರೀತಿಯ ಅಂಗಸಾಧನೆಗೆ ಅವಶ್ಯಕವಾದ ಅಂಗಮರ್ಧನ, ತೈಲ ಲೇಪನ, ಮಟ್ಟಿ ಲೇಪನ ಇತ್ಯಾದಿ ಕಾರ್ಯಗಳು ಗರಡಿಯ ಮನೆಯಲ್ಲಿ ವಿಶೇಷವಾಗಿ ನಡೆಯುತ್ತಿದ್ದು, ಅರಸರು ಅಂತಹ ಕಾರ್ಯಗಳಲ್ಲಿ ನುರಿತ ಜಟ್ಟಿಗಳನ್ನು ಸಂವಾಹಕರಾಗಿ (body builder ದೇಹ ಸಂವರ್ಧಕರು) ನೇಮಿಸಿಕೊಳ್ಳುತ್ತಿದ್ದರು.* ಇವರಿಗೆ ದೇಹ ಪೋಷಣೆಗೆ ಅಗತ್ಯವಾದ ಔಷಧೀಯ ಸಸ್ಯಗಳನ್ನು, ಕಾಂತಿ ವರ್ಧಕಗಳನ್ನು ಸೇರಿಸಿ ಲೇಪನಗಳನ್ನು ತೈಲವನ್ನು ತಯಾರಿಸುವುದು ಕರಗತವಾಗಿತ್ತು.[೧೨೯] ಈ ಜಟ್ಟಿಗಳು ದೇಹವನ್ನು ವಜ್ರಕಠಿಣವಾಗಿ ರೂಪಿಸಲು ಬಲ್ಲವರಷ್ಟೇ ಅಲ್ಲ ವೀರ ಯೋಧರಾಗಿ ರಣಾಂಗಣಕ್ಕೂ ನುಗ್ಗುತ್ತಿದ್ದರು. ಮೈಮೇಟಿ ಎಂಬುದಕ್ಕೆ ಒಡನಾಡಿ, ಜೊತೆಗಾರ ಎಂಬ ಅರ್ಥವೂ ಇದೆ.[೧೩೦] ಈ ಮೂರು ಅರ್ಥಗಳಲ್ಲೂ ಇವರು ಒಡೆಯರ, ಅರಸರ ಆಪ್ತ ವಲಯದವರೆನಲ್ಲು ಅಡ್ಡಿಯಿಲ್ಲ.

---

* ಇಂದಿಗೂ ಕಾಯಕಲ್ಪ ಚಿಕಿತ್ಸೆಯಲ್ಲಿ ತೈಲಲೇಪನ ಮಾಡಿ ಇಡೀ ದೇಹವನ್ನು ಈ ಸಂವಾಕರು ಪಾದಗಳಿಂದ ಮೃದುವಾಗಿ ತುಳಿಯುತ್ತ ಮಾಂಸಖಂಡಗಳನ್ನು ನೀವಿ ಪುನರುಜ್ಜೀವಿಸುವುದನ್ನು ಕೆಲವು ಆಯುರ್ ಕಾಯಕಲ್ಪ ಚಿಕಿತ್ಸಾ ಕೇಂದ್ರಗಳಲ್ಲಿ ಕಾಣಬಹುದು.

ಮೇಲಾಳಿಕೆ ಮೈಮೆಟ್ಟಿಗಳು ಇಂತಹ ಸಮೂಹದ ಮುಖ್ಯಾಧಿಕಾರಿ ಎಂದು ಹೇಳಬಹುದು. ಮೇಲಾಳಿಕೆ ಮೈಮೆಟ್ಟಿ ಬಲ್ಲೆಯ್ಯ, ಕೇಶವ, ಹರಿಯಣ್ಣ ಇವರು ಕೆರೆ ಕೊಡಗಿ ದಾನವೊಂದನ್ನು ಸಮಸ್ತ ಪ್ರಜೆಗಳೊಂದಿಗೆ ಸೇರಿ ಬಿಟ್ಟಿದ್ದಾರೆ.[೧೩೦] ವೀರ ಬಲ್ಲಾಳನ ಕಾಲದ ಒಂದು ಶಾಸನ[೧೩೧] ಬಲ್ಲಾಳನ ಪಾದ ಪದ್ಮೋಪಜೀವಿಗಳಾಗಿ ಉತ್ತಮ ಸ್ಥಾನಮಾನಗಳಿಸಿದ ಮೈಮೆಟ್ಟಿಗಳ ವಂಶವನ್ನು ಪರಿಚಯಿಸುತ್ತದೆ. ಮೈಯಿಮೆಟ್ಟಿ ಮಲ್ಲದೇವನ ಗಂಡು ಮಕ್ಕಳಲ್ಲಿ ಶ್ರೀರಂಗನು ದಂಡನಾಥನಾಗಿದ್ದುದನ್ನು ಅವನ ತಮ್ಮ ಬಲ್ಲನು ಚಮೂಪತಿಯಾಗಿದ್ದುದನ್ನು ಈ ಶಾಸನ ಹೇಳುತ್ತದೆ. ಅವರಿಬ್ಬರಿಗಿಂತ ಕಿರಿಯನಾದ ಮಲಪ ಶಂಭುಮೇಳೇಶ್ವರ ದೇವಾಲಯವನ್ನು ಕಟ್ಟಿಸಿದ್ದಾನೆ. ಬಲ್ಲು ಚಮೂಪನನ್ನು ರಾಜನ ಸಿರಿ, ರಾಜನ ಕೈವಾರ ಎಂದು ಹೊಗಳಿದೆ. ಶ್ರೀರಂಗ ದಂಡನಾಥನ ಮಗಳು ಮೇದಿನಿ ಚಂದ್ರತಾರಕಳನ್ನು ಪರಿಚಯಿಸಲಾಗಿದೆ. ಮತ್ತೊಂದು ಮೈಮೆಟ್ಟಿ ಕುಟುಂಬದ ಕೊಮಯ್ಯ ಅವನ ಮಗ ಬಲ್ಲಯ್ಯ ಅಳಿಯ ಮಲ್ಲೆಯ್ಯ ಇವರುಗಳು ದಾನ ಮಾಡಿದುದನ್ನು ಶಾಸನ ದಾಖಲಿಸುತ್ತದೆ.[೧೩೩]

ಒಟ್ಟಿನಲ್ಲಿ ಈ ಮೈಮೆಟ್ಟಿಗಳು ವೀರರೂ, ದಾನಿಗಳೂ, ದಾನ ರಕ್ಷಕರೂ ಆಗಿ ಕಾಣಿಸಿಕೊಂಡಿದ್ದಾರೆ. ಅವರ ಹೆಸರಿನೊಂದಿಗೆ ಮೇಲಾಳಿಕೆ, ಚಮೂಪ, ದಂಡನಾಥ ಇತ್ಯಾದಿ ವಿಶೇಷಣಗಳು ಅಧಿಕಾರ ಸೂಚಕವಾಗಿದ್ದು ಅವರಿಗೆ ದೊರಕಿದ್ದ ಸ್ಥಾನಮಾನಗಳನ್ನು ತಿಳಿಸುತ್ತದೆ.

### ೫.೨.೨.೪. ತುಳಿಲಸಂದರು

ಅರಸೀಕೆರೆಯ ಹೊಸಕಲ್ಯಾಡಿಯ ಶಾಸನವೊಂದು[೧೩೪] ನೀರ್ಗುಂದ ನಾಡಿನ ಕಲಿಲವಾಡಿಯನ್ನು ತಂತ್ರಾಧಿಷ್ಠಾಯಕ ಮಂತ್ರಿ ಚೂಡಾಮಣಿ ಮುಚ್ಚಿಯ ಸಿಂಗಣ್ಣ ಅಮಾತ್ಯನು ಆಳುತ್ತಿರಲು ಅವನ ಪಾದ ಪದ್ಮೋಪಜೀವಿಗಳಾದ ತುಳಿಲ ಸಂದ ಕುಲೋದ್ಭವರಾದ ನಾಳ್ಪ್ರಭುಗಳು ಆಳ್ವಿಕೆ ಮಾಡುತ್ತಿದ್ದುದನ್ನು ಹೇಳಿದೆ. ತುಳಿಲಾಳ್ಗಳು ಒಡೆಯನಿಂದ ಸಂಬಳ ಪಡೆಯುತ್ತ ನಿತ್ಯ ಸೇವೆಯಲ್ಲಿರುತ್ತಿದ್ದ ಜೋಳವಾಳಿಗಳ ಗುಂಪಿಗೆ ಸೇರುವವರಾದರೂ ಇವರು ವಿಶಿಷ್ಟವಾದ ವೀರ ಸಿದ್ಧಾಂತವನ್ನು ಮೈಗೂಡಿಸಿಕೊಂಡ ವೀರರು, ಕಲಿತನ, ಅಭಿಮಾನ, ಧರ್ಮ, ತ್ಯಾಗ, ಸತ್ಯ, ಶೌಚ ಎಂಬ ಆರು ಗುಣಗಳಿಗೆ ಆಗರನಾಗಿ ಯಾರು ಇರುತ್ತಾನೋ ಅವನು ಮಾತ್ರ ತುಳಿಲಸಂದನೆನಿಸಿಕೊಳ್ಳುತ್ತಾನೆ. ಹಾಗಲ್ಲದಿದ್ದರೆ ಇಲ್ಲ. ಹರಿವಂಶಾಭ್ಯುದಯ ವೀರ ಸಿದ್ಧಾಂತಿಯು ಷಡ್ಗುಣ ಸಂಪನ್ನನಾಗಿರಬೇಕೆಂದು ಸಾರುತ್ತದೆ.[೧೩೫] ಇಂತಹ ವೀರ ಸಿದ್ಧಾಂತದ ಗುಣಗಳ ಮೂರ್ತರೂಪವಾದ ಭೀಷ್ಮನನ್ನು ಪಂಪ 'ವೀರಸಿದ್ಧಾಂತದ ಶಾಸನಂ ಬರೆದ ಪೊತ್ತಿಗೆ'ಗೆ ಹೋಲಿಸಿದ್ದಾನೆ. ಈ ವೀರ ಸಿದ್ಧಾಂತಗಳು ಕೇವಲ ಲಿಖಿತಗೊಂಡ ಶಾಸನಗಳಾಗಿ ಉಳಿದಿರಲಿಲ್ಲ ಅವುಗಳನ್ನು ರಕ್ತಗತ ಮಾಡಿಕೊಂಡು ಬಾಳಿ ಬದುಕಿದ ನರಶಾಸನಗಳನ್ನು ಕಾವ್ಯಗಳು ಶಾಸನಗಳು ಹೊಗಳಿವೆ.

ಚಿಕ್ಕಮಗಳೂರು ಜಿಲ್ಲೆಯ ಮೂರು ಶಾಸನಗಳು ಇಂತಹ ನರಶಾಸನಗಳೆಂದು ಪ್ರಸಿದ್ಧರಾದ ವೀರಪಡೆಯನ್ನು ಪರಿಚಯಿಸುತ್ತವೆ. ಜೈನ ದಾನವೊಂದಕ್ಕೆ ಸಾಕ್ಷಿಗಳೂ ಕಾಪು ಅದ ಈ ವೀರ ತೊಳಲರನ್ನು 'ಏಳ್ಪತ್ತಜ್' ಎಂದು ಕರೆದಿರುವುದರಿಂದ ಅದು ಅವರ ಸಂಘ ಅಥವಾ ಪಡೆಯನ್ನು ನಿರ್ದೇಶಿಸುತ್ತಿದೆ ಎಂದು ಭಾವಿಸಬಹುದು. ತುಳಿಲ ಸಂದ ಕುಲೋದ್ಭವರನ್ನು ಸಮಾಜ ವಿಶೇಷ ಗೌರವಾಧರಗಳಿಂದ ಕಾಣುತಿದ್ದು, ಅಂಥವರನ್ನು ಇತರ ವೀರರಿಂದ ಪ್ರತ್ಯೇಕವಾಗಿ ಗುರುತಿಸಲಾಗಿತ್ತು ಎಂಬುದನ್ನು ಕಾವ್ಯಗಳಲ್ಲಿ ಶಾಸನಗಳಲ್ಲಿ ನೋಡಬಹುದು. ಈ ತುಳಿಲಾಳ್ಗಳ ಗುಣ-ಚಾರಿತ್ರ್ಯಗಳನ್ನು ಅನೇಕ ವಿದ್ವಾಂಸರು ಚರ್ಚಿಸಿದ್ದಾರೆ.[೧೩೭]

ಹೊಸ ಕಲ್ಯಾಡಿಯ ಶಾಸನದಲ್ಲಿ[೧೩೮] ತುಳಿಲ ಸಂದಕುಲೋದ್ಭವರಾದ ಹೊಳಲಗಾವುಂಡನ ವಂಶವನ್ನು ಪರಿಚಯಿಸುತ್ತದೆ. ಈ ಹೊಳಗಾವುಂಡನ ತಂದೆ ಬೊಪ್ಪಗಾವುಂಡನನ್ನು ಪ್ರಭುಶಕ್ತಿ ಗುಣಗಣಾಳಂಕ್ರಿತನೆಂದು ಶಾಸನ ಕರೆದಿದೆ. ಹೊಳಲಗಾವುಂಡನು ದಾನಿ, ದಯಾಪರ, ಮಾನಧನ, ಧೀರ ಬುಧಜನರನ್ನು ಒಲವಿಂದ ಕಾಣುವವನು ಆಯಸ್ಸು, ಸಂಪತ್ತು, ಯಶಸ್ಸನ್ನು ಗಳಿಸಿ ಪ್ರಸಿದ್ಧನಾಗಿದ್ದನು. ಇವನು ಮಡದಿಯರಾದ ಕೇತಗೌವುಡಿ ಬೂಮಗೌಡಿಯರಿಂದ ಐದು ಗಂಡು ಮಕ್ಕಳನ್ನು ಪಡೆದಿದ್ದನು. ಬಂಮೆಯ್ಯ, ಬೊಪ್ಪ, ಜಕ್ಕಣ, ಸೋಮೆಯ್ಯ ಮುಂತಾದ ಮಕ್ಕಳೊಂದಿಗೆ ಪಿತ್ರಾರ್ಜಿತವಾಗಿ ಬಂದ ಗ್ರಾಮ ಕಲಿಲವಾಡಿಯ ನಾಳ್ಗಾವುಂಡರಾಗಿ ಆಳುತ್ತಿದ್ದರು. ಹೊಳಲ ಗಾವುಂಡನು ಊರ ಮುಂದಿನ ಹಿರಿಯ ಕೆರೆಯ ಕೆಳಗೆ ಒಂದು ಶಿವಾಲಯವನ್ನು ಕಟ್ಟಿಸಿದ್ದಲ್ಲದೆ ಒಂದು ಹೊಸದಾದ ಕನ್ನೆಗೆರೆಯನ್ನು ಕಟ್ಟಿಸಿದ್ದಾನೆ. ಇವನೊಂದಿಗೆ ಇವನ ತಾಯಿ ಮಾಳಗಾವುಂಡಿಯ ಸೋದರರಾದ ಕಾಳಗಾವುಂಡ, ಬೊಪ್ಪಗಾವುಂಡರೂ, ಅವರ ಮಕ್ಕಳಾದ ದುಗ್ಗ, ಬೀರ, ಜಕ್ಕ, ಚಟ್ಟರನ್ನು ಹೆಸರಿಸಿ ಅವರಲ್ಲಿ ಬೀರ ಗೌಡನು ಸಾರಗುಣಂಗಳ ನಿಳಯನೆಂದೂ, ಜಕ್ಕನು ಲೆಕ್ಕದ ಬಲುಮೆಗೆ ಮಿಗಿಲೆಂದು ಹೊಗಳಿದೆ. ಬಹುಷಃ ಈ ವೀರರೂ ತುಳಿಲಾಳುಗಳೇ ಆಗಿರುವ ಸಾಧ್ಯತೆಯಿದೆ.

ಅನೇಕ ವಿದ್ವಾಂಸರ ಚರ್ಚೆಗಳಿಂದ ತಿಳಿಯುವ ವಿಚಾರ ಈ ತುಳಿಲ ಸಂದರು ಸೇವೆ, ಕರ್ತವ್ಯ ಪೌರುಷಗಳಲ್ಲಿ ಕೀರ್ತಿಯನ್ನು ಸಂಪಾದಿಸಿಕೊಂಡಿದ್ದ ವೀರವರ್ಗ, ಇವರನ್ನು ಕುರಿತ ಕನ್ನಡ ಕಾವ್ಯಗಳ, ಶಾಸನಗಳ ಉಲ್ಲೇಖಗಳನ್ನೆಲ್ಲ ಒಟ್ಟಾಗಿಟ್ಟು ನೋಡಿದಾಗ ಈ ವರ್ಗವು ಮಧ್ಯಕಾಲೀನ ಕರ್ನಾಟಕದಲ್ಲಿ ಅತ್ಯಂತ ಗೌರವಕ್ಕೆ ಪಾತ್ರವಾದ ಸ್ವಾಮಿನಿಷ್ಠ ಸೇವಕರ, ಸಾಮಾಜಿಕ ಕಳಕಳಿಯುಳ್ಳ ವೀರತ್ವವನ್ನು ಒಂದು ಸೈದ್ಧಾಂತಿಕ ನೆಲೆಗಟ್ಟಿನ ಮೇಲೆ ಪ್ರದರ್ಶಿಸುತ್ತಿದ್ದ ವೀರರ ಪಡೆಯಾಗಿತ್ತು.[೧೩೯]

### ೫.೨.೨.೫. ಬಿಲ್ಲ ಮುನ್ನೂರ್ವರು

ಬಿಲ್ಲು ವಿದ್ಯೆಯಲ್ಲಿ ನೈಪುಣ್ಯತೆಯನ್ನು ಪಡೆದ ಬಿಲ್ಲವರನ್ನು ಅನೇಕ ಶಾಸನಗಳು ಉಲ್ಲೇಖಿಸುತ್ತವೆ. ಅವರ ಬಿಲ್ಲುವಿದ್ಯೆಯ ನೈಪುಣ್ಯತೆಯಿಂದಾಗಿಯೇ ಈ ಬೇಡ ಜನಾಂಗದವರಿಗೆ ಆ ಹೆಸರು ಬಂದಿರಬೇಕು.

ಶಿವಪುರದ ಶಾಸನವೊಂದು[೧೪೦] ಬಿಲ್ಲೇಶ್ವರ ಪಾದಾರಾದಕರ ವರ್ಣನೆಯನ್ನು ವಿಶೇಷವಾಗಿ ಮಾಡಿದೆ. ಇವರಿಗೆ ಎಸುವರಾದಿತ್ಯರು, ಘೋಟಿ ವಿಳಾಸರು, ಸೈಕೋಲ ಭೈರವರು ಎಂಬ ಬಿರುದುಗಳಿವೆ. 'ತಾವು ಬೇಡರು ಬೇಡಿದಗ್ಗೀವರುಂ ಕಾಡಾನೆ(ಮಲ್ಲ)ರುಂ ಅಡವಿಕಂದರ್ಪರು ಜವನಂ ಜಕುಲಿಸುವರುಂ ಜಲಬಲ್ಲಿತೆಂದಡೆ ಅಂಬಿಗರಾದರುಂ ನೆಲಬಲ್ಲಿತೆಂದಡೆ ಹೆಂಮಳಿರಾದರುಂ ಶ್ರೀ ಬಿಲ್ಲೇಶ್ವರ ದೇವರ ದಿವ್ಯ ಶ್ರೀಪಾದಪಾದ್ಮಾರಾಧಕರು" ಎಂಬ ಗದ್ಯ ಭಾಗದಲ್ಲಿ ಬಿಲ್ಲೇಶ್ವರ ಪಾದಾರಾಧಕರಾದ ಈ ಬೇಡ ಜನಾಂಗ ವಿವಿಧ ವೃತ್ತಿಗಳನ್ನು ಹಿಡಿದು ನಾಡಿನಲ್ಲಿ ಕಾಡಿನಲ್ಲಿ ಜೀವಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಬಿಲ್ವಿದ್ಯೆಯಲ್ಲಿ ಪರಿಣತರಾದ ಇವರ ವೀರಪಡೆಗಳಿದ್ದು ಅದನ್ನು ಬಿಲ್ಲಮುನೂರ್ವರೆಂದು ಶಾಸನಗಳಲ್ಲಿ ಕರೆದಿದೆ. ಇದು ಬಿಲ್ಲಾಳುಗಳ ಸಂಘವೆಂದು ತೋರುತ್ತದೆ. ಅರಸರು ತಮ್ಮ ಯುದ್ಧಗಳಲ್ಲಿ ಇವರನ್ನು ಬಳಸಿಕೊಳ್ಳುತ್ತಿದ್ದರು. ವರ್ತಕರು ಇವರನ್ನು ರಕ್ಷಣೆಗೆ ನೇಮಿಸಿಕೊಳ್ಳುತ್ತಿದ್ದರು. ಆರ್.ಎನ್ ಗುರುವ ಅವರು ಇವರನ್ನು ಆಯುಧ ಜೀವಿಗಳೆಂದು ಕರೆದು ಅವರು ಯುದ್ಧ ವ್ಯವಸಾಯವಲ್ಲದೆ ಅಡವಿಯಲ್ಲಿ ಹುಟ್ಟುವ ಹಣ್ಣು ಹಂಪಲುಗಳನ್ನು ತಂದು ಇಲ್ಲವೇ ತೋಟಗಳನ್ನು ಸಾಗು ಮಾಡಿ ಬಾಡು ಕಾಯಿಗಳನ್ನು ತಂದು ಪೇಟೆಯಲ್ಲಿ ಮಾರಾಟ ಮಾಡುತ್ತಿದ್ದಂತೆ ಕಾಣುತ್ತದೆ. ಪಶುಪಾಲನೆ, ವ್ಯವಸಾಯವನ್ನೂ ಮಾಡುತ್ತಿದ್ದಂತೆ ಕಾಣುತ್ತದೆ. ಇವರ ಸಮಾಜದ ವತಿಯಿಂದ ಕಟ್ಟಿಸಿದ ದೇವಾಲಯಕ್ಕೆ ಬಿಲ್ಲೇಶ್ವರ ದೇವಾಲಯವೆಂದು ಹೆಸರು" ಎಂದು ಹೇಳಿದ್ದಾರೆ.[೧೪೧] ಹಿರಿಯೂರಿನ ಶಾಸನದಲ್ಲಿ ಬಿಲ್ಲೇಶ್ವರ ದೇವಾಲಯಕ್ಕೆ ದಾನಬಿಟ್ಟ ವಿವರವಿದೆ. ಹಲಕೂರಿನ ಶಾಸನವೊಂದು[೧೪೨] ಗೌಡಿಕೆಯ ಪ್ರದಾನದ ಶಾಸನವೊಂದರಲ್ಲಿ ಈ ಬಿಲ್ಲ ಮುನೂರ್ವರನ್ನು ಜೇಡಗೊತ್ತಳಿ, ಹನ್ನೆರಡು ಹಿಟ್ಟಿನ ಬೆಸಮಕ್ಕಳೆಂದು ಕರೆದಿದೆ. ಆ ಶಾಸನದ ಒಪ್ಪದಲ್ಲಿ ಬಿಲ್ಲೇಶ್ವರವೆಂಬ ಒಪ್ಪವೂ ಇದೆ.[೧೪೩] ವರ್ತಕ ಸಮುದಾಯವು ನೀಡಿದ ಮಾನ್ಯದ ಶಾಸನದಲ್ಲಿ ಅವರ ಬೆಸಮಕ್ಕಳಾದ ಈ ಬಿಲ್ಲಮುನೂರ್ವರ ಒಪ್ಪವಿರುವುದು ಸಮಾಜದಲ್ಲಿ ಅವರಿಗಿದ್ದ ಗೌರವವನ್ನು ವ್ಯಕ್ತಪಡಿಸುತ್ತದೆ. ಒಟ್ಟಿನಲ್ಲಿ ವೀರರೂ ಕಷ್ಟಸಹಿಷ್ಣುಗಳೂ ಆದ ಈ ಬಿಲ್ಲಾಳುಗಳು ತಮ್ಮ ಧೈರ್ಯ ಬಿಲ್ಗಾರಿಕೆಯ ಜಾಣ್ಮೆಗೆ ಪ್ರಸಿದ್ಧರಾಗಿದ್ದರು.

### ೫.೨.೨.೬. ಬಂಟ ಸಾಸಿರ್ವರು

ಸಂಸ್ಕೃತದ ಭಟ ಶಬ್ದದ ತದ್ಭವ ರೂಪ ಬಂಟ ಎಂದಾಗಿದೆ. ಭಟ ಅಥವಾ ಬಂಟನೆಂದರೆ ವೀರ, ಯೋಧ ಎಂದು ಅರ್ಥವಿದೆ. ಕೋಳಿಗುಂದದ ಒಂದು ಶಾಸನವು[೧೪೪] ಮಹಾಮಂಡಳೇಶ್ವರ ಮಹಾ ಪ್ರಚಂಡ ದಣ್ಣನಾಯಕ ಏಚಿಮಯ್ಯನ ಮಗ ಮಹಾಸನ್ಧಿವಿಗ್ರಹಿ ದಣ್ಣನಾಯಕ ಪೋಚಿಮಯ್ಯನ ಆರು ಜನ ವೀರ ಭಟರನ್ನು ಷಟ್ ಪುರುಷರೆಂದು ಕರೆದು ಅವರು ಶಿವಾಲಯವನ್ನೆತ್ತಿಸಿದ್ದನ್ನು ಹೇಳಿದೆ. ಇದು ಬಂಟೇಶ್ವರ ದೇವಾಲಯವೆಂದು ಪ್ರಸಿದ್ಧವಾಗಿ ಮುಂದೆ ಕೋಳಿಗುಂದದ ಒಡೆಯರಿಂದ ನಾಳ್ಪ್ರಭುಗಳಿಂದ

ದಾನ ಪಡೆದಿದೆ. ಈ ಬಂಟರ ಸಂಘಟನೆಯನ್ನು 'ಬಂಟಸಾಸಿರ್ವರ್' ಎಂಬ ಹೆಸರಿನಿಂದ ಗುರುತಿಸಲಾಗಿದೆ. ಇವರು ಚಕ್ರವರ್ತಿಗಳು ಮಂಡಳೇಶ್ವರರು ಸಾಮಂತರು ಮೊದಲಾದವರಲ್ಲಿ ನೆಚ್ಚಿನ ಬಂಟರಾಗಿ ಯುದ್ಧಗಳಲ್ಲಿ ಆಕ್ರಮಣಗಳಲ್ಲಿ ತಮ್ಮ ಒಡೆಯರನ್ನು ಗ್ರಾಮಗಳನ್ನು ರಕ್ಷಿಸುವ ಹೊಣೆ ಹೊತ್ತವರು. ಮಹಾಜನರಿಗೆ ಬಂಟಗಾವುಂಡ ಮಾರಗಾವುಂಡರು ಕನ್ನಗೆರೆಯನ್ನು ಕಟ್ಟಿಸಿಕೊಟ್ಟು ತಾವು ಮೆಚ್ಚಿದ ಜಾಗದಲ್ಲಿ ಮಹಾಜನರಿಂದ ಕೆರೆ ಕೊಡಗಿಯನ್ನು ಪಡೆದಿದ್ದಾರೆ ಮತ್ತು ಮೇಲೆ ಹುಟ್ಟುವ ಹೆಚ್ಚಿನ ಬಯಲು ಉತ್ಪನ್ನಗಳ ಹೊಣೆ ಹೊತ್ತು ಅದನ್ನು ಮಹಾಜನರಿಗೆ ಮಟ್ಟಿಸುವ ಜವಾಬ್ದಾರಿಯನ್ನು ಹೊತ್ತ ವಿಷಯವನ್ನು ಮತ್ತೊಂದು ಶಾಸನ ತಿಳಿಸುತ್ತದೆ.[೧೪೫] ಅಂದರೆ ಈ ಭಟರು ರಕ್ಷಣಾ ಚಟುವಟಿಕೆಗಳಲ್ಲದೆ ಕೃಷಿ ಚಟುವಟಿಕೆಗಳಲ್ಲಿಯೂ ತೊಡಗಿಕೊಂಡಿದ್ದರೆಂದು ತಿಳಿದುಬರುತ್ತದೆ. ಬಂಟಸಾಸಿರ್ವರ ಸಂಘವು ಅತ್ಯಂತ ಕ್ರಿಯಾಶೀಲವಾಗಿತ್ತು.

### ೫.೩. ಗ್ರಾಮ ರಕ್ಷಣೆ ಮತ್ತು ಶಾಂತಿಪಾಲನೆ

ಪ್ರಾಚೀನ ಹಾಗೂ ಮಧ್ಯಕಾಲೀನ ಕರ್ನಾಟಕದಲ್ಲಿ ಸಮಾಜದ ರಕ್ಷಣೆ ಮತ್ತು ಶಾಂತಿಪಾಲನೆಯ ಹೊಣೆ ಹೊತ್ತ ಮೂರು ವೀರಸ್ತೋಮವನ್ನು ಗುರುತಿಸಲಾಗಿದೆ. ಒಂದು : ಗ್ರಾಮದ ಪ್ರಜಾಸಮೂಹ. ಎರಡು : ಗ್ರಾಮದ ಕಾಯ್ದಿಟ್ಟ ಪಡೆ. ಮೂರು : ರಾಜನ ಸೈನ್ಯ ಪಡೆ.[೧೪೬]

ಒಂದಲ್ಲ ಒಂದು ರೀತಿಯ ಆಕ್ರಮಗಳು ಹಟಾತ್ತನೆ ನಡೆಯುತ್ತಿದ್ದುದರಿಂದ ಪ್ರತಿ ಗ್ರಾಮವೂ ತನ್ನ ರಕ್ಷಣೆಗಾಗಿ ಸ್ವಯಂ ಏರ್ಪಾಟುಗಳನ್ನು ಮಾಡಿಕೊಳ್ಳಬೇಕಾದ ಅವಶ್ಯಕತೆಯಿರುತ್ತಿತ್ತು. ಗ್ರಾಮಗಳಲ್ಲಿ ಕೆಲವು ಕಾಯ್ದಿಟ್ಟ ವೀರಪಡೆಗಳಿರುತ್ತಿದ್ದು ಯುದ್ಧ ಸಂದರ್ಭಗಳಲ್ಲಿ ಅರಸನ ಸೈನ್ಯದೊಂದಿಗೆ ಸೇರಿಕೊಳ್ಳುತ್ತಿದ್ದವು. ಉಳಿದ ಸಂದರ್ಭಗಳಲ್ಲಿ ಗ್ರಾಮದ ರಕ್ಷಣೆಯನ್ನು ನೋಡಿಕೊಳ್ಳುತ್ತಿದ್ದವು. ಆದರೆ ಎಲ್ಲ ಗ್ರಾಮಗಳಲ್ಲೂ ಇಂಥ ಕಾಯ್ದಿಟ್ಟ ಪಡೆ ಇರಲು ಸಾಧ್ಯವಿಲ್ಲ. ಗ್ರಾಮದ ಪ್ರಜಾ ಸಮೂಹವೇ ತನ್ನ ರಕ್ಷಣೆಯನ್ನು ಮಾಡಿಕೊಳ್ಳಬೇಕಾಗಿತ್ತು. ಆಪತ್ತು ಬಂದೊದಗಿದಾಗ ಸೈನಿಕರು ತರಬೇತಿ ಪಡೆದ ವೀರ ಪಡೆಯಷ್ಟೇ ಅಲ್ಲ ಜೀವನ ನಿರ್ವಹಣೆಗೆ ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿದವರು ಹೋರಾಡಿ ಮಡಿದಿರುವುದನ್ನು ವೀರಗಲ್ಲುಗಳು ಹೇಳುತ್ತವೆ. ಇವರೆಲ್ಲರಿಗೂ ಶಸ್ತ್ರಾಸ್ತ್ರ ತರಬೇತಿ ಇರುತ್ತಿತ್ತೇ ಎಂಬ ಪ್ರಶ್ನೆ ಏಳುತ್ತದೆ. ಸ್ವಯಂ ರಕ್ಷಣೆಗಾಗಿ ಯಾವುದಾದರೊಂದು ಆಯುಧವನ್ನು ಬಳಸುವುದನ್ನು ಪುರುಷರು ಕಲಿತಿರುತ್ತಿದ್ದು, ಸಮಯ ಸಂದರ್ಭಗಳ ಅನಿವಾರ್ಯಗಳಿಗೆಗಳಲ್ಲಿ ಹೋರಾಟಕ್ಕೆ ಇಳಿಯುತ್ತಿದ್ದರೆಂದು ಭಾವಿಸಬಹುದು.

ತನ್ನ ಸ್ವಂತ ರಕ್ಷಣೆಗಾಗಲಿ, ಇತರರಿಗೆ ಧಕ್ಕೆ ಉಂಟಾದಾಗಲಾಗಲೀ ಸ್ವಗ್ರಾಮ, ಕೇರಿಗಳ ಮೇಲೆ ಆಕ್ರಮಣವಾದಾಗಲಾಗಲೀ ನೆಂಟರು ಇಷ್ಟರು, ಗೋಧನ ಅಬಲರು ತೊಂದರೆಯಲ್ಲಿ ಸಿಕ್ಕಿದಾಗಲಾಗಲೀ

ಹೋರಾಡಿ ಗೆದ್ದ ಇಲ್ಲವೇ ಮಡಿದ ವೀರನಿಗೂ ಯುದ್ಧಗಳಲ್ಲಿ ಗೆದ್ದು ಬಂದ ಇಲ್ಲವೇ ಪ್ರಾಣತ್ಯಾಗ ಮಾಡಿದ ಯೋಧರಿಗೆ ಸಿಗುವ ಗೌರವ ಮಾನ್ಯತೆಗಳೇ ಸಿಗುತ್ತಿತ್ತು. ಅಂತಹ ಆತಂಕದ ಸಂದರ್ಭಗಳಲ್ಲಿ ಹೋರಾಡದೇ ತಟಸ್ಥನಾಗಿರುವ ಪುರುಷನನ್ನು ಷಂಡನೆಂದು ಅಂದಿನ ಸಮಾಜ ಪರಿಗಣಿಸುತ್ತಿತ್ತು.[೧೪೭] ಇಂತಹ ವೀರ ಮೌಲ್ಯಗಳು ಸಾಮಾನ್ಯನ ಮನದಲ್ಲಿ ನಿಂತು ಗ್ರಾಮರಕ್ಷಣೆಯ ಕಾರ್ಯಕ್ಕೆ ನೆರವು ನೀಡಿದ್ದವು.

**೫.೩.೧. ಊರಳಿವು**

ವೈಯಕ್ತಿಕ ದ್ವೇಷಾಸೂಯೆ ರಾಜಕೀಯ ಪ್ರೇರಣೆ ಅಥವಾ ಯುದ್ಧಾನಂತರದಲ್ಲಿನ ಗೆದ್ದವರ ವಿಜೃಂಭಣೆ ಸೈನ್ಯಗಳು ಸಾಗುವ ಪಥಗಳಲ್ಲಿ, ಬೀಡು ಬಿಟ್ಟ ಪ್ರದೇಶಗಳಲ್ಲಿ ಗ್ರಾಮಗಳಿಗೆ ನುಗ್ಗಿ ಲೂಟಿ ಮಾಡುವುದು ಮತ್ತು ಸಂಪತ್ತಿನೊಂದಿಗೆ, ಗೋಧನ, ಹೆಣ್ಣುಗಳನ್ನು ಹೊತ್ತೊಯ್ಯುವುದು ಊರುಗಳನ್ನು ಸುಟ್ಟು ಹಾಕುವುದನ್ನು ಶಾಸನಗಳು ದಾಖಲಿಸಿವೆ. ಅಂತಹ ಆತಂಕಗಳನ್ನು ಮತ್ತು ಹಾನಿಗಳನ್ನು ಎದುರಿಸಲು ಅಂದಿನ ಸಮಾಜವು ಬದ್ಧವಾಗಿರುತ್ತಿತ್ತು ಮತ್ತು ಸಮಾಜ ಕಂಟಕರನ್ನೆದುರಿಸಿ ಊರನ್ನು ರಕ್ಷಿಸಿ ಶಾಂತಿ ನೆಮ್ಮದಿ ಕಾಪಾಡುವುದು ಅಂದಿನ ವೀರರ ಧ್ಯೇಯವಾಗಿತ್ತು. ಊರನ್ನು ಲೂಟಿ ಮಾಡಿ ತುರುಗಳನ್ನು ಕದ್ದೊಯ್ಯುತ್ತಿದ್ದ ಶತ್ರುಗಳನ್ನು ಎದುರಿಸಿ ತುರುಗಳನ್ನು ಕಾಪಾಡಿದ ವೀರನ ಬಗೆಗೆ ಶಾಸನವೊಂದು ತಿಳಿಸಿದೆ.[೧೪೮] ಈ ಅಧ್ಯಯನದ ಪ್ರದೇಶದಲ್ಲಿ ದೊರೆತಿರುವ ಪ್ರಾಚೀನ ಊರಳಿವಿನ ಶಾಸನ ಇದಾಗಿದೆ. ಸಾವಿರದ ನೂರು ವರ್ಷಗಳ ಹಿಂದೆ ತಮ್ಮ ಊರಿನ ಗೋವುಗಳನ್ನು ರಕ್ಷಿಸಿದ ಈ ವೀರನ ವೀರಗಲ್ಲಿಗೆ ಇಂದಿಗೂ ಪ್ರತಿವರುಷ ಕಾರ ಹುಣ್ಣಿಮೆಯಲ್ಲಿ ವಿಶೇಷ ಪೂಜೆ ನಡೆಯುವುದು ಆ ವೀರನಿಗೆ ಗ್ರಾಮವು ತೋರಿದ ಭಕ್ತಿ ಗೌರವಗಳನ್ನು ಸೂಚಿಸುತ್ತದೆ. ನೀರ್ಗುಂದದ ಊರಳಿವಿನಲ್ಲಿ ಮಾಚೆಯ್ಯ ಎಂಬುವವನು 'ಊರ ಕಾದು ತುರುವ ಮಗುಳ್ಚಿ' ಮಡಿದಿದ್ದಾನೆ[೧೪೯] ಹಲುಕೂರ ಮಲ್ಲಗುರುಗಳ ಮಗ ಮಲ್ಲಯ್ಯ ಹಲುಕೂರ ಗ್ರಾಮದೊಳಗೆ ಶತ್ರುಗಳಿಗೆ ನುಗ್ಗಲು ಅವಕಾಶ ಕೊಡದೇ ದಿಡ್ಡಿ ಬಾಗಿಲಲ್ಲೇ ನಿಂತು ಕಾದಿ ಮಡಿದಿದ್ದಾನೆ.[೧೫೦]

ರಾಜರ ಅಧಿಕಾರಿಗಳ ಪರಾಕ್ರಮವನ್ನು ವರ್ಣಿಸುವಾಗ ಅವರು ಗೆದ್ದ ರಾಜ್ಯಗಳಿಂದ ಸಂಪತ್ತನ್ನು, ಆನೆ, ಕುದುರೆಗಳನ್ನು ದೋಚುತ್ತಿದ್ದುದನ್ನು, ಸೋತವರ ಪಟ್ಟಣವನ್ನು ಸುಡುತ್ತಿದ್ದುದನ್ನು ಹೊಗಳುತ್ತವೆ![೧೫೧] ಹೀಗೆ ಒಂದು ಗ್ರಾಮವನ್ನೋ ಪಟ್ಟಣವನ್ನೋ ಆಕ್ರಮಿಸಿ ಸುಟ್ಟು ದಿಗ್ವಿಜಯ ಆಚರಿಸುವುದು ಆಕ್ರಮಣಕಾರರಿಗೆ ಹೆಮ್ಮೆಯ ವಿಷಯವಾಗಿ ಅವರ ಬಿರುದುಗಳಲ್ಲಿ ಸೇರಿಕೊಳ್ಳುತ್ತಿತ್ತು. ಆದರೆ ಆಕ್ರಮಣಕ್ಕೆ ಒಳಗಾದವರಿಗೆ ಇದು ಸಾಮಾಜಿಕ ಪಿಡುಗಾಗಿ ದೌರ್ಜನ್ಯವಾಗಿ ಕಂಡುಬರುತ್ತಿತ್ತು. ಇಂತಹ ಅನ್ಯಾಯಗಳನ್ನು ಎದುರಿಸಿ ಸ್ವಗ್ರಾಮಗಳನ್ನು ಕಾಪಾಡುವುದು ಪುಣ್ಯವೂ, ಕರ್ತವ್ಯವೂ ಎಂದು ಭಾವಿಸಿ

ಮಾನವೀಯತೆಯಿಂದ ಸ್ವಪ್ರೇರಿತರಾಗಿಯೋ ಇಲ್ಲವೇ ಒಡೆಯನ ಆಜ್ಞೆಯ ಮೇರೆಗೋ ಸಾಮಾನ್ಯರು ಪ್ರಾಣತೆರುತ್ತಿದ್ದರು. ಯಾವುದೇ ಕೋನದಿಂದ ನೋಡಿದರೂ ಶ್ರೀ ಸಾಮಾನ್ಯರು ಸುರಕ್ಷಿತವಾಗಿರದೆ ಸದಾಕಾಲ ಆತಂಕದಲ್ಲೇ ಬದುಕಬೇಕಿತ್ತು. ಪ್ರಭುತ್ವವು ವೀರತ್ವ-ಹೇಡಿತನ, ಶಿಷ್ಟ- ದುಷ್ಟ ಇತ್ಯಾದಿಗಳಿಗೆ ತನ್ನದೇ ಆದ ವ್ಯಾಖ್ಯಾನ ನೀಡುತ್ತ ದುಷ್ಟ ಶಿಕ್ಷಣ ಶಿಷ್ಟ ಪರಿಪಾಲನೆಯ ಹೆಸರಿನಲ್ಲಿ ಇಂತಹ ಹಿಂಸಾತ್ಮಕ ಆಕ್ರಮಣಗಳನ್ನು ಧರ್ಮವೆಂದು ಪ್ರೋತ್ಸಾಹಿಸುತ್ತಿತ್ತು. ಇಂತಹ ಘಟನೆಗಳಲ್ಲಿ ಮಡಿದ ವೀರರ ಪರೋಕ್ಷ ವಿನಯಕ್ಕಾಗಿ ನಿಲ್ಲಿಸಿದ ಈ ಶಾಸನಗಳೂ ಸಹ ವೀರ ಮೌಲ್ಯದ ಹೆಸರಿನಲ್ಲಿ ಸಾವನ್ನು ಸಂಭ್ರಮಿಸಿದಂತೆ ತೋರುತ್ತದೆ. ಆದರೆ ಜನಪದರು ಇಂತಹ ವೀರಕಲ್ಲುಗಳಿಗೆ ಸಂಬಂಧಿಸಿದಂತೆ ಸೃಷ್ಟಿಸಿಕೊಂಡಿರುವ ಕಥೆಗಳು ವೀರಗೀತೆಗಳು ಆಚರಣೆಗಳು ಇಂತಹ ಅನ್ಯಾಯಗಳ ವಿರುದ್ಧ ತಣ್ಣನೆಯ ಪ್ರತಿರೋಧ ವ್ಯಕ್ತಪಡಿಸುತ್ತವೆ.

### ೫.೩.೨. ಪೆಣ್ಬುಯಲ್

ವೀರರು ಹೋರಾಡಿ ಗಂಡುತನವನ್ನು ಮೆರೆಯಲೇ ಬೇಕಾದ ಮತ್ತೊಂದು ಪ್ರಸಂಗವೆಂದರೆ ಪೆಣ್ಬುಯಲ್ ಪ್ರಸಂಗ. ವೀರಗಲ್ಲುಗಳಲ್ಲಿ 'ಪೆಂಡಿರ ಉಡೆಯುರ್ಚುವಲ್ಲಿ' ಎಂಬ ಪದಪ್ರಯೋಗ ಕಂಡುಬರುತ್ತದೆ. ಪೆಣ್ಬುಯ್ಯಲ್ ಎಂಬ ಪದ ಕಾವ್ಯಗಳಲ್ಲಿ ಕಂಡುಬಂದಿದ್ದು ಇದು ಪಾರಿಭಾಷಿಕ ಪದವಾಗಿದೆ. ಸ್ತ್ರೀಯರ ಮೇಲಿನ ದೌರ್ಜನ್ಯವು ಊರಿನ ಮೇಲೆ ದಾಳಿಗಳು ನಡೆದಾಗ ಯುದ್ಧಾನಂತರದಲ್ಲಿ ಅಥವಾ ಯುದ್ಧಗಳಿಗೆ ಪ್ರೇರಣೆಯಾಗಿ ಸ್ತ್ರೀಯರ ಮೇಲೆ ದೌರ್ಜನ್ಯವು ನಡೆಯುತ್ತಿದ್ದವು.

ನೊಳಂಬರ ದಂಡು ಸಾತಂಗೆರೆಯಲ್ಲಿ ಬೀಡು ಬಿಟ್ಟಿದ್ದಾಗ ನೊಳಂಬರ ಅರಸು ಬಂದು 'ಏಳಬ್ಬೆನಾಯ (ಕಿತಿ)ಯ ಮುಟ್ಟೆ ಪೋಗೆ ಬೆಂಕೊಣ್ಡು ಕಳಿಕಟ್ಟೆಯಲ್ಲಿ ಕಾದಿ ಸತ್ತನೆಂದು ಆಸಂದಿ ನಾಡಾಳುತ್ತಿದ್ದ ಗಂಗರ ಸಾಮಸ್ತ ಮುತ್ತರಸ ಎಂಬುವನ ವೀರಗಲ್ಲು ತಿಳಿಸುತ್ತದೆ.[೫೨] ಶಿಲ್ಪವು ಬೇಗೂರಿನ ವೀರಗಲ್ಲು ಶಿಲ್ಪವನ್ನು ಹೋಲುತಿದ್ದು ಭೀಕರ ಯುದ್ಧ ನಡೆದಿರುವುದನ್ನು ಸೂಚಿಸುತ್ತದೆ. ಬಹುಷ ಇಲ್ಲಿ ಎಳಬ್ಬೆನಾಯಕಿತಿಯ ಮೇಲಿನ ಆಕ್ರಮಣವು ರಾಜಕೀಯ ಉದ್ದೇಶದಿಂದ ಕೂಡಿದ್ದಾಗಿದೆ.

ಇದೇ ಕಾಲಕ್ಕೆ ಸೇರಿದ ಚಲುವನಹಳ್ಳಿ ಶಾಸನವೊಂದು ನೊಳಂಬರು ಮಾಡಿದ ಗೋಗ್ರಹಣ ಕೇಶಗ್ರಹಣದುಳ್ ಬಿದ್ದ' ಗೋವರ್ಧನ ಕ್ರಮಿತನೆಂಬ ಬ್ರಾಹ್ಮಣನ ಮೊಮ್ಮಗ ತಿಬ್ಬಮ್ಮಾಣಿ ಎನ್ನುವವನ ವೀರಗಲ್ಲಾಗಿದೆ.[೫೩] ಈ ಶಾಸನದಲ್ಲಿ ಗೋಗ್ರಣದ ಜೊತೆಗೆ ಕೇಶಗ್ರಹಣ ಎಂಬ ಉಲ್ಲೇಖವಿದ್ದು ಇದೊಂದು ಅಪರೂಪದ ಪ್ರಯೋಗವಾಗಿದೆ... ಬಹುಶಃ ಪೆಣ್ಬುಯಲ್ ಪದಕ್ಕೆ ಸಮಾನ ಅರ್ಥದಲ್ಲಿ ಇದನ್ನು ಬಳಸಿದ್ದಲ್ಲಿ ಸ್ತ್ರೀಯರ ಮುಡಿಯನ್ನು ಹಿಡಿದು ಕತ್ತರಿಸಿದ ಅರ್ಥವನ್ನು ನೀಡಬಹುದಾಗಿದೆ" ಎಂದು ಹನುಮನಾಯಕರು ಅಭಿಪ್ರಾಯಪಟ್ಟಿದ್ದಾರೆ. ಇಲ್ಲಿ ಕೇಶಗ್ರಹಣ ಎಂಬುದನ್ನು ಕೂದಲನ್ನು

ಕತ್ತರಿಸು ಎಂಬ ಅರ್ಥ ಮಾಡಬೇಕಾದ ಅಗತ್ಯವಿಲ್ಲ. 'ಶ್ರೀಮುಡಿಗೆ ಕೈಯಿಕ್ಕು' 'ಕೇಶಾಪಕರ್ಷಣ' 'ಕೇಶಗ್ರಹಣ' ಇತ್ಯಾದಿ ಪ್ರಯೋಗಗಳು ವಾಚ್ಯಾರ್ಥದ ನೆಲೆಯನ್ನು ದಾಟಿ ಸ್ತ್ರೀಯರ ಮೇಲೆ ನಡೆಯುವ ಕೆಲವು ಬಾರಿ ಪುರುಷರ ಮೇಲೂ ನಡೆಯುವ ಆಕ್ರಮಣವನ್ನು ಸೂಚಿಸುತ್ತದೆ.* ಅನೇಕ ವೀರಗಲ್ಲುಗಳ ಶಿಲ್ಪದಲ್ಲಿ ಶತ್ರುಗಳ ಜುಟ್ಟು ಹಿಡಿದು ಕೊಲ್ಲುತ್ತಿರುವುದನ್ನು ನೋಡಬಹುದು.

ಪೆಣ್ಬುಯಲ್ ಎಂಬ ಪದ ಪ್ರಯೋಗವೂ ವಾಚ್ಯಾರ್ಥವನ್ನು ಮೀರಿ ಆಕ್ರಮಣಕ್ಕೊಳಗಾದ ಸ್ತ್ರೀಯರ ಅಸಹಾಯಕತೆಯನ್ನು, ಆತಂಕವನ್ನು, ದಾಳಿಕೋರರ ದೌರ್ಜನ್ಯವನ್ನು ಮನಸ್ಸಿಗೆ ಮುಟ್ಟಿಸುತ್ತದೆ. ಕಣಕಟ್ಟೆಯ ಶಾಸನ[೧೫೪] ಯುದ್ಧಕ್ಕೆ ಪ್ರೇರಣೆಯಾದ ಸ್ತ್ರೀ ಬಂಧನವನ್ನು ಹೇಳುತ್ತಿದೆ. ಶತ್ರುಗಳು ಸ್ಥಿರಗಂಭೀರನೊಳಂಬನ ಅಗ್ರಮಹಿಷಿ ಶ್ರೀದೇವಿಯನ್ನು ಮುತ್ತಿ ಬಂಧಿಯಾಗಿಸಿದ್ದನ್ನು ಇದು ಉಲ್ಲೇಖಿಸಿದೆ. ಕಿತ್ತನ ಕೆರೆಯ ಶಾಸನವು ಕಿತ್ತನ ಕೆರೆಯಿಂದ ಹಾರನಹಳ್ಳಿಗೆ ಪ್ರಯಾಣಮಾಡುತ್ತಿದ್ದಾಗ ಹೆಮ್ಮಕ್ಕಳ ಉಡೆ ಉರ್ಚ್ಚಲೀಯದೆ ವೀರನೂ ಅವನ ಸಂಗಡದ ಬೆಚ್ಚೆ ಮಾವನೂ ವೀರಕಾಳೆಗವನ್ನು ಕಾದಿ ಹೆಮ್ಮಕ್ಕಳನ್ನು ಕಾದು ಕಳಿಹಿ ಕಳ್ಳರನ್ನು ಕೊಂದು ತಾವು ಸುರಲೋಕ ಪ್ರಾಪ್ತರಾದರೆಂದು ಹೇಳಿದೆ.[೧೫೫] ಇದು ಆಕಸ್ಮಿಕ ಆಕ್ರಮಣ, ಬಹುಷಃ ಈ ಸ್ತ್ರೀಯರು ಮತ್ತು ವೀರರು ಒಂದೇ ಕುಟುಂಬದವರೇ ಆಗಿರುವ ಸಾಧ್ಯತೆ ಹೆಚ್ಚು. 'ಹೆಮ್ಮಕ್ಕಳನ್ನು ಕಾದು ಕಳುಹಿ' ಎಂಬ ಪ್ರಯೋಗವು ಹೆಣ್ಣು ಮಕ್ಕಳನ್ನು ಮೊದಲು ಜೋಪಾನ ಮಾಡಿ, ಹೋರಾಟದ ಜಾಗದಿಂದ ಕಳುಹಿಸಿ ನಂತರದಲ್ಲಿ ಕಾಳಗವು ತೀವ್ರವಾದ್ದರಿಂದ ವೀರ ಸತ್ತಿದ್ದಾನೆ. ವೀರನ ಸಾವಾಗದ, ಹೆಮ್ಮಕ್ಕಳ ಉಡೆಯುರ್ಚುವ ಪ್ರಸಂಗಗಳು ದಾಖಲೆಗೊಳ್ಳದೆ, ಉಳಿದಿರುವಂತಹವು ಎಷ್ಟೋ ಇರಬಹುದು.

ಕೌಟುಂಬಿಕ ದ್ವೇಷಾಸೂಯೆಗಳು ಹೆಣ್ಣು ಮಕ್ಕಳ ಮೇಲಿನ ಆಕ್ರಮಣಕ್ಕೆ ಕಾರಣವಾಗುತ್ತದೆಂಬುದಕ್ಕೆ ಉದಾಹರಣೆಗಳು ಎಲ್ಲ ಕಾಲದಲ್ಲೂ ದೊರಕುತ್ತವೆ. ಚಟ್ಟಯ್ಯನಾಯಕ ಮತ್ತು ಅಳಿಯವೆನಾಯಕಿತ್ತಿಯ ಮಗಳು ಗುಜ್ಜವ್ವೆಯ 'ಉಡೆ ಉಱುಚುವಲ್ಲಿ' ಅವಳ ಅಣ್ಣ ಮಲ್ಲೆಯನಾಯಕ ಹಾಗೂ ಎಡವಜಕ್ಕಣನ ಮಕ್ಕಳು ಕೋತಣ ಮಾಕಣರು ಹಲವರನ್ನು ಕೊಂದು ಮಡಿದುದನ್ನು ಒಂದು ಶಾಸನ ಹೇಳಿದೆ.[೧೫೬] ಆದರೆ ಶಾಸನ ಶಿಲ್ಪದಲ್ಲಿ ಮೂವರು ವೀರರನ್ನು ಒಬ್ಬ ಶತ್ರುವನ್ನು ಚಿತ್ರಿಸಲಾಗಿದೆ. ಶಾಸನ ಪಾಠದಲ್ಲಿ 'ಹಲವರನ್ನು ಕೊಂದು' ಎಂಬ ಪ್ರಯೋಗವಿರುವುದರಿಂದ ಈ 'ಉಡೆ ಉಱುಚುವ' ಘಟನೆಗುಜ್ಜವ್ವೆಯ ಚಲುವಿಗಿಂತ ಅವಳ ಕುಟುಂಬದ ಮೇಲಿನ ಹಗೆಗಾಗಿ ಹಲವರು ಆಕ್ರಮಣ ಮಾಡಿರುವ ಸಾಧ್ಯತೆಯಿದೆ.

---

* ಪುರುಷರಿಗೆ ಸಂಬಂಧಿಸಿದಂತೆ ಅವರ ವೀರಮುಡಿ, ತಲೆಯುಡಿಗೆ ತೊಡಿಗೆಗಳು ಅವರ ಮಾನಗೌರವದ ಪ್ರತೀಕವಾಗಿರುತ್ತಿದ್ದವು. ಅದನ್ನು ಹಿಡಿದಾಗ ಇಲ್ಲವೇ ಕಸಿದುಕೊಂಡಾಗ ಅವನತ ವದನರಾಗಿ ನಿಲ್ಲಬೇಕಾಗುತ್ತಿತ್ತು. ಇವತ್ತಿಗೂ ಬಳಕೆಯಲ್ಲಿರುವ 'ಅವನ ಜುಟ್ಟು ನನ್ನ ಕೈಯಲ್ಲಿದೆ', 'ಜುಟ್ಟು ಹಿಡಿದು ಕೇಳು' ಇತ್ಯಾದಿ ಪ್ರಯೋಗಗಳಲ್ಲಿ ತಪ್ಪಿಸಿಕೊಳ್ಳಲಾಗದಂತೆ ಹಿಡಿ, ಸ್ವಾಧೀನ ಮಾಡಿಕೊಳ್ಳುವುದು ಅವಮಾನಿಸು ಎಂಬ ಅರ್ಥವೇ ಇದೆ.

ನಿರ್ದಿಷ್ಟ ಹೆಣ್ಣಿನ ಹೆಸರನ್ನು ಸೂಚಿಸುವ ಶಾಸನಗಳ ಶಿಲ್ಪದಲ್ಲಿ ಅಸಹಾಯಕಳಾಗಿ ನಿಂತ ಹೆಣ್ಣಿನ ಶಿಲ್ಪವಿರುವುದಿಲ್ಲ. ಆಕ್ರಮಣದಿಂದ ಮೊದಲೇ ಸಾಮಾಜಿಕವಾಗಿ ಹೀನಾಯಕ್ಕೆ ಒಳಗಾದ ಹೆಣ್ಣಿಗೆ ಮತ್ತು ಅವಳ ಕುಟುಂಬಕ್ಕೆ ಮತ್ತಷ್ಟು ನೋವು ಕೊಡಬಾರದೆಂಬ ಶಿಲ್ಪಿಯ ಸೂಕ್ಷ್ಮತೆಯನ್ನಿಲ್ಲಿ ಮೆಚ್ಚಬೇಕಾಗುತ್ತದೆ. ಅಥವಾ ವೀರಗಲ್ಲು ನಿಲ್ಲಿಸುವವರಿಂದ ಅಂತಹ ನಿರ್ದೇಶನವೂ ಶಿಲ್ಪಿಗೆ ಬಂದಿರಬಹುದಾದ ಸಾಧ್ಯತೆ ಇರಬಹುದು. ಪೆಣ್ಬುಯಲ್ ಶಾಸನಗಳಲ್ಲಿ ಸ್ತ್ರೀಯ ಹೆಸರನ್ನು ನಿರ್ದಿಷ್ಟವಾಗಿ ಹೇಳದೆ ಸಾಮೂಹಿಕ ಆಕ್ರಮಣದಲ್ಲಿ ಚಿಂತಾಜನಕವಾದ ಸ್ಥಿತಿಯಲ್ಲಿರುವ ಹೆಣ್ಣುಗಳನ್ನು ಬಿಡಿಸಲಾಗುತ್ತದೆ. ನೀರುಗುಂದದ ಊರಳಿವು ತುರುಗೊಳ್ ಶಾಸನಶಿಲ್ಪದಲ್ಲಿ ವೀರನ ಹಿಂಬದಿಯಲ್ಲಿ ಅಳುಕಿನಿಂತಿರುವ ಸ್ತ್ರೀಯರನ್ನು ಕಾಣಬಹುದು.

ಪೆಣ್ಬುಯ್ಯಲಿನ ಸಂದರ್ಭದ ಅಸಹಾಯಕತೆ, ಆತಂಕ, ಅಳಲನ್ನು ಕಾವ್ಯಗಳಲ್ಲಿ ಸೀತೆ, ಸುನಂದೆಯರ ಅಪಹರಣ ಪ್ರಸಂಗಗಳು ಮನಮುಟ್ಟಿಸುತ್ತವೆ. ಜನ್ನನಂತೂ ವೃತ್ತವೊಂದರಲ್ಲಿ ಸುಮಾರು ಹತ್ತು ತುಂಡು ತುಂಡಾದ ವಾಕ್ಯಗಳನ್ನು ಬೆಸೆದು ಸುನಂದೆಯ ಹುಯ್ಯಲಿನ ತೀವ್ರತೆಯನ್ನು ಮನಕಲಕುವಂತೆ ಚಿತ್ರಿಸಿದ್ದಾನೆ.[೧೫೭]

## ೫.೩.೩. ಸಂಪತ್ತಿನ ರಕ್ಷಣೆ –ಕಳ್ಳರೊಡನೆ ಹೋರಾಟ

ಅರಸೀಕೆರೆಯ ಸುತ್ತಮುತ್ತಲ ಪ್ರದೇಶವು ಬೆಟ್ಟಗುಡ್ಡ ಹಳ್ಳಗಳಿಂದ ಕೂಡಿದ್ದು ದಾರಿಗಳ್ಳರಿಗೆ ಒಳ್ಳೆಯ ಅಡಗುತಾಣಗಳನ್ನು ಒಗಗಿಸಿದ್ದವು. ಅಷ್ಟೇ ಅಲ್ಲದೆ ಹೊಯ್ಸಳರ ಕಾಲದಲ್ಲಿ ಈ ಪ್ರದೇಶಗಳಲ್ಲಿ ಉಂಟಾದ ಆರ್ಥಿಕ, ರಾಜಕೀಯ ಪ್ರಗತಿಯಿಂದಾಗಿ ವಿಶೇಷವಾಗಿ ಸಂಪತ್ತಿನ ಕ್ರೋಢೀಕರಣಕ್ಕೆ ಅವಕಾಶ ಮಾಡಿಕೊಟ್ಟಿತ್ತು. ಉಳ್ಳವರ ವೈಭವ ಬಡವರ, ದಾಳಿಕೋರರ, ಕಳ್ಳರ ಕಣ್ಣು ಕುಕ್ಕುತ್ತಿದ್ದುದು ಸ್ವಾಭಾವಿಕ. ಅರಸೀಕೆರೆ-ಬಾಣಾವರ-ಬೇಲೂರು, ಕಣಕಟ್ಟೆ-ಹಲಕೂರು-ಹುಳಿಯಾರು, ಚಲ್ಲಾಪುರ-ಹಾರನಹಳ್ಳಿ-ಜಾವಗಲ್ಲು ಈ ಕೆಲವು ಪ್ರಮುಖ ಊರುಗಳು ರಾಜಕೀಯ ಮತ್ತು ವ್ಯಾಪಾರ ವಹಿವಾಟಿಗಾಗಿ ಪ್ರಮುಖವಾಗಿದ್ದು ಅವುಗಳನ್ನು ಬೆಸೆಯುವ ಪಥಗಳು ಹೆಬ್ಬಟ್ಟೆ, ಕಿರುಬಟ್ಟೆಗಳಲ್ಲಿ ವರ್ತಕರು, ಅಧಿಕಾರೀವರ್ಗ, ಸಾಮಾನ್ಯರ ಪ್ರಯಾಣ ವಿಶೇಷವಾಗಿರುತ್ತಿತ್ತು. ಆಯಕಟ್ಟಿನ ಪ್ರದೇಶಗಳಲ್ಲಿ ಅಡಗಿದ ಕಳ್ಳರು ಪ್ರಯಾಣಿಕರ ಮೇಲೆ ಆಕ್ರಮಣ ಮಾಡುತ್ತಿದ್ದರು. ಇವತ್ತಿಗೂ ಈ ಮಾರ್ಗಗಳು ಸುರಕ್ಷಿತವಾಗಿಲ್ಲ ಹಾಗಾಗಿ ಕಳ್ಳರಸೀಕೆರೆ ಎಂಬ ಮಾತು ಇಂದಿಗೂ ಜನಜನಿತವಾಗಿದೆ. ಅರಸೀಕೆರೆಗೆ ಪ್ರಯಾಣ ಮಾಡುವಾಗ ಕಳ್ಳರ ಆಕ್ರಮಣಗಳಿಗೆ ಒಳಗಾದ ಘಟನೆಗಳನ್ನು, ಕಳ್ಳರ ಅಡಗುತಾಣಗಳ ವಿವರಗಳನ್ನು ಸುತ್ತ ಮುತ್ತಲ ಹಳ್ಳಿಯವರು ಕಥೆಗಳಂತೆ ರೋಮಾಂಚಕವಾಗಿ ವಿವರಿಸುತ್ತಾರೆ. ಇಲ್ಲಿನ ಶಾಸನಗಳೂ ಕೂಡ ಇದನ್ನು ಅನುಮೋದಿಸುತ್ತವೆ.

ಹಲಕೂರಿನ ಒಂದು ಶಾಸನ ಅರಸಾಳು ಮಾದಯ್ಯನ ಮಗ ಬಯಿಚಯ್ಯನು ಅರಸೀಕೆರೆಯ ದಾರಿಯಲ್ಲಿ ಕಳ್ಳರು ತಾಗಿದಲ್ಲಿ ರಣರಂಗವೀರನಾಗಿ ಕಾದಿ ಸುರಲೋಕ ಪ್ರಾಪ್ತನಾದುದನ್ನು ಹೇಳಿದೆ.[೧೫೮]

ಶಾಸನ ಶಿಲ್ಪದಲ್ಲಿ ಬಿಲ್ಲು, ಕೈಗತ್ತಿಗಳನ್ನು ಹಿಡಿದ ವೀರ ಏಕಾಕಿಯಾಗಿದ್ದಾನೆ. ಅನೇಕ ಕಳ್ಳರು ಅವನ ಮೇಲೆ ಆಕ್ರಮಣಕ್ಕೆ ಬಂದಿರುವಂತಿದೆ. ಅಂದರೆ ಕಳ್ಳರು ಗುಂಪಾಗಿ ಪ್ರಯಾಣಿಕರ ಮೇಲೆ ಆಕ್ರಮಿಸುತ್ತಿದ್ದರೆಂದು ಇದರಿಂದ ತಿಳಿಯುತ್ತದೆ. ಇಂಥ ಅಪಾಯಗಳ ಅರಿವಿದ್ದ ಪ್ರಯಾಣಿಕರು ಶಸ್ತ್ರಾಸ್ತ್ರಗಳೊಂದಿಗೆ ಸಿದ್ಧವಾಗೇ ಇರುತ್ತಿದ್ದರೆನಿಸುತ್ತದೆ. ಚಲ್ಲಾಪುರದ ಶಾಸನವೊಂದು[೧೫೯] ಮಾರಯ್ಯ ನಾಯಕನೆಂಬುವವನು (ಏನನ್ನೋ) ಕೊಂಡು ಬರುತಿದ್ದಾಗ ಒಂದು ಹಳ್ಳದ ಎಡೆಯಲ್ಲಿ ಹಲವರು ಅವನನ್ನು ತಡೆದು ನಿಲ್ಲಿಸಿ ಕೊಂದ ವಿಚಾರವಿದೆ. ಹಳ್ಳದಲ್ಲಿ ಅವಿತು ಹೊಂಚುಹಾಕಿ ಈ ಆಕ್ರಮಣ ಮಾಡಿರುವುದು ಸ್ಪಷ್ಟವಾಗುತ್ತದೆ. ಮತ್ತೊಂದು ಶಾಸನವು 'ಹರಿಹರದೇವನನ್ನು (ಈ ಹರಿಹರ ದೇವ ವಿಜಯನಗರದ ಅರಸನೇ ಆಗಿರಬೇಕು)ಕಾಣಲು ಹೋಗುತ್ತಿದ್ದ ನಾಲ್ಕು ಜನರನ್ನು ಕಳ್ಳರು ತಾಗಿ ಅವರನ್ನು ಕೊಂದ ವಿಚಾರವನ್ನು ದಾಖಲಿಸಿದೆ.[೧೬೦]

ಅರಸೀಕೆರೆಯ ಪಸಾಯಿತ ಮಲ್ಲಸೆಟ್ಟಿಯರ ತಮ್ಮ ವೀರಸೆಟ್ಟಿ ಕಳ್ಳನೊಡನೆ ಹೋರಾಡಿ ಕಳ್ಳನನ್ನು ಕೊಂದು ತಾನೂ ಮಡಿದಿದ್ದಾನೆ.[೧೬೧] ಇದು ಊರೊಳಗೆ ನುಗ್ಗಿದ ಕಳ್ಳನೊಂದಿಗಿನ ಹೋರಾಟವೋ ಅಥವಾ ಈ ಸೆಟ್ಟಿ ತನ್ನ ಸರಕಿನೊಂದಿಗೆ ಪ್ರಯಾಣಿಸುವಾಗ ನಡೆದಿರುವುದೋ ಎಂಬುದು ಸ್ಪಷ್ಟವಾಗುವುದಿಲ್ಲ. ದಾರಿಗಳ್ಳರ ಆಕ್ರಮಣವನ್ನೂ ಕಳ್ಳರು ಊರಿಗೆ ನುಗ್ಗಿ ಮನೆಗೆ ಕನ್ನಯಿಕ್ಕುವುದನ್ನು ಕನ್ನಡ ಕಥೆಗಳು (ವಡ್ಡಾರಾಧನೆ ಧರ್ಮಾಮೃತದ ಕಥೆಗಳು) ಪ್ರಸ್ತಾಪಿಸುತ್ತವೆ. ಪ್ರವಾಸೀ ಬರಹಗಳು (ಎಚ್.ಎಲ್. ನಾಗೇಗೌಡ ಪ್ರವಾಸಿ ಕಂಡ ಇಂಡಿಯಾ) ವೈದಿಕ ಜೈನ, ಬೌದ್ಧ ಸಾಹಿತ್ಯ ಕೃತಿಗಳಲ್ಲಿ ವ್ಯಾಪಾರಿಗಳನ್ನು ದಾರಿಗಳ್ಳರು ಅಡ್ಡಗಟ್ಟಿ ಅವರ ಸಂಪತ್ತನ್ನು ದೋಚಿ ಅವರನ್ನು ಕೊಂದು ಹಾಕುತ್ತಿದ್ದ ವಿವರಣೆಗಳು ದೊರಕುತ್ತವೆ.[೧೬೨] ಬಂಡಿಯ ಎತ್ತಂ ಕಳ್ಳರು ಕೊಂಡು ಹೋಹಲ್ಲಿ ಎತ್ತಂ ಮಗುರ್ಚಿ ಸುರಲೋಕ ಪ್ರಾಪ್ತನಾದ ವೀರನೊಬ್ಬನನ್ನು ಒಂದು ಶಾಸನ[೧೬೩] ಪರಿಚಯಿಸುತ್ತದೆ. ಈ ಶಾಸನ ವೀರ ಬೊಮ್ಮನು ಅರಸೀಕೆರೆಯ ಮಹಾಪ್ರಧಾನ ಹೆಗ್ಗಡೆ ಮಾಚಬೆಟ್ಟಯ್ಯಗಳ ಮನೆಮಗನಾದ ಮತ್ತಿಬೋವನ ಮಗ. ಬಹುಶಃ ಬಂಡಿಯು ಹೆಗ್ಗಡೆಗೆ ಸಂಬಂಧಿಸಿದ್ದಾಗಿರಬಹುದು. ವ್ಯಾಪಾರಿಗಳು ತಮ್ಮ ವ್ಯಾಪಾರ ಸಾಮಗ್ರಿಗಳೊಂದಿಗೆ ಬಂಡಿಯಲ್ಲಿ ಪ್ರಯಾಣಿಸುವಾಗ ದಾರಿಗಳ್ಳರು ಅಡ್ಡಗಟ್ಟಿ ವ್ಯಾಪಾರ ಸಾಮಗ್ರಿಗಳನ್ನು, ಎತ್ತುಗಳನ್ನು ಅಪಹರಿಸಿದ್ದನ್ನು ಆಗ ನಡೆದ ಹೋರಾಟದಲ್ಲಿ ಕೆಲವರ್ತಕರು ಓಡಿದರೆಂದೂ ಕೆಲವರು ಸತ್ತರೆಂದೂ ವಡ್ಡಾರಾಧನೆಯಲ್ಲಿ ನಿರೂಪಿತವಾಗಿದೆ.[೧೬೪] ಇಲ್ಲಿ ವ್ಯಾಪಾರಕ್ಕಾಗಿ ವರ್ತಕರು ಗುಂಪು ಗುಂಪಾಗಿ ಅನೇಕ ಗಾಡಿಗಳಲ್ಲಿ ಪ್ರಯಾಣಿಸುತ್ತಿದ್ದಂತೆ ತೋರುತ್ತದೆ. ಪ್ರಸ್ತುತ ಬೊಮ್ಮನ ವೀರಗಲ್ಲಿನ ಪಾಠದಲ್ಲಿ ವ್ಯಾಪಾರೀ ಸರಕಿನ ಉಲ್ಲೇಖವಾಗಲೀ ತುರುಗಳ ಉಲ್ಲೇಖವಾಗಲೀ ಇಲ್ಲ ಕೇವಲ ಬಂಡಿ ಎತ್ತನ್ನು ಕದಿಯುವ ಪ್ರಯತ್ನ ನಡೆದಂತೆ ತೋರುತ್ತದೆ. ಹೂಲಿಯ ಒಂದು ಶಾಸನ[೧೬೫] ಹೊಲದ ಬಂಡಿ ಎತ್ತುಗಳನ್ನು ಕಳ್ಳರು ಕೊಂಡು ಹೋಗುವ ಘಟನೆಯನ್ನು ಹೇಳಿದೆ. ಬಹೂಪಯೋಗಿಯಾದ ಎತ್ತುಗಳಿಗೆ

ಬೇಡಿಕೆ ಹೆಚ್ಚಿದ್ದುದರಿಂದ ಕಳ್ಳರು ಊರಿನ ಗೋಮಾಳ, ಹಟ್ಟಿಗಳಿಗೆ ನುಗ್ಗಿ ತುರುಗಳನ್ನು ಅಪಹರಿಸುವಾಗ ಎಮ್ಮೆಗಳನ್ನು ಎತ್ತುಗಳನ್ನು ಅಪಹರಿಸುತ್ತಿದ್ದರೆಂಬುದಕ್ಕೆ ಶಾಸನಗಳು ಸಾಕ್ಷಿಯಾಗಿವೆ.[೧೬೬]

## ೫.೩.೪. ಗೋಧನ ರಕ್ಷಣೆ-ತುರುಗೊಳ್ ಕಾಳಗ

ಹಿಂದೊಂದು ಕಾಲದಲ್ಲಿ ಭಾರತದಾದ್ಯಂತ ಭವ್ಯ ಪಶುಪಾಲಕ ಪರಂಪರೆಯೊಂದು ಹರಡಿಕೊಂಡಿದ್ದುದು ಈಗ ಇತಿಹಾಸವಾಗಿದೆ. ಮಧ್ಯ ಕರ್ನಾಟಕದಲ್ಲಿ ವಿಶಿಷ್ಟ ವಿಭಿನ್ನ ಬಗೆಯ ಕರ್ನಾಟಕದ ಬೇರೆಲ್ಲೂ ಕಾಣಸಿಗದ ಪಶುಪಾಲನ ಪರಂಪರೆಯ ಬಗ್ಗೆ ಅಸಂಖ್ಯ ಖಂಡ ಕಾವ್ಯಗಳೊಂದಿಗೆ ಕಾಡುಗೊಲ್ಲ ಬುಡಕಟ್ಟಿಗೆ ಸೇರಿದ ಎತ್ತಪ್ಪ ಮತ್ತು ಜುಂಜಪ್ಪ ಎಂಬ ಎರಡು ಜನಪದ ಮಹಾಕಾವ್ಯಗಳು ಸಿಗುತ್ತವೆ.[೧೬೭] ಪಶುಪಾಲನೆ ಮಾಡಿಕೊಂಡು ಹುಲ್ಲು ನೀರು ಹುಡುಕುತ್ತ ಅಲೆ ಮಾರಿಯಾಗಿದ್ದ ಮಾವನ ಬರುಬರುತ್ತ ಪಶುಪಾಲನೆಯೊಂದಿಗೆ ಕುರಿ ಸಾಗಾಣಿಕೆಯನ್ನು ರೂಢಿಸಿಕೊಂಡು ಕೃಷಿ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಅಲ್ಲಲ್ಲಿ ನೆಲೆ ನಿಲ್ಲ ತೊಡಗಿದ. ಕೃಷಿಕನ ಬದುಕಿನ ಆಧಾರವಾಗಿದ್ದ ಈ ಜೀವಧನ' ಆರ್ಥಿಕ ಆಯಾಮದೊಂದಿಗೆ ಧಾರ್ಮಿಕ ಆಯಾಮವನ್ನು ಪಡೆದುಕೊಂಡುದು ಇವುಗಳ ರಕ್ಷಣೆಯ ಕಡೆಗೆ ಸಮಾಜ ಹೆಚ್ಚು ಕಾಳಜಿವಹಿಸುವಂತೆ ಮಾಡಿತು.

ಗೋವುಗಳು, ಹಾಲು, ಗಂಜಲ, ಸಗಣಿ, ಗೋಹಟ್ಟಿಗಳಿಗೆ ಇಂದಿಗೂ ಪವಿತ್ರ ಸ್ಥಾನವೇ ಇದೆ. ಜನ ತಮ್ಮ ಹಟ್ಟಿ ಕೊಟ್ಟಿಗೆಗಳ ಮೇಲೆ ಪ್ರಮಾಣ ಮಾಡುತ್ತಾರೆ.[೧೬೮] ಇನ್ನು ಗೋದಾನವೆಂಬುದು ಅತ್ಯಂತ ಪುಣ್ಯದ ಕಾರ್ಯವೆಂದು ಪರಿಗಣಿತವಾಗಿತ್ತು. ಕೋಡು ಕೊಳಗವನ್ನು ಹೊನ್ನಲ್ಲಿ ಕಟ್ಟಿಸಿ ಗೋವನ್ನು ದಾನ ಮಾಡುವುದರ ಪುಣ್ಯವನ್ನೂ ಅವುಗಳ ಹತ್ಯೆಯ ಪಾಪವನ್ನು ಶಾಸನಗಳ ಶಾಪಾಶಯ ಭಾಗಗಳು ಉಲ್ಲೇಖಿಸಿವೆ. ಕೃಷಿ ವಿಸ್ತರಣಾ ಕಾರ್ಯ ಆರ್ಥಿಕ ಚಟುವಟಿಕೆಗಳು ಬಿರುಸುಗೊಂಡಂತೆ ಗೋಸಂಪತ್ತಿನ ಪಾಲನೆ ಸಂತಾನಾಭಿವೃದ್ಧಿ, ಸಂರಕ್ಷಣೆಯ ಬಗೆಗೆ ಕಾನೂನು ಕಟ್ಟಳೆಗಳು ರೂಪಿತವಾದವು. ಬೀಜದ ಹೋರಿಯನ್ನು ಆಕ್ರಮಣಗಳಿಂದ ರಕ್ಷಿಸಬೇಕೆಂದು, ಅದರ ಪೌರುಷವನ್ನು ಹಾಳುಗೆಡಹುವ ದುಷ್ಟನಿಗೆ ನೂರುಪಣ ದಂಡ ವಿಧಿಸಬೇಕೆಂದು ವಿಜ್ಞಾನೇಶ್ವರ ಹೇಳಿದ್ದಾನೆ.[೧೬೯] ಪ್ರತಿ ಗ್ರಾಮದಲ್ಲೂ ಗೋಮಾಳಗಳನ್ನು ಹುಲ್ಲು ಗಾವಲುಗಳನ್ನು ಮೀಸಲಾಗಿಡುತ್ತಿದ್ದರು. ಅದು ಸಾರ್ವಜನಿಕರ ಸೊತ್ತಾಗಿದ್ದು, ಇಡೀ ಗ್ರಾಮದ ಗೋವುಗಳಿಗೆಂದೇ ಮೀಸಲಾಗಿರುತ್ತಿತ್ತು. ಅದನ್ನು ಅಪಹರಿಸುವಂತಿರಲಿಲ್ಲ.[೧೭೦] ಮೈಸೂರಿನ ಮಹಾರಾಜರ ಕಾಲದಲ್ಲಿ ಅತ್ಯುತ್ತಮ್ಮ ತಳಿಯಾದ ಅಮೃತಮಹಲ್ ' ಹಸುವಿನ ತಳಿಯನ್ನು ಅಭಿವೃದ್ಧಿ ಪಡಿಸಲು ಅಮೃತ ಮಹಲ್ ಕಾವಲುಗಳನ್ನೇ ನಿರ್ಮಿಸಿದ್ದರೆಂದು ತಿಳಿದುಬರುತ್ತದೆ.[೧೭೧] ವಿವಿಧ ಬಗೆಯ ಗೋ ತಳಿಗಳನ್ನು ಕಾಪಾಡುವ ಉದ್ದಿಶ್ಯದಿಂದ ಶಿವಮೊಗ್ಗದಲ್ಲಿ (೨೦೦೭ ಏಪ್ರಿಲ್‌ನಲ್ಲಿ) ನಡೆದ ಗೋ ಸಮ್ಮೇಳನ ಚರಿತ್ರಾರ್ಹವಾಗಿದೆ.

ತುರುಗಳು ಜೀವಧನಗಳೆಂದು ಪರಿಗಣಿತವಾಗಿದ್ದುದರಿಂದ ಮತ್ತು ಅವುಗಳು ಬಹೂಪಯೋಗಿಗಳಾದುದರಿಂದ ಅವುಗಳನ್ನು ಅಪಹರಿಸುವ ಪ್ರಯತ್ನಗಳು ರಕ್ಷಿಸಿಕೊಳ್ಳುವ ಪ್ರಯತ್ನಗಳು ಸತತವಾಗಿ ನಡೆಯುತ್ತಿದ್ದವು. ರಾಜಕೀಯ, ಸ್ವಂತ ಸಂಪತ್ತಿನ ದಾಹದಂತಹ ಯಾವುದೇ ಉದ್ದೇಶ ಈ ತುರುಗಳ ಅಪಹರಣಕ್ಕೆ ಕಾರಣವಾಗಿರಲಿ 'ಅಪಹರಣ ಮಾಡಿದವರನ್ನು ಎದುರಿಸುವುದು ವೀರತನವೆಂದೇ ಬಗೆಯಲಾಗಿತ್ತು.'[೧೭೨] ಗ್ರಾಮದ ಗೋವುಗಳು ಶತ್ರುಗಳ ಪಾಲಾದಾಗ ಗ್ರಾಮಕ್ಕೆ ಆರ್ಥಿಕ ನಷ್ಟವಷ್ಟೇ ಅಲ್ಲ ಅಭಿಮಾನ ಭಂಗವೂ ಆಗುತ್ತಿದ್ದು ಗ್ರಾಮದ ವೀರರ ಆತ್ಮ ಪ್ರತ್ಯಯಕ್ಕೆ ಸವಾಲಾಗುತ್ತಿತ್ತು. ಹಾಗಾಗಿ ಗೋವುಗಳನ್ನು ಕಾಪಾಡಲು ಪ್ರಾಣವನ್ನು ಪಣವಿಟ್ಟು ಹೋರಾಡುತ್ತಿದ್ದರು. ತುರುಸೆರೆಯು ಆಕ್ರಮಣಕಾರಿಗಳಿಗೆ ಹೆಮ್ಮೆಯ ವಿಷಯವಾಗಿರುತ್ತಿದ್ದುದರಿಂದ ಎರಡೂ ಕಡೆಯ ವೀರರ ಜೀವ ಹಾನಿ ಸಂಭವಿಸುತ್ತಿತ್ತು. ಇಂಥ ಹೋರಾಟದಲ್ಲೆಲ್ಲೂ ಗೋವುಗಳು ಸತ್ತಿರುವ ಉಲ್ಲೇಖವಾಗಲಿ ಶಿಲ್ಪ ಚಿತ್ರಣವಾಗಲಿ ಕಂಡುಬಂದಿಲ್ಲ. ಗೋಹತ್ಯೆಯನ್ನು, ಗೋಹಿಂಸೆಯನ್ನು* ನಿಷೇಧಿಸುವ ಧರ್ಮಶಾಸ್ತ್ರಗಳು ಗೋಗ್ರಹಣದ ನಿಷೇಧವನ್ನು ಹೇಳಿಲ್ಲದಿರುವುದು ಆಶ್ಚರ್ಯ. ಕಾವ್ಯಗಳಲ್ಲಿ ಯುದ್ಧತಂತ್ರವಾಗಿ ಗೋಗ್ರಹಣವು ಚಿತ್ರಣಗೊಂಡಿದೆ. ಏನೇ ಆದರೂ ಗೋಗ್ರಹಣ ಮಾಡಿದವರ ಬಗೆಗೆ ಮತ್ತು ಆ ಪ್ರಯತ್ನದಲ್ಲಿ ಸತ್ತವರ ಬಗೆಗೆ ಶಾಸನವು ತೋರಿರುವ ಮೌನ ಮತ್ತು ಗೋರಕ್ಷಣೆಯಲ್ಲಿ ಮಡಿದ ವೀರನಿಗೆ ತೋರಿರುವ ಆದರ, ಮೆಚ್ಚುಗೆಯು ಸಮಾಜವು ಗೋಗ್ರಹಣವನ್ನು ಎಂದೂ ವೀರತನವೆಂದು ಮಾನ್ಯ ಮಾಡಿರಲಿಲ್ಲವೆಂಬುದನ್ನು ಸೂಚಿಸುತ್ತದೆ.

ಗೋಗ್ರಹಣವನ್ನು ತುರುಗೊಳ್ (ತುಱು+ ಕೊಳ್) ಎಂದೂ ದನಸೆರೆ ಎಂದೂ, ತುಱು ಹುಯ್ಯಲು, ತುರುವ ಹಟ್ಟಿಯ ಕಾಳಗವೆಂದು ಶಾಸನಗಳು ಕರೆದಿವೆ. ಕ್ರಿ.ಶ.೯ನೇ ಶತಮಾನದ ಶಾಸನವೊಂದು[೧೭೩] ಕೆಲ್ಲಂಗೆರೆಯ ತುಱುಗಳೊಳ್ಕಾದಿ ಊರಗಾವುಂಡನು ಸತ್ತದ್ದನ್ನು ಹೇಳಿದೆ. ಕಲ್ಲುಗುಂಡಿಯ ಊರಳಿವಿನಲ್ಲಿ ತುರುಗಳನ್ನು ಅಪಹರಿಸುತ್ತಿದ್ದವರೊಂದಿಗೆ ಕಾದಿ ಮಡಿದ ವೀರನ ವೀರಗಲ್ಲು ಇಂದಿಗೂ ಕಾರು ಹುಣ್ಣಿಮೆಯಂದು ಪೂಜೆಗೊಳ್ಳುತ್ತಿದೆ.[೧೭೪] ರಾಜಕೀಯ ಪ್ರೇರಿತವಾದ ಆಕ್ರಮಣಗಳಲ್ಲಿ ಊರಳಿವಿನೊಂದಿಗೆ ತುರುಗಳನ್ನು ಸೆರೆ ಹಿಡಿಯುವುದು ಸಾಮಾನ್ಯವಾಗಿತ್ತು. ೧೨೧೨ರ ನೀರ್ಗುಂದದ ಕಾಳಗದಲ್ಲಿ ಹೊಯ್ಸಳ ಅರಸಿ ಉಮಾದೇವಿಯರ ಬಲುಮಾನಸ ಹೆಗ್ಗಡೆ ಕಲ್ಲಯ್ಯನಲ್ಲಿ ಆಳುತನವನ್ನು ಮಾಡುತ್ತಿದ್ದ ಮಾಚೆಯನು ತನ್ನ ತಮ್ಮಂದಿರೊಂದಿಗೆ ಊರಿನ 'ತುರುಗಳನ್ನು ಕಾದು ಮುಗುಳ್ಚಿ ಕುದುರೆಯನಿರಿದು' ಮಡಿದಿದ್ದಾನೆ.[೧೭೫] ಇಲ್ಲಿನ ವೀರ ಹೆಗ್ಗಡೆ ಕಲ್ಲಯ್ಯನ ಬಂಟನೆಂಬುದು ಸ್ಪಷ್ಟವಾಗುತ್ತದೆ.

---

* ಮೂಕ ಪ್ರಾಣಿಯಾದ ಎತ್ತನ್ನು ಕ್ರೂರವಾಗಿ ಹಿಂಸಿಸಿ ಒತ್ತಾಯದ ದುಡಿಮೆ ಮಾಡಿಸುವವನಿಗೆ ನರಕದಲ್ಲಿ ಅದೇ ಹಿಂಸೆಯನ್ನು ಯಮದೂತರು ನೀಡುತ್ತಿರುವಂತಹ ಚಿತ್ರಪಟಗಳನ್ನು ಕೆಲವು ಮಠಗಳಲ್ಲಿ ದೇವಾಲಯಗಳಲ್ಲಿ ತೂಗು ಹಾಕಿರುತ್ತಾರೆ.

ಹಂದರಾಳಿನ ವೀರಗಲ್ಲು ಶಾಸನವೊಂದರಲ್ಲಿ[೧೭೬] 'ದನಗಳಂ ಹಱಗಿ' ಮಡಿದ ಬಿಸಜೀಯನ ಮಗ ಕಾಡೆಯನಾಯಕನನ್ನು ಕುರಿತಿದೆ. ಈತ ಬಿಸಜೀಯರ ಪ್ರಿಯ ಪುತ್ರನೇ ಇರಬೇಕು. ಇಂಥ ಕಾಳಗಗಳಲ್ಲಿ ಮಡಿದವರು ಹೆಚ್ಚಾಗಿ ಅಧಿಕಾರಿಗಳ ಮಹಾಜನರ, ಸ್ಥಾನಿಕರ ಪ್ರಿಯಪುತ್ರರು ಅಥವಾ ಆಳುಮಕ್ಕಳು ಆಗಿರುವುದು ಸಾಮಾನ್ಯವಾದರೂ, ಗ್ರಾಮದ ಮಾನ ಸಂರಕ್ಷಣೆಗಾಗಿ ತುರುಗಳನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಜಾತಿ ಬೇಧ, ವರ್ಗಭೇದವಿಲ್ಲದೆ ವೀರರು ಹೋರಾಡಿರುವುದು ಕಂಡುಬರುತ್ತದೆ. ಕಣಿಕಟ್ಟೆಯ ದನಸೆಱಿ ತುಱುಹೋಹಲಿ' ಅಣುವ ಕೆರೆಯ ಸೇನ ಬೋವ ಜಕ್ಕಯ್ಯನ ಅಳಿಯ ಮಾರಯ್ಯನು 'ತಳಿತಿಱಿದು' ಸತ್ತಿದ್ದಾನೆ.[೧೭೭] ಇಲ್ಲಿ 'ದನಸೆರೆ' ಮಾತನ್ನು ಗಮನಿಸಬೇಕು. ಮಹಾಸಾಮನ್ತ ಮಾಚೆಯನ ಮಗ ಮಸಣಯ್ಯನು ತುಱುವ ಮಗುರ್ಚ್ಚಿ' ಮಡಿದಿದ್ದಾನೆ.[೧೭೮] ಜಗತೇಶ್ವರ ದೇವರ ಪಾದಾರಾಧಕರಪ್ಪ ಬಾಸೆಬೋವನ ಮಗ ಹಲ್ಲೆಯ್ಯ 'ತುಱುವ ಹಟ್ಟಿಯ ಕಾದಿ ತುಱುವ ಮಗುರ್ಚಿ ತಾಂಬಿದ್ದ'ನೆಂದು ಒಂದು ಶಾಸನ ಹೇಳಿದೆ. ದಾಳಿಕೋರರು ತುರುಹಟ್ಟಿಗೇ ನುಗ್ಗಿ ದನಗಳನ್ನು ಅಟ್ಟಿಕೊಂಡು ಹೋಗುವ ಪ್ರಯತ್ನ ಮಾಡಿದಂತೆ ತೋರುತ್ತದೆ.[೧೭೯]

ಅರಸೀಕೆರೆ ಶಾಸನವೊಂದು ಗೋಗ್ರಹಣವನ್ನು 'ತುಱುಹುಯಲು' ಎಂದು ಕರೆದಿದೆ. ದಾಳಿಕೋರರು ಊರಿಗೆ ನುಗ್ಗಿ ಗೋಮಾಳದಿಂದಲೋ ಇಲ್ಲವೇ ತುಱುಹಟ್ಟಿಯಿಂದಲೋ ದನಗಳನ್ನು ಓಡಿಸಿಕೊಂಡು ಹೋಗುವಾಗ ಉಂಟಾಗುತ್ತಿದ್ದ ಕೋಲಾಹಲವನ್ನು ಈ ಹುಯ್ಯಲು ಪದ ಸೂಚಿಸುತ್ತದೆ. ಶಂಕರನ ಹಳ್ಳಿಯಲ್ಲಿ ಅನೇಕ ವೀರಗಲ್ಲುಗಳಿದ್ದು, ಅವುಗಳಲ್ಲಿ ತುರುಗಳಿಗಾಗಿ ಕಾದಾಡಿ ಮಡಿದವರ ವೀರಗಲ್ಲುಗಳೇ ಹೆಚ್ಚಾಗಿವೆ. ಇವುಗಳಲ್ಲಿ ೧೪೯೯ರ ಒಂದು ಶಾಸನದ ತುರುಕಾಳಗದ ಕಾರಣ ಭಿನ್ನವಾಗಿದೆ. ಇಲ್ಲಿ ದನಗಳ ಕಳ್ಳತನವಾಗಲೀ ರಾಜಕೀಯ ಕಾರಣಗಳಾಗಲೀ ಮುಖ್ಯವಾಗದೆ ವೈಯಕ್ತಿಕ ದ್ವೇಷ ಮುಖ್ಯವಾದಂತೆ ಕಂಡುಬರುತ್ತದೆ. ಶಂಕರನಹಳ್ಳಿಯಲ್ಲಿ ಮಹಾವಡ್ಡ ವ್ಯವಹಾರಿ ನಾನಾದೇಸಿ ಮಲೆಯಾಳ ಸಂಕರಸೆಟ್ಟಿ ಎಂಬ ವ್ಯಾಪಾರಿ ನೆಲೆಸಿದ್ದು, ಇವನ ಅಳಿಯಂದಿರು ಶಂಖರಚ್ಚ ಪಣಿಕರರು ಹಾಗೂ ಜಗಚ್ಚನಾಯರು ಹುಳಿಯರದಲ್ಲಿ ಕೆಸವೆಯ ಬೊಮ್ಮನೆಂಬುವವನನ್ನು ಕೊಂದ ಕಾರಣಕ್ಕೆ ಮಗರೆ ನಾಡಿನವರು ಈ ಗೋಗ್ರಹಣವನ್ನು ಮಾಡಿ ಇಬ್ಬರನ್ನು ಕೊಂದಿದ್ದಾರೆ. ಹುಳಿಯೇರು ಮಗರೆನಾಡಿನ ರಾಜಧಾನಿಯಾಗಿದ್ದು ಈ ಬೊಮ್ಮ ಪ್ರಮುಖ ವ್ಯಕ್ತಿಯಾಗಿದ್ದಿರಬೇಕು. ಅವನನ್ನು ಕೊಂದ ತಪ್ಪಿಗೆ ಶಂಕರಶೆಟ್ಟಿಯ ಶೆಟ್ಟಿಪಟ್ಟಣ ವಾಗಿದ್ದ ಶಂಕರನಹಳ್ಳಿಯನ್ನು ಮುತ್ತಿ ತುರುಗಳನ್ನು ಅಪಹರಿಸಲಾಗಿದೆ. ಈ ಶಂಕರನಹಳ್ಳಿಯಲ್ಲಿ ಹಾಳಾಗಿ ಬಿದ್ದಿರುವ ಅನೇಕ ತುರುಗೊಳ್ ಶಾಸನಗಳನ್ನು ಗಮನಿಸಿದಾಗ ಈ ಗ್ರಾಮವು ಪದೇಪದೇ ಈ ರೀತಿಯ ಆಕ್ರಮಣಗಳಿಗೆ ಗುರಿಯಾಗಿರುವುದು ಸ್ಪಷ್ಟವಾಗುತ್ತದೆ.

ಚೋಳಮಹಾದೇವಿಯು ಕೆಂಬಾಳನ್ನು ಆಳುವಾಗ ದುಷ್ಟಕಷ್ಟರ ಮಾತನ್ನು ಕೇಳಿ ದಾಳಿಯನ್ನು ಮಾಡಿಸಿದ ಸಂದರ್ಭದಲ್ಲಿ ಬೇವೂರಿನ ತುರುಗಳನ್ನು ಕಾಪಾಡುವಲ್ಲಿ ಮಡಿದ ಕೇತಮಲ್ಲನು ಅರಸಿಯು ಮಾಡಿಸಿದ ದಾಳಿ ಎಂಬುದನ್ನೂ ಲೆಕ್ಕಿಸದೆ ಹೋರಾಡಿ ಮಡಿಯುತ್ತಾನೆ. ಈತನನ್ನು ಕಾಂಚಿಪುರವರಾಧೀಶ್ವರ ಬಲಿಕುಲ ತಿಲಕನ ವಂಶದವನೆಂದು ಶಾಸನ ಕರೆದಿದೆ. ರಾಣಿ ತನ್ನ ವರ್ತನೆಗೆ ಪಶ್ಚಾತ್ತಾಪಪಟ್ಟು ಅವನ ಕುಟುಂಬಕ್ಕೆ ಅಭಯವನ್ನು ಕೊಟ್ಟು ಸಂತಯಿಸಲು ಉಡುಗೊರೆ, ಉಂಬಳಿ ನೀಡಿಸಿದ್ದು ಬಹಳ ಭಿನ್ನವಾದ ನಡವಳಿಕೆಯಾಗಿದೆ. 'ಚೋಳಮಹಾದೇವಿಯ ಹಾಗೆ ತನ್ನ ತಪ್ಪನ್ನು ಒಪ್ಪಿಕೊಂಡ ಉದಾತ್ತ ವ್ಯಕ್ತಿಗಳು ವಿರಳವೆ.[೧೮೦] ಈ ತುರುಗೊಳ್‌ಕಾಳಗ ಮತ್ತು ನಂತರದ ಬೆಳವಣಿಗೆಗಳು ಪ್ರಭುತ್ವದ ಒಂದು ಹುನ್ನಾರವಾಗಿಯೂ ತೋರುತ್ತದೆ. ತನ್ನ ವಿರುದ್ಧ ಉಸಿರೆತ್ತದಂತೆ ಬಗ್ಗುಬಡಿಯುವುದು ಮತ್ತು ಪ್ರಭುತ್ವದ ವಿರುದ್ಧ ಕಹಿ ವಾತಾವರಣ ಸೃಷ್ಟಿಯಾಗದಂತೆ ನಷ್ಟಕ್ಕೆ ಒಳಗಾದವರಿಗೆ ಪರಿಹಾರಗಳನ್ನು ನೀಡುವುದು ಒಟ್ಟಿನಲ್ಲಿ ಪ್ರಭುತ್ವದ ವಿರುದ್ಧ ನಿಂತು ಹೋರಾಡುವ ಕೇತಮಲ್ಲನ ಸಾಹಸವನ್ನಿಲ್ಲಿ ಮೆಚ್ಚಲೇ ಬೇಕು ಅನ್ಯಾಯ ಯಾರೇ ಮಾಡಲಿ ಹೋರಾಡುವುದೇ ವೀರಧರ್ಮವಲ್ಲವೆ?

### ೫.೩.೫. ಪ್ರಾಣಿ ಬೇಟೆ ಮತ್ತು ಹೋರಾಟ

ಪ್ರಾಣಿಗಳ ಆಕ್ರಮಣಕ್ಕೆ ಒಳಗಾಗಿ ಮಡಿದ ವೀರರ ಶಾಸನಗಳಲ್ಲಿ ಹುಲಿಬೇಟೆ, ಹುಲಿಯೊಂದಿಗಿನ ಹೋರಾಟ, ಹಂದಿಬೇಟೆ, ಆನೆಗಳೊಂದಿಗೆ ಹೋರಾಟ ಇತ್ಯಾದಿಗಳು ಹೆಚ್ಚಾಗಿ ಕಂಡುಬರುತ್ತವೆ. ಪ್ರಸ್ತುತ ಅಧ್ಯಯನದ ಪರಿಸರವು ಗುಡ್ಡ ಬೆಟ್ಟ ಕಣಿವೆಗಳಿಂದ ಕೂಡಿದೆ. ಹಿರೇಕಲ್ಲು ಬೆಟ್ಟದ ಸಾಲು, ಐದ್ಹಳ್ಳಿ, ಕಲ್ಯಾಡಿ ಬೆಟ್ಟ ಕಣಿವೆಗಳು, ಅತ್ತಿ ಗುಡ್ಡ ಕಾವಲ್, ಜೇನ್ ಕಲ್ ಬೆಟ್ಟ ದೇಶಾಣಿ ಗುಡ್ಡ, ಕಂಡಿಸಿದ್ದಪ್ಪನ ಕಣಿವೆ, ನೀಲಗಿರಿ ಕಾವಲ್ ಇತ್ಯಾದಿಗಳು ಹಿಂದೆ ದಟ್ಟ ಕಾಡು ಪ್ರದೇಶಗಳಾಗಿದ್ದು ಕ್ರೂರ ಪ್ರಾಣಿಗಳ ಹಾವಳಿ ಬಹಳವಾಗಿರುತ್ತಿತ್ತು. ಸಾರಿಗೆ ಸಂಪರ್ಕ ರಸ್ತೆ ನಿರ್ಮಾಣಗಳಾಗುವವರೆಗೂ ಕಾಲ್ನಡಿಗೆಯಲ್ಲಿ ಪಯಣಿಸಬೇಕಾಗಿದ್ದಾಗ ಕಳ್ಳಕಾಕರಿಗೆ, ಕ್ರೂರಪ್ರಾಣಿಗಳಿಗೆ ದಾರಿಹೋಕರು, ಗ್ರಾಮಸ್ಥರು, ಜಾನುವಾರುಗಳು ಬಲಿಯಾಗುತ್ತಿದ್ದುದು ಸಾಮಾನ್ಯವಾಗಿತ್ತು.

**ಹುಲಿಬೇಟೆ :** ಕಲ್ಯಾಡಿ ಹುಲಿಬೇಟೆಗೆ ಹೆಸರುವಾಸಿಯಾದ ಗ್ರಾಮವಾಗಿದ್ದು, ಇಲ್ಲಿ ಹದಿನಾರು ಮೆಟ್ಟಿನ ಹುಲಿಗಳಿದ್ದುವೆಂದು ಅವುಗಳನ್ನು ಬೇಟೆಯಾಡಲು ರಾಜ ಮಹಾರಾಜರು ಬರುತ್ತಿದ್ದರೆಂದು ಇಲ್ಲಿನ ಹಿರಿಯರು ನೆನಪಿಸಿಕೊಳ್ಳುತ್ತಾರೆ. ಸುಮಾರು ೭೫ ವರ್ಷಗಳ ಹಿಂದೆ ಇಲ್ಲಿ ಹುಲಿಖೆಡ್ಡವು ನಡೆದಿದ್ದುದನ್ನು ಜನ ಹೇಳುತ್ತಾರೆ. ಆನೆಗಳ ಖೆಡ್ಡದಂತೆಯೇ, ಹುಲಿಗಳನ್ನು ನೀರು ಕುಡಿಯುವ ಜಾಗಗಳಿಂದ ತಮಟೆ, ಜಾಗಟೆ ಮುಂತಾದವುಗಳನ್ನು ಬಾರಿಸುತ್ತ ಅಟ್ಟಿಸಿಕೊಂಡು ಬಂದು ಮೊದಲೇ ತೋಡಿ, ಸೊಪ್ಪು ಸೊದೆ, ಜಿಗ್ಗುಗಳನ್ನು ಹರಡಿ ಮುಚ್ಚಲಾಗಿರುತ್ತಿದ್ದ ದೊಡ್ಡ ಹಳ್ಳಗಳಿಗೆ ಅವುಗಳನ್ನು ಕೆಡವಲಾಗುತ್ತಿತ್ತೆಂದು

ಹೇಳುತ್ತಾರೆ.* ಅಲ್ಲದೆ ನೀರು ಕುಡಿಯಲು ಬರುವ ಹುಲಿಗಳನ್ನು ಆಯ ಕಟ್ಟಿನಲ್ಲಿ ಮಂಚಿಕೆಕಟ್ಟಿ ಬೇಟೆ ಮಾಡಲಾಗುತ್ತಿತ್ತೆಂದೂ ಹೇಳುತ್ತಾರೆ.*

ಮುದುಡಿಯಲ್ಲಿರುವ ಲಿಪಿರಹಿತ ಶಾಸನವು ಹುಲಿಬೇಟೆಯ ವೀರಗಲ್ಲಾಗಿದ್ದು, ಅತ್ಯಂತ ಆಕರ್ಷಕವಾದ ಕೆತ್ತನೆಯಿಂದ ಕೂಡಿದೆ. ಇಲ್ಲಿನ ವೀರ ಬಿಲ್ಲು ಬಾಣಗಳೊಂದಿಗೆ ನಾಯಿಯೊಂದಿಗೆ ಬೇಟೆಗೆ ಸಿದ್ಧವಾಗಿದ್ದಾನೆ. ಬೇಟೆಯ ಸಂದರ್ಭದಲ್ಲಿ ಹುಲಿಯನ್ನಿರಿದು ತಾನೂ ಮಡಿದಿದ್ದಾನೆ.

**ಹುಲಿಯೊಡನೆ ಹೋರಾಟ** : ಉಂಡಿಗನನಾಳಿನ ಶಾಸನವೊಂದು[೧೮೧] ರಾಮಜೀಯರ ಮಗಳನ್ನು ಹುಲಿಯ ಬಾಯಿಂದ ಉಳಿಸಿ ಹುಲಿಯೊಂದಿಗೆ ಕಾದಿ ಬೊಂಮಜೆಟ್ಟಿಯ ಅಣ್ಣ ಮಡಿದ ವಿಚಾರವನ್ನು ಹೇಳುತ್ತದೆ. ಬೆಂಡೆಕೆರೆಯ ಒಡೇರ ಬೀಚೆಯ ನಾಯಕನು ಹುಲಿಯನಿಱಿದು ಶಿವಲೋಕ ಪ್ರಾಪ್ತನಾದುದಕ್ಕೆ ಆತನ ಮಗ ವಡಲೆಯನಾಯಕ ಪರೋಕ್ಷವಿನಯ ಮಾಡಿ ಕಲ್ಲುನಿಲ್ಲಿಸಿದ್ದಾನೆ.[೧೮೨] ಇವು ಆಕಸ್ಮಿಕವಾದ ಹುಲಿಯೊಂದಿಗಿನ ಹೋರಾಟಗಳು. ಬೆಂಡೆಕೆರೆ ಶಾಸನ ಶಿಲ್ಪದಲ್ಲಿ ಹಿಂಗಾಲಿನಲ್ಲಿ ನಿಂತ ಹುಲಿ ಬೀಚೆಯ ನಾಯಕನ ಮೇಲೆ ಎರಗಿದೆ. ವೀರ ಬೀಚೆಯ್ಯ ಕಿರುಗತ್ತಿಯಿಂದ ಅದನ್ನು ಇರಿಯುವ ಪ್ರಯತ್ನ ಮಾಡುತ್ತಿರುವುದು ಸ್ಪಷ್ಟವಾಗಿದೆ. ಬೀಚನು ಬೆನ್ನ ಹಿಂದೆ ಯಾರನ್ನೋ ಕಾಪಾಡುತ್ತಿರುವಂತಿದೆ. ಅವನ ಕೈಯ್ನಲಿ ಕಿರುಗತ್ತಿಯನ್ನುಳಿದು ಬೇರೆ ಬಿಲ್ಲು ಬಾಣಗಳ್ಯಾವುವೂ ಇಲ್ಲದಿರುವುದರಿಂದ ಬೇಟೆ ನಾಯಿಗಳೂ ಇಲ್ಲವಾದ್ದರಿಂದ ಇದು ಆಕಸ್ಮಿಕ ಒದಗಿದ ಹೋರಾಟದ ಸಾವು ಎನ್ನಬಹುದು.

**ಹಂದಿ ಬೇಟೆ** : ಕಾಡುಗಳನ್ನು ಕಡಿದು ಭೂಮಿಯನ್ನು ಸಾಗುವಳಿಗೆ ರೂಢಿಸಿಕೊಂಡಿರುವುದು ಈ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುವುದರಿಂದ ಕಾಡು ಹಂದಿಗಳಿಂದ ಬೆಳೆನಾಶದ ಭಯ ಸದಾ ಇರುತ್ತಿತ್ತು. ಬೆಳೆನಾಶವನ್ನು ತಪ್ಪಿಸಲು ಹಾಗೂ ಮಾಂಸಾಹಾರದ ಅವಶ್ಯಕತೆಗಾಗಿ ಹಂದಿ ಬೇಟೆ ನಡೆಯುತ್ತಿತ್ತು. ಹಂದಿ ನಾಯಿ ಕಾಳಗದ ಶಿಲ್ಪವೊಂದು ಅರಸೀಕೆರೆ ಅಂಜನೇಯ ದೇವಾಲಯದ ಆವರಣದಲ್ಲಿತ್ತು (ಇತ್ತೀಚೆಗೆ ಜೀರ್ಣೋದ್ಧಾರದಲ್ಲಿ ಅದು ಕಳೆದಿದೆ). ಉಂಡಿಗನಾಳಿನಲ್ಲಿ ಹಂದಿಬೇಟೆಯ ವೀರಗಲ್ಲಿದ್ದು, ಮಲ್ಲಿಜೆಟ್ಟಿಯು ಉಂಡಿಗನಾಳಿನಲ್ಲಿ ಆಳ್ವಿಕೆ ಮಾಡುತ್ತಿದ್ದಾಗ ಜೆಟ್ಟಯ್ಯನೆಂಬುವವನ ಮಗನು ಹಂದಿ ಬೇಟೆಯಾಡುವಾಗ ಜೂರ ಎಂಬ ನಾಯಿಯು ಹಂದಿಯೊಂದಿಗೆ ಕಾದಿ ಮಡಿದುದನ್ನು ಹೇಳುತ್ತದೆ. ಇದು ತನ್ನ ಪ್ರೀತಿಯ ನಾಯಿಗಾಗಿ ಹಾಕಿಸಿರುವ ವೀರಗಲ್ಲು[೧೮೩]

---

* ಅದನ್ನು ಕಣ್ಣಾರೆ ಕಂಡಿದ್ದ ಹಾರನಹಳ್ಳಿಯ ೮೫ ವರ್ಷ ವಯಸ್ಸಿನ ರಾಮಣ್ಣನವರು ದೊಡ್ಡದಾಗಿ ತೋಡಿದ್ದ ಹಳ್ಳಗಳಲ್ಲಿ ಎರಡು ದೊಡ್ಡ ಹುಲಿಗಳು ಬಿದ್ದಿದ್ದು, ಅವು ಆಕ್ರೋಶದಿಂದ ನೆಗೆದು ಆಚೀಚೆಯ ಮಣ್ಣು ಜಾರಿ ಹಳ್ಳಕ್ಕೆ ತುಂಬಿಕೊಳ್ಳುತ್ತಿದ್ದುದನ್ನು ಹೇಳುತ್ತಾರೆ.

* ಇದರ ವಿಷಯವನ್ನು ತಿಳಿದು ಕುತೂಹಲಿಯಾದ ಸಾಹಸಿಗನಾದ ರಿಕ್ಕಿಹಿಟ್ಸ್ ಎಂಬ ಬ್ರಿಟೀಷ್ ವ್ಯಕ್ತಿಯು ಹಾರನಹಳ್ಳಿಗೆ ಬಂದಿದ್ದು ಬೇಟೆಯಾಡುವ ವೇಳೆ ಬಂದೂಕಿದೆ ಎಂಬ ಧೈರ್ಯದಿಂದ ಮಂಚಿಕೆಯನ್ನಿಳಿದು ಹುಲಿಯ ಬಾಯಿಗೆ ಸಿಕ್ಕಿ ಸತ್ತನೆಂದೂ, ಅದೇ ದಿನ ಹಾರನಹಳ್ಳಿಯಲ್ಲಿ ಹುಟ್ಟಿದ ಗಂಡು ಮಗುವಿಗೆ ರಿಕೀಟಯ್ಯ ಎಂಬ ಹೆಸರಿಟ್ಟು ನಾಮಕರಣ ಮಾಡಿದುದನ್ನು ಕಲ್ಯಾಡಿ ಮತ್ತು ಹಾರನಹಳ್ಳಿಯ ಹಿರಿಯರು ಹೇಳುತ್ತಾರೆ.

**ಜಿಂಕೆಬೇಟೆ** : ಮಾಂಸಹಾರಕ್ಕಾಗಿ ಜಿಂಕೆಗಳ, ಕಡವೆಗಳ ಬೇಟೆಯು ಈ ಪ್ರದೇಶದಲ್ಲಿ ಇತ್ತೀಚಿನವರೆಗೂ ನಡೆಯುತ್ತಿತ್ತು. ರಾಂಪುರದ ಬೃಹತ್ ಶಿಲಾಯುಗದ ನಿಲುಗಲ್ಲುಗಳ ಒತ್ತಿನಲ್ಲಿ ಒಂದು ಬರಹರಹಿತ ಜಿಂಕೆ ಬೇಟೆ ಶಿಲ್ಪಶಾಸನ ಕಂಡುಬಂದಿದೆ. (ಗಂಗರ ಕಾಲ) ಆದಿ ಮಾನವನ ಕಾಲದಿಂದಲೂ ಇಲ್ಲಿ ಜಿಂಕೆ ಬೇಟೆ ನಡೆಯುತ್ತಿದ್ದಿರಬಹುದು. ಅರಸೀಕೆರೆಯ ಹಿರೇಕಲ್ಲು ಬೆಟ್ಟದ ಶ್ರೇಣಿ, ನಾಗಪುರಿ ಬೆಟ್ಟವು ಹಂದಿ, ಕಡವೆ, ಕಿರುಬಗಳಿಗೆ ಕಂದು ಮೊಲಗಳಿಗೆ ಪ್ರಸಿದ್ಧವಾಗಿದ್ದು ಇತ್ತೀಚಿನವರೆಗೂ ಇಲ್ಲಿ ಬೇಟೆ ನಡೆಯುತ್ತಿತ್ತು ಎಂದು ಹೇಳುತ್ತಾರೆ.* ಆನೆ ಕಾಲಬಾಯಲ್ಲಿ' ಸತ್ತ ವೀರರ ವಿವರ ಆನೆಕಾಳಗ ಭಾಗದಲ್ಲಿ ಕುದುರೆ ಕಾಳಗದಲ್ಲಿ ಮಡಿದ ವೀರರನ್ನು ಕುದುರೆಕಾಳಗ ಭಾಗದಲ್ಲಿ ಗಮನಿಸಲಾಗಿದೆ.

### ೫.೩.೬. ಗಡಿ ರಕ್ಷಣೆ ಕಾಳಗ

ಗ್ರಾಮಗಳು ರಾಜ್ಯಾಡಳಿತದ ದೃಷ್ಟಿಯಿಂದ ಸ್ವಯಂಪೂರ್ಣವಾದ ಘಟಕಗಳಂತೆ ಕೆಲಸ ಮಾಡುತ್ತಿದ್ದವು. ಅವುಗಳ ಆಡಳಿತ, ರಕ್ಷಣೆ, ಆಯಗಳಿಗೆ ಸಂಬಂಧಿಸಿದಂತೆ ಗಾವುಂಡರೂ, ಅಧಿಕಾರಿಗಳು ನೇಮಕಗೊಂಡಿರುತ್ತಿದ್ದರು. ಕೃಷಿ ಆಧಾರಿತ ತೆರಿಗೆ ಪದ್ಧತಿಯಲ್ಲಿ ಗ್ರಾಮದ ಗಡಿ ಮೇರೆಗಳ, ಹೊಲಮೇರೆಗಳ, ದಾನದತ್ತಿ ನೀಡಿದ ಭೂಮಿಗಳ ಸೀಮಾ ವಿವರಗಳನ್ನು ನಿರ್ದಿಷ್ಟಗೊಳಿಸುವ, ಗುರುತು ಮಾಡಿ ಕಲ್ಲುನೆಡುವ ರೂಢಿಯಿದ್ದಿತು. ಆದರೂ ಕೆಲವು ಬಾರಿ ಸೀಮಾ ಗುರುತುಗಳು ಸರಿಯಾಗಿಲ್ಲದೆ, ಒತ್ತುವರಿಗಳು ನಡೆದಾಗ ವ್ಯಕ್ತಿಗಳನಡುವೆ, ಸಂಸ್ಥೆಗಳನಡುವೆ, ಊರುಗಳನಡುವೆ, ನಾಡುಗಳನಡುವೆ, ಗಡಿ ಕಾಳಗಗಳು ಸಾಮಾನ್ಯವಾಗಿರುತ್ತಿದ್ದವು. ಎರಡು ಗ್ರಾಮಗಳ ನಡುವೆ ಸಂಭವಿಸುವ ಇಂಥ ಗಡಿ ವಿವಾಧಗಳನ್ನು ರಾಜನೇ ಖುದ್ದಾಗಿ ನಿಂತು ಮೇರೆಗಳನ್ನು ಪರಿಶೀಲಿಸಿ ಎರಡೂ ಪಕ್ಷಕ್ಕೆ ನ್ಯಾಯ ನೀಡಬೇಕು ಮತ್ತು ಮೇರೆಗಳನ್ನು ವತ್ತುವರಿ ಮಾಡುವ, ಗಡಿ ಕಲ್ಲುಗಳನ್ನು ಒಡೆಯುವ ಕಾರ್ಯಗಳಿಗೆ ತಕ್ಕ ಶಿಕ್ಷೆ ವಿಧಿಸಬೇಕೆನ್ನುತ್ತಾನೆ ವಿಜ್ಞಾನೇಶ್ವರ.[೧೮೪]

ಸೀಮಾಸಂಬಂಧಿ ವಿವಾದಗಳು, ಅಸಮಾಧಾನಗಳು ಬಂದಾಗ ಗ್ರಾಮ ಪ್ರಮುಖರು ಚೌಗಾವೆಯವರು ಸಭೆಸೇರಿ ನ್ಯಾಯ ತೀರ್ಮಾನ ಮಾಡುತ್ತಿದ್ದರು.[೧೮೫] ಅನೇಕ ಬಾರಿ ಈ ಅಸಮಾಧಾನಗಳು ತೀವ್ರವಾಗಿ ಗಡಿ ಕಾಳಗಗಳಾಗಿ, ಹೊಲವೇರೆಯ ಬವರವಾಗಿ ಪರಿಣಮಿಸುತ್ತಿದ್ದವು. ಅನೇಕ ಸಾವು ನೋವಿಗೂ ಕಾರಣವಾಗುತ್ತಿದ್ದವು. ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಹಾರನಹಳ್ಳಿ ಹೋಬಳಿ ಬಾಗೇಶಪುರ ಅಲಿಯಾಸ್ ಬಾಗಡೆಯ ಸುತ್ತಮುತ್ತಲ ಗ್ರಾಮಗಳಲ್ಲಿ ಗಡಿ ಕಾಳಗಗಳು ಹೆಚ್ಚಾಗಿ ನಡೆದಿವೆ. ಬಾಗಡೆ ಮತ್ತು ಕಿತ್ತನಕೆರೆಯ ಗಡಿಕಾಳಗ, ಬಾಗಡೆ ಮತ್ತು ಮುದುಡಿಯ ಸೀಮಾಯುದ್ಧ, ನೀರ್ಗುಂದ, ಬಾಗಡೆ ಮತ್ತು ಮೂತಿಕೆರೆ ನಿಟ್ಟೂರವರ ನಡುವಿನ ಸೀಮಾ ಯುದ್ಧ, ನೀರ್ಗುಂದ ಮತ್ತು ಹೊನ್ನಾವರದ

---

* ಈಗ ಹಿರೇಕಲ್ಲು ಅರಣ್ಯ ಅಧಿಕಾರಿಗಳು ಬಿಗಿಮಾಡಿದ್ದಾರೆ. ವಕ್ತೃ ಭವಾನಿ ಶಂಕರ ಚೆಟ್ಟಿ ಅರಸೀಕೆರೆ.

ಹೊಲವೇರೆಯ ಕಾಳಗ ಈ ಕಾಳಗಗಳು ೧೨ನೇ ಶತಮಾನದಲ್ಲಿ ಹೆಚ್ಚು ಕಾಣಿಸಿಕೊಂಡಿವೆ. ಕಾರಣ ಈ ಪ್ರದೇಶದಲ್ಲಾದ ಕೃಷಿ ವಿಸ್ತರಣೆ ೧೧-೧೨ನೇ ಶತಮಾನದಲ್ಲಿ ಹೊಯ್ಸಳರ ಆರ್ಥಿಕ ರಾಜಕೀಯ ಧಾರ್ಮಿಕ ನೀತಿಯಿಂದ ಈ ಪ್ರದೇಶವು ಅಭಿವೃದ್ಧಿಗೊಂಡು ಅಗ್ರಹಾರಗಳು ನಿರ್ಮಾಣವಾಗಿ ಒಳ ವಲಸೆಯಿಂದ ಜನಸಂದಣಿ ಹೆಚ್ಚಿತ್ತು. ಒತ್ತೊತ್ತಾಗಿ ಹಂಚಲ್ಪಟ್ಟ ಊರುಗಳು, ಕೃಷಿಭೂಮಿಗಳು ಗೊಂದಲಕ್ಕೆ ವೈಮನಸ್ಯಕ್ಕೆ ಕಾರಣವಾಗುತ್ತಿದ್ದವು. ಅಲ್ಲದೆ ನೀರ್ಗುಂದನಾಡು ಇಮ್ಮಡಿ ಬಲ್ಲಾಳನ ರಾಣಿ ಉಮಾದೇವಿಯ ಆಡಳಿತಕ್ಕೆ ಸೇರಿತ್ತು. ಬಲ್ಲಾಳ ಹೆಚ್ಚು ಕಾಲ ರಾಜ್ಯವಿಸ್ತರಣೆಯ ಕಡೆಗೆ ಗಮನ ನೀಡಿದ್ದರಿಂದಾಗಿ ಸ್ಥಳೀಯ ಭದ್ರತೆ ರಾಣಿಯ ಆಳ್ವಿಕೆಯಲ್ಲಿ ಸಡಿಲಗೊಂಡಂತೆ ತೋರುತ್ತದೆ.

**ಹೊಲಮೇರೆ ಕಾಳಗ** : ಇಂಥವುಗಳು ಕುಟುಂಬ ಇಲ್ಲವೆ ಗ್ರಾಮಗಳ ನಡುವೆ ನಡೆಯುತ್ತಿದ್ದವು. ಕ್ರಿ.ಶ.೧೧೭೪ರ ನೀರುಗುಂದ ಹೊನ್ನಾವರದ ಹೊಲವೇರೆಯ ಕಾಳಗದಲ್ಲಿ ಭೀಮನ ಮಗ ಹೊನ್ನಗವುಡನೆಂಬ ವೀರನು ಕಾದಿ ಮಡಿದುದನ್ನು ಹೇಳುತ್ತದೆ.[೧೮೬]

**ಸೀಮಾಸಂಬಂಧಿ ಕಾಳಗ** : ಇವು ಗ್ರಾಮದ ಸೀಮಾವಿವಾದಗಳಿಂದ ಗ್ರಾಮಗಳ ನಡುವೆ ನಡೆಯುವ ಕಾಳಗಗಳು. ಕ್ರಿ.ಶ.೧೧೯೪ರ ನೀರುಗುಂದ ಮತ್ತು ಮೂತಿಕೆರೆಯ ನಡುವಿನ ಸೀಮಾ ಸಂಬಂಧದ ಕಾಳಗ ತೀವ್ರವಾಗಿ ನಡೆದಿದ್ದು, ಮೂತಿಕೆರೆಯವರಿಗೆ ಸಹಾಯವಾಗಿ ದಂಡುಕೂಡಿಕೊಂಡು ನಿಟ್ಟೂರಿನವರು ನೀರುಗುಂದದ ಮೇಲೆ ದಾಳಿ ಮಾಡಿದ್ದಾರೆ. ಬಾಗಡೆಯವರು ನೀರುಗಂದದ ಪರವಾಗಿ ನಿಂತಿದ್ದಾರೆ. ಇದರಲ್ಲಿ ನೀರುಗುಂದದ ಕಲ್ಲಗವುಡನು ವೀರಾವೇಶದಲ್ಲಿ ಹೋರಾಡಿ ನಿಟ್ಟೂರ ಸೈನ್ಯವನ್ನು ಎಲೆಗುಂದದವರೆಗೂ ಬೆನ್ನಟ್ಟಿಕೊಂಡು ಹೋಗಿ ತಾಗಿದವರಲ್ಲಿ ಹತ್ತು ಮಾನಸರನ್ನು ಇರಿದು ತಾನೂ ಸತ್ತಿದ್ದಾನೆ.[೧೮೭] "ಎರಡು ಊರುಗಳ ನಡುವೆ ಸೀಮಾ ಸಂಬಂಧದ ವ್ಯಾಜ್ಯಗಳು ನಡೆದಾಗ ಸುತ್ತುಮುತ್ತಿನ ಇತರ ಗ್ರಾಮಗಳೂ ಕೂಡಿಕೊಂಡು ದೊಡ್ಡ ಯುದ್ಧಗಳಿಗೆ, ಹಾನಿಗಳಿಗೆ ಕಾರಣವಾಗುತ್ತಿದ್ದವು ಎಂಬುದಕ್ಕೆ ಈ ಶಾಸನ ಸಾಕ್ಷಿಯಾಗಿದೆ.

ಕ್ರಿ.ಶ.೧೨೦೭ರ ಶಾಸನವೊಂದರಲ್ಲಿ[೧೮೮] ಬಾಗಡೆ ಮತ್ತು ಮುದುಡಿಯ ಸೀಮಾ ಸಂಬಂಧದ ಕಾಲಗದಲ್ಲಿ ಗಂಗ ಬೋಯ ಕಾಳೆಯ ಎಂಬ ವ್ಯಕ್ತಿಗಳು ಮಡಿದುದನ್ನು ಸಹಿಸದೆ ಏಚನೆಂಬುವವನು ಕಾದಿ ಸುರಲೋಕ ಪ್ರಾಪ್ತನಾದನೆಂದಿದೆ. ಬಹುಶಃ ಈ ಏಚ ಬಂಟನಿರಬಹುದು. ಏಚನ ಮಡದಿ ವೀರಗಲ್ಲು ನಿಲ್ಲಿಸಿದ್ದಾಳೆ. ಇದೇ ಬಾಗಡೆಯ ೧೨೩೯ರ ಶಾಸನದಲ್ಲಿ ಬಾಗಡೆಯ ಮತ್ತು ಕಿತ್ತನ ಕೆರೆಯ ಸೀಮಾ ಸಂಬಂಧದಲ್ಲಿ ನಡೆದ ಯುದ್ಧದಲ್ಲಿ ತಂದೆ ಬಮ್ಮ ಮತ್ತು ಮಗ ಜಕ್ಕ ಇಬ್ಬರೂ ವೀರಾವೇಶದಿಂದ ಹೋರಾಡಿದ್ದಾರೆ. ಜಕ್ಕನು ಈ ಕಾಳಗದಲ್ಲಿ ಮಡಿದಾಗ ಅವನ ತಂದೆ ಬಮ್ಮ ಮತ್ತು ಅಣ್ಣ ಮಹದೇವ ವೀರಗಲ್ಲು ನಿಲ್ಲಿಸಿದ್ದಾರೆ. ಊರಿನ ಸೀಮಾ ಸಂಬಂಧದ ಕಾಳಗವೆಂದಾಗ ಇಡೀ ಊರಿನ ಗೌರವದ ಪ್ರಶ್ನೆಯಾಗಿರುತ್ತಿತ್ತು. ಅದಕ್ಕಾಗಿ ಹೋರಾಡುವುದು ಗ್ರಾಮಸ್ಥರ ಕರ್ತವ್ಯವಾಗಿದ್ದಂತೆಯೇ,

ಮಡಿದವರಿಗೆ ಊರಿನ ಒಡೆಯರು ಉಂಬಳಿಯಿತ್ತು ಗೌರವಿಸುವುದೂ ಕರ್ತವ್ಯವೆಂಬುದಾಗಿ ತಿಳಿಯಲಾಗಿತ್ತು. ಇಂತಹ ಮೆಚ್ಚುಗೆ ಉಂಬಳಿಗಳು ವೀರರಲ್ಲಿ ಒಂದು ರೀತಿಯ ಬಾಧ್ಯತೆಯ ಮನೋಭಾವವನ್ನು ಬೆಳೆಸಲು ಪ್ರೇರಕವಾಗುತ್ತಿದ್ದವು.

ಮುದುಡಿ ಮತ್ತು ಬಾಗಡೆಯ ನಡುವೆ ಹೊಲಮೇರೆಯ ಬವರ ಪದೇ ಪದೇ ಸಂಭವಿಸುತ್ತಿದ್ದು ಅನೇಕ ಸಾವು ನೋವುಗಳಿಗೆ ಕಾರಣವಾಗುತ್ತಿದ್ದುದರಿಂದ ಅದಕ್ಕೊಂದು ಶಾಶ್ವತ ಪರಿಹಾರವನ್ನು ಕಂಡುಕೊಳ್ಳಬೇಕಾದ ಅವಶ್ಯಕತೆಯಿಂದ ಸುತ್ತ ಮುತ್ತಲ ಎಂಟು ಗ್ರಾಮಗಳ ಮುಖ್ಯಸ್ತರು ಸಭೇ ಸೇರಿ ಸತ್ತವರ ಕುಟುಂಬಗಳಿಗೆ ಉಂಬಳಿಗಳನ್ನು ನೀಡಿ ಮಹತ್ವದ ತೀರ್ಮಾನಗಳನ್ನು ಮಾಡಿರುವುದರ ಸೂಚನೆ ಮುದುಡಿಯ ಶಾಸನದಲ್ಲಿದೆ.[೯೦] ಬಾಗಡೆಯ ಹೊಲಮೇರೆಯ ಬವರದಲ್ಲಿ ಬಿಸಿಲಹಳ್ಳಿಯ ವೀರನೊಬ್ಬನ ಸಾವಾಗಿದ್ದು, ಆ ಸಂಬಂಧದಲ್ಲಿ ಹೊಯ್ಸಳ ವೀರ ಬಲ್ಲಾಳ ದೇವನ ಮನೆಯ ಮಹಾಪ್ರಧಾನ ಸರ್ವಾಧಿಕಾರಿ ಶ್ರೀಕರಣದಪ್ಪಾಯಕ ಹಿರಿಯ ಮಾಣಿಕ್ಯ ಭಂಡಾರಿ ನಾಗೆಯ್ಯನವರ ಮಾವ ಮಾದಿವೆಗ್ಗಡೆ, ಮುದುಡಿಯ ಹರಿಗವೆಗ್ಗಡೆ, ಅಮಿತಗೌಡ ಹಿರಿಯ ಚೆಟ್ಟಜೀಯ, ಹರಳ ಕಟ್ಟದ ಕೇತ, ಗೌಡಹಳ್ಳಿಯ ಮಲ್ಲಿದೇವ ಎಲವದ ಹಳ್ಳಿ ಮಾಚೋಜ, ಬಿಸಿಲ ಹಳ್ಳಿಯ ಮಾರಗೌಡ, ಬಾಚಗೌಡ, ಬೆಳಿಗುಂಬದ ಬಮ್ಮಗವುಡ, ಗಂಡಸಿಯ ಕಚನಾಯಕ ಹೀಗೆ ಒಟ್ಟು ಎಂಟು ಗ್ರಾಮಗಳ ಪ್ರಮುಖರು ಚಿಕ್ಕಕೆರೆಯ ಸಮಸ್ತ ಪ್ರಜೆಗಳು ಗೌಡುಗಳು ಸೇರಿ ಮಡಿದ ವೀರನಿಗೆ ಉಂಬಳಿ ಹಾಕಿಕೊಟ್ಟಿದ್ದಾರೆ. ಇಂತಹ ಚೌಗಾವಿ ಗ್ರಾಮ ಸಭೆಗಳು ಅನೇಕ ರೀತಿಯ ವ್ಯಾಜ್ಯ ಅಸಮಾಧಾನಗಳನ್ನು ಪರಿಹರಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದವು. ಕೈಮೀರಿ ನಡೆದ ಕಾಳಗಗಳಲ್ಲಿ ಆದ ನಷ್ಟ, ಸಾವುಗಳಿಗೆ ಪರಿಹಾರವನ್ನು ನೀಡುತ್ತಿದ್ದವು. 'ತಪ್ಪಿತಸ್ಥರಿಗೆ ಶಿಕ್ಷೆಯನ್ನು ವಿಧಿಸುತ್ತಿದ್ದವೆಂದು ಭಾವಿಸಬಹುದು.

## ೫.೩.೭. ಪುನರುಜ್ಜೀವನ

ಯುದ್ಧಗಳು, ಊರಳಿವು, ದರೋಡೆ ಗೋಗ್ರಹಣ, ದಾಳಿಕೋರರ ಆಕ್ರಮಣಗಳ ನಂತರದಲ್ಲಿ ಗೆದ್ದವರ ವಿಜಯೋತ್ಸಾಹ ಸೋತವರ ಮುಖಭಂಗ ಸಮಾಜದಲ್ಲಿ ದ್ವೇಷದ, ಅತೃಪ್ತಿಯ ಅಸಹಾಯಕತೆಯ ವಾತಾವರಣ ಸೃಷ್ಟಿಯಾಗುತ್ತಿತ್ತು. ಹೋರಾಟದಲ್ಲಿ ಮಡಿದ ವೀರರಿಗೆ ಗೆದ್ದ ರಾಜ ಉಂಬಳಿ ಕೊಡಗಿಗಳನ್ನು ನೀಡುತ್ತಿದ್ದು, ಅವರ ಪರಿವಾರದ ಜೀವಿತಕ್ಕೆ ಆಧಾರ ಒದಗಿಸುತ್ತಿದ್ದನು. ಸಾಮಾಜಿಕ ಗೌರವ ವೀರನ ಕುಟುಂಬಕ್ಕೆ ದೊರಕುತ್ತಿತ್ತು. ಆದರೆ ಯುದ್ಧಗಳಲ್ಲಿ, ಊರ ಹುಯ್ಯಲುಗಳಲ್ಲಿ ಮಡಿದ ಎಲ್ಲ ವೀರರಿಗೂ ಆಕಸ್ಮಿಕವಾಗಿ ಕಳ್ಳರಿಂದ ಕಾಡುಪ್ರಾಣಿಗಳಿಂದ ಮಡಿದ ಕುಟುಂಬದವರಿಗೆಲ್ಲಾ ಉಂಬಳಿಗಳು ಸಿಕ್ಕಿರಲು ಸಾಧ್ಯವಿಲ್ಲ. ಗೆದ್ದವರು ಅಮಾನುಷವಾಗಿ ವರ್ತಿಸಿ ಭಂಡಾರವನ್ನು ಗಜ, ತುರಗ ಊರಿನ ಗೋಸಂಪತ್ತು ಸ್ತ್ರೀಯರನ್ನು ದೋಚುತ್ತಿದ್ದರು[೯೧] ಆದರೆ ಸಂಕಟದ ಬಿರುಗಾಳಿ ದಾಟಿ ಹೋಗುತ್ತಲೇ ಗ್ರಾಮಗಳಲ್ಲಿ

ಶಾಂತಿ ನೆಲಸುವಂತೆ ಮಾಡಲು ಗ್ರಾಮಸ್ಥರು ಸ್ಥಳೀಯ ಅಧಿಕಾರಿಗಳು ಪ್ರಯತ್ನಿಸುತ್ತಿದ್ದರು. ಹಾನಿಗೊಳಗಾದವರು ಪ್ರಭುತ್ವ ವಿರೋಧಿಗಳಾಗದಂತೆ ಅನೇಕ ಸುಧಾರಣಾ ಕಾರ್ಯಗಳನ್ನು ಒಡೆಯರು ಹಮ್ಮಿಕೊಳ್ಳುತ್ತಿದ್ದರು. ಆ ಕಾರ್ಯದಲ್ಲಿ ಸ್ಥಳೀಯ ಸಾಮಂತಾಧಿಕಾರಿಗಳ ಪಾತ್ರ ಹಿರಿದು. ಹಿಂದಿನಿಂದ ಬಂದ ದಾನದತ್ತಿಗಳನ್ನು ಮುಂದುವರೆಸುವುದು ಕೊಡುಗೆ ಮಾನ್ಯ ನೀಡುವುದು ಹಾಳಾದ ಊರುಗಳ ಜೀರ್ಣೋದ್ಧಾರ ಮಾಡುವುದು[೯೨] ಕೆರೆ ಕಟ್ಟೆಗಳ ದುರಸ್ಥಿ ದೇವಾಲಯ ನಿರ್ಮಾಣ ಮಾಡುತ್ತಿದ್ದರು.[೯೩] ನೊಂದ ಕುಟುಂಬಕ್ಕೆ ಪರಿಹಾರ ನೀಡುತ್ತಿದ್ದರು.[೯೪] ಯುದ್ಧ ವಿಪ್ಲವಗಳೆಷ್ಟೇ ಇದ್ದರೂ ಸತತ ನಿರ್ಮಾಣ ಕಾರ್ಯಗಳು ನಡೆಯುತ್ತಲೇ ಇರುತ್ತಿದ್ದು ಒಂದು ಸಾಮಾಜಿಕ ಸಮತೋಲನ ಕಾಪಾಡುವ ಶಾಂತಿ ಸ್ಥಾಪನೆಯ ಪ್ರಯತ್ನಗಳು ನಡೆಯುತ್ತಿದ್ದವೆನ್ನಬಹುದು.

## ೫.೪. ಕೊಡುಗೆ, ಪುರಸ್ಕಾರಗಳು-ಪ್ರೋತ್ಸಾಹಕ ನಿಯೋಗಗಳಾಗಿ

ಮನುಷ್ಯನ ಅಪವರ್ತನೆಯನ್ನು ತಡೆಯಲು ಕೇವಲ ವಿಧಿ-ನಿಷೇಧ, ಶಿಕ್ಷೆ, ರಕ್ಷಣಾ ವ್ಯವಸ್ಥೆಗಳಷ್ಟೇ ಸಾಲದು ಎಂಬ ಅರಿವು ನಮ್ಮ ಹಿರಿಯರಿಗಿತ್ತು. ಹಾಗಾಗಿ ದುಷ್ಟ ಶಿಕ್ಷಣ ಶಿಷ್ಟರಕ್ಷಣೆಯ ತತ್ವವನ್ನಾಧರಿಸಿ ಶಿಕ್ಷೆ ಮತ್ತು ಪುರಸ್ಕಾರಗಳ ತಂತ್ರವನ್ನು ಬಳಸಿ ಸ್ವಸ್ತ ಸಮಾಜವನ್ನು ನಿರ್ಮಾಣ ಮಾಡಲು ಪ್ರಯತ್ನಿಸಿದರು. ವಿಶಿಷ್ಟಸಾಧನೆಯನ್ನು ಮಾಡಿದ ವ್ಯಕ್ತಿಗಳನ್ನು ಗುರುತಿಸಿ ಗೌರವಿಸುವುದು ಆರೋಗ್ಯಕರವಾದ ರೂಢಿ. ಬದುಕಿನ ಬೇರೆ ಬೇರೆ ರಂಗಗಳಲ್ಲಿ ತಮ್ಮದೇ ಆದ ರೀತಿಯಲ್ಲಿ ಸಮಾಜಕ್ಕೆ ಕೊಡುಗೆಗಳನ್ನು ನೀಡುವವರಿಗೆ ಮನ್ನಣೆ ನೀಡುವುದು ಸಮಾಜದ ಕರ್ತವ್ಯಗಳಲ್ಲೊಂದು ಎಂದು ಭಾವಿಸಲಾಗಿತ್ತು. ಅರಸರು, ಅಧಿಕಾರಿಗಳು, ಮಹಾಜನರು ಪ್ರಭುಗಾವುಂಡರು, ಗ್ರಾಮಸ್ತರು ಈ ರೀತಿ ಕೊಡುಗೆಗಳನ್ನು ಬಹುಮಾನಗಳನ್ನು ನೀಡಿರುವುದಕ್ಕೆ ಶಾಸನಗಳು ಸಾಕ್ಷಿಯಾಗಿವೆ. ಉಂಬಳಿಗಳು, ಕೊಡಗಿಗಳು, ಬಿರುದಾವಳಿಗಳು, ಸೆಟ್ಟಿಪಟ್ಟಗಳು, ಗ್ರಾಮನಿರ್ಮಾಣ, ಅಗ್ರಹಾರ ನಿರ್ಮಾಣ, ವಿನಾಯಿತಿಗಳು, ಮಾನ್ಯಗಳು ಇತ್ಯಾದಿಗಳು ಪ್ರೋತ್ಸಾಹಕ ಶಕ್ತಿಯಾಗಿ ಕೆಲಸ ಮಾಡುತ್ತಿದ್ದು, ಮಾನ್ಯತೆಗೆ ಒಳಗಾದವರಲ್ಲಿ ಸಂತೃಪ್ತಿಯನ್ನು ಸಾಮಾಜಿಕ ನಿಷ್ಠೆ, ಬದ್ಧತೆ, ಹೊಣೆಗಾರಿಕೆಯ ಭಾವವನ್ನು ಮೂಡಿಸುತ್ತಿದ್ದುದಷ್ಟೇ ಅಲ್ಲ ಇತರರಿಗೆ ಮಾದರಿಯನ್ನೂ ಹಾಕಿಕೊಡುತ್ತಿದ್ದವು. ಅದು ಯುದ್ಧರಂಗದ ಸಾಧನೆಯಾಗಿರಲಿ, ಸಾಮಾಜಿಕ ಸೇವೆಯಾಗಿರಲಿ, ಕಲಾ ಸಾಧನೆಯಾಗಿರಲಿ, ಧಾರ್ಮಿಕ ನಿಷ್ಠೆಯಾಗಿರಲಿ ಎಲ್ಲದಕ್ಕೂ ಪುರಸ್ಕಾರ ದೊರೆಯುತ್ತಿತ್ತೆಂಬುದು ಮುಖ್ಯ. ಹೀಗೆ ಹೇಳುತ್ತಿರುವಾಗಲೂ ಕೆಲವು ಮುಖ್ಯ ಪ್ರಶ್ನೆಗಳೇಳುತ್ತವೆ. ಹೀಗೆ ಪುರಸ್ಕೃತರಾಗುವ ಅವಕಾಶ ಸಮಾಜದ ಎಲ್ಲ ಸ್ಥರದವರಿಗೂ ಒದಗಿ ಬರುತ್ತಿತ್ತೆ? ಈ ಪುರಸ್ಕಾರಗಳಿಗೆ ಯೋಗ್ಯರನ್ನು ಆರಿಸುವಾಗ ಯಾವ ಮಾನದಂಡಗಳು ಕೆಲಸ ಮಾಡುತ್ತಿದ್ದವು ಮತ್ತು ಪುರಸ್ಕಾರಯೋಗ್ಯವೆಂದು ಭಾವಿಸಲಾಗುತ್ತಿದ್ದ ದುಡಿಮೆಗಳಾದರೂ ಎಂಥವು? ಯಾರ ಹಿತಾಸಕ್ತಿಗಳನ್ನು ಓಲೈಸುವಂತಹವು?

ಪುರಸ್ಕಾರ ನೀಡುತ್ತಿದ್ದವರು ಯಾರು ಎಂಬ ಪ್ರಶ್ನೆಗಳನ್ನು ಮನಸ್ಸಿನಲ್ಲಿಟ್ಟುಕೊಂಡೇ ವಿವಿಧ ಬಗೆಯ ಮಾನ್ಯಗಳನ್ನು ಕುರಿತು ಚರ್ಚೆ ಮಾಡಬೇಕಾಗುತ್ತದೆ.

**ಉಂಬಳಿ-ಕೊಡಗಿಗಳು :** ಯಾವುದೇ ವ್ಯಕ್ತಿಗೆ ಮಾನ್ಯವಾಗಿ ಕೊಡುವ ಭೂಮಿ, ಗ್ರಾಮ ಮುಂತಾದುವು. ಕಂದಾಯವಿಲ್ಲದಂತೆ ಅನುಭವಿಸಲು ಕೊಟ್ಟದ್ದು.[೧೯೫] ಇವುಗಳನ್ನು ಕೊಡಗಿ ಭೂಮಿ, ಕೊಡಗಿ ಗ್ರಾಮ, ಜಹಗೀರು ಎಂದೂ ಕರೆಲಾಗುತ್ತದೆ. ಉಂಬಳಿಯ ಉಲ್ಲೇಖ ಹತ್ತನೇ ಶತಮಾನದಿಂದಲೇ ಕಾಣಿಸುತ್ತದೆ.[೧೯೬] ಬಾಗಡೆ ಮತ್ತು ಕಿತ್ತನ ಕೆರೆಯ ಸೀಮಾಸಂಬಂಧದ ಕಾಳಗದಲ್ಲಿ ಮಡಿದ ಜಕ್ಕಯ್ಯನೆಂಬ ವೀರನಿಗೆ ಬಾಗಡೆಯ ಅಶೇಷ ಮಹಾಜನಗಳು. ಮೆಚ್ಚಿಕೊಟ್ಟ ಉಂಬಳಿಯ ಬೆದ್ದಲು...' ಎಂಬ ಉಲ್ಲೇಖವಿದೆ.[೧೯೭] ಅದೇ ಗ್ರಾಮದ ೧೨೦೭ರ ವೀರಗಲ್ಲಿನಲ್ಲಿ ಸೀಮಾ ಸಂಬಂಧದಲ್ಲಿ ಸತ್ತ ವೀರನಿಗೆ ಪ್ರಭುಗಾವುಂಡುಗಳು ತಮ್ಮ ಉಂಬಳಿಯ ಜಮೀನಿನಲ್ಲಿ ಭೂಮಿ ನೀಡಿದ ವಿವರವಿದೆ. ಅಂದರೆ ಪ್ರಭುಗಾವುಂಡುಗಳಿಗೆ ಉಂಬಳಿಯ ಜಮೀನುಗಳು ಇರುತ್ತಿದ್ದು, ಅವರು ಗ್ರಾಮದ ಹಿತಕ್ಕಾಗಿ ಹೋರಾಡಿ ಮಡಿದ ವೀರರಿಗೆ ಆ ಉಂಬಳಿ ಭೂಮಿಯನ್ನು ಕೆಲಭಾಗವನ್ನು ಕೊಡುಗೆಯಾಗಿ ನೀಡಬಹುದಾಗಿತ್ತು.

ನೀರುಗುಂದದ ೧೨೧೨ರ ಶಾಸನದಲ್ಲಿ ನೀರುಗುಂದದ ದಾಳಿಯ ಸಂದರ್ಭದಲ್ಲಿ ಮಾಚಯ್ಯನು ಆಳುತನವನ್ನು ಮಾಡಿ ಸತ್ತಾಗ ಪಿರಿಯರಸಿ ಉಮಾದೇವಿಯರ ಬಲುಮಾನಸ ಹೆಗ್ಗಡೆ ಕಲ್ಲಯ್ಯನು ಆಗ್ರಾಮದ ನಾಳ್ಪ್ರಭುಗಳು ಮಾಚಯ್ಯನ ಮಗನಿಗೆ ಉಂಬಳಿ ಬಿಟ್ಟದನ್ನು ಹೇಳಿದೆ.[೧೯೯] ಈ ಮೇಲಿನ ಉದಾಹರಣೆಳು ತನ್ನ ಗ್ರಾಮದ ಗೌರವ ಹಿತಕ್ಕಾಗಿ ಹೋರಾಟ ಮಾಡಿದವರಿಗೆ ಅವರ ಬಲಿದಾನವನ್ನು ಗೌರವಿಸಿ ಅವರ ತ್ಯಾಗಕ್ಕಾಗಿ ಅವರ ಕುಟುಂಬಗಳಿಗೆ ನೀಡಿದ ಉಂಬಳಿಗಳಾಗಿವೆ. ಉಂಬಳಿ ನೀಡಿರುವವರು ಗ್ರಾಮದ, ಅಗ್ರಹಾರಗಳ ಒಡೆಯರಾದ ಪ್ರಭುಗಾವುಂಡುಗಳು, ಮಹಾಜನರು, ಅಧಿಕಾರಿಗಳು.

ಹಿರಿಯೂರಿನ ಶಾಸನವೊಂದು ಉಂಬಳಿ ಭೂಮಿಗೆ ಸಂಬಂಧಿಸಿದಂತೆ ವಿಶೇಷವಾದ ವಿಷಯವನ್ನು ತಿಳಿಸುತ್ತದೆ. ಗೌಡು ಕೊಡುಗೆಯಾಗಿ ಬಂದಿದ್ದ ಉಂಬಳಿ ಭೂಮಿಗಳನ್ನು ಮತ್ತು ಇತರ ಸವಲತ್ತುಗಳನ್ನೆಲ್ಲಾ ತಾವು ಮಾಡಿದ ಸಾಲಕ್ಕೆ ಪ್ರತಿಯಾಗಿ ನೀಡಿ ಋಣಮುಕ್ತರಾದ ಗೌಡುಕುಟುಂಬದ ಬಗೆಗೆ ಹೇಳುತ್ತದೆ. ಅಂದರೆ ಉಂಬಳಿ ಪಡೆದವರಿಗೆ ಅದನ್ನು ಮಾರಲು ಒತ್ತೆ ಇಡಲು ದಾನ ಮಾಡಲು ಪೂರ್ಣ ಸ್ವಾತಂತ್ರ್ಯವಿರುತ್ತಿದ್ದಂತೆ ತೋರುತ್ತದೆ.[೨೦೦]

**ಗೌಡು ಕೊಡುಗೆಗಳು :** ಗೌಡು ಕೊಡುಗೆಯೊಳಗೆ ಗೌವುಡಿಕೆಯ ಉಂಬಳಿ ಗದ್ದೆ ತೋಟ ಬೆದ್ದಲು ಮನೆ ಇತ್ಯಾದಿಗಳೊಂದಿಗೆ ಅಷ್ಟ ಭೋಗ ತೇಜ ಸಾಮ್ಯ ಮಾನೆಣ್ಣೆ ತಿಪ್ಪೆಸುಂಕ, ಹಡಿಯದೆರೆ, ಮೂಲೆವತ್ತ, ಹಂದರಹಣ ಇವೆಲ್ಲವೂ ಸೇರಿರುತ್ತಿದ್ದವು.[೨೦೧]

ಮಾಡಾಳಿನ ಶಾಸನದಲ್ಲಿ[೨೦೨] ಹಾಳಾಗಿದ್ದ ಕಿತ್ತನ ಕೆರೆ ಅಗ್ರಹಾರವನ್ನು ಜೀರ್ಣೋದ್ಧಾರ ಮಾಡಿಕೊಟ್ಟದ್ದಕ್ಕಾಗಿ ಅಲ್ಲಿನ ಮಹಾ ಜನಗಳು ರಾಮಿಸೆಟ್ಟಿಯ ಮಗ ಕಲಗವುಡನಿಗೆ ಕಿತ್ತನಕೆರೆಯ

ಕಾಲುವಳ್ಳಿ ಮಾಡಾಳನ್ನು 'ಸಬ್ಬಗೊಡಗಿ'ಯಾಗಿ ಕೊಟ್ಟು ಅದರೊಂದಿಗೆ ಕಿತ್ತನ ಕೆರೆಯ ಗವುಡಿಕೆಯನ್ನು ನೀಡಿದುದನ್ನು ಹೇಳಿದೆ. ಆ ಸಂಬಂಧವಾಗಿ ಉಳಿದ ತೆರಿಗೆಗಳೊಂದಿಗೆ 'ಕೊಡಗಿದೆರೆ'ಯನ್ನು ಕಲಗೌಡ ಪ್ರತಿವರುಷ ನೀಡಬೇಕೆಂಬ ನಿಯಮವನ್ನು ವಿಧಿಸಲಾಗಿದೆ. ಇಲ್ಲಿ ಗ್ರಾಮದ ಜೀರ್ಣೋದ್ಧಾರಕ್ಕಾಗಿ ಕಲಗೌವುಡ ಭರಿಸಿದ ಖರ್ಚು ವೆಚ್ಚಗಳನ್ನು ಅವನ ಸಾಮಾಜಿಕ ಕಳಕಳಿಯನ್ನು ಗಮನಿಸಿ ಈ ಕೊಡುಗೆಯನ್ನು ನೀಡಲಾಗಿದೆ. ಇಂಥ ಕೊಡಗಿಗಳಿಗೂ ಕೆಲವು ನಿರ್ದಿಷ್ಟ ತೆರಿಗೆಗಳಿರುತ್ತಿದ್ದುದು ಈ ಶಾಸನದಲ್ಲಿ ವ್ಯಕ್ತವಾಗಿದೆ. 'ಗೌಡು ಗೊಡುಗೆ'ಯನ್ನು ದೇವದತ್ತಿಯಾಗಿ ಬಿಟ್ಟುದನ್ನು ಒಂದು ಶಾಸನ[೨೦೩] ಹೇಳುತ್ತದೆ.

**ನೆತ್ತರು ಕೊಡುಗೆ :** ಯುದ್ಧ ಅಥವಾ ಇನ್ನಿತರ ಹೋರಾಟದಲ್ಲಿ ಮಡಿದ ವೀರರಿಗೆ ಬಿಡುತ್ತಿದ್ದ ದತ್ತಿಗಳನ್ನು ಶಾಸನಗಳಲ್ಲಿ ನೆತ್ತರು ಕೊಡುಗೆ ಎಂಬುದಾಗಿ ಕರೆದಿದೆ. ನೆತ್ತರು ಕೊಡುಗೆಯಾಗಿ ಬಿಡುತ್ತಿದ್ದ ಭೂಮಿಯಲ್ಲಿ ಇಂತಹ ನೆತ್ತರು ಕೊಡಗಿಕಲ್ಲನ್ನು ನಿಲ್ಲಿಸುತ್ತಿದ್ದರೆಂಬುದು ಹುಲ್ಲೇಕೆರೆ ಶಾಸನದಿಂದ ತಿಳಿದುಬರುತ್ತದೆ.[೨೦೪] ಹುಲ್ಲೇಕೆರೆಯ ತಿಮ್ಮಪ್ಪನಾಯಕನು ದೇವಪ್ಪಗೌಡನ ಮಗ ಪೂಜಾರಿ ತಿಮ್ಮಯ್ಯನೆಂಬುವವನಿಗೆ ನೆತ್ತರು ಕೊಡುಗೆಯಾಗಿ ಭೂಮಿಯನ್ನು ನೀಡಿದ್ದಾನೆ. "ತಿಮ್ಮಯ್ಯನ ಹೊಲಕ್ಕೆ ಹಾಕಿದ ನೆತ್ತರ ಕೊಡಗಿ ಕಲ್ಲು ಈ ಕಲ್ಲ ಕಿತ್ತೋರು..." ಇತ್ಯಾದಿ ಬರೆಹವಿದೆ. ಈಗಲೂ ಆ ಕಲ್ಲನ್ನು ಗ್ರಾಮದ ನೈರುತ್ಯಕ್ಕೆ ಹೊಲ ಒಂದರ ಬದುವಿನಲ್ಲಿ ನೋಡಬಹುದು.

ನೆತ್ತರು ಕೊಡುಗೆಯಾಗಿ ಭೂಮಿ ಕೊಡುಗೆಯಷ್ಟೇ ಅಲ್ಲದೆ ಇಡೀ ಗ್ರಾಮವನ್ನೇ, ಆ ಗ್ರಾಮಕ್ಕೆ ಸೇರಿದ ಕಾಲುವಳ್ಳಿಗಳ ಸಮೇತವಾಗಿ ನೀಡಿದ ಉದಾಹರಣೆ ಕಲ್ಲುಂಡಿ ಶಾಸನದಲ್ಲಿದೆ.[೨೦೫] ತುರುಕರ ಸೈನ್ಯವು ಕಲ್ಲುಂಡಿ ಸಮೀಪ ಗೊರವನ ಕಲ್ಲು ಎಂಬ ಸ್ಥಳಕ್ಕೆ ಬಂದ ಸಂದರ್ಭದಲ್ಲಿ ಲಿಂಗದ ಹಳ್ಳಿಯ ಬಲಗೌಡನ ಮಗ ಮಾರಗೌಡನು ಕಾದಾಡಿ ಅವರ ಕುದುರೆಯನ್ನು ಸೆರೆ ಹಿಡಿದುದಕ್ಕೆ ಮೆಚ್ಚಿ ಹೊಯ್ಸಳ ಮೂರನೇ ಬಲ್ಲಾಳ ಮತ್ತು ದಂಡನಾಯಕ ಕಾಮೆಯ್ಯ ಕಲ್ಲುಗುಂಡಿಯನ್ನು ಆ ಕಲ್ಲಗುಂಡಿಯ ಹಳ್ಳಿಗಳನ್ನು ಮಾರಗೌಡನಿಗೆ ನೆತ್ತರು ಕೊಡಗಿಯಾಗಿ ಕಲ್ಲನಟ್ಟು ಕೊಟ್ಟುದನ್ನು ಶಾಸನ ವಿವರಿಸುತ್ತದೆ. ಇದನ್ನು ವೀರಗಲ್ಲೆನ್ನದೆ 'ಕೊಡಗಿಯ ಶಾಸನ' ಎಂದು ಕರೆಯಲಾಗಿದೆ. ಈ ಶಾಸನದಲ್ಲಿ ಯಾವುದೇ ಹೋರಾಟದ ಶಿಲ್ಪವಿಲ್ಲದೆ, ಒಂದು ಪ್ರಶಸ್ತಿ ಅಥವಾ ಜಯಪತ್ರದ ಶಾಸನದಂತಿದೆ. ಇದನ್ನು ಊರಿನ ಹೆಬ್ಬಾಗಿಲಿನ ಮುಂದೆ ನೆಡಲಾಗಿದೆ. ಇಲ್ಲಿ ವೀರ ಮಡಿದಿಲ್ಲವೆಂಬುದು ಸ್ಪಷ್ಟವಾಗಿದೆ. ಇದರಿಂದ ನೆತ್ತರು ಕೊಡುಗೆ ಎಂಬುದು ಕೇವಲ ಹೋರಾಡಿ ಮಡಿದವೀರನಿಗೆ ನೀಡುತ್ತಿದ್ದ ಕೊಡುಗೆಯಾಗದೆ, ಗೆದ್ದುಬಂದ ವೀರರಿಗೂ ನೀಡುತ್ತಿದ್ದ ಕೊಡುಗೆಯನ್ನು ಸೂಚಿಸುತ್ತದೆ. "ಈ ಕೊಡುಗೆಗಳು ವೀರನಾದವನು ಗೆದ್ದು ಬಂದಿರಲಿ ಅಥವಾ ಮಡಿದಿರಲಿ ಜನರಿಗಾಗಿಯೋ, ಅರಸನಿಗಾಗಿಯೋ ಅವನು ರಕ್ತವನ್ನು, ಜೀವವನ್ನು ಪಣವಿಟ್ಟು ಹೋರಾಡಿರುತ್ತಾನೆ. ಅವರು ಪಣವಿಟ್ಟ 'ರಕ್ತಕ್ಕೆ' 'ಜೀವಿತ'ಕ್ಕೆ ಇವರು ಕೃತಜ್ಞತೆಯಿಂದ ಸಲ್ಲಿಸಿರುವ ತಮ್ಮ ಕಾಣಿಕೆಯಷ್ಟೆ"[೨೦೬]

**ಕಲ್ನಾಡು :** ಕಲ್ನಾಡು ಬಗ್ಗೆ ವ್ಯಾಖ್ಯಾನ ಮಾಡಿರುವ ವಿದ್ವಾಂಸರು ಕಲ್ನಾಡು' 'ಕಲ್ನಾಟ್ಟು' ಎಂಬುದನ್ನು ವೀರರಿಗೆ ಬಿಟ್ಟ ದತ್ತಿ ಎಂಬುದಾಗಿ ಅರ್ಥೈಸಿದ್ದಾರೆ.[೨೦೭]

ನೇರ್ಲಿಗೆ ಶಾಸನವು ಹೋರಾಟದಲ್ಲಿ ಮಡಿದ ವೀರವಸಯ್ಯನ ಮಗ ಬೂತುಗನಿಗೆ ನೇಱಿಲಗೆಯ ಕಲ್ನಾಡು ಕೊಟ್ಟ' ವೀರಗಲ್ಲು ಶಾಸನವಾಗಿದೆ.[೨೦೮] ಈ ಶಾಸನವನ್ನು ವಿಭೋಗನೆಂಬ ಶಿಲ್ಪಿಯಿಂದ ಸುಂದರವಾಗಿ ಮಾಡಿಸಿ ವೀರನ ಪರಾಕ್ರಮವನ್ನು ವೀರೋಚಿತವಾಗಿ ಹೊಗಳಿ ವೀರ ಶಾಸನ ಬರೆಸುವಾಗಲೇ ವೀರನ ತ್ಯಾಗ ಪರಾಕ್ರಮಕ್ಕೆ ಕೃತಜ್ಞತಾಪೂರ್ವಕವಾಗಿ ಮೆಚ್ಚುಗೆಯಾಗಿ ಆತನ ಮಗನಿಗೆ ನೇರಿಲಿಗೆಯ ಪ್ರದೇಶವನ್ನು ನೀಡಿದ ವಿವರವನ್ನು ಸೇರಿಸಲಾಗಿದೆ.

'ಸಾಮಂತ ಮುತ್ತರಸನು... ಕಳಿಕಾಟಿಯೊಳ್ ಕಾದಿ ಸತ್ತಂ ಪಡೆದಕಲ್ನಾಡು ಕಱಿಕಟ್ಟೆ ಪಡಿ. ಅರಕೆಱೆಪಡಿ..." ಎಂದು ಒಂದು ಶಾಸನ ಪಾಠವಿದೆ.[೨೦೯] ಈ ಶಾಸನದಲ್ಲಿ ವೀರ ಮುತ್ತರನ ವರ್ಣನೆಯಿದೆ ಸುಂದರ ಶಿಲ್ಪವಿದೆ. ಹೋರಾಟದಲ್ಲಿ ಮಡಿದ ಮತ್ತರನಿಗೆ ಕಣಿಕಟ್ಟೆ ಮತ್ತು ಅರಕೆರೆಗಳನ್ನು ಪಡಿಮಾನ್ಯವಾಗಿ ನೀಡಲಾಗಿದೆ. ಈ ಮಾನ್ಯವನ್ನು ಸ್ವೀಕರಿಸಿದವರು ಯಾರೆಂಬುದು ಸ್ಪಷ್ಟವಾಗುವುದಿಲ್ಲ. ಇಲ್ಲಿ ಪಡಿ ಎಂಬುದು ವೀರನ ಸಹಾಯಕ್ಕೆ ಪ್ರತಿಯಾಗಿ ನೀಡುವ ಕೊಡುಗೆ ಎಂಬ ಅರ್ಥವನ್ನು ಹೊಂದಿದೆ.

ಸಂಗ್ರಾಮರಂಗದಲ್ಲಿ ವೀರ ಕುಂಜಿಸೆಟ್ಟಿ ತೋರಿದ ಪರಾಕ್ರಮಕ್ಕೆ ಅರಸನಿಂದ ಪಡಿಯೂರೊಂದನ್ನು ಪಡೆದುದನ್ನು ಹಿರಿಯೂರಿನ ಶಾಸನ ಹೇಳುತ್ತದೆ.[೨೧೦] ಅಂಕೆಯ ನಾಯಕನೆಂಬ ದಂಡನಾಯಕನ ನಿಷ್ಠೆಗೆ ಮೆಚ್ಚಿ ಆಲದ ಹಳ್ಳಿಯನ್ನು ಚತುಸ್ಸೀಮೆ ಸಹಿತವಾಗಿ ಚವುಗಾವಿಯಮುಂದಿಟ್ಟು ಕಲ್ಲನಟ್ಟಿಸಿ ಕರುಣಿಸಿ ಕೊಟ್ಟ ಕೊಡುಗೆ ಎಂದು ಬಾಗಾವಾಳಿನ ಶಾಸನವೊಂದು ದಾಖಲಿಸಿದೆ.[೨೧೧] ಇಲ್ಲಿ ಕಲ್ನಾಡು' ಎಂಬ ಪ್ರಯೋಗವಾಗದೆ ಕಲ್ಲನಟ್ಟಿಸಿ ಎಂದು ಬಿಡಿಸಿ ಬರೆಯಲಾಗಿದೆ. ಮೇಲಿನ ಎರಡೂ ಉದಾಹರಣೆಗಳಲ್ಲಿ ವೀರರು ಮಡಿದಿಲ್ಲ ಎಂಬುದನ್ನು ಗಮನಿಸಬೇಕು.

ಯುದ್ಧದಲ್ಲಿ ಮಡಿದ ವೀರರಿಗಷ್ಟೇ ಅಲ್ಲದೆ ಯುದ್ಧಗಳಲ್ಲಿ ಅಸಾಮಾನ್ಯ ಸಾಧನೆಗೆಯ್ದು ವಿಜಯಕ್ಕೆ ಕಾರಣರಾದ, ಹೋರಾಡಿ ಉಳಿದುಬಂದ ವೀರರಿಗೆ ಕೊಡುವ ದತ್ತಿ ಅಥವಾ ಮಾನ್ಯಗಳನ್ನೂ ಶಾಸನಗಳು ಹೇಳುತ್ತವೆ. "ಶ್ರೀ ಮನ್ಮಹಾಪ್ರಧಾನ... ಎಱೆಯಂಣ್ನಂ ಪಲವು ಬವರಮನೇಕಾಂಗದಿಂ ಗೆಲ್ದಾಳ್ದನಂ ಮೆಚ್ಚಿಸಿ ವೀರ ಬಲ್ಲಾಳ ದೇವನ ಕಯ್ಯಲು ಮುಱುಹಿಂಡಿಯಂ ಸರ್ವಬಾಧಾಪರಿಹಾರವಾಗಿ" ಪಡೆದಿದ್ದಾನೆ.[೨೧೨] ಯುದ್ಧಾನಂತರದಲ್ಲಿ ಬದುಕಿದ ಅಥವಾ ಮಡಿದ ವೀರರ ಪರಾಕ್ರಮಗಳನ್ನು ಅರಸನೇ ಪುರಸ್ಕರಿಸಿ ಗೌರವಿಸುವುದು ಆ ಕುಟುಂಬದವರಿಗೆ ಸಾಂತ್ವನವನ್ನೂ ಸಮಾಜದಲ್ಲಿ ಪ್ರತಿಷ್ಠೆಯನ್ನು ತಂದುಕೊಡುತ್ತಿತ್ತು. ಇವು ಅರಸರ ಬಲವರ್ಧನೆಯ, ವೀರರ ಕೌಟುಂಬಿಕ ಸುಭದ್ರತೆಯ ಎರಡೂ ನೆಲೆಯಲ್ಲಿ ಉತ್ತಮವಾದ ಪ್ರಯತ್ನವೆಂದು ಹೇಳಬಹುದು.

**ಕೆರೆ ಕೊಡಗಿ :** ಕೆರೆ ಕಟ್ಟೆಗಳನ್ನು ನಿರ್ಮಿಸಿ ಕೃಷಿಯ ಅಭಿವೃದ್ಧಿಗೆ ಸಹಾಯಕರಾಗುತ್ತಿದ್ದವರಿಗೆ, ಗ್ರಾಮ ಗಳಲ್ಲಿ ಜೀವಜಲವನ್ನು ಒದಗಿಸಲು ಕೆರೆಗಳನ್ನು ನಿರ್ಮಿಸಿದವರಿಗೆ ಹಾಗೂ ಜೀರ್ಣೋದ್ಧಾರ ಮಾಡಿದವರಿಗೆ ಕೆರೆ ಕೊಡುಗೆಗಳನ್ನು ನೀಡಿ ಅವರ ಸೇವೆಯನ್ನು ಗೌರವಿಸಲಾಗುತ್ತಿತ್ತು.[೨೧೩]

### ೫.೪.೨. ಬಿರುದುಗಳು-ಶೆಟ್ಟಿಪಟ್ಟ-ಮಾನ್ಯಗಳು

ವೀರರಿಗೆ, ಕಲಾವಿದರಿಗೆ, ಕೇವಲ ದತ್ತಿಗಳಲ್ಲದೆ ಕೆಲವು ಗೌರವಗಳನ್ನು ಬಿರುದುಗಳನ್ನು ಅರಸರು ನೀಡುತ್ತಿದ್ದರು. ಹುಳಿಯೆರಪುರವರಾಧೀಶ್ವರರ ಮೂಲ ಪುರುಷನಾದ ಸಾಮಂತ ಬ್ರಹ್ಮ ಅಥವಾ ಕರಿಯ ಬೊಮ್ಮನು ಸ್ಥಿರಗಂಭೀರ ವೀರನೊಳಂಬನ ಅಗ್ರಮಹಿಷಿ ಶ್ರೀದೇವಿಯನ್ನು ಶತ್ರುಗಳು ಬಂಧಿಯಾಗಿ ಕೊಂಡೊಯ್ಯುತ್ತಿರುವಾಗ ತಳಪ್ರಹಾರದಿಂದ ಅವರನ್ನು ಕೊಂದು ಅರಸಿಯನ್ನು ಬಿಡಿಸಿ ತಂದೊಪ್ಪಿಸಿದಾಗ ಭೂಪತಿಯು 'ವೀರತಳ ಪ್ರಹಾರಿ' ಎಂಬ ಬಿರುದನ್ನು ನೀಡಿದನಂತೆ. ಚಾಳುಕ್ಯ ಸೈನ್ಯದಲ್ಲಿ ದೊಡ್ಡಂಕವನ್ನು ಗೆದ್ದುದರಿಂದ 'ದೊಡ್ಡಂಕ ಬಡಿವ' ಎಂಬ ಬಿರುದನ್ನು ಚಾಳುಕ್ಯ ಆಹವಮಲ್ಲ (೧ನೇ ಸೋಮೇಶ್ವರ)ನಿಂದ ಪಡೆದನಂತೆ.[೨೧೪] ಮಾರಗೌಡನೆಂಬ ವೀರನು ತುರುಕರ ಸೈನ್ಯವನ್ನು ಮುತ್ತಿ ಅವರ ಕುದುರೆ ಸೆರೆ ಹಿಡಿದಿದ್ದಾನೆ. ಇವನಿಗೆ ಕಟಕತೋಟಿಕಾರ' ಎಂಬ ಬಿರುದಿತ್ತು.[೨೧೫] ಆಸಂದಿ ನಾಡಿನ ಮೊದಲನೆ ವೈಜರಸನ ಬಾಣದ ಗುರಿಯನ್ನು ಮೆಚ್ಚಿ ಹೆಮ್ಮಾಡಿರಾಯ ಕಣ್ಣಂಬಿನಾತ'ನೆಂದು ಬಿರುದು ನೀಡಿದ್ದನು.[೨೧೬] ಇವೆಲ್ಲವೂ ವೀರತ್ವಕ್ಕಾಗಿ ನೀಡಿದ್ದ ಬಿರುದಗಳು.

ಅವರಿವರೆನ್ನದೆ ಸಂತಸವಾಗುವಂತೆ ದಾನಧರ್ಮಗಳನ್ನು ಮಾಡಿದ ರೇಚರಸ ಮಂತ್ರಿಯು 'ವಸುಧೈಕ ಬಾಂಧವ'ನೆಂಬ ಹೆಸರು ಪಡೆದಿದ್ದನಂತೆ.[೨೧೭] ಬೀರಯ್ಯ ದಂಣಾಯಕನ ಮನೆಯ ಧನ್ವಂತರಿಯಂತಿದ್ದ ವೈದ್ಯದೇವ ಪಿಳ್ಳೆಯಣ್ಣನಿಗೆ 'ನೂತನ ವೈದ್ಯ ಕಳಾವಿಖ್ಯಾತ'ನೆಂಬ ಬಿರುದು ನೀಡಿ ಗೌರವಿಸಲಾಗಿತ್ತು.[೨೧೮] ಒಂದೇ ಪುಟದಲ್ಲಿ ಗೋಗ್ರಹಣವನ್ನು ಉತ್ಕಟವಾಗಿ ಬರೆದು ಮೆಚ್ಚಿಸಿ 'ಮೂರುರಾಯರ ಕಟಕದ ಬಿರುದ ಲೇಖಕೋಪಾದ್ಯಾಯನೆಂಬ ಬಿರುದನ್ನು ಒಬ್ಬ ಕವಿ ಪಡೆದಿದ್ದಾನೆ.[೨೧೯] ಅಭಿನವ ಸರ್ವಜ್ಞನೆಂಬ ಬಿರುದು ಸೋಮೇಶ್ವರ ಭಟ್ಟನೆಂಬ ಕವಿಗೆ,[೨೨೦] ಕವಿರಾಜನೆಂಬ ಬಿರುದು ದೇವಪಾರ್ಯನಿಗೆ,[೨೨೧] ಸುಕವಿ ಕಂಠಾಭರಣನೆಂಬ ಬಿರುದು ಸೋಮನಾಥ ಪಂಡಿತನಿಗೆ, ಅವಧಾನ ಚಕ್ರವರ್ತಿ ಎಂಬ ಬಿರುದು ಶ್ರೀಕರಣದ ವಿಶ್ವನಾಥನಿಗೆ, ರಾಯ ಸೂತ್ರಧಾರಿ ಎಂಬ ಬಿರುದು ಗೋಪೋಜನಿಗೆ[೨೨೨] ಇದ್ದವು. ಈ ರೀತಿ ವಿಶಿಷ್ಟ ಸಾಹಿತ್ಯ ಕಲೆಯ ಸಾಧಕರಿಗೆ ಬಿರುದುಗಳೊಂದಿಗೆ ಮಾನ್ಯಗಳನ್ನು ನೀಡಲಾಗಿದೆ.

**ಶೆಟ್ಟಿಪಟ್ಟ :** ಶ್ರೇಷ್ಠರಾದ ವ್ಯಾಪಾರಿಗಳಿಗೆ ಆರ್ಥಿಕ ಕ್ಷೇತ್ರದಲ್ಲಿನ ಅವರ ಕೊಡುಗೆಯನ್ನು ಗಮನಿಸಿ ಶೆಟ್ಟಿಪಟ್ಟವನ್ನೂ, ಪಟ್ಟಣಸ್ವಾಮಿ ಪಟ್ಟವನ್ನು, ಮಹಾವಡ್ಡವ್ಯವಹಾರಿ ಪಟ್ಟವನ್ನು ನೀಡಿ ಗೌರವಿಸಲಾಗು

ತ್ತಿತ್ತು. ಸಂತೆ ಕೂಡಿಸಲು, ಪೇಠೆ ನಿರ್ಮಿಸಲು ಇಂತಹ ಶೆಟ್ಟಿಗಳು ಹೆಚ್ಚು ಹೆಚ್ಚಾಗಿ ತೊಡಗಿಸಿಕೊಳ್ಳುತ್ತಿದ್ದರಲ್ಲದೆ, ತಮಗೆ ಸೆಟ್ಟಿಪಟ್ಟವಾಗಿ ಬಂದ ಊರುಗಳು ಸರ್ವತೋಮುಖವಾಗಿ ಬೆಳೆಯುವಂತೆ ಅಭಿವೃದ್ಧಿಕಾರ್ಯಗಳಿಗೆ ಹೆಚ್ಚು ಗಮನ ನೀಡುತ್ತಿದ್ದರು. ಹಿರಿಯೂರಿನ ಕುಂಜಿಶೆಟ್ಟಿ, ಬಂಡಿನಂಬಿಶೆಟ್ಟಿ, ಕಂಡನಂಬಿಶೆಟ್ಟಿ, ಅರಸೀಕೆರೆಯ ಎತ್ತಿನ ಶೆಟ್ಟಿ, ಮಾದವ, ಕಣಕಟ್ಟೆಯ ಪೊನ್ನಾಚ್ಚಿ ಸೆಟ್ಟಿ, ಲಖ್ಖಿಸೆಟ್ಟಿ, ಶಂಕರ ಶೆಟ್ಟಿಹಳ್ಳಿಯ ಶಂಕರಶೆಟ್ಟಿ, ಬಾಣಾವರದ ಚಟ್ಟಪ್ಪಶೆಟ್ಟಿ, ಅರಕೆರೆ ಬೆಂಡೆಕೆರೆಯ ದಾಮೋದರ ಶೆಟ್ಟಿ ಮುಂತಾದವರು ಶ್ರೇಷ್ಠ ಸ್ಥಾನ ಮಾನಗಳಿಂದ ಪುರಸ್ಕೃತರಾದ ಮಹಾ ವಡ್ಡ ವ್ಯವಹಾರಿಗಳೂ, ಪಟ್ಟಣ ಸ್ವಾಮಿಗಳೂ, ಕಮ್ಮಟದ ಅಧಿಕಾರಿಗಳೂ ಆಗಿದ್ದರು.[೨೨೩]

**ವಿದ್ವಜ್ಜನರಿಗೆ ದೇವಾಲಯ ಮಠಗಳಿಗೆ ಮಾನ್ಯಗಳು** : ವಿದ್ಯೆಗೆ ಪ್ರೋತ್ಸಾಹ ನೀಡುವುದಕ್ಕಾಗಿ, ವಿದ್ವಜ್ಜನರ ಜೀವಿತಕ್ಕೆ ಆಧಾರವಾಗಿ ಅಗ್ರಹಾರಗಳ ಸ್ಥಾಪನೆ ಮಾಡಿ ಭೂಮಿ, ಮನೆಗಳನ್ನು ಹಂಚಿಕೊಡ ಲಾಗುತ್ತಿತ್ತು.[೨೨೪] ವಿದ್ಯಾರ್ಥಿಗಳಿಗೆ ಶಿಕ್ಷಣ, ತಪೋಧನರಿಗೆ ಆಹಾರ, ಭೈಷಜ್ಯವನ್ನು ನಡೆಸುತ್ತ ಸಮಾಜಸೇವೆಯಲ್ಲಿ ತೊಡಗಿದ್ದ ದೇವಾಲಯ ಮಠಗಳಿಗೆ ಪ್ರೋತ್ಸಾಹಕವಾಗಿ ದಾನ, ದತ್ತಿಗಳನ್ನು ನೀಡುತ್ತಿದ್ದರು.[೨೨೫]

ಒಟ್ಟಿನಲ್ಲಿ ಈ ರೀತಿಯ ಕೊಡಗಿ ಮಾನ್ಯಗಳು ಸಮಾಜದಲ್ಲಿ ಇತ್ಯಾತ್ಮಕ ಪರಿಣಾಮವನ್ನು ಬೀರಿ ಪ್ರೋತ್ಸಾಹಕ ಶಕ್ತಿಯಾಗಿ ಸಾಮಾಜಿಕ ಬದ್ಧತೆಯನ್ನು ಕ್ರಿಯಾಶೀಲತೆಯನ್ನು ಉಂಟು ಮಾಡುವುದರಲ್ಲಿ ಯಶಸ್ವಿಯಾಗುತ್ತಿದ್ದವು. ಆ ಮೂಲಕ ಸಾಮಾಜಿಕ ನೀತಿ, ನಡಾವಳಿಗೆ ಒಂದು ಅನುವರ್ತನೆಯನ್ನು ರೂಢಿಸಿ ಸಾಮಾಜಿಕ ನಿಯಂತ್ರಣ ಯಶಸ್ವಿಯಾಗಿ ನಡೆಯಲು ಪೂರಕವಾಗಿ ದುಡಿಯುತ್ತಿದ್ದವೆಂದು ಹೇಳಬಹುದು.

**ಅಡಿಟಿಪ್ಪಣಿ**

೧. ಸಮಾಜ ಶಾಸ್ತ್ರ, ಪ್ರಸಾರಾಂಗ, ಕನ್ನಡ ವಿ.ವಿ., ಪು.೧೬೧

೨. ಎ.ಕ.೧೦ (ಪರಿ), ಅ.ಕೆ.ಶಾ.ಸಂ., ೧೯೬, ೨೪೧, ೨೨೭, ೧ನೇ ಶತಮಾನ

೩. ಅದೇ, ಶಾ.ಸಂ.೧೬೧, ತಳಲೂರು, ಕ್ರಿ.ಶ.೧೧೮೬

೪. ಎ.ಕ.೯, ಬೇಲೂರು ಶಾ.ಸಂ.೨೧೩, ಕ್ರಿ.ಶ.೧೨೪೪

೫. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೮೮, ಕಣಕಟ್ಟೆ, ಕ್ರಿ.ಶ.೧೧೮೯

೬. ಅದೇ, ಶಾ.ಸಂ.೧೯೩, ಬಾಗಾವಾಳು, ಕ್ರಿ.ಶ.೧೬-೧೭ನೇ ಶತಮಾನ

೭. ಅದೇ, ಶಾ.ಸಂ.೧೮೫, ಹುಲ್ಲೇಕೆರೆ, ಕ್ರಿ.ಶ.೧೧೭೩

೮. ಚಿದಾನಂದಮೂರ್ತಿ ಎಂ., ಕ.ಶಾ.ಸಾ.ಸ., ಪು.೧೯೬

೯. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೧೬೧, ತಳಲೂರು ೧೧೮೫ ರಿಂದ ೧೧೯೧

೧೦. ಅದೇ ಶಾ.ಸಂ.೨೩೩, ಹಾರನಹಳ್ಳಿ, ಕ್ರಿ.ಶ.೧೨೬೫

೧೧. ಅದೇ ಶಾ.ಸಂ. ೧೫೮, ಕೆಲ್ಲಂಗೆರೆ, ೧೦-೧೧ನೇ ಶತಮಾನ

೧೨. ಅದೇ, ಶಾ.ಸಂ. ೨೯೧, ೨೯೨, ಮೊಸಳೆ, ಕ್ರಿ.ಶ.೧೨೮೮

೧೩. ಅದೇ, ಶಾ.ಸಂ.೧೬೧, ತಳಲೂರು, ಕ್ರಿ.ಶ.೧೧೮೫

೧೪. ಅದೇ, ಶಾ.ಸಂ.೧೬೫, ತಳಲೂರು ಕ್ರಿ.ಶ.೧೭೪೫

೧೫. ಅದೇ, ಶಾ.ಸಂ.೧೩೫, ತಿರುಪತಿ, ಕ್ರಿ.ಶ.೧೭೪೫

೧೬. ಅದೇ, ಶಾ.ಸಂ.೨೨೪, ಗೀಜಿಹಳ್ಳಿ, ಕ್ರಿ.ಶ.೧೨-೧೩ನೇ ಶತಮಾನ

೧೭. ಅದೇ, ಶಾ.ಸಂ.೨೪೪, ಗೋವಿಂದಪುರ, ಕ್ರಿ.ಶ.೧೧೩೬-೩೭

೧೮. ಅದೇ, ಶಾ.ಸಂ.೨೪೨, ಕರುಗುಂದ, ಕ್ರಿ.ಶ.೧೧೬೨

೧೯. ಅದೇ, ಶಾ.ಸಂ.೧೮೨, ಯಡವನಹಳ್ಳಿ, ಕ್ರಿ.ಶ.೧೧೭೭

೨೦. ವೆಂಕಟರಾವ್ ಎಚ್.ವಿ. (ಸಂ), ಋಗ್ವೇದ ಸಂಹಿತೆ ಭಾಗ ೩೦

೨೧. ಪಂಪ, ರನ್ನರ ಕೃತಿಗಳು, ಅನೇಕ ಶಾಸನಗಳ ವೀರ ಘೋಷವಾಕ್ಯಗಳು, ಅರಭಟ್ಟನ ಶಾಸನ, ಹೆಬ್ಬೆನಾಯಕನ ಶಾಸನ, ಕುವರ ಲಕ್ಷ್ಮನ ಶಾಸನ

೨೨. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೪೭, ಜಾಜೂರು, ಕ್ರಿ.ಶ.೧೨೦೦

೨೩. ಅದೇ, ಶಾ.ಸಂ.೨೪೮, ಉಂಡಿಗನಾಳು, ಕ್ರಿ.ಶ.೧೨೭೬

೨೪. ಅದೇ, ಶಾ.ಸಂ.೪೭, ಜಾಜೂರು ೧೧-೧೨ನೇ ಶತಮಾನ

೨೫. ಅದೇ, ಶಾ.ಸಂ.೬, ೮೮, ೯೬, ೧೭೬, ೩೧೯, ೧೨-೧೩ನೇ ಶತಮಾನ

೨೬. ಅದೇ, ಶಾ.ಸಂ.೨೪೪, ನೇರ್ಲಿಗೆ ಕ್ರಿ.ಶ.೯೭೧-೭೨

೨೭. ಅದೇ, ಚನ್ನರಾಯಪಟ್ಟಣ, ಶಾ.ಸಂ.೭೩, ಕೆಂಬಾಳು, ಕ್ರಿ.ಶ.೧೩ನೇ ಶತಮಾನ

೨೮. ಅದೇ, ಚನ್ನರಾಯಪಟ್ಟಣ, ಶಾ.ಸಂ.೨೬, ಸಣ್ಣೇನಹಳ್ಳಿ, ಕ್ರಿ.ಶ.೧೨೮೯

೨೯. ಎ.ಕ.೧೨ (ಪರಿ) ತರೀಕೆರೆ, ಶಾ.ಸಂ.೯, ಕ್ರಿ.ಶ.೧೨೦೫

೩೦. ಎ.ಕ.೯ (ಪರಿ) ಬೇಲೂರು ಶಾ.ಸಂ.೩೫೨

೩೧. ಎ.ಕ.೧೦ (ಪರಿ), ಅ.ಕೆ.೩೦೭, ಕೋಳಿಗುಂದ, ಕ್ರಿ.ಶ.೧೧೬೧

೩೨. ವಕ್ರ ಸಂಕಯ್ಯನಾಯಕ, ನೇರ್ಲಿಗೆ

೩೩. ರುದ್ರಭಟ್ಟ, ಜಗನ್ನಾಥ ವಿಜಯ, ೨-೧೭

೩೪. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೫೩, ದೇಶಾಣಿ ಕ್ರಿ.ಶ.೧೧೩೯

೩೫. ಅದೇ, ಶಾ.ಸಂ.೨೧೪, ಮುದುಡಿ ಕ್ರಿ.ಶ.೧೧೯೫

೩೬. ರುದ್ರಭಟ, ಜಗನ್ನಾಥ ವಿಜಯ ೫, ೭೮, ೭೯

೩೭. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೫೫, ಬಾಣಾವರ, ಕ್ರಿ.ಶ.೧೧೮೭

೩೮. ಜಗನ್ನಾಥ ವಿಜಯ, ೨-೨೧

೩೯. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೧೧೮, ೧೧೭, ಹೊನ್ನಕಟ್ಟೆ, ೧೨೦೯-೧೨೧೭

೪೦. ವಿಲಿಯಂ ಕೊಯೆಲ್ಲೋ, ದಿ ಹೊಯ್ಸಳವಂಶ, ಪು.೨೫೮

೪೧. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೧೧೬, ಸಾತಂಗೆರೆ, ಕ್ರಿ.ಶ.೧೧೫೬

೪೨. ಚಿದಾನಂದಮೂರ್ತಿ ಎಂ., ಕ.ಶಾ.ಸಾ.ಅ.ಪು. ೨೬೫

೪೩. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೬೦, ೬೧, ೯೮, ಕ್ರಿ.ಶ.೧೨-೧೩ನೇ ಶತಮಾನ

೪೪. ಸ್ವಂತ ಅನುಬಂಧ ಶಾ.ಸಂ.೧ ನೀರ್ಗುಂದ, ಕ್ರಿ.ಶ.೧೨೧೨

೪೫. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೬೨, ಕಲ್ಗುಂಡಿ, ಕ್ರಿ.ಶ.೧೩೩೧

೪೬. ಅದೇ, ಶಾ.ಸಂ.೨೮೧, ನೇರ್ಲಿಗೆ, ಕ್ರಿ.ಶ.೧೦೮೪-೮೫

೪೭. ಅದೇ, ಶಾ.ಸಂ.೨೧೫, ಮುದುಡಿ, ಕ್ರಿ.ಶ.೧೨೧೬

೪೮. ವಿಲಿಯಂ ಕೋಯಲ್ಲೊ, ದಿ ಹೊಯ್ಸಳವಂಶ, ಪು.೨೫೪

೪೯. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೪೭, ಜಾಜೂರು ಕ್ರಿ.ಶ.೧೨ನೇ ಶತಮಾನ

೫೦. ರುದ್ರಭಟ್ಟ, ಜಗನ್ನಾಥ ವಿಜಯ ೨-೨೧

೫೧. ವಕ್ತೃ ಮಂಜುನಾಥ ಅರ್ಚಕರು, ಬಾಣಾವರ

೫೨. ವಕ್ತೃ ಭವಾನಿ ಶಂಕರ, ಜಟ್ಟಿ ಕರಿಯಮ್ಮನ ಗರಡಿ, ಅರಸೀಕೆರೆ

೫೩. ರನ್ನ, ಸಾಹಸಭೀಮ ವಿಜಯ, ೨-೨೪

೫೪. ಎ.ಕ.೧೨ (ಪರಿ), ಕಡೂರು ಶಾಸನ ೧೯, ಆಸಂದಿ, ೧೧-೧೨ನೇ ಶತಮಾನ

೫೫. ಎ.ಕ.೧೦ (ಪರಿ), ಅ.ಕೆ.೨೧೧, ಮಾವಿನಕೆರೆ, ೮ನೇ ಶತಮಾನ

೫೬. ಅದೇ, ಶಾ.ಸಂ.೨೧೨, ಮಾವಿನಕೆರೆ ೮-೯ನೇ ಶತಮಾನ

೫೭. ಅದೇ, ಶಾ.ಸಂ.೨೮೪, ನೇರ್ಲಿಗೆ, ಕ್ರಿ.ಶ.೯೭೧-೭೨

೫೮. ಅದೇ, ಶಾ.ಸಂ.೨೮೧, ನೇರ್ಲಿಗೆ, ಕ್ರಿ.ಶ.೧೦೮೪-೮೫

೫೯. ಅದೇ, ಶಾ.ಸಂ.೨೨೯, ಬೊಮ್ಮನಹಳ್ಳಿ, ಕ್ರಿ.ಶ.೧೨ನೇ ಶತಮಾನ

೬೦. ಅದೇ, ಶಾ.ಸಂ. ೨೧೪, ೨೧೮, ಮುದುಡಿ, ೧೨ನೇ ಶತಮಾನ

೬೧. ಅದೇ, ಶಾ.ಸಂ.೩೦, ಅರಸೀಕೆರೆ, ೧೧೯೫

೬೨. ಅದೇ, ಶಾ.ಸಂ.೨೦೫, ಗಂಡಸಿ, ಕ್ರಿ.ಶ.೧೨೫೬

೬೩. ಅದೇ, ಶಾ.ಸಂ.೧೦೫, ಚಿಕ್ಕಕೋಡಿಹಳ್ಳಿ, ಕ್ರಿ.ಶ.೧೨೫೯

೬೪. ಅದೇ, ಶಾ.ಸಂ.೧೮೧, ತಳುತೊರೆ, ಕ್ರಿ.ಶ.೧೨೭೮

೬೫. ಅದೇ, ಶಾ.ಸಂ. ೧೦೯, ಶಂಕರನಹಳ್ಳಿ, ಕ್ರಿ.ಶ.೧೧೭೩-೧೧೨೦

೬೬. ಅದೇ, ಶಾ.ಸಂ.೬೨, ೧೭೯, ೧೮೯, ಕ್ರಿ.ಶ.೧೩೩೧-೧೩೩೯

೬೭. ಅದೇ, ಶಾ.ಸಂ.೨೭೩, ಜಾವಗಲ್ಲು, ಕ್ರಿ.ಶ.೧೫೧೫

೬೮. ಅದೇ, ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೬೯. ಅದೇ, ಶಾ.ಸಂ.೧೩೫, ತಿರುಪತಿ, ಕ್ರಿ.ಶ.೧೭೪೪-೪೫

೭೦. ಅದೇ, ಶಾ.ಸಂ.೨೧೫, ಮುದುಡಿ, ಕ್ರಿ.ಶ.೧೩ನೇ ಶತಮಾನ

೭೧. ಅದೇ, ಶಾ.ಸಂ.೧೯೬, ವಡಗರಹಳ್ಳಿ, ಕ್ರಿ.ಶ.೧೧೯೬

೭೨. ಅದೇ, ಶಾ.ಸಂ.೩೦೧, ಕೋಳಿಗುಂದ, ಕ್ರಿ.ಶ.೧೧೯೫

೭೩. ಅದೇ, ಶಾ.ಸಂ.೧೦೭, ಶಂಕರನಹಳ್ಳಿ, ಕ್ರಿ.ಶ.೧೨೯೯

೭೪. ಕಿಟೆಲ್ ಕೋಶ, ಪು.೪೮೨

೭೫. ಹುಲ್ಲೂರು ಶ್ರೀನಿವಾಸ್ ಜೋಯಿಸ್ (ಸಂ), ಸಿರುಮನೃಪಾಲ ಚರಿತೆ, ಜಗನ್ನಾಥವಿಜಯ, ರುದ್ರಭಟ್ಟ

೭೬. ಕಂಠೀರವ ನರಸರಾಜವಿಜಯ, ಸಂಧಿ ೧೮, ಪದ್ಯ ೭೪

೭೭. ಎ.ಕ.೧೧ (ಪರಿ) ಅರಸೀಕೆರೆ, ಶಾ.ಸಂ.೨೩೭

೭೮. ಕಲಬುರ್ಗಿ ಎಂ.ಎಂ., ಮಾರ್ಗ ೨, ಪು.೬೬-೬೮

೭೯. ಎ.ಕ.೮ (ಪರಿ), ಹಾಸನ, ಶಾ.ಸಂ.೧೩೭, ಕ್ರಿ.ಶ.೧೧೭೩

೮೦. ಎ.ಕ.೯ (ಪರಿ), ಬೇಲೂರು, ಶಾ.ಸಂ.೪೮೦, ಕ್ರಿ.ಶ.೧೧೯೪

೮೧. ಅದೇ, ಬೇಲೂರು ಶಾ.ಸಂ.೨೦೭, ಕ್ರಿ.ಶ.೧೧೯೪

೮೨. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೧೧೭, ೧೧೮, ಹೊನ್ನಕಟ್ಟೆ, ೧೨೦೯-೧೨೧೭

೮೩. ಅದೇ, ಶಾ.ಸಂ.೧೯೬, ವಡಗರಹಳ್ಳಿ, ಕ್ರಿ.ಶ.೧೧೯೬

೮೪. ಅದೇ, ಚನ್ನರಾಯಪಟ್ಟಣ, ಶಾ.ಸಂ.೬೩, ಕ್ರಿ.ಶ.೧೨೧೮

೮೫. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೧೮೯, ಬಾಗಾವಾಳು, ಕ್ರಿ.ಶ.೧೩೩೮

೮೬. ರಂಗನಾಥ ಸ್ವಾಮಿ (ಸಂ), ದ್ವಿರೂಪ ಕೋಶ ಶ್ರೀಹರ್ಷ, ವಿಶಾಖಪಟ್ಟಣ, ಶ್ಲೋಕ ೧೫೧, ೧೮೯೬

೮೭. ಕ್ಯುಜೆ ಎಂ.ಎಸ್., ಆನ್ ಟ್ರಡಿಷನ್ ಆಫ್ ದಿ ಡಬಲ್ ಹೆಡೆಡ್ ಬರ್ಡ್ ಇನ್ ಸೌತ್ ಇಂಡಿಯಾ, ಸಂ.೬೭, ಜನವರಿ-ಡಿಸೆಂಬರ್ ೧೯೭೬, ಪು.೧೨೪

೮೮. ಅದೇ, ವ್ಯಾಲೆಂಟೇನ್ ಸ್ಟ್ಯಾಚೆ ರೂಸೆನ್, ಕ್ಯು.ಜೆ.ಎಂ.ಎಸ್., ೧೯೭೬

೮೯. ಎ.ಕ.೭ (ರೈಸ್), ಶಿಕಾರಿಪುರ, ಶಾ.ಸಂ.೧೫೧, ಕ್ರಿ.ಶ.೧೦೪೭

೯೦. ಎ.ಕ.೬ (ಪರಿ), ಕೃಷ್ಣರಾಜಪೇಟೆ, ಶಾ.ಸಂ.೧೦೮, ವರಾಹನಾಥ ಕಲ್ಲಹಳ್ಳಿ, ಕ್ರಿ.ಶ.೧೩೩೪

೯೧. ಎಂ.ಎ.ಆರ್, ೧೯೪೭-೫೬, ಪ್ಲೇಟ್ ೭೨

೯೨. ವ್ಯಾಲೆಂಟೇನ ಸ್ಟ್ಯಾಚೆ ರೂಸೆನ್, ಪೂರ್ವೋಕ್ತ

೯೩. ಎ.ಕ.೯ (ಪರಿ) ಬೇಲೂರು, ಶಾ.ಸಂ.೪೧೧, ಕ್ರಿ.ಶ.೧೧೬೦

೯೪. ಎ.ಕ.೧೩ (ಪರಿ) ಭದ್ರಾವತಿ, ಶಾ.ಸಂ.೨೯, ಹಿರಿಯೂರು, ಕ್ರಿ.ಶ.೧೧೪೦

೯೫. ಎ.ಕ.೯ (ಪರಿ), ಬೇಲೂರು, ಶಾ.ಸಂ.೫೨೮, ಕೂಸಾವರ, ಕ್ರಿ.ಶ.೧೨೦೬

೯೬. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೧೮೯, ಎ.ಕ.೧೩ (ಪರಿ), ತೀರ್ಥಹಳ್ಳಿ, ಶಾ.ಸಂ.೧೭೮, ಕೂಸದ ಬಾಗವಾಳಿನ ಉಲ್ಲೇಖವಿದೆ. ಕ್ರಿ.ಶ.೧೩೩೮-೧೩೭೯

೯೭. ಎ.ಕ.ಸಂ.೯ (ಪರಿ), ಬೇಲೂರು, ಶಾ.ಸಂ.೪೧೦, ಕ್ರಿ.ಶ.೧೧೬೦

೯೮. ಅದೇ, ಸಂ.೧೦ (ಪರಿ), ಅ.ಕೆ.ಶಾ.ಸಂ.೧೧೮, ಹೊನ್ನಕಟ್ಟೆ, ಕ್ರಿ.ಶ.೧೨೧೪

೯೯. ಅದೇ, ಶಾ.ಸಂ.೧೧೭, ಹೊನ್ನಕಟ್ಟೆ, ಕ್ರಿ.ಶ.೧೨೦೯

೧೦೦. ಅದೇ, ಶಾ.ಸಂ.೧೯೬, ವಡಗರಹಳ್ಳಿ, ಕ್ರಿ.ಶ.೧೧೯೬

೧೦೧. ಎ.ಕ.೭ (ಪರಿ), ನಾಗಮಂಗಲ, ಶಾ.ಸಂ.೧೬೮, ಕಲಸಗೆರೆ, ಕ್ರಿ.ಶ.೧೧೯೦

೧೦೨. ಶಿರೂರು ಶಿವರಾಮಶೆಟ್ಟಿ ಬಂಟರ ಮೂಲ - ಒಂದು ಅಧ್ಯಯನ, ಪ್ರೊ. ರಮೇಶ್ ಕೆ.ವಿ., ಹಿಸ್ಟರಿ ಅಫ್ ಸೌತ್ ಕೆನರ

೧೦೩. ಎ.ಕ.೧೨ (ಪರಿ) ನರಸಿಂಹರಾಜಪುರ, ಶಾ.ಸಂ.೬,೭, ಕ್ರಿ.ಶ.ಸು.೭೫೦

೧೦೪. ಎ.ಕ.೧೩ (ಪರಿ), ತೀರ್ಥಹಳ್ಳಿ, ಶಾ.ಸಂ.೧೩೬, ಕ್ರಿ.ಶ.೧೬೭೮

೧೦೫. ಕರ್ನಾಟಕ ರಾಜ್ಯಕೋಶ ೪, ಜನಸಮುದಾಯ ಸಂಪುಟ, ಪ್ರಸಾರಾಂಗ, ಕ.ವಿ.ವಿ

೧೦೬. ಬಂಟ ಜನಾಂಗದ ಸ್ನೇಹಿತರು ತಿಳಿಸಿದ ವಿವರಗಳನ್ನು ಆಧರಿಸಿದೆ.

೧೦೭. ದ್ರವೀಡಿಯನ್ ಎಟಿಮಾಲಜಿಕಲ್ ಡಿಕ್ಷ್ನರಿ ೬೫೫, ಪು.೫೯

೧೦೮. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೫೯, ಕುರುವಂಕ, ಕ್ರಿ.ಶ.೧೧೮೬

೧೦೯. ಎ.ಕ.೧೨ (ಪರಿ), ಕಡೂರು, ಶಾ.ಸಂ.೧೬, ೧೭, ಆಸಂದಿ

೧೧೦. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೫೯, ಕುರುವಂಶ, ಕ್ರಿ.ಶ.೧೧೮೬

೧೧೧. ಅದೇ, ಶಾ.ಸಂ.೮೮, ಕಣಕಟ್ಟೆ, ಕ್ರಿ.ಶ.೧೧೮೯

೧೧೨. ಎ.ಕ.೯ (ಪರಿ), ಬೇಲೂರು, ಶಾ.ಸಂ.೩೩೨, ಕ್ರಿ.ಶ.೧೧೨೦

೧೧೩. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೮೬, ಕಣಕಟ್ಟೆ, ಕ್ರಿ.ಶ.೧೧೫೩-೫೪

೧೧೪. ಅದೇ, ಶಾ.ಸಂ.೫೯, ಕುರುವಂಕ, ಕ್ರಿ.ಶ.೧೧೮೬

೧೧೫. ಅದೇ, ಶಾ.ಸಂ.೫೯, ಎ.ಕ.೯, ಬೇಲೂರು, ಶಾ.ಸಂ.೩೩೨

೧೧೬. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೨೮೨, ನೇರ್ಲಿಗೆ, ಕ್ರಿ.ಶ.ಸು.೧೧೧೦-೧೧೪೨

೧೧೭. ಅದೇ, ಶಾ.ಸಂ.೨೭೯, ಬೂಚೇನಹಳ್ಳಿ, ಕ್ರಿ.ಶ.೧೧೬೦

೧೧೮. ಗಂಗಾಧರ ಮಡಿವಾಳೇಶ್ವರ, ತುರಮುರಿ ಸಟೀಕಿನ ಶಬ್ದಮಂಜರಿ ಕೋಶ

೧೧೯. ಎ.ಕ.೯ (ಪರಿ), ಬೇಲೂರು ೩೩೨, ಕ್ರಿ.ಶ.೧೧೨೦

೧೨೦. ಎ.ಕ.೩ (ಪರಿ), ನಂಜನಗೂಡು, ಶಾ.ಸಂ.೨೨೧

೧೨೧. ಎ.ಕ.೧೦ (ಪರಿ), ಚನ್ನರಾಯಪಟ್ಟಣ, ಶಾ.ಸಂ.೧೧೩

೧೨೨. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೭೯, ಬೂಚೇನಹಳ್ಳಿ, ಕ್ರಿ.ಶ.೧೧೬೦

೧೨೩. ಅದೇ, ಶಾ.ಸಂ.೮೬, ಕಣಕಟ್ಟೆ, ಕ್ರಿ.ಶ.೧೧೫೩, ೫೪

೧೨೪. ಅದೇ, ಚನ್ನರಾಯಪಟ್ಟಣ, ಶಾ.ಸಂ.೭೬, ಬಿದರೆ ಕ್ರಿ.ಶ.೧೧೬೫

೧೨೫. ಅದೇ, ಅ.ಕೆ.ಶಾ.ಸಂ.೨೨೨, ೨೨೩, ೨೨೪, ಗೀಜಿಹಳ್ಳಿ, ೧೨-೧೩ನೇ ಶತಮಾನ

೧೨೬. ಅದೇ, ಶಾ.ಸಂ.೨೨೯, ಬಮ್ಮನಹಳ್ಳಿ, ೧೨ನೇ ಶತಮಾನ

೧೨೭. ದ್ರಾವಿಡಿಯನ್ ಎಟಿಮಾಲಜಿಕಲ್ ಡಿಕ್ಷ್ನರಿ

೧೨೮. ಕಿಟೆಲ್ ಕೋಶ, ಪು.೧೨೯೧

೧೨೯. ವಕ್ತೃ ಭವಾನಿ ಶಂಕರ ಜಟ್ಟಿ, ಕರಿಯಮ್ಮನ ಗರಡಿ, ಅರಸೀಕೆರೆ

೧೩೦. ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು

೧೩೧. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೨೨, ಗೀಚಿಹಳ್ಳಿ, ಕ್ರಿ.ಶ.೧೨೦೦

೧೩೨. ಅದೇ, ಶಾ.ಸಂ.೨೨೪, ಗೀಜಿಹಳ್ಳಿ, ೧೨-೧೩ನೇ ಶತಮಾನ

೧೩೩. ಅದೇ, ಶಾ.ಸಂ.೨೨೩, ಗೀಜಿಹಳ್ಳಿ, ೧೨-೧೩ನೇ ಶತಮಾನ

೧೩೪. ಅದೇ, ಶಾ.ಸಂ.೨೪೫, ಹೊಸಕಲ್ಯಾಡಿ, ಕ್ರಿ.ಶ.೧೨೧೪

೧೩೫. ಕಲಬುರ್ಗಿ ಎಂ.ಎಂ., ವೀರಸಿದ್ಧಾಂತ ಸಾಧನೆ ೬-೧, ಪು.೧೪೮-೧೫೫

೧೩೬. ಎ.ಕ.೧೨ (ಪರಿ) ನರಸಿಂಹರಾಜಪುರ, ಶಾ.ಸಂ.೫, ೬, ೭, ಕ್ರಿ.ಶ.೭-೮ನೇ ಶತಮಾನ

೧೩೭. ಶೆಟ್ಟರ್ ಎಸ್., ತುಳಿಲಾಳ್ಗಳ್ ಸಾಧನೆ ೯೩, ಪು.೩೯-೬೮; ಅ.ರಾ.ಮಿತ್ರ, ತುಳಿಲಾಳ್ಗಳ್ , ಒಂದು ಮಂಥನ ಸಾಧನೆ ೧೦-೧, ಪು.೧೫೫-೬೮; ಹಿರೇಮಠ ಬಿ.ಆರ್ ., ಶಾಸನಗಳಲ್ಲಿ ತುಳಿಲಾಳು ಸಾಧನೆ ೧೦-೧, ಪು.೧೫೮-೬೦; ಬಿ.ಎಸ್.ಹಿರೇಮಠ, ಶಾಸನೋಕ್ತ ತುಳಿಲಸಂದಕುಲದವರು, ಶಾಸನ ಅಧ್ಯಯನ, ಸಂ.೨-೨, ಪು.೮೫-೯೨

೧೩೮. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೪೫, ಹೊಸಕಲ್ಯಾಡಿ

೧೩೯. ಹಿರೇಮಠ ಎಸ್ .ಬಿ., ಪೂರ್ವೋಕ್ತ, ಶಾಸನ ಅಧ್ಯಯನ, ಸಂ.೨.೨, ಪು.೮೫-೯೨

೧೪೦. ಎ.ಕ.೧೦ (ಪರಿ) ಚನ್ನರಾಯಪಟ್ಟಣ, ಶಾ.ಸಂ.೧೨೯, ಕ್ರಿ.ಶ.೧೨೩೯

೧೪೧. ಗುರುವ ಆರ್.ಎನ್., ಆಯುಧ ಜೀವಿಗಳ ಸಂಘಗಳು, ಕರ್ನಾಟಕ ಭಾರತಿ ಸಂ.೧೦.೧

೧೪೨. ಎ.ಕ.೧೦ (ಪರಿ), ಅ.ಕೆ.೩೧೭, ಹಿರಿಯೂರ, ಕ್ರಿ.ಶ.೧೨೫೪

೧೪೩. ಅದೇ, ಶಾ.ಸಂ.೯೭, ಹಲಕೂರು, ಕ್ರಿ.ಶ.೧೨ನೇ ಶತಮಾನ

೧೪೪. ಅದೇ, ಶಾ.ಸಂ.೩೧೧, ಕೋಳಿಗುಂದ, ಕ್ರಿ.ಶ.೧೦೮೩

೧೪೫. ಅದೇ, ಶಾ.ಸಂ.೩೧೨, ಕೋಳಿಗುಂದ, ಕ್ರಿ.ಶ.೧೨೩೪

೧೪೬. ಕಲಬುರ್ಗಿ ಎಂ.ಎಂ., ಸಮಾಧಿ ಬಲಿದಾನ ವೀರಮರಣ, ಪು.೭೨

೧೪೭. ಶ್ರೀಕಂಠಯ್ಯ ಶ್ರೀ.ನಂ. (ಸಂ), ಸಾಹಸ ಭೀಮವಿಜಯ, ೩.೮

೧೪೮. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೬೫, ಕಲ್ಲುಂಡಿ, ೯ನೇ ಶತಮಾನ

೧೪೯. ಸ್ವಂತ ಅನುಬಂಧ, ನೀರ್ಗುಂದ ಶಾಸನ, ಸಂ.೧

೧೫೦. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೧೦೦, ಹಲುಕೂರು, ಕ್ರಿ.ಶ.೧೨೮೦

೧೫೧. ಅದೇ, ಶಾ.ಸಂ.೩೨೧, ಕಾಟಿಕೆರೆ, ಕ್ರಿ.ಶ.೧೧೦೦-೦೧

೧೫೨. ಅದೇ, ಶಾ.ಸಂ.೩೧೬, ಅರಕೆರೆ, ಕ್ರಿ.ಶ.೯ನೇ ಶತಮಾನ

೧೫೩. ಹನುಮನಾಯಕ್, ಚಲುವನಹಳ್ಳಿಯ ಎರಡು ಅಪ್ರಕಟಿತ ಶಾಸನಗಳು, ಇ.ದ.ಸಂ.೮

೧೫೪. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೯೫, ಕಣಕಟ್ಟೆ, ಕ್ರಿ.ಶ.೧೧೪೫

೧೫೫. ಎ.ಕ.೮ (ಪರಿ), ಹಾಸನ ಶಾ.ಸಂ.೧೦೫, ಕಿತ್ತನಕೆರೆ, ಕ್ರಿ.ಶ.೧೧೯೬

೧೫೬. ಎ.ಕ.೧೦ (ಪರಿ), ಅ.ಕೆ.ಸಂ.೨೨೦, ಮುದುಡಿ, ಕ್ರಿ.ಶ.೧೩ನೇ ಶತಮಾನ

೧೫೭. ಅನಂತರಂಗಾಚಾರ್ ಎನ್ . (ಸಂ), ಜನ್ನ, ಅನಂತನಾಥ ಪುರಾಣ ೧೧-೪೫

೧೫೮. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೧೦೧, ಹಲಕೂರು ಕ್ರಿ.ಶ.೧೨೯೪

೧೫೯. ಅದೇ, ಶಾ.ಸಂ.೧೭೩, ಚಲ್ಲಾಪುರ ಕ್ರಿ.ಶ.೧೩-೧೪ನೇ ಶತಮಾನ

೧೬೦. ಅದೇ, ಚನ್ನರಾಯಪಟ್ಟಣ ಶಾ.ಸಂ.೨೪, ಕ್ರಿ.ಶ.೧೪ನೇ ಶತಮಾನ

೧೬೧. ಅದೇ, ಅ.ಕೆ.ಶಾ.ಸಂ.೧೧, ಅರಸೀಕೆರೆ ಕ್ರಿ.ಶ.೧೨ನೇ ಶತಮಾನ

೧೬೨. ಮೋತಿಚಂದ್ರ ಸಾರ್ಥವಾಹಿ, (ಅನು) ಪಾಟೀಲ ಎಚ್.ಎಸ್.

೧೬೩. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೩೪, ಅರಸೀಕೆರೆ, ಕ್ರಿ.ಶ.೧೩೪೮

೧೬೪. ಶಿವಕೋಟ್ಯಾಚಾರ್ಯ, ವಡ್ಡಾರಾಧನೆ, ಭದ್ರಬಾಹು ಭಟ್ಟಾರಕ ಕಥೆ, ಪು.೧೨೭

೧೬೫. ಎ.ಕ.XVIII, ಪು.೧೭೧-೭೨, ಹೂಲಿ, ಕ್ರಿ.ಶ.೯೮೫

೧೬೬. ಚಿದಾನಂದಮೂರ್ತಿ ಎಂ., ಮಾಸ್ತಿಕಲ್ಲು ಮತ್ತು ವೀರಕಲ್ಲುಗಳು, (ಹೊಸಪೇಟೆ, ಸಿದ್ದನಹಳ್ಳಿ, ಗೋಂಧಲಿ ವೀರಗಲ್ಲು ಶಿಲ್ಪಗಳ ಚಿತ್ರ.

೧೬೭. ಮೀರಾಸಾಬೀಹಳ್ಳಿ ಶಿವಣ್ಣ, ಕಾಡುಗೊಲ್ಲರ ಸಂಸ್ಕೃತಿ, ಪು.೨೨

೧೬೮. ಒಕ್ಕಲಿಗ ಮುದ್ದಣನ ವಚನ, ಸಂಕೀರ್ಣವಚನ ಸಂಪುಟ.೧

೧೬೯. ಘುರ್ ಪುರ್ ಆರ್.ಎಸ್., ಮಿತಾಕ್ಷರ, ಸಂ.III(೪), ಪು.೧೨೮೧

೧೭೦. ಮೀತಾಕ್ಷರ ಸಂ.II ೧೬೬, ಪು.೧೧೧; ಅಭಿಲಷಿತಾರ್ಥಚಿಂತಾಮಣಿ, ಭಾಗ I ಪ್ರಕರಣ ೧-೩

೧೭೧. ಮೀರಾಸಾಬಿಹಳ್ಳಿ ಶಿವಣ್ಣ ಕಾಡುಗೊಲ್ಲರ ಸಂಸ್ಕೃತಿ

೧೭೨. ಶೇಷಶಾಸ್ತ್ರೀ ಆರ್., ಕರ್ನಾಟಕದ ವೀರಗಲ್ಲುಗಳು, ಪು.೧೩೯

೧೭೩. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೧೭೧, ಚಲ್ಲಾಪುರ, ೯ನೇ ಶತಮಾನ

೧೭೪. ಅದೇ, ಶಾ.ಸಂ.೬೫, ಕಲ್ಗುಂಡಿ ೯ನೇ ಶತಮಾನ

೧೭೫. ಸ್ವಂತ ಅನುಬಂಧ, ನೀರ್ಗುಂದ, ಸಂ.೧, ಕ್ರಿ.ಶ.೧೨೧೨

೧೭೬. ಎ.ಕ.೧೦ (ಪರಿ), ಶಾ.ಸಂ.೨೬೭, ಹಂದರಾಳು ಕ್ರಿ.ಶ.೧೨೬೧

೧೭೭. ಅದೇ ಶಾ.ಸಂ.೭೭, ಕಣೆಕಟ್ಟೆ ಕ್ರಿ.ಶ.೧೩ನೇ ಶತಮಾನ

೧೭೮. ಅದೇ, ಶಾ.ಸಂ.೭೯, ಕಣಿಕಟ್ಟೆ ೧೩ನೇ ಶತಮಾನ

೧೭೯. ಅದೇ, ಶಾ.ಸಂ.೮೦, ಕಣಕಟ್ಟೆ ಕ್ರಿ.ಶ.೧೩ನೇ ಶತಮಾನ

೧೮೦. ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಪು.೬೧

೧೮೧. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೫೦, ಉಂಡಿಗನಾಳು, ಕ್ರಿ.ಶ.೧೩ನೇ ಶತಮಾನ

೧೮೨. ಅದೇ, ಶಾ.ಸಂ.೪೮, ಬೆಂಡೆಕೆರೆ ಕ್ರಿ.ಶ.೧೧೯೨

೧೮೩. ಸ್ವಂತ ಅನುಬಂಧ, ಸಂಖ್ಯೆ ೮, ಉಂಡಿಗನಾಳು, ೧೨ನೇ ಶತಮಾನ

೧೮೪. ಮಿತಾಕ್ಷರ ಸಂಪುಟ III(೪), ಪು.೧೧೬೦-೧೧೬೪

೧೮೫. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೨೨೧, ಮದುಡಿ, ೮೯ ಕಣಕಟ್ಟೆ

೧೮೬. ಎ.ಕ.೮ (ಪರಿ), ಹಾಸನ ಶಾ.ಸಂ.೬೫, ಹೊನ್ನಾವರ, ಕ್ರಿ.ಶ.೧೧೭೪

೧೮೭. ಸ್ವಂತ ಅನುಬಂಧ ಸಂಖ್ಯೆ ೨, ನೀರ್ಗುಂದ, ಕ್ರಿ.ಶ.೧೧೯೪

೧೮೮. ಸ್ವಂತ ಅನುಬಂಧ ಸಂಖ್ಯೆ ೯, ಭಾಗೇಶಪುರ, ಕ್ರಿ.ಶ.೧೨೦೭

೧೮೯. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೧೩, ಬಾಗಡೆ ಕ್ರಿ.ಶ.೧೨೩೯

೧೯೦. ಅದೇ, ಶಾ.ಸಂ.೨೨೧, ಮುದುಡಿ ೧೨-೧೩ನೇ ಶತಮಾನ

೧೯೧. ಅದೇ, ಶಾ.ಸಂ.೨೫೩, ದೇಶಾಣಿ ಕ್ರಿ.ಶ.೧೧೩೯

೧೯೨. ಅದೇ, ಶಾ.ಸಂ.೧೧೫, ಮಾಡಾಳು ಕ್ರಿ.ಶ.೧೩೩೫

೧೯೩. ಅದೇ, ಶಾ.ಸಂ.೨೮೮, ಮೊಸಳೆ ಕ್ರಿ.ಶ.೧೨೬೮

೧೯೪. ಅದೇ, ಚನ್ನರಾಯಪಟ್ಟಣ, ಶಾ.ಸಂ.೭೨, ಕೆಂಬಾಳು ೧೨ನೇ ಶತಮಾನ

೧೯೫. ಕನ್ನಡ-ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು

೧೯೬. ಸೌ.ಇ.ಇ. x ೪೫-೩೬, ಕ್ರಿ.ಶ.೯೩೦

೧೯೭. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೧೩, ಕ್ರಿ.ಶ.೧೨೩೯

೧೯೮. ಸ್ವಂತ ಅನುಬಂಧ ಸಂಖ್ಯೆ ೯, ಭಾಗೇಶಪುರ, ಕ್ರಿ.ಶ.೧೨೦೭

೧೯೯. ಸ್ವಂತ ಅನುಬಂಧ ಸಂಖ್ಯೆ ೧, ನೀರ್ಗುಂದ, ಕ್ರಿ.ಶ.೧೨೧೨

೨೦೦. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೩೧೭, ಹಿರಿಯೂರು ಕ್ರಿ.ಶ.೧೨೫೪

೨೦೧. ಅದೇ

೨೦೨. ಅದೇ, ಶಾ.ಸಂ.೧೧೫, ಮಾಡಾಳು ಕ್ರಿ.ಶ.೧೩೩೫

೨೦೩. ಅದೇ, ಚನ್ನರಾಯಪಟ್ಟಣ, ಶಾ.ಸಂ.೯೪, ಅಗ್ರಹಾರ ಬೆಳಗಲಿ, ಕ್ರಿ.ಶ.೧೨೦೯

೨೦೪. ಅದೇ, ಅ.ಕೆ.ಶಾ.ಸಂ.೧೮೭, ಹುಲ್ಲೇಕೆರೆ ಕ್ರಿ.ಶ.೧೭ನೇ ಶತಮಾನ

೨೦೫. ಅದೇ, ಶಾ.ಸಂ.೬೨, ಕಲ್ಲುಗುಂಡಿ ಕ್ರಿ.ಶ.೧೩೩೧

೨೦೬. ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಪು.೨೧೭

೨೦೭. ಚಿದಾನಂದಮೂರ್ತಿ ಎಂ., ಕ.ಶಾ.ಸಾಂ.ಅ.ಪು. ೨೯೨-೨೯೩; ಕೆ.ವಿ.ರಮೇಶ್, ಪ್ರ.ಕ.ಸಂ.೫೧-೩, ಪು.೨೭; ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಪು.೨೧೭

೨೦೮. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೮೪, ನೇರ್ಲಿಗೆ ಕ್ರಿ.ಶ.೯೭೧-೭೨

೨೦೯. ಅದೇ, ಶಾ.ಸಂ.೩೧೬, ಅರಕೆರೆ ಕ್ರಿ.ಶ.೯ನೇ ಶತಮಾನ

೨೧೦. ಅದೇ, ಶಾ.ಸಂ.೩೧೭, ಹಿರಿಯೂರು ಕ್ರಿ.ಶ.೧೨೫೪

೨೧೧. ಅದೇ, ಶಾ.ಸಂ.೧೮೬, ಬಾಗಾವಾಳು ಕ್ರಿ.ಶ.೧೩೩೯

೨೧೨. ಅದೇ, ಶಾ.ಸಂ.೨೨೭, ಮುರುಂಡಿ ಕ್ರಿ.ಶ.೧೧೭೪

೨೧೩. ಅದೇ. ಶಾ.ಸಂ.೧೯೬, ೨೨೪, ೧೯೧, ೩೨೪, ೨೨೨, ೭೨, ೧೯೫

೨೧೪. ಅದೇ, ಶಾ.ಸ.೯೫, ಕಣಕಟ್ಟೆ, ಕ್ರಿ.ಶ.೧೧೪೩

೨೧೫. ಅದೇ, ಶಾ.ಸ.೬೨, ಕಲ್ಗುಂಡಿ ಕ್ರಿ.ಶ.೧೩೩೧

೨೧೬. ಎ.ಕ.೧೨ (ಪರಿ), ಕಡೂರು ಶಾ.ಸಂ.೧೬, ಆಸಂದಿ ಕ್ರಿ.ಶ.೧೨ನೇ ಶತಮಾನ

೨೧೭. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೩೧, ಅರಸೀಕೆರೆ ಕ್ರಿ.ಶ.೧೨೧೯

೨೧೮. ಅದೇ, ಶಾ.ಸಂ.೨೮೯, ಮೊಸಳೆ ಕ್ರಿ.ಶ.೧೨೮೭

೨೧೯. ಅದೇ, ಶಾ.ಸಂ.೨೪೧, ಕರುಗುಂದ ಕ್ರಿ.ಶ.೧೧೫೮

೨೨೦. ಅದೇ, ಚನ್ನರಾಯಪಟ್ಟಣ, ಶಾ.ಸಂ.೬೩, ನವಿಲೆ ಕ್ರಿ.ಶ.೧೨೧೮

೨೨೧. ಅದೇ, ಅ.ಕೆ.ಶಾ.ಸಂ.೨೩, ಅರಸೀಕೆರೆ, ಕ್ರಿ.ಶ.೧೧೭೩

೨೨೨. ಅದೇ, ಶಾ.ಸಂ.೨೩೨, ಹಾರನಹಳ್ಳಿ ಕ್ರಿ.ಶ.೧೨೩೬

೨೨೩. ಅದೇ, ಶಾ.ಸಂ.೩೧೭, ೩೧, ೩೩, ೮೯, ೫೫, ೩೧೪, ೧೨-೧೩ನೇ ಶತಮಾನ

೨೨೪. ಅದೇ, ಶಾ.ಸಂ.೩೧೨, ೨೩೨, ೨೨೭, ೨೦೬, ೧೯೮, ೧೮೪, ೧೪೯, ೬೭

೨೨೫. ಅದೇ, ಶಾ.ಸಂ.೨೯೨, ೮೮, ೨೨೭, ಮುರುಂಡಿ ಸ್ವಂತ ಅನುಬಂಧ ಸಂಖ್ಯೆ ೧೧

ಅಧ್ಯಾಯ ೬

# ಧಾರ್ಮಿಕ ಸ್ಥಿತಿ ಸಂಚಲನ

೬

# ಧಾರ್ಮಿಕ ಸ್ಥಿತಿ ಸಂಚಲನ

## ೬.೧. ಧರ್ಮ ದೇವಾಲಯಸಂಸ್ಕೃತಿ ಮತ್ತು ಸಾಮಾಜಿಕ ವ್ಯವಸ್ಥೆ

ಕರ್ನಾಟಕದ ಸಾಂಸ್ಕೃತಿಕ ಪರಂಪರೆಯ ಒಂದು ಭಾಗವಾಗಿ ಕರ್ನಾಟಕದ ರಾಜಕೀಯ'ದಲ್ಲಾದ ಎಲ್ಲಾ ಸ್ಥಿತ್ಯಂತರಗಳೂ ಧಾರ್ಮಿಕ ಸ್ಥಿತ್ಯಂತರಕ್ಕೆ ಕಾರಣವಾಗಿರುವುದನ್ನು ಇಲ್ಲಿನ ಶಾಸನಗಳು ತಿಳಿಸಿಕೊಡುತ್ತವೆ. ವಿವಿಧ ಕಾಲ ಘಟ್ಟಗಳಲ್ಲಿ ಬೇರೆ ಬೇರೆ ಅರಸುವಂಶಗಳ ಆಳ್ವಿಕೆಗೆ ಒಳಗಾದ ಈ ಪ್ರದೇಶದಲ್ಲಿ ವಿವಿಧ ಮತ ಸಮುದಾಯಗಳ ಹಾಗೂ ಪಂಥಪಂಗಡಗಳ ನಡುವೆ ಪರಸ್ಪರ ಸಾಂಸ್ಕೃತಿಕ ಪ್ರಭಾವ ಪ್ರಸಾರ ಸಂಘರ್ಷ ಸಮನ್ವಯ ಜರುಗಿದೆ. ವಿವಿಧ ಧರ್ಮಜಾತಿ ಆಚಾರವಿಚಾರಗಳು ಜೀವನ ಮೌಲ್ಯಗಳು ಸಂಪ್ರದಾಯಗಳು ಏಕಕಾಲಕ್ಕೆ ಅಸ್ತಿತ್ವದಲ್ಲಿರುವುದನ್ನು ಕಾಣುತ್ತೇವೆ. ಇಲ್ಲಿನ ಶಾಸನಗಳನ್ನು ಗಮನಿಸಿದಾಗ ಪ್ರತಿಯೊಂದು ಧರ್ಮವು ತನ್ನ ಬಲವನ್ನು ಹೆಚ್ಚಿಸಿಕೊಳ್ಳಲು ಧಾರ್ಮಿಕ ಸಂಸ್ಥೆಗಳಾದ ದೇವಾಲಯ ಬಸದಿ ಮಠಮಾನ್ಯಗಳನ್ನು ಹೆಚ್ಚಿಸಿಕೊಂಡು ದಾನದತ್ತಿಗಳನ್ನು ಪಡೆಯಲು ಪೈಪೋಟಿ ನಡೆಸಿದಂತೆ ಕಂಡುಬರುತ್ತದೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಷ್ಟೇ ಅಲ್ಲ ಇಡೀ ಮಧ್ಯಕಾಲೀನ ಕರ್ನಾಟಕದ ಸಮಾಜದಲ್ಲೇ ದೇವಾಲಯ ನಿರ್ಮಾಣಕ್ಕಾಗಿ ಎಲ್ಲ ಧರ್ಮಗಳೂ ಪ್ರಬಲ ಜಾತಿ ವರ್ಗ ಜನಾಂಗಗಳು ವಿಶೇಷವಾಗಿ ಹಾತೊರೆದಂತೆ ಕಂಡುಬರುತ್ತದೆ. ಈ ನೂಕುನುಗ್ಗಲು ಯಾಕೆ? ಧಾರ್ಮಿಕ ಸಂಸ್ಥೆಗಳನ್ನು ಬಲಗೊಳಿಸಿಕೊಳ್ಳಲು ರಾಜಾಶ್ರಯಕ್ಕಾಗಿ, ಸಿರಿವಂತರ ಪ್ರೋತ್ಸಾಹಕ್ಕಾಗಿ ಹಂಬಲಿಸುವುದು, ಅದಕ್ಕಾಗಿ ಮೇಲಾಟ ನಡೆಸುವುದು ಯಾಕೆ? ಬಸವಣ್ಣನಂತಹ ಸಮಾಜ ಸುಧಾರಕ 'ದೇಹವೇ ದೇವಾಲಯವೆಂಬ' ಬದಲಿ ಪರಿಕಲ್ಪನೆಯನ್ನು ನೀಡಲು ಕಾರಣವೇನು? ತೀವ್ರವಾಗಿ ಅರಸೊತ್ತಿಗೆಯನ್ನು ವಿರೋಧಿಸಿದಂತೆ ದೇವಾಲಯ ವ್ಯವಸ್ಥೆಯನ್ನು ವಿರೋಧಿಸಿದ್ದೇಕೆ? ಈ ವಿರೋಧಗಳನ್ನೆಲ್ಲಾ ಜೀರ್ಣಿಸಿಕೊಂಡು ಈ 'ದೇವಾಲಯಸಂಸ್ಕೃತಿ' ಇಂದಿಗೂ ಉಳಿದು ಬಂದಿರಲು ಕಾರಣವೇನು ಎಂಬ ಪ್ರಶ್ನೆಗಳನ್ನು ಕೇಳಿಕೊಂಡು ಅವುಗಳಿಗೆ ಉತ್ತರ ಹುಡುಕಲು ಪ್ರಾಮಾಣಿಕ ಪ್ರಯತ್ನ ಮಾಡದ ಹೊರತು ಸಂಕೀರ್ಣ ಸಂರಚನೆಯನ್ನು ಹೊಂದಿರುವ ಧರ್ಮ ಮತ್ತು 'ದೇವಾಲಯಸಂಸ್ಕೃತಿ'ಯನ್ನು ಅರ್ಥೈಸಲು ಸಾಧ್ಯವಾಗುವುದಿಲ್ಲ. ಕೇವಲ ಪುಣ್ಯ ಸಂಚಯ ಧಾರ್ಮಿಕ ಆಧ್ಯಾತ್ಮಿಕ ಶ್ರದ್ಧೆಯಷ್ಟೇ ದೇವಾಲಯ ನಿರ್ಮಾಣಕ್ಕೆ ಸ್ಫೂರ್ತಿ ಎಂದು ಹೇಳಲಾಗದು. ಈ ಸಂಸ್ಥೆಗಳು

ಧಾರ್ಮಿಕ ಸ್ಥಾನಗಳಾಗಷ್ಟೇ ಕಾರ್ಯನಿರ್ವಹಿಸಿಲ್ಲ ಅದರಾಚೆಗೆ ಅವುಗಳ ಶಕ್ತಿ ವ್ಯಾಪಿಸಿತ್ತು. ಅತ್ಯಂತ ಸಂಕೀರ್ಣವಾಗಿ ಹೆಣದುಕೊಂಡ ಅದರ ಕಾರ್ಯ ವೈಖರಿಯಲ್ಲಿ ಆರ್ಥಿಕ ರಾಜಕೀಯ ಸಾಂಸ್ಕೃತಿಕ ಆಯಾಮ ಅಂತರ್ಗತವಾಗಿತ್ತು. ಅವುಗಳ ಹೆಣಿಗೆಯ ಸೂಕ್ಷ್ಮತೆಗಳನ್ನು ಕಂಡುಕೊಳ್ಳಬೇಕು.

ಮೂಲಭೂತ ಸಾಮುದಾಯಿಕ ಸಂಘ ಜೀವನದಿಂದ ತೊಡಗಿ ನಂತರದಲ್ಲಿ ಹುಟ್ಟಿಕೊಂಡ ಅನೇಕ ಸಾಮಾಜಿಕ ವ್ಯವಸ್ಥೆಗಳಲ್ಲಿನ ತತ್ವಗಳು, ಮತ ಧರ್ಮಗಳು ಸಂಘ ಸಂಸ್ಥೆಗಳು ನಿಯಂತ್ರಣ ಶಕ್ತಿಗಳು ಇತ್ಯಾದಿಗಳು ಈ ಪ್ರದೇಶದ ಸಂಸ್ಕೃತಿಯನ್ನು ರೂಪಿಸಿವೆ. ಯಾವುದೇ ತತ್ವವು ಆಯಾ ಸಮಾಜವ್ಯವಸ್ಥೆಯ ಬಿಂಬವೆಂದು ಹೇಳಲಾಗಿದೆ.[೧]

ಮಾನವನ ಮೊದಲ ಹಂತದಲ್ಲಿ ಧರ್ಮವೆಂಬುದು ಈಗಿನ ಅರ್ಥದಲ್ಲಿ ಇರಲಿಲ್ಲ. ಅವರು ಆಹಾರ ಸಂಗ್ರಹಣೆ ಮಾಡುತ್ತಿದ್ದ, ಅಲೆಮಾರಿಗಳಾಗಿದ್ದ ಹಂತದಲ್ಲಿ ಸಂಘಜೀವನ ಅನಿವಾರ್ಯವಾಗಿದ್ದರಿಂದ ಆ ಸಮಾಜದ ಧರ್ಮ ಹಾಗೂ ತತ್ವಗಳು ಕೂಡ ಸಾಮುದಾಯಿಕ ಒಲವುಗಳನ್ನು ಒಂದು ಸಮಬಾಳಿನ ನಿಲುವುಗಳನ್ನು ಬಿಂಬಿಸುವ ಸಹಜ ಬದುಕಿನ ರೀತಿಯಾಗಿತ್ತು. ಆಹಾರ ಹೆಕ್ಕುವ ಅಥವಾ ಕೃಷಿ ವ್ಯವಸ್ಥೆಯ ಪ್ರಥಮ ಹಂತದಲ್ಲಿರುವ ಎಲ್ಲ ಸಮಾಜಗಳಲ್ಲಿ ಸ್ತ್ರೀಯರು ಉತ್ಪಾದನೆಯ ಕೆಲಸದಲ್ಲಿ ಬಹಳ ಮುಖ್ಯ ಪಾತ್ರ ವಹಿಸುತ್ತಿದ್ದುದರಿಂದ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಮತ್ತು ಮಾತೃ ಪ್ರಧಾನ ಆಚರಣೆಗಳು ಹುಟ್ಟಿಕೊಂಡವು. ಹೆಣ್ಣಿನ ಫಲವಂತಿಕೆಯನ್ನು ಭೂಮಿಯ ಫಲವಂತಿಕೆಯೊಡನೆ ಸಮೀಕರಿಸುವ ಆಚರಣೆಗಳು ಎಲ್ಲ ಜನಾಂಗದ ಹಾಗೂ ಸಂಸ್ಕೃತಿಯ ಒಂದು ಹಂತದಲ್ಲಿ ಇದ್ದೇ ಇದ್ದವು. ಮುಂದೆ ಈ ಫಲವಂತಿಕೆಯ ಸ್ತ್ರೀತತ್ವವು ಆದಿಶಕ್ತಿಯಾಗಿ, ಜಗನ್ಮಾತೆಯಾಗಿ ಆರಾಧನೆಗೊಳ್ಳತೊಡಗಿತು.[೨]

ಅಲೆಮಾರಿ ಪಶುಸಂಗೋಪನಾಹಂತದ ಸಮಾಜದಲ್ಲಿ ಅಥವಾ ಮುಂದುವರೆದ ಕೃಷಿ ಪ್ರಧಾನ ಸಮಾಜದಲ್ಲಿ ಪುರುಷ ಪ್ರಧಾನ ಮೌಲ್ಯ ಹಾಗೂ ತತ್ವಗಳು ಹುಟ್ಟಿಕೊಳ್ಳಲು ಅವಕಾಶವಾಯಿತು. ಉತ್ಪಾದನಾ ಶಕ್ತಿಗಳು ಹೆಚ್ಚುತ್ತ ಬಂದಂತೆ ಖಾಸಗೀ ಆಸ್ತಿ ಮತ್ತು ವರ್ಗ ವ್ಯವಸ್ಥೆಗೆ ಅವಕಾಶವಾದಂತೆ ಬುದ್ಧಿ ಜೀವಿಗಳು ಶ್ರಮಿಕರನ್ನು ದುಡಿಸಿಕೊಳ್ಳತೊಡಗಿದರು ಮತ್ತು ಶ್ರಮಿಕರಲ್ಲದವರು ಮನುಷ್ಯನ ಆತ್ಮವನ್ನು ಪ್ರಜ್ಞೆಯನ್ನು ಬ್ರಹ್ಮವೆಂದು ನೋಡುವ ಆದರ್ಶವಾದವನ್ನು ಹುಟ್ಟುಹಾಕಿದರು.[೩] ಇದು ಅತೀಂದ್ರಿಯ ದೈವೀಶಕ್ತಿಯ ಆರಾಧನೆಗೆ ಎಡೆಗೊಟ್ಟಿತು. ಆಗ 'ಧರ್ಮ' 'ದೇವಾಲಯಸಂಸ್ಕೃತಿ' ಹುಟ್ಟಿಕೊಂಡಿತು.

### ೬.೧.೧. ಭಾರತೀಯ ದರ್ಶನಗಳು-ಜೀವನದೃಷ್ಟಿ ಮತ್ತು ಧರ್ಮ

ವಿವಿಧ ಧರ್ಮ ಮತ ಪಂಥ ಆಚರಣೆ ಜೀವನ ದೃಷ್ಟಿಕೋನಗಳನ್ನು ಪ್ರಭಾವಿಸಿರುವ ಇಲ್ಲಿನ ದಾರ್ಶನಿಕ ತತ್ವಗಳು ಆಯಾ ಕಾಲದ ಸಾಮಾಜಿಕ ಒತ್ತಡ, ಒತ್ತಾಸೆಯನ್ನು ಬಿಂಬಿಸುತ್ತವಾದ್ದರಿಂದ

ಭಾರತೀಯ ಸಮಾಜವನ್ನು ಅರ್ಥ ಮಾಡಿಕೊಳ್ಳಲು ಇವುಗಳತ್ತ ಸೂಕ್ಷ್ಮ ಒಳನೋಟಗಳನ್ನು ವಿದ್ವಾಂಸರು ಹರಿಸಿದ್ದಾರೆ.[೪] ಭಾರತೀಯ ದಾರ್ಶನಿಕ ವಿವಿಧ ತತ್ವಗಳನ್ನು ಪ್ರಧಾನವಾಗಿ ಎರಡು ಗುಂಪು ಮಾಡಿ ಅರ್ಥಮಾಡಕೊಳ್ಳಲಾಗಿದೆ. ಒಂದು ಭೌತವಾದ ಮತ್ತೊಂದು ಭಾವನಾವಾದ ಅಥವಾ ಆದರ್ಶವಾದ.

**ಭೌತವಾದ ಮತ್ತು ಭಾವನಾವಾದ-ಸಾಮಾಜಿಕ ಪ್ರಕ್ರಿಯೆ :** ಭೌತವಾದವು ಇಂದ್ರಿಯ ಗಮ್ಯವಾದ ಜಗತ್ತನ್ನು ಅದರೊಂದಿಗಿನ ಮಾನವನ ಸಂಬಂಧವನ್ನು ಅನುಭವ ಸತ್ಯವೆಂದು ನಂಬುತ್ತದೆ. ಇಂದ್ರಿಯ ಗಮ್ಯವಲ್ಲದ ಅಲೌಕಿಕತೆಯ ಹಂಗು ಅದಕ್ಕಿಲ್ಲ. 'ಮನುಕುಲ ಆದಿಮ ಸಂಸ್ಕೃತಿ ಹಾಗೂ ಇಂದಿಗೂ ಉಳಿದು ಬಂದಿರುವ ಕೆಲವು ಜಾನಪದ ದೋರಣೆಗಳು ಈ ಭೌತವಾದವನ್ನೇ ಎತ್ತಿ ಹಿಡಿಯುತ್ತವೆ.''[೫]

ಭಾವನಾವಾದ (ಆದರ್ಶವಾದ)ವು ಇಂದ್ರಿಯಗಮ್ಯ ಜಗತ್ತಿನ ಮೂಲಭೂತ ಅಸ್ತಿತ್ವವನ್ನೇ ನಿರಾಕರಿಸುತ್ತದೆ ಪ್ರಕೃತಿಯನ್ನು ಶುದ್ಧ ಭ್ರಮೆ ಅಥವಾ ಒಂದು ರೀತಿಯ ತಾತ್ಕಾಲಿಕ ವಾಸ್ತವಿಕತೆ ಎಂದೂ ಪರಿಶುದ್ಧ ಪ್ರಜ್ಞೆ 'ಚೇತನ' ಆತ್ಮ ಎಂಬುದು ವಾಸ್ತವಿಕ ಎಂದೂ ಹೇಳುತ್ತದೆ. ಎಲ್ಲವನ್ನೂ ನಿಯಂತ್ರಿಸುವ ಒಂದು ಅಲೌಕಿಕ ಶಕ್ತಿಯಿದೆ ಎಂದೂ ಅದನ್ನೇ ದೈವವೆಂದೂ ಕರೆಯುತ್ತದೆ. ವೈದಿಕ ಧರ್ಮದ ಮೂಲ ತತ್ವ ಇದೇ ಆಗಿದೆ. ಕರ್ಮ, ವಿಧಿ, ಬಂಧನ, ಮೋಕ್ಷ ಇತ್ಯಾದಿ ಕಲ್ಪನೆಗಳು ಮನುಷ್ಯನ ಸಾಧ್ಯತೆಗಳನ್ನು ಸೀಮಿತಗೊಳಿಸಿ ಆತ್ಮೋದ್ಧಾರ ಮುಕ್ತಿಗೆ ಪ್ರಾಶಸ್ಯ ನೀಡಿ ಸಮಾಜ ವಿಮುಖತೆಯನ್ನು ಬೆಳೆಯುವಂತೆ ಮಾಡಿವೆ. ಅದ್ವೈತ, ವಿಶಿಷ್ಟಾದ್ವೈತ, ದ್ವೈತ ತತ್ವಗಳು ದೈವ ಪಾರಮ್ಯವನ್ನು, ಜೀವಿಯ ಬದುಕಿನ ಗಮ್ಯವು ಆ ಪರಮ ಸತ್ಯದೊಂದಿಗಿನ ಮಿಲನವೆಂಬುದನ್ನೇ ಪ್ರತಿಪಾದಿಸಿದವು. ಇದು 'ದೇವಾಲಯ ಸಂಸ್ಕೃತಿಗೆ' ಮಹಾಪೂರವನ್ನೇ ತಂದುಕೊಟ್ಟಿತು.

ಭೌತವಾದಕ್ಕಿಂತ ಭಾವನಾವಾದ ಮೇಲುಗೈ ಸಾಧಿಸಿತು. ಇದಕ್ಕೆ ಕಾರಣ ಕೇವಲ ಸೈದ್ಧಾಂತಿಕವಾದುದಲ್ಲ. ಅದರ ಬೆನ್ನಲ್ಲಿ ಸಮಾಜೋರಾಜಕೀಯ ಕಾರಣ ಮುಖ್ಯವಾಗಿದೆ. ಜನಪರವಾದ ಪ್ರಗತಿಗಾಮಿ ಭೌತವಾದದ ಚಿಂತನೆಗಳು ಆಳುವ ವರ್ಗದ ಯಜಮಾನ ಸಂಸ್ಕೃತಿಗೆ ವಿರೋಧಿಯಾಗಿದ್ದವು. ಜನಸಾಮಾನ್ಯರ ಮೇಲೆ ಹಿಡಿತವನ್ನು ಸಾಧಿಸಲು ಯಜಮಾನ ಸಂಸ್ಕೃತಿಯು ಭಾವನಾವಾದದ ಸಂಪೂರ್ಣ ಬೆಂಬಲವನ್ನು ಪಡೆಯಿತು. ಮತ್ತು ಆ ಸಿದ್ಧಾಂತಗಳನ್ನು ಪ್ರಚುರಪಡಿಸಲು ಧಾರ್ಮಿಕ ಸಂಸ್ಥೆಗಳಿಗೆ ಸಂರಕ್ಷಣೆ ನೀಡಿ ಪೋಷಿಸಿತು. ಇದು ಒಂದರ್ಥದ ಕೊಡುಕೊಳ್ಳುವಿಕೆಯ ಪರಸ್ಪರ ಒಡಂಬಡಿಕೆ ಎನ್ನಬಹುದು.

### ೬.೧.೨. ಅಧಿಕಾರ ಮತ್ತು ಅರ್ಥಮುಖಿಯಾದ ಧರ್ಮ

ಕೃಷಿ ಸಮಾಜದ ಬೆಳವಣಿಗೆಯೊಂದಿಗೆ ಸಂಪತ್ತಿನ ಅಭಿವೃದ್ಧಿಯಾಗತೊಡಗಿತು. ಸಿರಿವಂತರ ಆಳರಸರ ಭೂದಾನ ದತ್ತಿಗಳಿಂದ ಬ್ರಾಹ್ಮಣ ಸಮಾಜ ಹಾಗೂ ದೇವಾಲಯಗಳು ಸಂಪದ್ಭರಿತವಾದ

ಭೂ ಒಡೆಯರಾಗಿ ಸಮಾಜದಲ್ಲಿ ವಿಶಿಷ್ಟ ಸ್ಥಾನಮಾನ ಪಡೆದು ಶಕ್ತಿ ಕೇಂದ್ರವಾಗಿ ಬೆಳೆದವು. ನಿರೀಶ್ವರ ವಾದಿ ಧರ್ಮಗಳಾದಂತಹ ಬೌದ್ಧ ಮತ್ತು ಜೈನಧರ್ಮಗಳೂ ಕೂಡಾ ಈ ಅರ್ಥ ಮತ್ತು ಅಧಿಕಾರದ ಸೆಳೆತದಿಂದ ಬಿಡಿಸಿಕೊಳ್ಳಲಾಗದೆ ಜಿನಾಲಯ, ಬೌದ್ಧಾಲಯಗಳನ್ನು ನಿರ್ಮಿಸಿಕೊಂಡು ದೈವಾರಾಧನೆಯ ನಾನಾ ಆಚರಣೆಗಳನ್ನು ರೂಢಿಸಿಕೊಂಡು 'ದೇವಾಲಯ ಸಂಸ್ಕೃತಿಗೆ' ಒಳಗಾದವು. ಈ ದೇವಾಲಯಗಳು ಅದರಲ್ಲೂ ಮುಖ್ಯವಾಗಿ ಆಗಮಿಕ ಶೈವ ವೈಷ್ಣವ ದೇವಾಲಯಗಳು ಮೂಲನಿವಾಸಿಗಳ ಆಚರಣೆಗಳನ್ನು ಆರಾಧನೆಗಳನ್ನು ವೈದಿಕ ಸಂಪ್ರದಾಯದೊಂದಿಗೆ ಬೆಸೆದು ಒಂದು ವಿಶಿಷ್ಟ ಪೂಜಾಪದ್ಧತಿಯನ್ನು ಆಚರಣೆಗಳನ್ನು ರೂಢಿಸಿದವು. ಗಣಪತಿ, ನಾಗ, ವೃಷಭ, ಗೋವು, ಗೊಲ್ಲ, ಮಾತೃ ದೇವತೆಗಳು, ಶಿವ, ವಿಷ್ಣುವಿನ ಅವತಾರಗಳ ಹತ್ತು ಹಲವು ಬಗೆಯ ದೈವಗಳ ಆರಾಧನೆ, ಆಚರಣೆ ಉತ್ಸವ ವೈಭವಗಳಿಂದ ಜನರನ್ನು ಆಕರ್ಷಿಸತೊಡಗಿದವು. ಅವರ ಮೇಲೆ ಧಾರ್ಮಿಕ ಪ್ರಭುತ್ವವನ್ನು ಸಾಧಿಸಿಕೊಂಡವು. ಅರಸೀಕೆರೆಯ ಅನೇಕ ಶಿವಾಲಯಗಳು ಪ್ರಸನ್ನ ಕೇಶವ ದೇವಾಲಯ, ಕಣಿಕಟ್ಟೆಯ ಶಿವಾಲಯಗಳು, ಹಾರನಹಳ್ಳಿಯ ಲಕ್ಷ್ಮೀ ನರಸಿಂಹ ದೇವಾಲಯ, ಹಿರಿಯೂರಿನ ಕುಂಚೇಶ್ವರ ದೇವಾಲಯ, ಅರಕೆರೆಯ ವಿಷ್ಣುದೇವಾಲಯ, ಕೆಲ್ಲಂಗೆರೆಯ ಲಕ್ಷ್ಮೀನಾರಾಯಣ ದೇವಾಲಯ, ಇಲ್ಲಿನ ಹಿರೇಕಲ್ಲು ಬೆಟ್ಟದ ನಾಗಪುರಿಯ ಶಂಕರೇಶ್ವರ, ತಿರುಪತಿ ಅಮರಗಿರಿ ವೆಂಕಟಾಚಲಪತಿ ದೇವಾಲಯಗಳು ಅತ್ಯಂತ ಸಂಪತ್ಭರಿತವಾಗಿದ್ದು ಸಮಾಜದ ಎಲ್ಲ ವರ್ಗ ವರ್ಣದವರ ಮೇಲೆ ಪ್ರಭಾವವನ್ನು ಬೀರಿದ್ದವೆಂಬುದು ಅಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ. ಆಳರಸರು ಸಿರಿವಂತವರ್ತಕರು ಸಾಮಾನ್ಯರುಗಳಿಂದ ಹರಿದು ಬಂದ ದಾನದತ್ತಿಗಳು, ಶ್ರದ್ಧೆ, ಸಂರಕ್ಷಣೆಗಳು ಇವುಗಳ ಸಂಪತ್ತಿಗೂ ಪ್ರಭುತ್ವಕ್ಕೂ ಕಾರಣವಾಗಿದ್ದವು.

### ೬.೧.೩. ವರ್ಣ-ವರ್ಗವ್ಯವಸ್ಥೆ, ಯಜಮಾನ ಸಂಸ್ಕೃತಿ ಮತ್ತು ಧರ್ಮ

ಕೃಷಿಯ ಅವಿಷ್ಕಾರ, ವಿಸ್ತರಣೆ ಮತ್ತು ಪಶುಪಾಲಕ ಸಮಾಜ ವ್ಯವಸ್ಥೆಯ ಬೆಳವಣಿಗೆಯೊಂದಿಗೆ ಶ್ರಮ ವಿಭಜನೆ, ವೈಯಕ್ತಿಕ ಆಸ್ತಿ ಒಡೆತನಗಳು ವರ್ಗ ಸಮಾಜದ ನಿರ್ಮಾಣ ವರ್ಣವ್ಯವಸ್ಥೆ ಇವುಗಳಿಂದ ಮಾನವ ಸಮಾಜದಲ್ಲಿ ತೀವ್ರ ಸಂಚಲನವುಂಟಾಯಿತು. ವ್ಯಕ್ತಿಯ ವೃತ್ತಿ ಗುಣಸ್ವಭಾವದೊಂದಿಗೆ ಗುರುತಿಸಲಾಗುತ್ತಿದ್ದ ವರ್ಣವು ನಂತರ ಕರ್ಮ ಸಿದ್ಧಾಂತಕ್ಕೆ ಒಳಪಟ್ಟು ಹುಟ್ಟಿನೊಂದಿಗೆ ಅಂಟಿಕೊಂಡಿತು.

ಧಾರ್ಮಿಕ ಸ್ಥಾನಮಾನಗಳಿಗೆ ಅನುಗುಣವಾಗಿ ಸಾಮಾಜಿಕ ಸ್ಥಾನಮಾನವು ನಿರ್ಧರಿಸಲ್ಪಡತೊಡಗಿತು. ವರ್ಣವ್ಯವಸ್ಥೆಯ ರಕ್ಷಣೆಯ ಹೊಣೆ ಧರ್ಮ ಮತ್ತು ಪ್ರಭುತ್ವದ ಜವಾಬ್ದಾರಿಯಾಗಿತ್ತು. ಹೊಯ್ಸಳ ರಾಜ್ಯದಲ್ಲಿ 'ವರ್ಣ ಸಂಕರವಿಲ್ಲ' ಎಂದೂ ಶಾಸನ ಕವಿಯೊಬ್ಬ ಹೇಳಿದ್ದರೂ[೬] ಅಂತ್ಯಜರಿಗೆ ವೈಷ್ಣವ ದೀಕ್ಷೆ ನೀಡುವ ಕಾರ್ಯ ಆ ಕಾಲದಲ್ಲಿ ವಿಶೇಷವಾಗಿತ್ತು. ಶಾಸನ ಕವಿಯೊಬ್ಬ ಹೊಯ್ಸಳ ನರಸಿಂಹನನ್ನು ಹೊಗಳುತ್ತ ಯುದ್ಧಗಳಲ್ಲಿ ಊರ್ಜಿತ ಅರ್ಥಚಯವನ್ನು ಮಾಡಿದ್ದರಿಂದ ಅವನು ಶೂದ್ರನಾದ ಪರಸೈನ್ಯಾಂಬುದಿ ಬಡಬಾಗ್ನಿಯನ್ನು ಎದುರಿಸಿ ಧೈರ್ಯತೋರಿದ್ದರಿಂದ ವರ್ಣವ್ಯವಸ್ಥೆಯಲ್ಲಿ ಜ್ಞಾನಕ್ಷೇತ್ರದ

ಸಂಪೂರ್ಣ ಸ್ವಾಮ್ಯ ಪಡೆದಿದ್ದ ಬ್ರಾಹ್ಮಣ ಸಮಾಜ ಶ್ರೇಷ್ಠ ಸ್ಥಾನಮಾನಗಳಿಗೆ ಪಾತ್ರವಾಗಿ ಭೂಸುರರೆನಿಸಿ ಉಳಿದ ಮೂರು ವರ್ಣದವರನ್ನು ತನ್ನ ಅಧೀನದಲ್ಲಿಟ್ಟುಕೊಂಡಿತ್ತು. 'ಮುಂಜಿ ಯಜ್ಞೋಪವೀತ ಬದ್ಧರೂ ಹೇಮಕರ್ಣಕುಂಡಲರೂ ಕ್ಷತ್ರಿಯ, ವೈಶ್ಯ, ಶೂದ್ರ, ತ್ರಯ, ಲಲಾಟ ಪಾದ ಘಟ್ಟಿತರೂ ಆದಿ ಸಮರ್ಥರೂ ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾನ ಜಪ ಸಮಾದಿಶೀಲ ಗುಣಸಂಪನ್ನರು, ಶಟ್ಕರ್ಮನಿರತರೂ, ವೇದ ವೇದಾಂಗ ಪಾರಂಗತರಾದ ಮಹಾಜನರನ್ನು ನಿಷ್ಠೆಯಿಂದ ಸೇವೆ ಮಾಡುವ ಪ್ರಿಯಪುತ್ರರನ್ನು, ವಿಪ್ರ ಪ್ರಿಯ ಅಧಿಕಾರಿಗಳನ್ನು, ಸಿರಿವಂತರನ್ನು, ಅರಸರನ್ನು ಅವರು ನೀಡಿದ ದಾನ ದತ್ತಿ ಮಾನ್ಯಗಳನ್ನು ಶಾಸನಗಳು ದಾಖಲಿಸಿವೆ.[೭] ಇವೆಲ್ಲದರ ಹಿಂದೆ ಬ್ರಾಹ್ಮಣನಿಗೆ ದಾನ ನೀಡುವುದರಿಂದ ಪುಣ್ಯ ಪ್ರಾಪ್ತಿ ಅಭೀಷ್ಟ ಸಿದ್ಧಿಯಾಗುತ್ತದೆಂಬ ಧಾರ್ಮಿಕ ನಂಬಿಕೆಯೇ ಕಾರಣ. ಶಾಸನಗಳ ಶಾಪಾಶಯ ಭಾಗಗಳಲ್ಲಿ ಈ ವ್ಯವಸ್ಥೆಗಿದ್ದ ಪೂರ್ಣ ಬೆಂಬಲ ವ್ಯಕ್ತವಾಗುತ್ತದೆ. ಹೊರಗಿನಿಂದ ಕರೆತಂದು ತಮ್ಮ ಆಳ್ವಿಕೆಯ ಪ್ರದೇಶದಲ್ಲಿ ಅರಸರು, ಅಧಿಕಾರಿಗಳು ಬ್ರಾಹ್ಮಣ ಕುಟುಂಬಗಳ ಸ್ಥಾಪನೆ ಮಾಡುತ್ತಿದ್ದುದ್ದನ್ನು ಶಾಸನಗಳು ಹೇಳಿವೆ.[೮]

ವ್ಯಕ್ತಿಯ ವಿಕಾಸಕ್ಕೆ 'ಪುರುಷಾರ್ಥ' ಸಾಧನೆಯ ಮಾರ್ಗವನ್ನು ವೈದಿಕ ಧರ್ಮ ಪ್ರತಿಪಾದಿಸಿತ್ತು. ಈ ಧರ್ಮ ಅರ್ಥಕಾಮ ಮೋಕ್ಷಗಳು ನಿಜವಾಗಿ ಸಾಮಾಜಿಕ ಮೌಲ್ಯ ಮತ್ತು ನೈತಿಕ ನಿಯಮಗಳನ್ನು ಪ್ರತಿನಿಧಿಸುತ್ತಿದ್ದು, ವ್ಯಕ್ತಿತ್ವದ ಪರಿಪೂರ್ಣ ಬೆಳವಣಿಗೆಗೆ ಸಾಧನೆಗಳೇ ಆಗಿದ್ದವು. ಆದರೆ, ಈ ಪುರುಷಾರ್ಥ ಸಾಧನೆ ಮಾಡುವ ಹಕ್ಕನ್ನು ಅವಕಾಶವನ್ನು ಎಲ್ಲರಿಗೂ ಸಮಾನವಾಗಿ ನೀಡದೆ ಹೋದುದು ನಮ್ಮ ಸಮಾಜದ ವಿಕೃತತೆಯನ್ನು ಎತ್ತಿ ತೋರುತ್ತದೆ. ವರ್ಣ ವ್ಯವಸ್ಥೆಯು ಏಣಿ ಶ್ರೇಣಿಯ ಕೆಳಸ್ಥರದವರನ್ನು ಉಸಿರು ಕಟ್ಟಿಸುತ್ತಿತ್ತು. ಅವರ ವ್ಯಕ್ತಿ ಸ್ವಾತಂತ್ರ್ಯವನ್ನು ವ್ಯಕ್ತಿತ್ವ ವಿಕಸನದ ಸಾಧ್ಯತೆಯನ್ನು ಹರಣ ಮಾಡಿತ್ತು. ಮುಕ್ತಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದು ಅನೇಕ ಧರ್ಮ ತತ್ವಗಳು ಇಹಲೋಕದ ಬದುಕಿನ ಸಾರ್ಥಕತೆಯನ್ನು ಕಡೆಗಣಿಸಿವೆ. ಶರಣಾಗತಿಯ ಭಾವವನ್ನು ಬೆಳೆಸುವ ಆರಾಧನಾ ಸಂಸ್ಕೃತಿಗೆ ಪೂರಕವಾಗುವಂತಹ ಧಾರ್ಮಿಕ ಚಿಂತನೆಗಳೇ ಹೆಚ್ಚಾಗಿ ಹುಟ್ಟಿಕೊಂಡವು. ಅದ್ವೈತ, ದ್ವೈತ, ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತಗಳ ಜ್ಞಾನಮಾರ್ಗ, ಕರ್ಮಸಿದ್ಧಾಂತ ಇತ್ಯಾದಿ ತಾತ್ವಿಕ ವಿಚಾರಗಳು, ಸಿದ್ಧಾಂತಗಳು ಜನಸಾಮಾನ್ಯರಿಗೆ ಮುಟ್ಟಲಿಲ್ಲವಾದರೂ ಪೂರ್ಣ ಶರಣಾಗತಿಯ ಭಾವದ ಭಕ್ತಿಮಾರ್ಗವು ಅವರನ್ನು ಆಕರ್ಷಿಸಿತು. ಅಲೌಕಿಕ ಶಕ್ತಿಗೆ ಶರಣಾಗಿ ಮುಕ್ತಿ ಪಡೆಯುವ ಈ ಒಡೆಯ ಬೃತ್ಯಭಾವದ ತಾತ್ವಿಕ ದರ್ಶನವನ್ನು ಊಳಿಗಮಾನ್ಯ ಸಮಾಜದ ಆಳುವ ವರ್ಗವು ವ್ಯವಸ್ಥಿತ ಹುನ್ನಾರಗಳಿಂದ ಸಮರ್ಥವಾಗಿ ಬಳಸಿಕೊಂಡಿತು. 'ನಿಷ್ಕಾಮ ಕರ್ಮ' ಸಿದ್ಧಾಂತವು 'ಭೂ ಮಾಲೀಕ' ಸೇವಕ ವ್ಯವಸ್ಥೆಗೆ ಪೂರಕವಾಯಿತು. ದುಡಿಯುವ ವರ್ಗ ಕಿಂಕರಭಾವದ ಕೀಳರಿಮೆಗೆ ಹುಸಿ ಆದರ್ಶಗಳಿಗೆ ಸಿಕ್ಕಿ ಶೋಷಣೆಯ ಮೂಲವನ್ನೇ ಆರಾಧಿಸುವ ಮೌಢ್ಯಕ್ಕೆ ತನ್ನನ್ನು ಕೊಟ್ಟುಕೊಂಡಿತು. ನೂರಾರು

ಸೇವಕರ ವೀರಪಡೆಗಳಿಗೆ ಒಡೆಯನಾದ ರಾಜ ಪ್ರತ್ಯಕ್ಷ ದೇವರು ಎನಿಸಿಕೊಂಡನು. ಭಕ್ತಿ ನಿಷ್ಠೆಯಿಂದ, ವೀರ ಮೌಲ್ಯಗಳ ಬೆಳವಣಿಗೆಯಿಂದ ಅರಸೊತ್ತಿಗೆಯ, ಭೂಮಿ ಒಡೆಯರ ಕೊಂಡಾಟ ಹೆಚ್ಚಾಯಿತು.

ಶಾಸನಗಳೂ ಯಜಮಾನ ಸಂಸ್ಕೃತಿಯ ವಕ್ತಾರರಂತೆ ಜಾತಿ, ಧರ್ಮ, ಕರ್ಮ, ವರ್ಗವ್ಯವಸ್ಥೆಯನ್ನು ನಿರಂತರವಾಗಿ ಇಡಬಯಸಿವೆ. ಅದಕ್ಕಾಗಿ ಸ್ಮೃತಿಗಳ ಪುರಾಣಗಳ ಉಕ್ತಿಗಳು, ಸಂಕೇತಗಳು ಅರ್ಷೇಯ ಪ್ರತೀಕಗಳನ್ನು ಘಟನೆಗಳನ್ನು ಮತ್ತೆ ಮತ್ತೆ ಬಳಸುತ್ತವೆ. ದೇವಾಸುರ ಯುದ್ಧ ಘಟನೆಗಳನ್ನು ಅವತಾರಗಳನ್ನು ಮೇಲಿಂದ ಮೇಲೆ ಹೇಳುತ್ತ ದಿಗ್ವಿಜಯ ದೇವತೆಗಳಾದ ಕಾರ್ತಿಕೇಯ, ತ್ರಿವಿಕ್ರಮ, ಮಾರ್ತಾಂಡಭೈರವರೊಂದಿಗೆ ರಾಜನನ್ನು ಸಮೀಕರಿಸುವುದು ಭೂಸುರನೆಂದು ಬ್ರಾಹ್ಮಣನನ್ನು ಗುರುತಿಸುವುದು ಸ್ವರ್ಗನರಕ, ಪಾಪ ಪುಣ್ಯ, ಭಕ್ತಿ ಮುಕ್ತಿಗಳ ಧಾರ್ಮಿಕ ನಂಬಿಕೆಗಳನ್ನು ಸಮಾಜದಲ್ಲಿ ಬಿತ್ತುವ ಕೆಲಸವನ್ನು ವಿಶೇಷವಾಗಿ ಮಾಡಿವೆ.

ಹಾಗೆ ನೋಡಿದರೆ ಭಾವನಾ ವಾದವು ಜಗತ್ತನ್ನು ಮಾಯೆಯೆಂದು ಕರೆಯುತ್ತಿರುವಾಗಲೂ ಪಾರಮಾರ್ಥಿಕ ಮೌಲ್ಯಗಳೇ ಶ್ರೇಷ್ಠವೆಂದು ಹೇಳುತ್ತಿರುವಾಗಲೂ ಧಾರ್ಮಿಕ ಸಂಸ್ಥೆಗಳೂ ಒಳಗೊಂಡಂತೆ ಸಮಾಜದ ಬಹುದೊಡ್ಡ ಸಂಖ್ಯೆಯ ಜನ ಸುಖ ಸಂಪತ್ತಿನ ಹಿಂದೆ ಬಿದ್ದಿತ್ತು ಎಂಬುದು ಸತ್ಯ. ಮಾನವನ ಕಣ್ಣು ಸದಾ ಸುಖಭೋಗದ ಕಡೆ ಇರುವುದರಿಂದ ಅವನನ್ನು ಧರ್ಮ ಮುಖಿಯನ್ನಾಗಿಸಲು ಸುಖಭೋಗದ ಆಮಿಷವನ್ನೇ ಮುಂದೊಡ್ಡಬೇಕಾದ ಅನಿವಾರ್ಯತೆ ಎಲ್ಲ ಧರ್ಮಕ್ಕೂ ಇತ್ತು. ಈ ಜನ್ಮದಲ್ಲಲ್ಲದಿದ್ದರೆ ಮುಂದಿನ ಜನ್ಮದಲ್ಲಾದರೂ ಸುಖಿಯಾಗುವ ಇವನ ಹಂಬಲದ ಎಳೆಯನ್ನು ಹಿಡಿದು ಉಪಾಯವಾಗಿ ಅವನನ್ನು ಧರ್ಮಮಾರ್ಗಕ್ಕೆ ಎಳೆಯಬೇಕಾಗಿತ್ತು. ಆ ಮೂಲಕ ತಾನೂ ಉಳಿಯಬೇಕಾಗಿತ್ತು. ಈ ಒತ್ತಡದ ಜೊತೆಗೆ ತನ್ನ ಉಳಿವಿಕೆಗೆ ಅವಶ್ಯಕವಾದ ಆರ್ಥಿಕ ನೆರವನ್ನು ಅಧಿಕಾರದ ನೆರವನ್ನು ಪಡೆಯಲೇ ಬೇಕಾದ ಒತ್ತಡಕ್ಕೆ ಕೆಲವು ಧರ್ಮಗಳು ಒಳಗಾಗಿದ್ದವು. ಧನವೂ ಧರ್ಮವೂ ಅಧಿಕಾರವೂ ಕೈಕೈ ಹಿಡಿದು ಸಾಗುವುದನ್ನು ಶಾಸನಗಳು ತೆರೆದು ತೋರಿಸುತ್ತವೆ. ಧರ್ಮವು ಇಹಪರ ಸುಖಸಾಧನವೆಂಬ ನಂಬಿಕೆಯಂತೆ ಧನವೂ ಇಹಪರ ಸುಖಸಾಧನವೆಂಬ ನಂಬಿಕೆ ಬೆಳೆಯಿತು.

ಮಧ್ಯಕಾಲೀನ ಕರ್ನಾಟಕದ ಅಧಿಭಾಗದ ಶಾಸನಗಳು ಶಾಸ್ತ್ರಗ್ರಂಥಗಳು ಸಾಹಿತ್ಯ ಕೃತಿಗಳನ್ನೆಲ್ಲ ಒಟ್ಟಾಗಿಟ್ಟು ನೋಡಿದಾಗ ಪ್ರಧಾನವಾಗಿ ಕಾಣುವ ಒಂದು ಅಂಶ ಆಗಿನ ಸಮಾಜವು ಅರ್ಥಮುಖಿಯಾಗಿತ್ತು ಎಂಬುದು. ಸಂಪತ್ತಿನ ಒಡೆತನ ಅದರ ಆತ್ಯಂತಿಕ ಗುರಿಯಾಗಿದ್ದಂತೆ ಕಂಡುಬರುತ್ತದೆ. ಹನ್ನೆರಡನೇ ಶತಮಾನದ ಆದಿಭಾಗದಲ್ಲಿ ಮಾಚಿದೇವನೆಂಬ ವಿಪ್ರನ ಮಗ ಮಾರಯ್ಯನು ಬ್ರಾಹ್ಮಣ್ಯವನ್ನು ತೊರೆದು ವಣಿಕ ಧರ್ಮವನ್ನು ಹಿಡಿದ ಬಗೆಗೆ ಶಾಸನ.[೯] ಹೀಗೆ ಹೇಳುತ್ತದೆ.

ಗೂಢ ಮನುಷ್ಯನಂತೆ ನಿತ್ಯವೂ ಸಿಕ್ಕಿದಷ್ಟನ್ನೇ ತಿಂದು ಗೋಮಾರ್ಗದಿಂದ ಹೊಟ್ಟೆ ಹೊರೆಯುವುದರಲ್ಲಿಯಾದ ಪುರುಷಾರ್ಥವಿದೆ ಎಂದು ಯೋಚಿಸಿ ವಾಣಿಜ್ಯದಿಂದ ಅಪಾರ ಧನವನ್ನು

ಸಂಪಾದಿಸಿ ಧರ್ಮ ಅರ್ಥ, ಕಾಮ, ಮೋಕ್ಷಗಳನ್ನು ಪಡೆದು ಕೀರ್ತಿವಂತನಾಗುವುದೇ ಸೂಕ್ತವೆಂದು ಭಾವಿಸಿ ಮಾರಯ್ಯನು ತನ್ನ ವೃತ್ತಿಯನ್ನು ಬದಲಾಯಿಸಿ ವಾಣಿಜ್ಯದಿಂದ ಸಂಪತ್ತನ್ನು ಗಳಿಸಿ ಪುರುಷಾರ್ಥಗಳನ್ನು ಸಾಧಿಸಿಕೊಂಡನಂತೆ. ಅವನು ಹಾಕಿಕೊಟ್ಟ ದಾರಿಯಲ್ಲೇ ಸಾಗಿದ ಅವನ ಮಕ್ಕಳು ಚಟ್ಟಿಸೆಟ್ಟಿ ಮತ್ತು ದಾಸಿಸೆಟ್ಟಿಯರು ಹೊಯ್ಸಳ ನಾಡಿನ ಅತ್ಯಂತ ಸಿರಿವಂತ ವಣಿಕರಾದರು. ಚಟ್ಟಪ್ಪ ಸೆಟ್ಟಿಯು ಹೊಯ್ಸಳರ ಪ್ರಸಿದ್ಧ ಕಮ್ಮಟಾದಿಕಾರಿಯೂ ಆದನು. ಬಾಣಾವರವು ಪ್ರಸಿದ್ಧ ವಾಣಿಜ್ಯ ಕೇಂದ್ರವಾಗಿ ಬೆಳೆಯಲು ಆರ್ಥಿಕಾಭಿವೃದ್ಧಿ ಹೊಂದಲು ಕಾರಣರಾದರು. ಈ ಮತ್ತು ಇಂಥಹ ಸ್ಥಿತ್ಯಂತರಗಳು ಕೇವಲ ಆ ಒಂದು ಕುಟುಂಬದ ಸ್ಥಿತ್ಯಂತರವಾಗದೇ ಇಡೀ ಆಕಾಲದ ಸಮಾಜದ ಸ್ಥಿತ್ಯಂತರದ ಬಿಂಬವಾಗಿದೆ.

ಅಧಿಕಾರ ಮತ್ತು ಸಂಪತ್ತನ್ನು ಪಡೆಯಬಯಸಿದ ಸಾಹಸಿಗರು ಸ್ವಪ್ರಯತ್ನದಿಂದ ವರ್ಣ ಮತ್ತು ವೃತ್ತಿಗಳ ಕಟ್ಟನ್ನು ಸಡಲಿಸಿಕೊಂಡು ಅನ್ಯ ಕ್ಷೇತ್ರದಲ್ಲಿ ಕಾಲಿಟ್ಟು ಯಶಸ್ವಿಯಾಗಿರುವುದಕ್ಕೆ ಇಂತಹ ಅನೇಕ ಉದಾಹರಣೆಗಳಿವೆ. ಅಧ್ಯಯನ ಅಧ್ಯಾಪನ, ಪೌರೋಹಿತ್ಯ, ದೇವಾಲಯ ಸ್ಥಾನಿಕ ವೃತ್ತಿಗಳಲ್ಲಿ ತೊಡಗಿಕೊಳ್ಳಲಾಗದ ಬ್ರಾಹ್ಮಣರು ಸಾಮ್ರಾಜ್ಯಶಾಹಿ ವ್ಯವಸ್ಥೆ ನೆಲೆಗೊಳ್ಳುತ್ತಲೆ ಅದರ ಸೇವೆಗೆ ನಿಂತರು. ಕೇವಲ ಆಡಳಿತಾತ್ಮಕ ಕಾರ್ಯಗಳಷ್ಟೇ ಅಲ್ಲದೆ ಯುದ್ಧೋದ್ಯಮ ಶಕ್ತಿ ಶಾಲಿಯಾಗಿ ಬೆಳೆದಂತೆ ಕ್ಷಾತ್ರ ವೃತ್ತಿಯನ್ನೂ ಕೈಗೊಂಡರು.[೧೦]

ಕದಂಬ ವಂಶಸ್ಥಾಪಕ ಮಯೂರನು ಕ್ಷಾತ್ರವೃತ್ತಿ ಕೈಗೊಂಡುದುದು ತಿಳಿದ ವಿಚಾರವೇ. ಬ್ರಾಹ್ಮಣರು ವ್ಯಾಪಾರ, ಕೃಷಿಯನ್ನೂ ಮಾಡಿಕೊಂಡು ಬಂದಿದ್ದಾರೆ. ಶೂದ್ರವರ್ಗಕ್ಕೆ ಸೇರಿದ್ದ ಅನೇಕ ಸಾಹಸಿಗರು ಗೌರವ ಆದರ ವರ್ಚಸ್ಸನ್ನು ಬೆಳೆಸಿಕೊಂಡು ಕ್ಷಾತ್ರ ವೃತ್ತಿಯನ್ನು ಹಿಡಿದು ಅರಸರಾದುದನ್ನು ಇತಿಹಾಸ ಹೇಳುತ್ತದೆ. ಕ್ಷತ್ರಿಯ ಎಂಬುದು ಒಂದು ಆಳುವ ವರ್ಗವಾಗಿತ್ತೇ ಹೊರತು ವರ್ಣವಾಗಿ ಕಟ್ಟುನಿಟ್ಟಾಗಿದ್ದಂತೆ ತೋರುವುದಿಲ್ಲ.

ಹತ್ತು ಹನ್ನೊಂದನೇ ಶತಮಾನದ ಹೊತ್ತಿಗೆ ಉತ್ಪಾದನೆಯ ಹೆಚ್ಚಳ ಸಂಪತ್ತಿನ ಬೆಳವಣಿಗೆ ವಾಣಿಜ್ಯ ಪ್ರಗತಿ ಎಲ್ಲ ಧರ್ಮದವರನ್ನೂ ಎಲ್ಲ ಕಸುಬಿನವರನ್ನೂ ತನ್ನತ್ತ ಸೆಳೆಯಿತು. ಇದರಿಂದ ಅನೇಕ ಉತ್ಪಾದಕ ಸಂಘಗಳು ವಿನಿಮಯ ಮಧ್ಯವರ್ತಿ ವ್ಯಾಪಾರಿಗಳು, ನಾನಾ ಬಗೆಯ ಶ್ರೇಣಿಗಳು[೧೧] ಉಬಯ ನಾನಾದೇಸಿವರ್ತಕ ಸಂಘಗಳು ಸಂಘಟನೆಗೊಂಡು ವ್ಯವಸ್ಥಿತವಾಗಿ ಕಾರ್ಯ ನಿರ್ವಹಣೆ ಮಾಡಲು ತೊಡಗಿದವು.[೧೨] ಈ ವರ್ತಕ ಸಂಘಗಳು ಜಾತಿ ಕಟ್ಟುಪಾಡಿಲ್ಲದೆ ಆಯಾ ವ್ಯಾಪಾರೀ ವರ್ಗವನ್ನು ಗಮನದಲ್ಲಿಟ್ಟುಕೊಂಡು ಸಹಕಾರಿ ತತ್ವದ ಮೇಲೆ ರೂಪುಗೊಂಡಂಥವು. "ಪರದರಿಗೆ ಧನ ಸಂಪಾದಿಸಬೇಕೆಂಬ ಆಸೆ, ಅವರು ಧನದಿಂದಲೇ ಇಹಪರಗಳೆಂದು ತಿಳಿದಿದ್ದರು. ಅದಕ್ಕಾಗಿ ಯಾವಾಗಲೂ

ದುಡಿಯುತ್ತಿದ್ದರು ಎಂದು ನಯಸೇನ ಹೇಳಿದ್ದಾನೆ.'[೧೩] ಶಾಸನಗಳಲ್ಲಿ ಬರುವ ಅನೇಕ ವ್ಯಾಪಾರಿಗಳು ರಾಜಶ್ರೇಷ್ಠಿಗಳಾಗಿದ್ದರು ಮತ್ತು ಕುಬೇರನನ್ನು ಸಂಪತ್ತಿನಲ್ಲಿ ಮೀರಿಸುವವರಾಗಿದ್ದರು.[೧೪]

ಇಂತಹ ಸಿರಿವಂತವರ್ಗವನ್ನು ಅಂಕೆಯಲ್ಲಿಡುವುದು ಅವಶ್ಯಕವಾಗಿದ್ದರೂ ತನ್ನ ಬೊಕ್ಕಸಕ್ಕೆ ಅವರಿಂದಾಗುತ್ತಿದ್ದ ಲಾಭದಿಂದಾಗಿ, ಅಭಿವೃದ್ಧಿಯಿಂದಾಗಿ ಅವರೊಂದಿಗೆ ಅರಸೊತ್ತಿಗೆ ಸಹಕರಿಸಬೇಕಾಗಿ ಬರುತ್ತಿತ್ತು. ಪ್ರಬಲವಾದ ಶ್ರೀಮಂತ ವರ್ತಕ ಸಮೂಹವನ್ನೂ ಲೌಕಿಕ ಸಾಧನೆಸಿದ್ಧಿಯಲ್ಲಿ ಮುಳುಗಿದ್ದ ಪ್ರಭುವರ್ಗವನ್ನು ಅಂಕೆಯಲ್ಲಿಡುವ ಮತ್ತು ಅವರ ಸಂಪತ್ತು ಶ್ರದ್ಧೆಗಳ ಪೂರ್ಣ ಲಾಭಪಡೆಯುವ ಜವಾಬ್ದಾರಿ ಹಾಗೂ ಅವಶ್ಯಕತೆ ಧರ್ಮದ ಮೇಲಿತ್ತು. ಜೊತೆಗೆ ಅತೃಪ್ತಿ ಅಸಮಾನತೆ ತಳಮಳಗಳಿಗೆ ಸಿಕ್ಕಿದ್ದ ಬಡ ಸಾಮಾನ್ಯರನ್ನು ನೀತಿ ನಡಾವಳಿಗಳ ಅಂಕುಶ ಹಾಕಿ ಹಿಡಿದಿಡುವ ಅವರ ಒಲವು ತನ್ನತ್ತ ಹರಿಯುವಂತೆ ಮಾಡುವ ಸವಾಲೂ ಧರ್ಮಕ್ಕಿತ್ತು. ಅಥವಾ ಹೀಗೂ ಹೇಳಬಹುದು. ಇಂಥ ಸಮಾಜವನ್ನು ಪ್ರಭುತ್ವವು ರಾಜಕೀಯ ಶಕ್ತಿಯನ್ನು ಬಳಸಿ ನಿಯಂತ್ರಿಸುವುದು ಸಾಧ್ಯವಾಗದಿದ್ದುದರಿಂದ ಧಾರ್ಮಿಕ ಶಕ್ತಿಯನ್ನು ಬಳಸಿ ನಿಯಂತ್ರಿಸತೊಡಗಿತು. ಆ ಕಾರಣದಿಂದ ಧಾರ್ಮಿಕ ಶಕ್ತಿ ರಾಜಕೀಯ ಶಕ್ತಿ ಮತ್ತು ಅರ್ಥಿಕ ಶಕ್ತಿ ಕೇಂದ್ರಗಳು ಒಂದಕ್ಕೊಂದು ಅನಿವಾರ್ಯ ಅವಲಂಬನೆ, ಒಡಂಬಡಿಕೆಯನ್ನು ಮಾಡಿಕೊಂಡು ಕೈಕೈ ಹಿಡಿದು ಸಾಗಿದವೆಂದೇ ಹೇಳಬೇಕು. ಆಯಾ ಕಾಲದಲ್ಲಿ ಪ್ರಚಲಿತವಾದ ಧರ್ಮಕ್ಕೆ ರಾಜಮಾನ್ಯತೆ ದೊರೆಯುತ್ತಿತ್ತು. ರಾಜಮಾನ್ಯತೆ ಪಡೆಯಲು ವಿವಿಧ ಧರ್ಮಗಳು ಶತ ಪ್ರಯತ್ನ ಮಾಡುತ್ತಿದ್ದವು. ಹೀಗೆ ರಾಜ ಪೋಷಿತ ಧರ್ಮ ಪ್ರಬಲವಾಗಿ ಬೆಳೆದು ವಾಣಿಜ್ಯ ಕ್ಷೇತ್ರದಲ್ಲೂ ಸ್ವಾಮ್ಯವನ್ನು ಸಾಧಿಸುತ್ತಿತ್ತು. ಮನ್ನಣೆ ಪ್ರೋತ್ಸಾಹ ಸಂಪತ್ತನ್ನು ಪಡೆದು ವಿಜೃಂಭಿಸುತ್ತಿತ್ತು.

## ೬.೨. ವಿವಿಧ ಧರ್ಮಗಳು-ಸ್ಥಾನಮಾನ

ಕರ್ನಾಟಕದಲ್ಲಿ ಕಂಡುಬರುವ ಮತಧರ್ಮ ಪಂಥ ಪಂಗಡಗಳು ದೈವಗಳು ಈ ಪ್ರದೇಶದಲ್ಲೂ ಕಾಣಿಸಿಕೊಳ್ಳುತ್ತವಾದರೂ ಬೌದ್ಧ ಧರ್ಮದ ಯಾವುದೇ ಉಲ್ಲೇಖ ಇಲ್ಲಿನ ಶಾಸನಗಳಲ್ಲಿ ಕಾಣಿಸಿಕೊಂಡಿಲ್ಲ. ಜಿತ ಬುದ್ಧಸ್ವಾಮಿ ಎನ್ನುವ ಹೆಸರೊಂದು ಉಲ್ಲೇಖಗೊಂಡಿದೆ. ಬೌದ್ಧ ಧರ್ಮದ ಕುರುಹುಗಳಂತೆ ಅವರ ತಾಂತ್ರಿಕ ದೇವತೆ ತಾರಾಭಗವತಿಯ ಹೆಸರಿನಲ್ಲಿ ಭಗವತೀ ಘಟ್ಟ ಎಂಬ ಊರು, ಭಗವತೀದೇವಿ ಲಬ್ಧವರ ಪ್ರಸಾದ ಎಂಬ ಬಿರುದು ಹೊಂದಿದ ಅಧಿಕಾರಿಗಳ ಉಲ್ಲೇಖವನ್ನು ಶಾಸನಗಳಲ್ಲಿ ಕಾಣಬಹುದು.[೧೫]

### ೬.೨.೧. ಜೈನ ಧರ್ಮ-ಸ್ಥಿತಿಗತಿ

ಈ ಪ್ರದೇಶದಲ್ಲಿ ದೊರಕಿರುವ ಪ್ರಾಚೀನ ಶಾಸನಗಳು ಸ್ಮಾರಕ ಅವಶೇಷಗಳು ಜೈನಧರ್ಮವು ಗಂಗರ ಕಾಲದಲ್ಲೇ ಪ್ರವರ್ಧಮಾನವಾಗಿತ್ತೆಂಬುದನ್ನು ತಿಳಿಸುತ್ತವೆ. ಇಲ್ಲಿನ ಸೋಮಶೆಟ್ಟಿ ಹಳ್ಳಿಯ ೭

ರಿಂದ ೧೧ನೇ ಶತಮಾನದವರೆಗಿನ ಬಂಡೆಗಲ್ಲು ಶಾಸನಗಳು ಆ ಸ್ಥಳವು ಜೈನರಿಗೆ ಪವಿತ್ರ ಸ್ಥಳವಾಗಿತ್ತೆಂದು, ಆ ಕಾಲದಲ್ಲಿ ಆ ಸುತ್ತ ಮುತ್ತಿನಲ್ಲಿ ಜೈನಧರ್ಮಕೇಂದ್ರಗಳಿದ್ದವೆಂಬುದನ್ನು ಸೂಚಿಸುತ್ತದೆ. ಈ ಶಾಸನಗಳಲ್ಲಿ ಜಿನಮುನಿಗಳ ಶಿಷ್ಯರು, ಶಿಶ್ಶಿತಿಯರು ಮುಡಿಪಿದುದನ್ನು ಹೇಳಿದೆ. ಮಹೇಂದ್ರ ಕೀರ್ತಿಸಿದ್ದಾನ್ತ ಭಟ್ಟಾರರ ಶಿಷ್ಯನೊಬ್ಬನು ಮುಡಿಪಿದುದನ್ನು[೧೬] ದಾವಣನ್ದಿ ಭಟಾರರ ಶಿಷ್ಯ ನೋನ್ತು ಮುಡುಪಿದನೆಂದು ಮತ್ತೊಂದು ಶಾಸನ[೧೭] ತಿಳಿಸಿವೆ. ನಲ್ಲೂರಿನ ದೇವಸೇನ ಸಿದ್ದಾನ್ತ ಭಟಾರರ ಶಿಶ್ಶಳು ಸಲ್ಲೇಖನಗೈದು ಮುಡಿಪಿದುದನ್ನು ೬೬ನೇ ಶಾಸನ ಹೇಳಿದೆ. 'ಚನ್ದಮ್ಮ ಗಾವುಂಡಿಯ ಮಗಳು ಪೊನ್ನವ್ವೆ' 'ಮೇಘೇಶ್ವರ ಪಣ್ಡಿತ ಭಟ್ಟಾರರ್ ' ಶ್ರೀ ಬೀವುತಗೊರವ ಎಂಬ ಶಾಸನಗಳೂ ಬಹುಷಃ ಅವರ ನಿಸಿಧಿಗಳೇ ಆಗಿವೆ.[೧೮]

ಗಂಡಸಿಯಲ್ಲಿನ ಶಂಭುಲಿಂಗೇಶ್ವರ ದೇವಾಲಯದ ಜಿನಶಾಸನ[೧೯] ಜೈನ ಮುನಿ ಪರಂಪರೆಯಲ್ಲಿ ಪ್ರಸಿದ್ಧರಾದ ಜಿನಸೇನಾಚಾರ್ಯ ಮತ್ತು ಅವರ ಶಿಷ್ಯ ಗುಣ ಭದ್ರಾಚಾರ್ಯರನ್ನು ಹೆಸರಿಸಿದೆ. ಗುಣಭದ್ರರ ಶಿಶ್ಶಿತಿಯಾದ ಕಾಡಬ್ಬೆ ಕಂತಿಯರು ಬಲ್ಲಹ (ನೃಪತುಂಗ) ಮತ್ತು ಬಾಸಯ್ಯರ ಬೆಸನದಂತೆ ಬಹುಷಃ ಬಸದಿ ನಿರ್ಮಾಣವೋ ಅಥವಾ ದಾನವೋ ಮಾಡಿರುವುದನ್ನು ಹೇಳುತ್ತದೆ. ಗಂಡಸಿಯಲ್ಲಿ ಜಿನಾಲಯವಿದ್ದುದನ್ನು ಇದು ಸೂಚಿಸುತ್ತದೆ.

ಕೆಲ್ಲಂಗೆರೆಯ ಬಿದುಗ ಜಿನಾಲಯ ಮತ್ತು ಸಿಂದಾಚಾರ್ಯ, ಲಾಗಾಚಾರ್ಯ ಹಾಗೂ ಕುಂದಕುಂದಾನ್ವಯದ ಚಾರುಕೀರ್ತಿ ಭಟಾರರ ಉಲ್ಲೇಖಗಳಿವೆ. ಕೆಲ್ಲಂಗೆರೆಯ ಬಿದುಗ ಜಿನಾಲಯ ಮತ್ತು ಲಾಗ ಬಸದಿಗಳ ಒಡೆತನಕ್ಕೆ ಸಂಬಂಧಿಸಿ ಮುಖ್ಯ ಸ್ಥಾನಿಕರ ಪದವಿಯ ನೇಮಕಕ್ಕೆ ಸಂಬಂಧಿಸಿ ಭಿನ್ನಾಭಿಪ್ರಾಯ ಗೊಂದಲಗಳುಂಟಾಗಿದ್ದು ಅದನ್ನು ಪರಿಹರಿಸುವಲ್ಲಿ ಅಲ್ಲಿನ ಗೌಡುಗಳು ಬಣಂಜಿಗರೈನೂರ್ವರ ಸಂಘದ ಪ್ರಯತ್ನವಿರುವಂತೆ ಕಂಡುಬರುತ್ತದೆ. ಸದ್ಯದಲ್ಲಿ ಈ ಶಾಸನವು[೨೦] ಕೆಲ್ಲಂಗೆರೆಯ ಲಕ್ಷ್ಮೀನಾರಾಯಣ ದೇವಾಲಯದ ಛಾವಣಿಗೆ ಹಾಸಲಾಗಿದ್ದು, ಇಲ್ಲಿ ಜೈನ ಧರ್ಮದ ಪತನಕ್ಕೆ ಆಂತರಿಕ ಬಿಕಟ್ಟುಗಳೊಂದಿಗೆ ವೈಷ್ಣವ ಧರ್ಮದ ಪ್ರಾಬಲ್ಯದ ಬಾಹ್ಯ ಕಾರಣವೂ ಮುಖ್ಯವೆನಿಸುತ್ತದೆ.

ಕಣಿಕಟ್ಟೆಯಲ್ಲಿದ್ದ ಜೈನ ಬಸದಿಗಳು ಇದೇ ಕಾರಣಕ್ಕಾಗಿ ನಾಶವಾಗಿರುವುದನ್ನು ಗಮನಿಸಬಹುದು. ಕಣಿಕಟ್ಟೆಯ ಭೈರವೇಶ್ವರ ದೇವಾಲಯದ ಆವರಣದಲ್ಲಿ ವಿಷ್ಣುವರ್ಧನನ ಕಾಲದ ಒಂದು ಶಾಸನ ಹಾಳಾಗಿ ಬಿದ್ದಿದೆ.[೨೧] ೯-೧೧ನೇ ಶತಮಾನಕ್ಕೆ ಸೇರಬಹುದಾದ ಕೆಲವು ಜೈನ ವಾಸ್ತುವಿನ ಅವಶೇಷಗಳನ್ನು ಆಧರಿಸಿ ಇಲ್ಲಿ ಬಸದಿ ಇತ್ತೆಂದು ಗುರುತಿಸಬಹುದು. ಕ್ರಿ.ಶ.೧೧೨೪ರ ನಂತರ ಇಲ್ಲಿನ ಆಡಳಿತ ಸೂತ್ರವನ್ನು ಹಿಡಿದ ಸಾಮಂತ ಸಿಂಘರಸ ಶಿವಭಕ್ತನಾಗಿದ್ದು ಅರಸೀಕೆರೆಯಲ್ಲಿದ್ದ ಕೆಲವು ಕಾಳಾಮುಖ ಮುನಿಗಳು ಶಿವಭಕ್ತರಾದ ಜಗತಿ ಕೊತ್ತಳಿಗಳೊಂದಿಗೆ ಇಲ್ಲಿ ನೆಲಸಿ ಅನೇಕ ಶಿವಾಲಯ ನಿರ್ಮಾಣಗಳಿಗೆ ಕಾರಣನಾದನು. ಇವನ ನಂತರದಲ್ಲಿ ಆಡಳಿತ ಸೂತ್ರ ಹಿಡಿದ ಸಾಮಂತ ಗೋಯಿದೇವನನ್ನು ಜೈನ

ಮಾರ್ಗಸ್ಥಗಿತಗುಣ ಕಳಾಳಾಪನುದ್ಯತೃತಾಪಂ" ಎಂದು ಹೊಗಳಿದೆ. ಮುಂದೆ ಅನ್ಯಧರ್ಮ ಪ್ರಾಬಲ್ಯದ ಕಾಲದಲ್ಲಿ ಕಣಕಟ್ಟೆಯ ಬಸದಿಗೆ ಆ ಧರ್ಮೀಯರಿಗೆ ಒದಗಿರಬಹುದಾದ ಸ್ಥಿತಿಯನ್ನು ಊಹಿಸಬಹುದು.[೨೨]

ಜಾವಗಲ್ಲಿನ ಚಂದ್ರನಾಥ ಬಸದಿಯು ೯-೧೦ನೇ ಶತಮಾನಕ್ಕೆ ಸೇರಿದ್ದು ಕಾಲಕಾಲಕ್ಕೆ ಜೀರ್ಣೋದ್ಧಾರಗೊಳ್ಳುತ್ತ ಉಳಿದುಕೊಂಡುಬಂದಿದೆ. ಕೊಣ್ಡಕುಂದಾನ್ವಯದ ದೇಸಿಗಣದ ಏಕವೀರ ಭಟ್ಟಾರಕ ಶಿಷ್ಯ ಶ್ರೀಮತ್ ಅಷ್ಟೋಪವಾಸದ ಕ್ರಿಯಾಗುಣಚನ್ದ್ರಮುನಿಪರ ನಿಸಿಧಿ ಕಲ್ಲು ಶಾಸನವು[೨೩] ಇಲ್ಲಿನ ಮುನಿಗಳ ಬಗೆಗೆ ಬೆಳಕು ಚೆಲ್ಲುತ್ತದೆ. ಮರುದೇವನೆಂಬುವವನಿಂದ ಈ ನಿಸಿಧಿ ಸ್ಥಾಪಿಸಲ್ಪಟ್ಟಿದೆ. ಬಸ್ತಿ ಹಳ್ಳಿಯಲ್ಲಿ ತಂದೆಯ ಪರೋಕ್ಷ ವಿನಯಕ್ಕೆಂದು ಗಂಗರಾಜನ ಮಗ ಬೊಪ್ಪ ಕಟ್ಟಿಸಿದ ದ್ರೋಹ ಘರಟ್ಟವೆಂಬ ಪಾರ್ಶ್ವನಾಥ ಜಿನಾಲಯಕ್ಕೆ ಆಸಂಧಿನಾಡಿಗೆ ಸೇರಿದ್ದ ಈ ಜಾವಗಲ್ಲನ್ನು ಅನೇಕ ಕೇರಿಗಳೊಂದಿಗೆ ನೂರೆಂಬತ್ತು ರಾಜ ಹಸ್ತ ಪ್ರಮಾಣ ಭೂಮಿಯನ್ನು ಹೊಯ್ಸಳ ವಿಷ್ಣುವರ್ಧನನು ದಾನ ಮಾಡಿದ್ದಾನೆ.[೨೪] ಈ ಕಾಲದಲ್ಲೇ ಜಾವಗಲ್ಲಿನ ಬಸದಿಯ ಜೀರ್ಣೋದ್ಧಾರವಾಗಿರುವುದು ಅಲ್ಲಿನ ಸುಂದರ ವಾಸ್ತು ರಚನೆಯಿಂದ ತಿಳಿಯುತ್ತದೆ. ಮುಂದೆ ವೈಷ್ಣವ ಪ್ರಾಬಲ್ಯ ಹೆಚ್ಚಿದಂತೆ ಇಲ್ಲಿ ಅತ್ಯಂತ ಸುಂದರವಾದ ವೈಷ್ಣವ ತ್ರಿಕೂಟ ದೇವಾಲಯ ನಿರ್ಮಾಣವಾಯಿತು. ಈ ದೇವಾಲಯವು ವಿಜಯ ನಗರ ಕಾಲದಲ್ಲಿ ಹೊಸ ಸೇರ್ಪಡೆಗಳನ್ನು ಮಾಡಿಕೊಂಡು ಬೆಳೆಯಿತು. ಲಕ್ಷ್ಮೀದೇವಿಯ ಪೀಠಕ್ಕೆ ಬಳಸಿರುವ ಸಿಂಹಪೀಠ, ಬಸದಿಯ ದುಸ್ಥಿತಿ ಇವು ವೈಷ್ಣವ ಧರ್ಮದ ಏಳಿಗೆಯನ್ನು ಜೈನಧರ್ಮದ ಪತನವನ್ನು ಸೂಚಿಸುತ್ತದೆಯಾದರೂ ಇಲ್ಲಿ ಬಸದಿ ಉಳಿದುಕೊಂಡು ಬಂದಿರುವುದು ಆಶ್ಚರ್ಯ. ಇದಕ್ಕೆ ಕಾರಣ ಬಹಳ ಶಕ್ತಿ ದೇವತೆಯಾದ ಜ್ವಾಲ ಮಾಲಿನೀ ಅಮ್ಮನವರೆಂದು ಸ್ಥಳೀಯ ಜೈನರು ಮುಗ್ಧವಾಗಿ ಹೇಳಿದರೂ ಆ ಉತ್ತರದಲ್ಲಿ ಸತ್ಯವಿದೆ. ಇಲ್ಲಿರುವ ಜ್ವಾಲಮಾಲಿನಿಗೆ ಹರಕೆ, ಪೂಜೆಗಳು ಈಗಲೂ ನಡೆಯುತ್ತಿವೆ. ಇಲ್ಲಿ ಸರಸ್ವತಿಯ, ಕೂಷ್ಮಾಂಡಿನಿಯ ಶಿಲ್ಪವೂ ಇವೆ. ಇದು ಹೊಯ್ಸಳರ ಕಾಲದಲ್ಲಿ ಜ್ವಾಲಮಾಲಿನಿ ಕೇಂದ್ರವಾಗಿದ್ದಿರ ಬೇಕು. ಜೈನ ಧರ್ಮದ ಅಳಿವು ಉಳಿವಿನ ಹೋರಾಟದ ಸಂದರ್ಭದಲ್ಲಿ ಎಂಟನೇ ಶತಮಾನದ ಹೊತ್ತಿಗೇ ಕಾಣಿಸಿಕೊಂಡಿದ್ದ ಯಕ್ಷಯಕ್ಷಿಯ ಆರಾಧನೆ ೧೨ನೇ ಶತಮಾನದ ಹೊತ್ತಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಪಡೆಯಿತು. ಮಂತ್ರ ತಂತ್ರ ಪವಾಡ ಶಕ್ತಿಗಳನ್ನು ಪಡೆದುಕೊಂಡು ಮುನಿಗಳು ಜನ ಸಾಮಾನ್ಯರನ್ನು ಹೆಚ್ಚು ಹೆಚ್ಚಾಗಿ ಆಕರ್ಷಿಸಬೇಕಾದ ಒತ್ತಡಕ್ಕೆ ಹಂಬಲಕ್ಕೆ ಒಳಗಾದುದೇ ಇದಕ್ಕೆ ಕಾರಣ.

ಅರಸೀಕೆರೆ ತಾಲ್ಲೂಕಿನ ಮೊಸಳೆಗ್ರಾಮದಲ್ಲಿ ಬಸದಿಯೊಂದಿದ್ದು, ಅಲ್ಲಿ ಬ್ರಹ್ಮಯಕ್ಷನ ಪೂಜೆ ವಿಶೇಷವಾಗಿದ್ದಂತೆ ತೋರುತ್ತದೆ. ಬ್ರಹ್ಮೇದೇವರ ಗುಡಿ ಎಂದೇ ಕರೆಯಲ್ಪಡುತ್ತಿದ್ದ ಹಾಳುಗುಡಿಯನ್ನು ಆ ಗುಡಿಯ ನಿರ್ಮಾತೃಗಳ ವಂಶದವರು ಜೀರ್ಣೋದ್ಧಾರ ಮಾಡಿ ಬ್ರಹ್ಮಯಕ್ಷನ ವಿಗ್ರಹ ಹಾಳಾಗಿದ್ದರಿಂದ ನೂತನವಾಗಿ ನಿರ್ಮಿಸಿದ ಗುಡಿಯಲ್ಲಿ ಅಶ್ವಾರೋಹಿಯಾದ ಬ್ರಹ್ಮಯಕ್ಷನ ಪ್ರತಿಮೆಯನ್ನು ಪ್ರತಿಷ್ಠಾಪಿಸಿ

ಶೀತಲನಾಥ ತೀರ್ಥಂಕರ ಹಾಗೂ ಸರಸ್ವತಿ ವಿಗ್ರಹಗಳನ್ನು ಮಾಡಿಸಿದ್ದಾರೆ. (ಕ್ರಿ.ಶ.೬-೩-೨೦೦೩) ಇಲ್ಲಿನ ಶಾಸನಗಳ ಒಪ್ಪಗಳಲ್ಲಿ ಅನೇಕ ಜೈನ ಧರ್ಮೀಯ ವ್ಯಕ್ತಿಗಳು ಬಂದೂರದ ಸಾತ ಪಂಡಿತರ ಮಗ ಸಿಂಗಣ್ಣ ಆಲೂರಿನ ಸೇನಬೋವ ಮರಿಯಾನೆ ದೇವ ಮೊಸಳೆಯ ಕಾವಂಣ್ಣನವರ ಮಗ ಸಾತಂಣ್ಣಗಳ ಹೆಸರುಗಳು, ಅನಂತನಾಥ, ಪದ್ಮಪ್ರಭ, ನೇಮಿನಾಥ ತೀರ್ಥಂಕರರ ಹೆಸರಿನ ಒಪ್ಪಗಳಿವೆ. ಈ ಶಾಸನವನ್ನು ಬರೆದಿರುವವನು ಹೆರಗಿನ ಸಾತಂಣ್ಣನವರ ಮಗ ಆದಿಯಣ್ಣ. ಇದನ್ನು ಗಮನಿಸಿದಾಗ ಆ ಊರಿನ ಮತ್ತು ಸಂಬಂಧಿಸಿದ ಗ್ರಾಮಗಳ ಜೈನ ಮತಸ್ಥರಿಗಿದ್ದ ಪ್ರಾಮುಖ್ಯತೆ, ಇತರ ಧರ್ಮಗಳ ಕಾರ್ಯ ಕಲಾಪಗಳಲ್ಲಿ ಅವರನ್ನೂ ಇಟ್ಟುಕೊಂಡು ತೀರ್ಮಾನ ತೆಗೆದುಕೊಳ್ಳುತ್ತಿದ್ದುದು. ಬಹುಷ ಅಲ್ಲಿ ಜೈನಧರ್ಮ ಸುಸ್ಥಿತಿಯಲ್ಲಿತ್ತೆನಿಸುತ್ತದೆ. ಮತ್ತು ಬಸದಿಯೊಂದು ಖಂಡಿತ ಇದ್ದಿರಲೇಬೇಕು. ಬ್ರಹ್ಮಯಕ್ಷನನ್ನು ಬಸದಿಯ ಕ್ಷೇತ್ರ ರಕ್ಷಕನಂತೆ ಭಾವಿಸಿ ಆರಾಧಿಸುವುದು ಬೆಳೆದು ಬಂದಿದ್ದು ಬ್ರಹ್ಮಯಕ್ಷ ಜೈನರಲ್ಲಿ ಪ್ರಖ್ಯಾತನಾಗಿದ್ದನು. ಚಂದನದಿಂದ ಅಲಂಕೃತಗೊಂಡ ಇವನ ಉಬ್ಬುಶಿಲ್ಪವನ್ನು ಬಸದಿಯ ಮುಂದಿನ ಕಂಬಗಳ ಮೇಲೆ ನೋಡಬಹುದು. ಮೊಸಳೆಯಲ್ಲಿ ಬ್ರಹ್ಮೇದೇವರಗುಡಿ ಇರುವುದು ಆಶ್ಚರ್ಯ. ಇದು ಎಕ್ಕೋಟಿ ಜಿನಾಲಯ ಅಥವಾ ಬ್ರಹ್ಮ ಜಿನಾಲಯವಾಗಿದ್ದಿರಬೇಕೆಂಬ ಊಹೆಗೂ ಅವಕಾಶವಿದೆ. ಒಟ್ಟಿನಲ್ಲಿ ಬೀರಯ್ಯ ದಂಡನಾಯಕನ ವೈದ್ಯ ದೇವಕಣ್ಣು ಪಿಳ್ಳೆಯು ಮೊಸಳೆಯಲ್ಲಿ ಧರ್ಮಸಮನ್ವಯಕ್ಕೆ ಸೌಹಾರ್ದಯುತ ಬಾಳ್ವೆಗೆ ದಾರಿ ಮಾಡಿದ್ದನೆನ್ನಬಹುದು.

### ೬.೨.೧.೧. ಜೈನ ಧರ್ಮ ಪೋಷಕರು

ಹೊಯ್ಸಳ ವಿಷ್ಣುವರ್ಧನ, ಒಂದನೇ ನರಸಿಂಹ ಮತ್ತು ಇಮ್ಮಡಿ ಬಲ್ಲಾಳನ ಕಾಲದಲ್ಲಿ ಈ ಪ್ರದೇಶದ ಅನೇಕ ಅಧಿಕಾರಿಗಳು ಸಿರಿವಂತ ವ್ಯಾಪಾರಿಗಳು ವಡ್ಡವ್ಯವಹಾರಿಗಳು ಪಟ್ಟಣ ಶೆಟ್ಟಿಗಳು ವಿಶೇಷವಾಗಿ ಪ್ರೋತ್ಸಾಹಿಸಿರುವುದು ಕಂಡುಬರುತ್ತದೆ. ಮತ್ತು ಆ ಕಾಲದಲ್ಲಿ ಕೆಲವು ಜಿನಾಲಯಗಳು ನಿರ್ಮಾಣಗೊಂಡಿರುವುದನ್ನು ಶಾಸನಗಳು ಹೇಳುತ್ತವೆ.

**ಅಧಿಕಾರಿ ವರ್ಗ** : ಹೊಯ್ಸಳ ವಿನಯಾದಿತ್ಯನ ಪಾದ ಪದ್ಮೋಪಜೀವಿಯಾಗಿದ್ದ ಸರ್ವಾಧಿಕಾರಿ ಸಂಧಿವಿಗ್ರಹಿ ಮಹಾಪ್ರಧಾನನಾಗಿದ್ದ ಚಾವುಂಡ ರಾಜನ ಕುಟುಂಬ ನಿಷ್ಠಾವಂತ ಜೈನ ಕುಟುಂಬವಾಗಿದ್ದು ಜೈನಧರ್ಮಕ್ಕೆ ಅವರ ಕೊಡುಗೆ ವಿಶೇಷವಾಗಿದೆ. ಈತ ಮೊದಲು ಆಸಂಧಿ ನಾಡಿನ ದೇಸವಣೆಯನ್ನು ಆಳುತ್ತಿದ್ದು ಪೆರ್ಗಡೆ ಎಂದು ಕರೆಸಿಕೊಂಡಿದ್ದಾನೆ ಮುಂದೆ ಅವನ ಸ್ಥಾನಮಾನ ಏರಿದೆ.[೨೯] ಶ್ರವಣ ಬೆಳಗೊಳದ ಚಾವುಂಡರಾಯ ಬಸದಿಯನ್ನು ಇವನು ಮಾಡಿಸಿದ್ದಾನೆಂದು ಅಭಿಪ್ರಾಯವಿದೆ.[೩೦] ಇವನ ಹಿರಿಯ ಮೂರು ಮಕ್ಕಳು ಯಾಧವರಾಜ, ಜಿನದೇವ, ತೈಲಪರು ಕೂಡಿ ದೇಸವಣೆಯ ಕುರಾದ ಹಳ್ಳಿಯಲ್ಲಿ ರಾಯಘಟ್ಟ ಒಳಗಾಗಿ ಕೆರೆ ದೇಗುಲವನ್ನು ಮಾಡಿಸಿದರೆಂದು ತಿಳಿದುಬರುತ್ತದೆ.[೩೧] ಬಹುಷ ಈ ದೇಗುಲ ಜಿನಾಲಯವಾಗಿರುವ ಸಾಧ್ಯತೆಯಿದೆ. ರಾಯಘಟ್ಟ ತಂದೆಯ ಹೆಸರಿನಲ್ಲಿ ನಿರ್ಮಿಸಲ್ಪಟ್ಟಿರಬೇಕು.

ಮೂರು ಮಕ್ಕಳಲ್ಲಿ ಜಿನ ದೇವ ಸಕಳಶಾಸ್ತ್ರ ಕೋವಿದ 'ವಾಗ್ಯುವತೀವದನಾಂಬುಜಾತ ಮದುಪ"ನೆಂದು ಪ್ರಖ್ಯಾತನಾಗಿದ್ದನು. ಬೆಳುಗುಳದ ಜನರೆಲ್ಲ ಹೊಗಳುವಂತೆ ದ್ವಿದಳ ಬಸದಿಯನ್ನು ಮತ್ತು ಅಲ್ಲಿಯ ಪಾರ್ಶ್ವನಾಥ ಶಿಲ್ಪವನ್ನು ಇವನೇ ಮಾಡಿಸಿದ್ದಾನೆಂದು ಹೇಳಲಾಗಿದೆ.[೨೮] ಚಾವುಂಡರಾಜನ ಇತರ ಮಕ್ಕಳಾದ ರೇಚಿ, ಪಾರ್ಶ್ವ, ರಕ್ಕಸಿಮಯ್ಯರಲ್ಲಿ ಪಾರ್ಶ್ವನು ಹುಟ್ಟಿದೂರು ನಿಟ್ಟೂರಿನಲ್ಲಿ ಚೈತ್ಯಾಲಯವನ್ನು ಮಾಡಿಸಿದ್ದನು.[೨೯] ಈ ಚೈತ್ಯಾಲಯ ಯಾವುದೆಂದು ತಿಳಿದು ಬಂದಿಲ್ಲ.*

ಚಾವುಂಡರಾಜನ ವಂಶದಲ್ಲಿ ಪಟ್ಟಿಸ ಭಂಡಾರಿ ಪಾರಿಸಣ್ಣ ಅತ್ಯಂತ ಪರಾಕ್ರಮಿಯಾಗಿದ್ದು ಒಂದನೇ ನರಸಿಂಹ ಮತ್ತು ಬಿಜ್ಜಳನ ಮಗ ಅಹವಮಲ್ಲರ ನಡುವೆ ನಡೆದ ಪ್ರಸಿದ್ಧ ಯುದ್ಧದಲ್ಲಿ ತಲೆಗೊಟ್ಟದುಕ್ಕಾಗಿ ಮೆಚ್ಚಿ ಪರೋಕ್ಷ ವಿನಯವಾಗಿ ಅವನ ಮಗ ಶಾಂತಿಯಣ್ಣನಿಗೆ ಅರಸು ಕರುಗುಂದವನ್ನು ಪ್ರಭುತ್ವ ಸಹಿತವಾಗಿ ನೀಡಿದ್ದಾನೆ. ಈ ಕರುಗುಂದವನ್ನು ವಿಷ್ಣುವರ್ಧನನು ಚಾವುಂಡಮಯ್ಯನಿಗೆ ತುಲಾಪುರುಷದಾನದಲ್ಲಿ ಸ್ವಭೂಮಿಯಾಗಿ ನೀಡಿದ್ದನು.[೩೦] ಶಾಂತಿಯಣ್ಣನು ಪ್ರಭುತ್ವ ಸಮೇತವಾಗಿ ಪಡೆದ ಕರುಗುಂದದಲ್ಲಿ ತಂದೆಯ ಪರೋಕ್ಷ ವಿನಯಕ್ಕಾಗಿ ಬಸದಿಯನ್ನು ನಿರ್ಮಿಸಿ ವಾಸುಪೂಜ್ಯ ಸಿದ್ಧಾಂತ ದೇವರ ಶಿಷ್ಯ ಮಲ್ಲಿಶೇಣಪಂಡಿತರಿಗೆ ಭೂಮಿಯ ದಾನವನ್ನು ನೀಡಿದ್ದಾನೆ.

**ವರ್ತಕರು-ನಖರ ಜಿನಾಲಯ** : ಕ್ರಿ.ಶ.೧೧೬೮ರಲ್ಲಿ ಬಂದೂರಿನ ವಿಭುಧೈಕ ಬಾಂಧವನೆಂದು ಪ್ರಸಿದ್ಧನಾಗಿದ್ದ ಬೆಳ್ಳಿಯ ದಾಸಿಸೆಟ್ಟಿಯು ದೋರಸಮುದ್ರದಲ್ಲಿ 'ಹೊಯ್ಸಳ ಜಿನಾಲಯವನ್ನು ಮಾಡಿಸಿದ್ದಾನೆ. ಆ ಜಿನಾಲಯಕ್ಕೆ ಬಂದೂರನ್ನು ದಾಸಿಶೆಟ್ಟಿಯ ಸೋದರಳಿಯಂದಿರು ದಾನ ಬಿಡುತ್ತಾರೆ. ಆ ಬಂದೂರಿನಲ್ಲಿ ವಾಸು ಪೂಜ್ಯ ವ್ರತೀಂದ್ರರ ಶಿಷ್ಯ ಪುಷ್ಪಸೇನದೇವ ಬಸದಿಯನ್ನು ಮಾಡಿಸುತ್ತಾರೆ. ದಾಸಿಸೆಟ್ಟಿಯ ಸೋದರಳಿಯಂದಿರು ಬಂದೂರಿನ ಹೆಗ್ಗಡೆಗಳಾದ ಮಾದಿರಾಜನು ಸಂಕರಶೆಟ್ಟಿಯು ಪಾರ್ಶ್ವನಾಥನ ಪ್ರತಿಮೆಯನ್ನು ಮಾಡಿಸಿಕೊಟ್ಟಿದ್ದಾರೆ. ಆ ಬಸದಿಗೆ ತಳವೃತ್ತಿಯನ್ನು, ಬಸದಿಯಲ್ಲಿದ್ದ ಋಷಿಯ ಆಹಾರದಾನಕ್ಕೆ ಇತರೆ ವಿಧಿಗಳಿಗೆ ಅಪಾರ ಭೂಮಿ ತೋಟ ಕಳವತ್ತವನ್ನು, ಸುಂಕದ ಹೆಗ್ಗಡೆಗಳು ನಂದಾದೀವಿಗೆಗೆ ಕೈಗಾಣ ಒಂದನ್ನು ಬಿಟ್ಟ ವಿವರಗಳಿವೆ.[೩೧] ವಾಸು ಪೂಜ್ಯ ವ್ರತೀಂದ್ರರ ಗುಡ್ಡನಾದ ಸಿರಿವಂತ ವ್ಯಾಪಾರಿ ಬೆಳ್ಳಿಯ ದಾಸಿಸೆಟ್ಟಿಯು ದಾನ ಧರ್ಮ ಕಾರ್ಯಗಳಿಂದ ವಿಭುದೈಕ ಬಾಂಧವನೆಂದು ಹೆಸರು ಪಡೆದು ಧರ್ಮದಿಂದ 'ಪರದುಗೆಯ್ದು ಅರ್ಥವನ್ನು ನ್ಯಾಯದಿಂದ ಪಡೆದು ದೇವತಾ ಪೂಜೆಗೆ ಬಸದಿಗೆ ಶಿಷ್ಟೇಷ್ಟದಾನಕ್ಕೆ ನಿತ್ಯವೂ ಕೊಡುತ್ತಿದ್ದು, ಅವನ ಭಾಗ್ಯವೇ ತವನಿಧಿಯಾಗಿ ಬೆಳೆಯಿತೆಂದು

* ನೀರ್ಗುಂದನಾಡಿನ ನಿಟ್ಟೂರು (ಹಾಸನ ತಾಲ್ಲೂಕು ಸಾಲಗಾಮೆ ಹೋಬಳಿ). ಇವರ ಆಳ್ವಿಕೆಯ ಪ್ರದೇಶ ಕರುಗುಂದಕ್ಕೆ ಸಮೀಪದಲ್ಲಿದೆ.ಅಗ್ರಹಾರವಾಗಿದ್ದ ನಿಟ್ಟೂರಿನ ಕಾಲುವಳ್ಳಿ ಬ್ರಹ್ಮದೇವರ ಹಳ್ಳಿಗೆ ಹೋಗುವ ಕಾಲುದಾರಿಯಲ್ಲಿ ಶ್ರವಣನ ಬಾವಿಯೆಂಬ ಹೆಸರಿನ ಕೊಳವೊಂದು ಉಳಿದಿದೆ. ಈ ಕೊಳ ಜಿನಾಲಯಕ್ಕೆ ಸಂಬಂಧಿಸಿದ್ದಿತೇ? ಸಧ್ಯಕ್ಕೆ ಯಾವ ಆಧಾರಗಳೂ ದೊರಕಿಲ್ಲ. ತುಮಕೂರು ತಾಲ್ಲೂಕಿನ ಗುಬ್ಬಿ ನಿಟ್ಟೂರಿನ ಶಾಂತಿನಾಥ ಜಿನಾಲಯವೇ ಇವನು ನಿರ್ಮಿಸಿದ ಜಿನಾಲಯವಾಗಿರುವ ಸಾಧ್ಯತೆಯೂ ಇದೆ.

ಹೇಳಲಾಗಿದೆ. ರಾಜಧಾನಿಯಲ್ಲಿ ಬಸದಿ ನಿರ್ಮಿಸುವ ಅವನ ಸಿರಿತನ ಅಲ್ಲಿನ ಅಧಿಕಾರ, ಧರ್ಮ ಅರ್ಥದೊಂದಿಗಿನ (ವ್ಯಾಪಾರ) ಅವನ ಸಂಬಂಧವನ್ನು ಗಮನಿಸಬಹುದು.

ಅರಸೀಕೆರೆಯಲ್ಲಿ ನಖರ ಜಿನಾಲಯವಿದ್ದು ಯಾಪನೀಯ ಸಂಘದ ಎಕ್ಕೋಟಿ ಜಿನಾಲಯವಾಗಿತ್ತು. ಜೈನ ಸಮಾಜದ ಎಲ್ಲ ಬಸದಿಗಳಲ್ಲಿ ಶ್ರಾವಕರೆಲ್ಲರಿಗೂ ಪ್ರವೇಶ ವಿತ್ತಾದರೂ ಬಹುಶಃ ಜಿನಮುನಿಗಳಿಗೆಂದು ಕಟ್ಟಿಸಿದ್ದ ಅಥವಾ ಅವರಿಗೆ ಸೇರಿರುವ ಬಸದಿಗಳಲ್ಲಿ ಶ್ರಾವಕರಿಗೆ ಹೆಚ್ಚಿನ ಸ್ವಾತಂತ್ರ್ಯವಿದ್ದಿರಲಾರದು. ಮತಾಂತರಗೊಂಡಿದ್ದ ವರ್ತಕರನ್ನು ಮೂಲತಃ ಜೈನರಾದವರು ಅಲಕ್ಷಿಸಿದ್ದಿರಬೇಕು. ಇದರಿಂದಾಗಿ ವರ್ತಕರು ಸಾಮಾನ್ಯವಾಗಿ ವ್ಯಾಪಾರಕ್ಕೆಂದು ಹೋಗುತ್ತಿದ್ದ ಕೇಂದ್ರಸ್ಥಳಗಳಲ್ಲಿ ತಮ್ಮ ದಿನನಿತ್ಯದ ಶ್ರಾವಕರ ವಿಧಿಗಳನ್ನು ಆಚರಿಸಲು ಅನುಕೂಲವಾಗುವಂತೆ 'ನಕರ ಜಿನಾಲಯಗಳನ್ನು ನಿರ್ಮಿಸಿಕೊಂಡಿದ್ದರೆಂದೂ, ನಕರ ಜಿನಾಲಯಗಳಲ್ಲಿ 'ಜಿನಪೂಜೆ'ಗಾಗಿ ಪೂಜಕರ ವ್ಯವಸ್ಥೆಯು ಇತ್ತೆಂದು... ಈ ಬಸದಿಗಳಿಗೆ ಸಂಬಂಧಿಸಿದ ಶಾಸನಗಳು ಯಾಪನೀಯ ಸಂಘದ ಗುರುಗಳನ್ನು ಅಥವಾ ಬಲಾತ್ಕಾರಗಣದ ಜಿನಮುನಿಗಳನ್ನು ಉಲ್ಲೇಖಿಸಿರುತ್ತವೆಂಬ ಸೂಕ್ಷ್ಮ ವಿಚಾರವನ್ನು ಡಾ. ವಸಂತಲಕ್ಷ್ಮಿಯವರು ಗುರುತಿಸಿದ್ದಾರೆ.[೩೨] ಇದು ಜೈನ ಸಮಾಜದಲ್ಲಿದ್ದ ಮಡಿವಂತಿಕೆಯನ್ನೂ ಸಮಾಜ ಮುಖಿಯಾಗುವತ್ತ ಹೊರಟ ಜೈನ ಧರ್ಮವು ಅಪಾರ ಸಂಖ್ಯೆಯ ಸಿರಿವಂತ ವರ್ತಕ ಸಮೂಹವನ್ನು ಆಕರ್ಷಿಸಿ ಆರ್ಥಿಕ ಕ್ಷೇತ್ರದಲ್ಲಿ ಸ್ವಾಮ್ಯವನ್ನು ಪಡೆಯಲು ಸಾಮಾನ್ಯ ಜನರನ್ನು ಒಲಿಸಿಕೊಳ್ಳಲು ತನ್ನ ತತ್ವ ಆಚರಣೆಗಳಲ್ಲಿ ಹಲವಾರು ಬದಲಾವಣೆಗಳನ್ನು ಮಾಡಿಕೊಂಡಿರುವುದನ್ನು ಹೇಳುತ್ತದೆ.

**೬.೨.೧.೨ ಯಾಪನೀಯ ಸಂಘ**

ಜೈನಧರ್ಮವು ಕಾಲಕಾಲಕ್ಕೆ ಅಳವಡಿಸಿಕೊಂಡ ತತ್ವಗಳು ಆಚರಣೆಗಳಿಂದ ಅದರಲ್ಲಿ ದಿಗಂಬರ ಶ್ವೇತಾಂಬರಗಳೆಂಬ ಕವಲುಗಳು ಅನೇಕ ಸಂಘ ಗಣ ಗಚ್ಛಗಳು ಹುಟ್ಟಿಕೊಂಡವು. ಅವುಗಳಲ್ಲಿ 'ಯಾಪನೀಯ' ಸಂಘವು ದಕ್ಷಿಣ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ೧೦ನೇ ಶತಮಾನದ ಹೊತ್ತಿಗೆ ಪ್ರಬಲ ಜೈನ ಸಂಘವಾಗಿತ್ತು. ಈ ಸಂಘವು ಒಂದು ರೀತಿಯಲ್ಲಿ ಕರ್ನಾಟಕದ ಸಂದರ್ಭದಲ್ಲಿ ಹುಟ್ಟಿಕೊಂಡ ಇಲ್ಲಿಯ ಕೂಸು[೩೩] ದಕ್ಷಿಣ ಭಾರತದ ಭಾಗದಲ್ಲಿ ಜೈನಮತದ ಸಂಪ್ರದಾಯದ ಮೂಲಸಂಘವು ದುರ್ಬಲಗೊಳ್ಳುತ್ತಿದ್ದಾಗ ಯಾಪನೀಯ ಸಂಗವು ಸಾಮಾಜಿಕ ಮತ್ತು ಆರ್ಥಿಕ ಬೆಂಬಲಗಳಿಸಿ ಜಿನಮತವು ಹರಡಲು ಸಹಕರಿಸಿತ್ತೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[೩೪] ಇದಕ್ಕೆ ಕಾರಣ ಅದು ಅಳವಡಿಸಿಕೊಂಡ ಆಕರ್ಷಕ ತತ್ವ ಆಚರಣೆಗಳು. ಶ್ವೇತಾಂಬರ ದಿಗಂಬರಗಳ ನಡುವಿನ ಸಮನ್ವಯ ಇಲ್ಲಿ ಕಾಣುತ್ತದೆ. ಸ್ತ್ರೀಯರಿಗೆ ಮುಕ್ತಿಗೆ ಅವಕಾಶ, ಉತ್ಸವ, ಪರ್ವಗಳು ಪ್ರವಚನಗಳು, ರಂಗಭೋಗ, ಇತ್ಯಾದಿಗಳು ಯಕ್ಷ ಪರಿಕಲ್ಪನೆ, ಶಿಲ್ಪವಿನ್ಯಾಸ, ಮೂರ್ತಿರಚನೆ, ಪ್ರತಿಷ್ಠಾಪನೆ,

ಪೂಜಾವಿಧಾನಗಳಲ್ಲಿನ ಮಾರ್ಪಾಟುಗಳು ಅವರ ಸಮನ್ವಯ ಸೂತ್ರ ಜನಪರ ದೋರಣೆಗಳು ಹೆಚ್ಚು ಹೆಚ್ಚಾಗಿ ಸಾಮಾನ್ಯರನ್ನು ಆಕರ್ಷಿಸತೊಡಗಿದವು. ಜನ ಜೈನ ಧರ್ಮಕ್ಕೆ ಮತಾಂತರಗೊಳ್ಳಲು ಇದು ಪ್ರೇರಣೆಯಾಯಿತು.[೩೫]

ಕೆಲವು ನಿಷ್ಠಾವಂತ ಆಚಾರ್ಯರು ಯಾಪನೀಯ ಸಂಘವನ್ನು ಜೈನಾಭಾಸವೆಂದು ಕರೆದಿದ್ದಾರೆ. ಈ ಸಂಘದ ಜಿನಾಲಯಗಳು ಜಾತಿ ಬೇಧವಿಲ್ಲದೆ ಎಲ್ಲರನ್ನೂ ಸ್ವಾಗತಿಸಿದುದರಿಂದ ಮತ್ತು ಇತರ ಧರ್ಮದೊಂದಿಗೆ ಒಡಂಬಡಿಕೆ ಮಾಡಿಕೊಂಡ ಕಾರಣ ಸಂಪ್ರದಾಯಸ್ತ ಜೈನರ ಉಪೇಕ್ಷೆಗೆ ಗುರಿಯಾದಂತೆ ತೋರುತ್ತದೆ. ಅರಸೀಕೆರೆಯಲ್ಲಿ ಯಾಪನೀಯ ಸಂಘಕ್ಕೆ ಸೇರಿದ ನಖರ ಜಿನಾಲಯವಿದ್ದುದು ತಿಳಿದುಬರುತ್ತದೆ.[೩೬] ಇದನ್ನು ಊರಿನ ಮುಖಮಂಡನ ವೆನಿಸುವಂತೆ ನಖರಜನಗಳು ಮಾಡಿಸಿದ್ದು ಅಲ್ಲಿ ಜಿನ ಮುನೀಂದ್ರರು ನೆಲಸಿದ್ದರು. ಅರಸೀಕೆರೆಯ ಅಧಿಕಾರಿಗಳು ನಖರರು ಪಟ್ಟಣಸೆಟ್ಟಿ ವಡ್ಡವ್ಯವಹಾರಿಗಳು ಯಥೇಚ್ಛವಾಗಿ ದಾನದತ್ತಿ ನೀಡಿರುವುದು ದಾಖಲಾಗಿದೆ. ಪೊಂನಾಗವೃಕ್ಷ ಮೂಲಗಣ ಯಾಪನೀಯ ಸಂಘದ ಗುಡ್ಡ ಮಹಾವಡ್ಡಬ್ಯವಹಾರಿ ವಚನಮಾಣಿಕಶೆಟ್ಟಿಯು ಪಾರ್ಶ್ವನಾಥ ತೀರ್ಥಂಕರನ ಪ್ರತಿಮೆಯನ್ನು ಮಾಡಿಸಿಕೊಟ್ಟಿದ್ದಾನೆ. ಭೂಮಿ, ಎರಡು ಮನೆಗಳು, ನಂದಾದೀವಿಗೆಗಾಗಿ ಕೈಗಾಣ, ಎತ್ತುಗಾಣ ನೀಡಲಾಗಿತ್ತು. ಪಟ್ಟಣ ಸ್ವಾಮಿ ಮಹಾವಡ್ಡವ್ಯವಹಾರಿ ಎತ್ತಿನ ಶೆಟ್ಟಿಯರು ದೇವರಿಗೆ ತೋಟಗದ್ದೆ ಬೆದ್ದಲು ನೀಡಿದ್ದಾನೆ. ದ್ವಿಜವಂಶಸೇವ್ಯನಾದ ಹಿರಿಯಭಂಡಾರಿ ಕೇಶವ ದೇವನು ಭೂಮಿಯನ್ನು ನೀಡಿದ್ದಾನೆ. ಮಹಾ ಪ್ರಧಾನ ಚಂದ್ರಮೌಳಿಯಣ್ಣ* ಸಿರಿವಂತ ಇತರ ಸೆಟ್ಟಿಯರು ಶಕ್ತ್ಯಾನುಸಾರ ಹೊನ್ನನ್ನು ನೀಡಿದ್ದಾರೆ. ಅರಸೀಕೆರೆಯ ಭವ್ಯ ನಖರರು, ಪ್ರಜೆ ಗಾವುಂಡುಗಳು ಹೆಗ್ಗಡೆಗಳು ಏಕಾಸ್ತರಾಗಿ ಕ್ರಿ.ಶ.೧೧೬೮ರಲ್ಲಿ ಕುಮಾರ ಕೀರ್ತಿ ಸಿದ್ಧಾಂತದೇವರ ಶಿಷ್ಯ ಪಾರಿಶ್ವ ಪಂಡಿತರಿಗೆ ಈ ಸಂಪತ್ತನ್ನು ವಹಿಸಿಕೊಟ್ಟಿದ್ದಾರೆ. ಈ ಕುಮಾರ ಕೀರ್ತಿ ಸಿದ್ಧಾಂತ ದೇವರು 'ಯಮ ನಿಯಮ ಸ್ವಾದ್ಯಾಯ... ಜಪ ಸಮಾದಿ ಶೀಲಗುಣ ಸಂಪನ್ನರೆಂದೂ... ಮಂತ್ರವಾದಿ ಮಕರಧ್ವಜರೂ ಬ್ರಹ್ಮರಾಕ್ಷಸ ಭಯಂಕರರು ಶಾಖಿನಿ ದಿಶಾಪಟ್ಟರು ಸಿದ್ಧಾಂತ ಶಿರೋಮಣಿಗಳು ಎಂದು, ಯಾಪನೀಯ ಸಂಘದ ಮುಡುವಗಣಕ್ಕೆ ಸೇರಿದವರೆಂದು ಹೇಳಿದೆ.

## ೬.೨.೧.೩. ಎಕ್ಕೋಟಿ ಜಿನಾಲಯ

ಅರಸೀಕೆರೆಯ ನಕರ ಜಿನಾಲಯವು ಎಕ್ಕೋಟಿಗಳೆಂದು ಕರೆಯಲ್ಪಡುವ ಕಾಳಾಮುಖ ಪ್ರತಿಬದ್ಧವಾದ ಎಕ್ಕೋಟಿ ಜಿನಾಲಯವಾಗಿತ್ತು. ೧೨ನೇ ಶತಮಾನದಲ್ಲಿ ಉತ್ತರ ಕರ್ನಾಟಕದಲ್ಲಿ ಶೈವರಿಂದ ಆಕ್ರಮಣಕ್ಕೆ ಗುರಿಯಾಗಿದ್ದ ಜೈನರ, ಬಸದಿಗಳ ದುಸ್ಥಿತಿಯ ಕಹಿ ಅನುಭವದಿಂದಾಗಿ ತನ್ನ ಬಸದಿಗಳನ್ನುಳಿಸಿಕೊಳ್ಳಲು

* ಅವನ ಮಡದಿ ಆಚಿಯಕ್ಕ ಶ್ರವಣ ಬೆಳಗೊಳದಲ್ಲಿ ಪಾರ್ಶ್ವನಾಥ ಬಸದಿಯನ್ನು ನಿರ್ಮಿಸಿ ವೀರ ಬಲ್ಲಾಳನಿಂದ ಬೊಮ್ಮೇನ ಹಳ್ಳಿಯನ್ನು ಪಡೆದು ದಾನ ನೀಡಿದ್ದಾಳೆ. ಎ.ಕ.೨. ಶ್ರ.ಬೆ.ಶಾ.ಸಂ. ೪೪೪ ಕ್ರಿ.ಶ.೧೧೮೧

ಎಕ್ಕೋಟಿಗಳೊಂದಿಗೆ ಒಡಂಬಡಿಕೆ ಮಾಡಿಕೊಳ್ಳಬೇಕಾದ ಅನಿವಾರ್ಯ ಒತ್ತಡ ಜೈನ ಧರ್ಮಕ್ಕಿತ್ತು. ಅರಸೀಕೆರೆಯು ಪ್ರಮುಖ ಕಾಳಾಮುಖ ಶೈವ ಕೇಂದ್ರವಾಗಿದ್ದು ಪ್ರಬಲ ಧರ್ಮದೊಂದಿಗೆ ಈ ಜೈನ ಸಮಾಜವು ಒಡಂಬಡಿಕೆ ಮಾಡಿಕೊಂಡಿತು. ಇದಕ್ಕೆ ಆ ಪಟ್ಟಣದ ಸಮಸ್ತ ಅಧಿಕಾರಿ ವರ್ಗ, ವರ್ತಕ ಸಮೂಹದ ಒಪ್ಪಿಗೆಯೂ ಇತ್ತೆಂದು ತಿಳಿಯಬಹುದು. ಈ ಕಾರಣಕ್ಕಾಗಿ ಮಡಿವಂತ ಜೈನಸಮಾಜದವರ ಅಲಕ್ಷ್ಯಕ್ಕೆ ಗುರಿಯಾಗಬಾರದೆಂದು 'ಎಕ್ಕೋಟಿ ಜಿನಾಲಯವಿದನ್ನು ಉತ್ಸಾಹದಿಂದ ಪೊರೆಯುವುದು ಸಲ್ಲದು' ಎಂದು ಪ್ರತ್ಯೇಕ ಉಳಿದ ಪ್ರಸಿದ್ಧ ಗಣಗಳು, ಪ್ರೀತಿಯಿಂದ ಒಲಿದು ಧರ್ಮವನ್ನು ರಕ್ಷಿಸಬೇಕು ಎಂದು ನೇರವಾಗಿ ಶಾಸನದಲ್ಲಿ ಬಿನ್ನಹ ಮಾಡಲಾಗಿದೆ. ಈ ಜೈನ ಶಾಸನದಲ್ಲಿ ಮೊದಲು ಕಾಳಾಮುಖಮುನಿ ತ್ರಿಭುವನಶಕ್ತಿಪಂಡಿತರ ಹೊಗಳಿಕೆ, ನಂತರ ಯಾಪನೀಯ ಕುಮಾರಕೀರ್ತಿಯ ಹೊಗಳಿಕೆಯಿದೆ. 'ಕಾಳಾಮುಖ ಪ್ರತಿಬದ್ಧ ಎಂಬುದನ್ನು ಪದ್ಯಗಳ ಮದ್ಯೆ ತೂರಿಸಲಾಗಿದೆ. ಶಾಸನದಲ್ಲಿ ಎರಡುಕಡೆ ಯಾಪನೀಯ ಎಂಬ ಪದವನ್ನು ಕೆತ್ತಿ ಅಳಿಸುವ ಪ್ರಯತ್ನ ನಡೆದಿದೆ" ಎಂದು ಶೆಟ್ಟರ್ ಹೇಳುತ್ತಾರೆ.[೩೭] ಮುಂದೆ ಈ ಜಿನಾಲಯ ಸಂಪೂರ್ಣವಾಗಿ ಎಕ್ಕೋಟಿಗಳ ವಶವಾಗಿರುವುದನ್ನು ಇದು ಸೂಚಿಸುತ್ತಿರಬಹುದೇ. ಈಗ ನಖರ ಜಿನಾಲಯ ಉಳಿದುಬಂದಿಲ್ಲ.

ಅರಸೀಕೆರೆಯ ಸಹಸ್ರಕೂಟ ಬಸದಿಯು ಎಕ್ಕೋಟಿ ಜಿನಾಲಯವಾಗಿದ್ದು, ಇಂದಿಗೂ ಉಳಿದುಕೊಂಡು ಬಂದು ಪೂಜಾದಿಗಳು ನಡೆಯುತ್ತಿವೆ. ಅರಸೀಕೆರೆಯ ಭವ್ಯನಕರಗಳ ರತ್ನತ್ರಯಾಧಿಷ್ಠಿ ತತ್ವವನ್ನು ಧರ್ಮ ಪ್ರತಿಪಾಲನಾ ಶಕ್ತಿಯನ್ನು ಕಳಚುರ್ಯ ಕುಲಸಚಿವೋತ್ತಮನಾಗಿದ್ದ ರೇಚರಸನು ಕೇಳಿ, ಹೊಯ್ಸಳ ಬಲ್ಲಾಳನನ್ನು ಆಶ್ರಯಿಸಿ ಪ್ರೀತಿಯಿಂದ ಅಲ್ಲಿ ಸಹಸ್ರಕೂಟ ಜಿನಾಲಯವನ್ನು ನಿರ್ಮಿಸಿ ಜಿನಬಿಂಬ ಪ್ರತಿಷ್ಠೆ ಮಾಡಿಸಿದನೆಂದು ಶಾಸನ[೩೮] ಹೇಳಿದೆ. ವಸುಧೈಕಬಾಂಧವನೆಂದು ಪ್ರಸಿದ್ಧನಾದ ನಿಷ್ಠಾವಂತ ಜೈನ ರೇಚರಸನು ಉತ್ತರ ಕರ್ನಾಟಕದಲ್ಲಿ ತನ್ನ ಧರ್ಮಕ್ಕೊದಗುತ್ತಿದ್ದ ದುಸ್ಥಿತಿಗೆ ನೊಂದು ಹೊಯ್ಸಳ ಆಶ್ರಯದಲ್ಲಿ ಅದಕ್ಕೆ ಅಪಾಯವಿಲ್ಲವೆಂದು ಭಾವಿಸಿರುವ ಧಾರ್ಮಿಕ ಕಾರಣವೂ ರಾಜಕೀಯ ಕಾರಣದೊಂದಿಗೆ ಅವನ ವಲಸೆಗೆ ಕಾರಣವಾಗಿರಬೇಕು. ಹಾಗೆಂದೇ ಆತ ಮಡದಿ ಗೌರಾದೇವಿಯ ನೋಂಪಿಯ ಉದ್ಯಾಪನೆ ನಿಮಿತ್ತ ಅರಸೀಕೆರೆಯಲ್ಲಿ ಸಹಸ್ರ ಕೂಟ ಬಸದಿಯನ್ನು ಕಟ್ಟಿಸಿದ.[೩೯] ಜಿನನಾಥಪುರದಲ್ಲಿ ಶಾಂತೀಶ್ವರ ಬಸದಿಯನ್ನು ಕಟ್ಟಿಸಿದ್ದು, ಇದು ಹೊಯ್ಸಳ ನಾಡಿನಲ್ಲೇ ಅತ್ಯಂತ ಸುಂದರವಾದ ಜೈನ ದೇವಾಲಯವೆಂದೂ, ಜೈನರು ಕಟ್ಟಿದ ಕೊನೆಯ ಭವ್ಯದೇವಾಲಯವೆಂದು ಶೆಟ್ಟರ್ ಅಭಿಪ್ರಾಯಪಟ್ಟಿದ್ದಾರೆ.[೪೦] ಅತಿ ಆಸ್ತೆಯಿಂದ ಭರದಿಂದ ಜೋಳದ ಕೂಳು ಬೆಣ್ಣೆಯನ್ನು ಊಟ ಮಾಡುವಂತೆ ಹನ್ನೆರಡು ವರ್ಷಕೂಡಿ ಪರಿಪೂರ್ಣ ವ್ರತನಾಗಿ ಸಾಗರನಂದಿ ವ್ರತೀಪಾಳ ರೇಚರಸನಿಂದ ಸಹಸ್ರ ಕೂಟ ಗ್ರಹವನ್ನು ಮಾಡಿಸಿದರಂತೆ[೪೧] ಇಮ್ಮಡಿ ವೀರ ಬಲ್ಲಾಳನು ಧಾರಾಪೂರ್ವಕವಾಗಿ ಈ ಬಸದಿಗೆ ದಾನ ನೀಡಿದ್ದಾನೆ.[೪೨] ಅವನ ಮಗಳು ರಾಜಕುಮಾರಿ ಸೋಮಲದೇವಿ ಅರಸೀಕೆರೆಯ ಅವಳ

ಹೆಗ್ಗಡೆಗಳು, ಮಹಾಜನರು, ಸಾಯಿರೊಕ್ಕಲು, ನಖರದೊಂದಿಗೆ ಸೇರಿ ಈ ಜಿನಾಲಯಕ್ಕೆ ಭೂದಾನ ಮಾಡಿದ್ದಾಳೆ.[೪೩] ಈ ಬಸದಿಗೆ ಕೇವಲ ಅಧಿಕಾರಿಗಳು ಸಿರಿವಂತರು ಅರಸುಮನೆತನದವರಷ್ಟೇ ಅಲ್ಲ ಅನೇಕ ಸಾಮಾನ್ಯ ಶ್ರಾವಕರು ದಾನ ನೀಡಿದ್ದಾರೆ. ಹಿತ್ತಾಳೆಯ ಪ್ರತಿಮೆಗಳನ್ನು, ಪಾರ್ಶ್ವನಾಥ ಮೂರ್ತಿ[೪೪] ಪಂಚ ಪರಮೇಷ್ಠಿಗಳ ವಿಗ್ರಹವನ್ನು ಚಾರಿತ್ರಮತಿ ದೇವವೆನ್ನುವವನು ಮಾಡಿಸಿಕೊಟ್ಟಿದ್ದಾನೆ.[೪೫] ಆ ಬಸದಿಯ ಶಾಂತಿನಾಥ ತೀರ್ಥಂಕರನ ಪ್ರತಿಮೆಗೆ ಅರಸೀಕೆರೆಯ ಪಟ್ಟಣ ಸ್ವಾಮಿ ಕಲ್ಲನ್ನು ಕೊಟ್ಟಿದ್ದಾನೆ. ಪೂಜೆಗೆ ಒಂದು ಅಂಗಡಿಯನ್ನು ಬಿಟ್ಟಿದ್ದಾನೆ. ನಾಡಿಯಮ್ಮಸೆಟ್ಟಿ ೧೨ ಗದ್ಯಾಣ ಹೊನ್ನು ಕೊಟ್ಟಿದ್ದಾನೆ. ಕಲಿಸೆಟ್ಟಿ ಎರಡು ಗದ್ಯಾಣ ನೀಡಿದ್ದಾನೆ. ಅನೇಕ ಶೆಟ್ಟಿಗಳ ದಾನದೊಂದಿಗೆ ಸಾಗಣಂದಿ ಸಿದ್ಧಾಂತ ದೇವರ ಸಿಸಿತಿ ಮರುದೇವಿ ಅಬ್ಬೆ ೧೦ ಗದ್ಯಾಣಗಳನ್ನೂ, ಸುತಕೀರ್ತಿ ಭಟ್ಟಾರಕರ ಸಿಸಿತಿ ಜಯಿತಿಸಿರಿಯವ್ವೆ ೬ ಗದ್ಯಾಣ ದಾನಮಾಡಿದ್ದಾರೆ. ಈ ಜಿನಾಲಯವನ್ನು ಶುಭಚಂದ್ರ ತ್ರೈವಿದ್ಯ ದೇವರ ಶಿಷ್ಯ ಮೂಲಸಂಘದ ದೇಸೀಗಣದ ಮಾಘಣಂದಿ ಸಿದ್ಧಾಂತ ದೇವರಿಗೆ ನೀಡಿ ಅದನ್ನು ಕಾಪಾಡುವಂತೆ ಅಲ್ಲಿನ ಭವ್ಯ ನಖರರಿಗೆ ಕೈಯೆಡೆಯಾಗಿತ್ತನೆಂದು ಹೇಳಿದೆ. ಮತ್ತು ಏಳ್ಕೋಟಿಗಳು ಈ ಧರ್ಮವನ್ನು ಹೆಚ್ಚಾದ ಪ್ರೀತಿಯಿಂದ ನಡೆಸಿಕೊಂಡು ಬರುವರಾದ್ದರಿಂದ 'ಏಕ್ಕೋಟಿ ಅಥವಾ ಏಳ್ಕೋಟಿಗಳೆಂದು ಕರೆಯಲ್ಪಡುತ್ತಿದ್ದ ಕಾಳಾಮುಖ ಧಾರ್ಮಿಕರ ರಕ್ಷಣೆಯಲ್ಲಿ ಈ ಬಸದಿಯ ಧರ್ಮಕಾರ್ಯ ಕಲಾಪಗಳು ನಡೆದುಕೊಂಡು ಬರುತ್ತಿತ್ತೆಂದು ಅರ್ಥವಾಗುತ್ತದೆ. ಒಟ್ಟಿನಲ್ಲಿ ಕಾಳಾಮುಖರ ಪ್ರಾಬಲ್ಯದಿಂದಾಗಿ ಅವರ ಅಂಕೆಗೆ ಸಿಲುಕಿದ ಜೈನಧರ್ಮ ಈ ಪ್ರದೇಶದಲ್ಲಿ ಒತ್ತಡದ ಮಧ್ಯದಲ್ಲೇ ಉಸಿರಾಡುತ್ತಿತ್ತು ಎನಿಸುತ್ತದೆ.

### ೬.೨.೨. ವೈಷ್ಣವ ಧರ್ಮ

ವಿಷ್ಣುಪಾರಮ್ಯವನ್ನು ಸಾರುವ ವೈಷ್ಣವಧರ್ಮ ಕರ್ನಾಟಕದಲ್ಲಿ ರಾಮಾನುಜರ ಆಗಮನಕ್ಕಿಂತ ಬಹಳ ಹಿಂದಿನಿಂದಲೇ ಪ್ರಚಾರದಲ್ಲಿತ್ತು. ಕದಂಬರ ಹಲ್ಮಿಡಿ ಶಾಸನದ ವಿಷ್ಣುವಿನ ಪ್ರಾರ್ಥನೆ, ಬಾದಾಮಿ ಗುಹೆಗಳಲ್ಲಿ ವರಾಹ ಮೂರ್ತಿ, ತ್ರಿವಿಕ್ರಮ ಶಿಲ್ಪಗಳು ಕಾಣಿಸಿಕೊಂಡಿವೆ. ರಾಮಾನುಜರ ಆಗಮನದ ನಂತರ ಹೊಯ್ಸಳರ ರಾಜ್ಯದಲ್ಲಿ ವೈಷ್ಣವ ಧರ್ಮ ಭದ್ರವಾಗಿ ನೆಲೆನಿಂತು ಔನ್ನತ್ಯವನ್ನು ಪಡೆಯಿತು. ಭಾಗವತ ಮೂಲದ ವಿಷ್ಣುವಿನ ಆರಾಧನೆ, ರಾಮಾನುಜ ಪ್ರಣೀತ ಶ್ರೀ ವೈಷ್ಣವ ಪಂಥ, ಮಧ್ವಾಚಾರ್ಯರ ಮಾಧ್ವ ಸಂಪ್ರದಾಯ ಕೀರ್ತನ ಪರಂಪರೆಗಳು ಮುಪ್ಪುರಿಗೊಂಡು ಮಧ್ಯಕಾಲೀನ ಕರ್ನಾಟಕದಲ್ಲಿ ವೈಷ್ಣವ ಧರ್ಮ ಅತ್ಯಂತ ಪ್ರಭಾವಶಾಲಿಯಾಗಿ ರಾಜಾಶ್ರಯವನ್ನು ಪಡೆದುದಲ್ಲದೆ ಸಿರಿವಂತರು ಅಧಿಕಾರಿಗಳು ವರ್ತಕರು, ಸಾಮಾನ್ಯರನ್ನು ತನ್ನ ಕಡೆಗೆ ಆಕರ್ಷಿಸತೊಡಗಿತು. ಸಮಾಜ ಸಂಸ್ಕೃತಿ ಸಾಹಿತ್ಯ ಕಲೆಯ ಕ್ಷೇತ್ರದಲ್ಲಿ ವೈಷ್ಣವಧರ್ಮದ ಪ್ರಭಾವ ಕಾಣಿಸಿಕೊಳ್ಳತೊಡಗಿತು.

ವಿಷ್ಣುವಿನ ದಶಾವತಾರಗಳ ಕಲ್ಪನೆ ಧರ್ಮ ಸಂಸ್ಥಾಪನೆಗಾಗಿ ಅವತಾರವೆತ್ತಿ ದುಷ್ಟ ಶಕ್ತಿಗಳೊಂದಿಗೆ ಅವನ ಹೋರಾಟ, ಶತ್ರು ಸಂಹಾರ ಇತ್ಯಾದಿಗಳು ಕ್ಷಾತ್ರ ತೇಜದ ಅರಸರುಗಳ ಆಶಯಗಳಿಗೆ

ಹೊಂದಿಕೊಳ್ಳುವಂತಿದ್ದು, ಕ್ಷಾತ್ರ ಯುಗದಲ್ಲಿ ಈ ವರಾಹ, ನರಸಿಂಹ, ವೀರನಾರಾಯಣ, ಲಕ್ಷ್ಮೀನರಸಿಂಹ ದೇವತೆಗಳು ಹೆಚ್ಚು ಪ್ರಾಮುಖ್ಯತೆ ಪಡೆದವು ಅರಸರನ್ನು ದೈವವನ್ನು ಸಮೀಕರಿಸಿ ಶಾಸನಗಳು ವರ್ಣಿಸಿರುವುದು ಕಂಡುಬರುತ್ತದೆ. 'ಕಮಲಾಕ್ಷಂ ಪುರುಷೋತ್ತಮಂ... ದೈತ್ಯಮದ ಧ್ವಂಸನ್ ಅನಂತ ಭೋಗಯುತನ್ ... ಯಾದವ ಕುಳಾಳಂಕಾರಮ್ ಎಂದಿಂತು ವಿಷ್ಣುಮಹೀಶಂ ಸಲೆ ತಾನೆ ವಿಷ್ಣುವೆನಿಪಂ...''[೪೬] ಅರಿನರ ಪಾಲಕೋಗ್ರಮದ ಕುಂಭಿ ನಿಷಾಣಮನೊತ್ತಿ ಕಿರ್ತು... ಭೀಕರತರಮಪ್ಪ ತನ್ನ ನಖಶಾಖೆಗಳಿಂದಮೆ ಸೀಳ್ದನಾಗಳುಂ ನರಹರಿಯಂತಿರೆ ಅನ್ಯ ನೃಪಸಿಂಧುರಮಂ ನರಸಿಂಹಭೂಭೃಜಂ''[೪೭] ಇತ್ಯಾದಿ ಅನೇಕ ವರ್ಣನೆಗಳು ಶಾಸನಗಳಲ್ಲಿ ತುಂಬಿಕೊಂಡಿವೆ.

ಕೃಷ್ಣನು ಕಾಳಿಂಗ ಮರ್ಧನನಾಗಿ ಗೋವರ್ಧನಗಿರಿಧಾರಿಯಾಗಿ, ಕೊಳಲ ಗೋಪಾಲನಾಗಿ ಜನಮನ ಸೂರೆಗೊಳ್ಳ ತೊಡಗಿದನೆಂದು ಶಿಲ್ಪಗಳಿಂದ ಹಾಗೂ ಶಾಸನಗಳಿಂದ ಕಂಡುಬರುತ್ತದೆ. ವೈದಿಕ ಮತ್ತು ಪಶುಪಾಲನಾ ಸಂಸ್ಕೃತಿಯು ಬೆಸೆದುಕೊಂಡು ಕೃಷ್ಣನ ಆರಾಧನೆ ಪ್ರಾಮುಖ್ಯತೆ ಪಡೆಯಿತು. ಅವನ ಲೀಲೆಗಳು ಕೀರ್ತಿಸಲ್ಪಡತೊಡಗಿದವು. ಕ್ರಿ.ಶ.೧೧೩೯ ಉಂಡಿಗನಾಳಿನ ಶಾಸನ[೪೮] ಬಹುಬಂಧ ಮಲ್ಲ ವಿದ್ಯಾಬಲದೊಳ್ ಮುಷ್ಟಿಕ ಚಾಣೂರಾಸುರರ್ಗೊಬ್ಬನೇ ಸಮಾನಮಾ ಶ್ರೀಕೃಷ್ಣಂ" ಎಂದಿದೆ. ಅರಕೆರೆಯ ಶಾಸನದಲ್ಲಿ[೪೯] ಅಮರೋರ್ವ್ವೀರುಹಮಂ ಮಲಂಗಿ ಚೆಲ್ವಿಂ ತ್ರೈಭಂಗಿಯಿಂ ವೇಣುನಾದಮನಾ ಗೋಪಿಯರಂ ನಿರೀಕ್ಷಿಸುತ ಮಾಡುತ್ತಾಡುತ್ತಂ ಲೀಲೆಯಿಂದಮೆ ಗೋಪಾಳಕ ಮೂರ್ತ್ತನಾಗಿ ನಡೆ ತಂದಾನಂದದಿಂ' ಇತ್ಯಾದಿ ಅಭಿವ್ಯಕ್ತಿಗಳು ಕೃಷ್ಣ ಆ ಕಾಲಕ್ಕಾಗಲೇ ಜನಮನದಲ್ಲಿ ಬೇರು ಬಿಟ್ಟಿದ್ದನೆಂಬುದನ್ನು ಸ್ಪಷ್ಟಪಡಿಸುತ್ತವೆ. ಜಗನ್ನಾಥ ವಿಜಯದಲ್ಲಿ ರುದ್ರಭಟ್ಟನಿಂದ ಪ್ರಾರಂಭವಾದ ಕೃಷ್ಣಪಾರಮ್ಯ ಮುಂದೆ ಕುಮಾರವ್ಯಾಸ, ಲಕ್ಷ್ಮೀಶ, ಕೀರ್ತನಕಾರರ ಕೃತಿಗಳಲ್ಲಿ ಮಡುಗಟ್ಟಿ ನಿಂತಿತು.

ದೇವಾಲಯದ ವಾಸ್ತುಶಿಲ್ಪ, ಮೂರ್ತಿಶಿಲ್ಪಗಳಲ್ಲಿ ಅತ್ಯಂತ ಕಲಾತ್ಮಕವಾಗಿ ವಿಷ್ಣುಪಾರಮ್ಯವು ಬಿಂಬಿತವಾಗಿದೆ. ಪುಟ್ಟ ಪುರಾಣಗಳಂತೆ ದಶಾವತಾರಗಳು, ಭಾಗವತದ ಕೃಷ್ಣನ ಲೀಲೆಗಳನ್ನು ಶಾಸನಗಳು ಸೊಗಸಾಗಿ ಹೇಳಿರುವಂತೆ ದೇವಾಲಯಗಳ ಪಟ್ಟಿಕಾಶಿಲ್ಪಗಳು ಅಷ್ಟೇ ಸೊಗಸಾಗಿ ಅಡಕವಾಗಿ ಅಂಥಹ ಪ್ರಸಂಗಗಳನ್ನು ಹಿಡಿದಿಟ್ಟಿವೆ. ಕರ್ನಾಟಕದ ಕೀರ್ತನ ಸಾಹಿತ್ಯದ ಮೊದಲ ಹೆಜ್ಜೆಗಳನ್ನು ಈ ಶಾಸನ, ವರ್ಣನೆಗಳಲ್ಲಿ, ದೇವಾಲಯ ಶಿಲ್ಪ ಪಟ್ಟಿಕಾ ಪುರಾಣಗಳಲ್ಲಿ ಗುರುತಿಸಬಹುದು. ಹರಿಕಥಾ ಕಾಲಕ್ಷೇಪಗಳು, ಪುರಾಣ ಶ್ರವಣಗಳು ನಾಟ್ಯ ನಾಟಕಗಳು ಸಾರ್ವಜನಿಕವಾಗಿ ಏರ್ಪಡಾಗುತ್ತಿದ್ದು ಅನಕ್ಷರಸ್ಥ ದೊಡ್ಡ ಸಮುದಾಯವನ್ನು ತನ್ನ ತೆಕ್ಕೆಯೊಳಗೆ ಧರ್ಮಗಳು ತೆಗೆದುಕೊಳ್ಳುತ್ತಿದ್ದವು.[೫೦]

ವಿಷ್ಣುಭಕ್ತರ ಹೆಸರುಗಳು ಮತ್ತೆ ಮತ್ತೆ ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಕೃಷ್ಣಭಕ್ತರ ಕಥೆಗಳು ಮಹಿಮೆಗಳನ್ನು ವೈಷ್ಣವ ದೀಕ್ಷೆ ಪಡೆದ ದಾಸರು, ಭಾಗವಂತಿಕೆಯವರು ಜಾನಪದ ರಂಗಭೂಮಿಯನ್ನು

ಬಳಸಿಕೊಂಡು ಕೃಷ್ಣ ತುಲಾಬಾರ, ರಾಧನಾಟಕ, ಕೃಷ್ಣ ಪಾರಿಜಾತ, ಭಕ್ತ ಸುದನ್ವ, ಪ್ರಹ್ಲಾದ ಇತ್ಯಾದಿಗಳ ಹರಿಕಥೆ ನಾಟಕಗಳ ಮೂಲಕ ವೈಷ್ಣವ ಧರ್ಮ ಪ್ರಚಾರವನ್ನು ವ್ಯಾಪಕವಾಗಿ ಮಾಡುತ್ತಿದ್ದರು. ವಿಷ್ಣುಭಕ್ತ ವರ್ತಕ ಧಾಮೋದರನನ್ನು 'ಹರಿಯಕಥೆ ಹರಿಯಕಥನಂ ಹರಿಯರ್ಚ್ಚನೆ ಹರಿಯಭಕ್ತಿ ಹರಿಯಾನಂದಂ ನೆರೆದಿರೆ... ಹರಿಮಯವೆನೆ, ನೆಗಳ್ದ ನಂಬಿ ನವಪ್ರಹರಾಜಂ, ಮತ್ತಂ ರುಕುಮಾಂಗ ಶುಕ ನದೀಜ ವಿಭೀಷಣ ಅರ್ಜುನ, ಹಿರಣ್ಯಕಸುತ, ಹನುಮಂತ, ಗರುಡ, ಧ್ರುವ, ಬ್ಯಾಸ, ನಾರದನೆಂಬ ಅನೇಕ ವಿಷ್ಣುಭಕ್ತರ ಭಕ್ತಿಯಿಂ ಮಿಗಿಲಾದ ಭಕ್ತಿನಿಧಾನನೆಂದು ಕ್ರಿ.ಶ.೧೨೫೪ರ ಶಾಸನ ಹೇಳಿದೆ[೫೧] ಈ ಪರಮ ವೈಷ್ಣವನಾದ ದಾಮೋದರ ವಡ್ಡವ್ಯವಹಾರಿಯು ಬೆಂಡೆಕೆರೆಯಲ್ಲಿ ಹಾಗೂ ಅರಕೆರೆಯಲ್ಲಿ ವಿಷ್ಣು ದೇವಾಲಯಗಳನ್ನು ನಿರ್ಮಿಸಿ ಅಪಾರ ದಾನ ನೀಡಿದ್ದಾನೆ.

ತಮಿಳು ನಾಡಿನ ಪುರಾತನ ಶಿವಭಕ್ತರು ಕರ್ನಾಟಕದ ಶರಣರಿಗೆ ಸ್ಫೂರ್ತಿನೀಡಿ, ಆದರ್ಶರಾದಂತೆ ಶ್ರೀ ವೈಷ್ಣವರಿಗೆ ತಮಿಳುನಾಡಿನ ಭಾಗವತ ಮೂಲದ ಭಗವಂತನ ಗುಣಗಾನದಲ್ಲೇ ಮುಳುಗಿ ಪ್ರಸಿದ್ಧರಾದ ವಿಷ್ಣುಭಕ್ತ ಆಳ್ವಾರರು ಆರಾಧ್ಯರಾಗಿದ್ದಾರೆ. ಜಾವಗಲ್ಲು, ನೇರ್ಲಿಗೆ, ಕೋಳಿಗುಂದ ಮುಂತಾದ ಗ್ರಾಮಗಳ ವೈಷ್ಣವಾಲಯಗಳಲ್ಲಿ ಇವರ ಪ್ರತಿಮೆಗಳಿವೆ. ವಿಷ್ಣುಭಕ್ತ ಹನುಮಂತ ಗರುಡರಿಗೆ ಹಳ್ಳಿಹಳ್ಳಿಗಳಲ್ಲೂ ಸ್ಥಾನ ದೊರಕಿದೆ.

### ೬.೨.೨.೧. ರಾಮಾನುಜರ ಪ್ರೇರಣೆ ಪ್ರಭಾವ

ರಾಮಾನುಜಾಚಾರ್ಯರು ಮಿರ್ಲೆ ಸಾಲಿಗ್ರಾಮ ತೊಣ್ಣೂರು ಮೇಲುಕೋಟೆ, ಬೇಲೂರುಗಳಲ್ಲಿ ಕೆಲದಿನಗಳು ತಂಗಿದ್ದು ಧರ್ಮಪ್ರಚಾರ ಕೈಗೊಂಡರೆಂದು ತಿಳಿದುಬರುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶಕ್ಕೆ ಹತ್ತಿರವಾದ ಬೇಲೂರು ಪ್ರಮುಖ ವೈಷ್ಣವ ಕೇಂದ್ರವಾಗಿದ್ದು ಅಲ್ಲಿನ ಕೇಶವನಿಗೆ ಹಳ್ಳಿಗಳನ್ನು ದಾನ ನೀಡಿದ ಉಲ್ಲೇಖಗಳಿವೆ. ದುರ್ಗದ ರಂಗಪ್ಪನಾಯಕರಿಂದ ಬಾಣಾವರಕ್ಕೆ ಸಲ್ಲುವ ಸೊಪ್ಪಿನ ಹಳ್ಳಿಯನ್ನು ದಾನ ಪಡೆದ ತಿರುವೆಂಗಳಯ್ಯನ್ನು ಆ ಗ್ರಾಮವನ್ನು 'ಬೇಲೂರ ಚೆಂನಿಗರಾಯನಿಗೆ' ಸಮರ್ಪಿಸಿದ್ದಾನೆ.[೫೨] ಮತ್ತೊಂದು ಶಾಸನ ಬೇಲೂರಿನ ಶ್ರೀ ಚೆನ್ನಕೇಶವ ದೇವರ ನಂದಾದೀವಿಗೆ ಕಂಬದ ಧರ್ಮಕ್ಕೆ ಸಂಕಿಹಳ್ಳಿ ಗ್ರಾಮವನ್ನು ನೀಡಿರುವ ವಿಚಾರ ತಿಳಿದುಬರುತ್ತದೆ.[೫೩]

ಉಂಡಿಗನಾಳಿನಲ್ಲಿ ರಾಮಾನುಜಾಚಾರ್ಯರ ದೊಡ್ಡ ಪ್ರತಿಮೆ ಇದೆ. ಅಲ್ಲಿನ ಜಟ್ಟಿಕುಲದವರ ಮೇಲೆ ರಾಮಾನುಜರು ಬೀರಿದ ಪ್ರಭಾವವನ್ನು ನವನೂಲು ಚೆಟ್ಟಿಯ ವಿಚಾರಗಳನ್ನು ಈ ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಜಟ್ಟಿ ಸಮಾಜದಲ್ಲಿ ನವನೂಲು ಚೆಟ್ಟಿಯ ಕಾಲದಲ್ಲಿ ವೈಷ್ಣವ ಧರ್ಮದೀಕ್ಷೆ ಪಡೆದು ವಿಷ್ಣುಭಕ್ತರಾದುದನ್ನು ಗಮನಿಸಬಹುದು.

ಚನ್ನರಾಯ ಪಟ್ಟಣದ ನವಿಲೆಯ ಭೇರುಂಡದ ಮೊತ್ತದ ಕೂಸುಗಳ ಪಡೆ ಕಂಚಿಯಲ್ಲಿ ನೆಲೆಸಿದ್ದ ಸಂದರ್ಭದಲ್ಲಿ ಅಲ್ಲಾಳನಾಥನ ಭೃತ್ಯರಾಗಿ ವೈಷ್ಣವ ದೀಕ್ಷೆಗೊಂಡುದನ್ನು ಅಲ್ಲಿಯ ಶಾಸನ ಹೇಳಿದೆ.[೫೪]

ಈ ಕೂಸರು ನವಿಲೆಯನ್ನು ಬಲ್ಲಾಳನಿಂದ ಪಡೆದು ಅಗ್ರಹಾರ ಮಾಡಿ ಅಲ್ಲಾಳ ನಾಥನಿಗೆ ದಾನ ನೀಡಿದ್ದಾರೆ.

ನೀರ್ಗುಂದ ನಾಡಿನ ಕೆಲವತ್ತಿಯಲ್ಲಿ ಹೊಯ್ಸಳ ವಿಷ್ಣುವರ್ಧನನ ಸೋದರ ಉದಯಾದಿತ್ಯನು ಆಳುತ್ತಿದ್ದು ಅವನನ್ನು ಆಶ್ರಯಿಸಿ ಅಪಾರ ಸಂಖ್ಯೆಯ ವೈಷ್ಣವರು ಅಲ್ಲಿ ನೆಲೆಸಿದ್ದು ಅವನ ಸಾವಿನನಂತರ ವಿಷ್ಣುವರ್ಧನನು ಆ ಮಹಾಜನರಿಗೆ ಅನೇಕ ಸವಲತ್ತುಗಳನ್ನು ಒದಗಿಸಿ ವೈಷ್ಣವ ದೇವಾಲಯವನ್ನು ಪರೋಕ್ಷ ವಿನಯವಾಗಿ ನಿರ್ಮಿಸಿದ್ದಾನೆ.[೫೫] ಕೆಲವತ್ತಿಯಸುತ್ತಿನ ಪ್ರದೇಶಗಳಾದ ಲಿಂಗರಸನಹಳ್ಳಿ, ಕುದುರೆಗುಂಡಿ, ನಿಟ್ಟೂರು, ತಿರುಪತಿಹಳ್ಳಿ, ಚಿಗ್ಗಿರಂಗಸ್ವಾಮಿಬೆಟ್ಟ, ಹೊನ್ನಾವರ ಇವೆಲ್ಲವೂ ಶ್ರೀ ವೈಷ್ಣವ ಪ್ರಭಾವಕ್ಕೆ ಒಳಗಾಗಿದ್ದವೆಂಬುದು ತಿಳಿದುಬರುತ್ತದೆ. ಉಬ್ಬೇನಹಳ್ಳಿಯ ಆಂಜನೇಯ ಗುಡಿಯ ವೈಷ್ಣವ ಶಾಸನವೊಂದು ಸಾಹಿಭಟ್ಟಯ್ಯನೆಂಬ ಪಂಡಿತನಿಗೆ ಒಂದು ಗ್ರಾಮ ಕಟ್ಟಲು ಸಾಕಾಗುವಷ್ಟು ಭೂಮಿದಾನ ನೀಡಿದುದನ್ನು ಹೇಳಿದೆ.[೫೬]

ರಾಮಾನುಜರ ಆಗಮನದೊಂದಿಗೆ ಕನ್ನಡ ನಾಡಿಗೆ ತಮಿಳು ನಾಡಿನ ಬೇರೆ ಬೇರೆ ಗುಂಪಿನ ಬ್ರಾಹ್ಮಣ ಕುಟುಂಬಗಳು ಬಂದವು. ಭಟ್ಟರು, ಹೆಬ್ಬಾರರು, ಹೆಮ್ಮಿಗೆಯರು, ಕಡಂಬಿಯರು, ಕಂದಾಡೈಯರು, ನಲ್ಲಾನ್ ಚಕ್ರವರ್ತಿಗಳು, ತಾತಾಚಾರ್ಯರು ಹಾಗೂ ಇತರೆ ಧರ್ಮನಿಷ್ಠ ಮತ್ತು ವಿದ್ವಾಂಸ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರ ಕುಟುಂಬಗಳು ವಲಸೆ ಬಂದು ಈ ನಾಡಿನಲ್ಲಿ ನೆಲೆನಿಂತರು.[೫೭] ವಲಸೆ ಬಂದ ವೈಷ್ಣವರಿಗೂ, ವೈಷ್ಣವ ದೀಕ್ಷೆ (ಪಂಚ ಸಂಸ್ಕಾರಗಳು ತಪ, ಪುಂಡ್ರ, ನಾಮ, ಮಂತ್ರ, ಯಜ್ಞ) ಪಡೆದು ಮತಾಂತರಗೊಂಡವರಿಗೂ ನೆಲೆಯನ್ನು ಕಲ್ಪಿಸುವ ಜವಾಬ್ದಾರಿ ಇಲ್ಲಿನ ಸಮಾಜದ ಮೇಲೆ ಬಿತ್ತು. ಅಗ್ರಹಾರ, ಪುರಗಳ ನಿರ್ಮಾಣ ಇಂಥವರಿಗೆ ಸಾಮಾಜಿಕ ಆರ್ಥಿಕ ಭದ್ರತೆಯನ್ನು ಒದಗಿಸಿಕೊಡುವ ಏರ್ಪಾಟುಗಳೇ ಎನ್ನಬಹುದು. ಅಲ್ಲೆಲ್ಲ ಅವರ ಧಾರ್ಮಿಕ ಆಚರಣೆಗಳಿಗಾಗಿ ಮಂದಿರಗಳನ್ನು ಮಠಗಳನ್ನು ನಿರ್ಮಿಸಿಕೊಡಲಾಯಿತು. ಪೂಜಾದಿಗಳಿಗಾಗಿ ಪರಿವಾರ ವರ್ಗಕ್ಕಾಗಿ ಯಥೇಚ್ಛವಾಗಿ ಭೂಮಿ ಹೊನ್ನುಗಳ ದಾನ ನೀಡಲಾಯಿತು. ಸುಸಜ್ಜಿತವಾದ ಮನೆಗಳನ್ನು ಪಾತ್ರೆ ಪಡಗಗಳೊಂದಿಗೆ ಮಹಾಜನರ ಜೀವಿತಕ್ಕೆ ವೃತಿ ಭೂಮಿಗಳೊಂದಿಗೆ ವ್ಯವಸ್ಥಿತ ನೆಲೆಯನ್ನು ಕಲ್ಪಿಸಿಕೊಡಲಾಯಿತು.[೫೮]

### ೬.೨.೨.೨. ಅಗ್ರಹಾರಗಳು ಹಾಗೂ ವೈಷ್ಣವ ದೇವಾಲಯಗಳ ನಿರ್ಮಾಣ

ನರಸಿಂಹಪುರ, ಕೇಶವಪುರ, ಹರಿಹರಪುರ, ಬಲ್ಲಾಳ ಚತುರ್ವೇದಿಮಂಗಲ, ಜಯಗೊಂಡ ಬಲ್ಲಾಳಪುರ ಇತ್ಯಾದಿ ಹೆಸರುಗಳಿಂದ ಈ ಪ್ರದೇಶದಲ್ಲಿ ೨೫ಕ್ಕೂ ಹೆಚ್ಚು ಅಗ್ರಹಾರಗಳು ಸ್ಥಾಪನೆಗೊಂಡಿವೆ. ಕೇಶವ, ನರಸಿಂಹ, ಲಕ್ಷ್ಮೀನರಸಿಂಹ ಅಲ್ಲಾಳನಾಥ ತಿರುವೆಂಗಳನಾಥನೆಂಬ ಹೆಸರಿನಲ್ಲಿ ದೇವಾಲಯಗಳು

ನಿರ್ಮಾಣಗೊಂಡಿವೆ. ಆಳರಸರು, ಅಧಿಕಾರಿಗಳು, ವರ್ತಕರು, ಸಿರಿವಂತ ಭಕ್ತರು, ಅಗ್ರಹಾರ ದೇವಾಲಯ ನಿರ್ಮಾಣಗಳನ್ನು ಕೈಗೊಂಡರೆ ಸಾಮಾನ್ಯರು ಕೈಲಾದಷ್ಟು ದಾನ ನೀಡಿ ಪ್ರೋತ್ಸಾಹಿಸಿದ್ದಾರೆ.

ಕ್ರಿ.ಶ.೧೧೪೨ ಕ್ಕೆ ಮೊದಲು ಹೊಯ್ಸಳ ವಿಷ್ಣುವರ್ಧನನು ಕೆಲ್ಲಂಗೆರೆಯನ್ನು ಅಗ್ರಹಾರವಾಗಿ ಪರಿವರ್ತಿಸಿ ಕೊಡಂಗನೂರಿನಿಂದ ಬ್ರಾಹ್ಮಣರನ್ನು ಕರೆತಂದು ಅಲ್ಲಿ ನೆಲೆಸುವಂತೆ ಮಾಡಿದ್ದಾನೆ. ಕ್ರಿ.ಶ.೧೧೬೧ಕ್ಕೆ ಮೊದಲು ಅಲ್ಲಿ ಕೇಶವ ದೇವಾಲಯವೊಂದು ನಿರ್ಮಾಣಗೊಂಡಿದ್ದು, ದಾನ ದತ್ತಿಗಳನ್ನು ಪಡೆದು ಶ್ರೀಮಂತವಾಗಿತ್ತು.[೫೯]

ಹಿರಿಯದಂಡನಾಯಕ ದಾವಪ್ಪೆಯನು ವಿಷ್ಣುವರ್ಧನನಿಂದ ನೀರ್ಗುಂದನಾಡ ತಳಿರೂರನ್ನು ಪಡೆದು ಅಗ್ರಹಾರವಾಗಿ ಮಾಡಿ ೬೨ ಮಹಾಜನರಿಗೆ ದಾರೆ ಎರೆದಿದ್ದಾನೆ.[೬೦] ಮಹಾಪ್ರಧಾನಿ ಸರ್ವಾಧಿಕಾರಿ ಬೂಚಿರಾಜ ಹೊಯ್ಸಳನರಸಿಂಹ ದೇವನಿಂದ ನೀರ್ಗುಂದನಾಡಿನ ಹುಲ್ಲೇಕೆರೆಯನ್ನು ಪಡೆದು ಅಗ್ರಹಾರವಾಗಿ ಮಾಡಿ ಸೋಮನಾಥ ಪುರವೆಂದು ನಾಮಕರಣ ಮಾಡಿ ಅತ್ಯಂತ ಸುಂದರವಾದ ಕೇಶವ ದೇವಾಲಯವನ್ನು ಕಟ್ಟಿಸಿದ್ದಾನೆ.[೬೧]

ಇಮ್ಮಡಿ ವೀರ ಬಲ್ಲಾಳನು ಕರ್ನಾಟಕ ಕುಲೋತ್ತಮರಾದ ೧೨೦ ಬ್ರಾಹ್ಮಣರಿಗೆ ಕಿತ್ತನಕೆರೆಯನ್ನು ಬಲ್ಲಾಳಪುರವೆಂಬ ಹೆಸರಿನಲ್ಲಿ ಅಗ್ರಹಾರ ಮಾಡಿಕೊಟ್ಟಿದ್ದಾನೆ. ಇಲ್ಲಿ ನರಸಿಂಹನ ಕಾಲದಲ್ಲಿ ಬೊಪ್ಪದೇವನೆಂಬ ಬ್ರಾಹ್ಮಣನು ಲಕ್ಷ್ಮೀನರಸಿಂಹ ದೇವರನ್ನು ಪ್ರತಿಷ್ಠಾಪಿಸಿದ್ದಾನೆ.[೬೨] ಬಲ್ಲಾಳನ ಕಾಲದಲ್ಲಿ ಅರಸೀಕೆರೆಯಲ್ಲಿ ರಾಣಿ ಉಮಾದೇವಿಯ ಅಜ್ಜ ಮಹಾಪ್ರಧಾನ ಶಿಖಾಮಣಿ ಭಂಡಾರವಾಡದದಿಪತಿ ಪ್ರಸನ್ನ ಚೆನ್ನಕೇಶವ ದೇವಾಲಯವನ್ನು ನಿರ್ಮಿಸಿದ್ದನು.[೬೩] ಈ ದೇವಾಲಯಗಳಿಗೆ ಅರಸರು ಅಧಿಕಾರಿಗಳು ವರ್ತಕರು ಸ್ಥಳೀಯ ಅಧಿಕಾರಿಗಳು ಯಥೇಚ್ಛವಾಗಿ ದಾನ ನೀಡಿದ್ದಾರೆ. ಮುರುಂಡಿ, ಮುದುಡಿ, ಎಳವಾರೆ, ಸರ್ವಜ್ಞ ಪುರವಾದ ಬೆಂಡೆಕೆರೆ, ಹಾರನಹಳ್ಳಿ, ಅರಕೆರೆ, ಮಹಾಗ್ರಹಾರ ಹೊಳಲಕೆರೆ, ಗಂಡಸಿ ಇತ್ಯಾದಿ ಗ್ರಾಮಗಳು ಅಗ್ರಹಾರವಾಗಿ ಪರಿವರ್ತನೆಗೊಂಡಿವೆ. ಇಮ್ಮಡಿ ನರಸಿಂಹನ ಒಲವು ವೈಷ್ಣವ ಮತದ ಕಡೆಗೆ ಹೆಚ್ಚಾಗಿದ್ದುದರಿಂದ ವೀರ ಲಕ್ಷ್ಮೀ ನರಸಿಂಹಪುರವಾಗಿ ಕೆಂಬಾಳು, ವಿಜಯ ನರಸಿಂಹ ಪುರವಾಗಿ ಕಳಿಕಟ್ಟೆ, ಮುದುವಡಿ, ಮುರುಂಡಿ, ಬಾಗಡೆಗಳು ಪರಿವರ್ತನೆಗೊಂಡಿವೆ. ಅಲ್ಲೆಲ್ಲಾ ನರಸಿಂಹ, ಕೇಶವ ದೇವಾಲಯಗಳು ನಿರ್ಮಿತವಾಗಿವೆ. ವೀರಬಲ್ಲಾಲ ಚತುರ್ವೇದಿ ಮಂಗಲವಾದ ನೇರ್ಲಿಗೆಯಲ್ಲಿ ಕೇಶವ ದೇವಾಲಯವಿದೆ. ಸೋಮನಾಥಪುರ ಅಗ್ರಹಾರವಾದ ಹಾರನಹಳ್ಳಿಯಲ್ಲಿ, ಜಾವಗಲ್ಲಿನಲ್ಲಿ ಅದ್ಭುತ ಕಲಾತ್ಮಕವಾದ ಲಕ್ಷ್ಮೀನರಸಿಂಹ ದೇವಾಲಯಗಳು ನಿರ್ಮಿತವಾಗಿವೆ. ಆನೆಕೆರೆ ಎಳವಾರೆ ಪಂಜಾಡಿಯ ಬೆಳ್ಗಲಿಗಳು ಕೇಶವ ಪುರಗಳಾಗಿವೆ. ಇಲ್ಲಿ ನಾನಾ ಜಾತಿಗಳವರಿಗೆ ವಿಷ್ಣುವಿನ ಸೇವೆ ಮಾಡಲು ಅವಕಾಶಗಳನ್ನು ಒದಗಿಸಲಾಗಿತ್ತು.[೬೪]

ಉಂಡಿಗನಾಳು ಅಗ್ರಹಾರವಲ್ಲದಿದ್ದರೂ ಜೆಟ್ಟಿಗಳು ವೈಷ್ಣವ ಧರ್ಮ ಸ್ವೀಕರಿಸಿದ ಕಾರಣ ತಮ್ಮ ಕುಲದೇವತೆ ನಿಂಬಜಾದೇವಿಯ ದೇವಾಲಯವನ್ನು ತ್ರಿಕೂಟವಾಗಿ ಪರಿವರ್ತಿಸಿ ನಿಂಬೇಶ್ವರನೊಂದಿಗೆ ಕೇಶವೇಶ್ವರನನ್ನು ಪ್ರತಿಷ್ಠಾಪಿಸಿರುವುದು ಕಂಡುಬರುತ್ತದೆ.[೬೫] ಇಲ್ಲಿ ನಾರಾಯಣನ ದೇವಾಲಯವೂ ಇದ್ದಿತೆಂದು ತಿಳಿದುಬರುತ್ತದೆ. ಮೊಸಳೆಯ ಕೂತಣ ಹೆಗ್ಗಡೆಯಿಂದ ನಿರ್ಮಿತವಾದ ಕೇಶವ ದೇವಾಲಯ ಮಲ್ಲಯನ ಹಳ್ಳಿಯಲ್ಲಿ ಹಾಳಾಗಿರಲು ಅದರ ಜೀರ್ಣೋದ್ಧಾರ ಕಾರ್ಯ ಕ್ರಿ.ಶ.೧೨೮೭ರಲ್ಲಿ ವೈದ್ಯನೊಬ್ಬನಿಂದ ನಡೆದಿದೆ.[೬೬] ಕ್ರಿ.ಶ.೧೪೦೩ರಲ್ಲಿ ವೀರ ಪ್ರತಾಪ ಹರಿಹರನ ಅಧಿಕಾರಿ ಭಾಯಣ್ಣನು ಹಿರಿಯ ಗಂಡಸಿಯ ಅಗ್ರಹಾರವನ್ನು ಜೀರ್ಣೋದ್ಧಾರ ಮಾಡಿಸಿ ತಟಾಕ ಕಟ್ಟಿಸಿ ಹನುಮಂತ ದೇವರ ಪ್ರತಿಷ್ಠೆಯನ್ನು ಮಾಡಿಸಿದ್ದಾನೆ.[೬೭] ಬೆಂಡೆಕೆರೆಯ ವೇಣುಗೋಪಾಲಸ್ವಾಮಿದೇವಾಲಯದಲ್ಲಿ ಹಿರಣ್ಯಕಶ್ಯಪು ಸಂಹಾರ ಮೂರ್ತಿಯ ಉಬ್ಬುಶಿಲ್ಪವನ್ನು ಮಾಧವನಾಯಕ ಮತ್ತು ಇತರರು ಮಾಡಿಸಿದ್ದಾರೆ.[೬೮]

ಅಮರಗಿರಿ ಎಂದು ಪ್ರಸಿದ್ಧವಾಗಿರುವ ಮಾಲೆಕಲ್ಲು ತಿರುಪತಿಯು ಈ ಪ್ರದೇಶದ ಪ್ರಸಿದ್ಧ ವೈಷ್ಣವ ತೀರ್ಥ ಕ್ಷೇತ್ರವಾಗಿದ್ದು. ನಾನಾ ಜಾತಿ ಜನಾಂಗಗಳ ಭಕ್ತಾದಿಗಳನ್ನು ಹೊಂದಿದೆ. ಇದನ್ನು ಬಾಣಾವರದ ತಿಮ್ಮಪ್ಪನಾಯಕನು ನಿರ್ಮಿಸಿದನೆಂಬ ಪ್ರತೀತಿಯಿದೆ. ಪ್ರಸಿದ್ಧವಾದ ಬಾಣಾವರದ ಕಂಠೀರಾಯ ಪೇಟೆ, ಅರಸೀಕೆರೆಯ ಪೇಠೆಗಳಿಗೆ ಸಂತೆಗಳಿಗೆ ಬರುವ ವರ್ತಕ ಸಮೂಹಗಳು ಈ ದೇವನಿಗೆ ಸೇವೆಗಾಗಿ ದಾನ ನೀಡಿದ್ದಾರೆ.[೬೯] ಜಾವಗಲ್ಲು, ಬಾಣಾವರ, ಗರುಡನಗಿರಿ ಮುಂತಾದ ಕಡೆಗಳಲ್ಲಿದ್ದ ಕಂದಾಚಾರದ (Military department) ನೌಕರರು, ಸೇರುಗಾರರು, ವಾಲೆಕಾರರು ಮುಂತಾದವರು ತಮ್ಮ ಸಂಬಳದಿಂದ ಸೇವೆಗೆ ದಾನ ನೀಡಿರುವ ಉಲ್ಲೇಖ ಕಂಡುಬರುತ್ತದೆ. ಒಂದು ರೀತಿಯಲ್ಲಿ ಈ ವೆಂಕಟರಮಣ ಅಥವಾ ಗೋವಿಂದನು ವಿಜಯನಗರ ಕಾಲದಲ್ಲಿ ಸಾರ್ವತ್ರಿಕ ದೇವತೆಯಾಗಿ ಬೆಳೆದನೆನ್ನಬಹುದು. ವೈಷ್ಣವ ದೀಕ್ಷೆ, ದಾಸ ಪರಂಪರೆಗಳು ಇದಕ್ಕೆ ಕಾರಣವೆಂದು ಊಹಿಸಬಹುದು.

**೬.೨.೨.೩. ಬ್ರಾಹ್ಮಣ ಮಠಗಳು**

ತ್ರಿಮತಸ್ತ ಬ್ರಾಹ್ಮಣರ ಮಠಗಳು ಈ ಪ್ರದೇಶದಲ್ಲಿ ಇದ್ದುವೆಂಬುದಕ್ಕೆ ಕೆಲವು ಶಾಸನಗಳು ಸೂಚನೆ ನೀಡುತ್ತವೆ. ಶಿವ ವಿಷ್ಣು ಶಕ್ತಿಯ ಆರಾಧಕರಾದ ಸ್ಮಾರ್ಥರಲ್ಲದೆ ಶ್ರೀವೈಷ್ಣವರು, ಮಾಧ್ವರು ದೇವಾಲಯ ಮಠಗಳನ್ನು ಕಟ್ಟಿಕೊಂಡು ಅಧ್ಯಯನ ಅಧ್ಯಾಪನಗಳೊಂದಿಗೆ ಧಾರ್ಮಿಕ ಚಟುವಟಿಕೆಗಳನ್ನು ಧರ್ಮ ಪ್ರಚಾರವನ್ನು ಕೈಗೊಳ್ಳುತ್ತಿದ್ದರೆಂದು ಹೇಳಬಹುದು.

ಕೆಲ್ಲಂಗೆರೆಯಲ್ಲಿ ಶ್ರೀಮಠವೊಂದಿದ್ದು, ಈ ಮಠವನ್ನು ಶ್ರೀ ರಾಮಕೃಷ್ಣ ದೇವರ ಪುತ್ರರು ಶ್ರೀ ಶಾಶ್ವತಾತ್ಮರು ನಡೆಸುತ್ತಿದ್ದರೆನಿಸುತ್ತದೆ. 'ಶ್ರೀ ಶಾಶ್ವತಾತ್ಮ ಶ್ರೀಮಠ' ಎಂದು ಕರೆದಿರುವುದು ವಿಶೇಷವಾಗಿದೆ.

ಶ್ರೀ ನಿಜಬೋಧ ಪ್ರಭುಗಳ ಔರಸ ಪುತ್ರರು ಶ್ರಿ ಅನುಪಮ ಸುಖರೂಪ ದೇವರ ಹೆಸರುಗಳು ಉಲ್ಲೇಖಗೊಂಡಿವೆ. ಶ್ರೀಮಠದ ಶ್ರೀಕಾರ್ಯಕ್ಕಾಗಿ ಕೆಲ್ಲಂಗೆರೆಯ ಪ್ರಜೆಗಳೂ ಪಂಚಾಡಿ ಬೆಳುಗಲಿಯ ಬ್ರಾಹ್ಮಣರು ೧೭೫ ಕಂಬ ಗದ್ದೆಯನ್ನು ೧೫೦ ಕಂಬ ಬೆದ್ದಲೆಯನ್ನು ಬಿಟ್ಟಿದ್ದಾರೆ.[೨೦]

ಕಣಕಟ್ಟೆಯ ಶೃಂಗನಾಥ ದೇವಾಲಯದ ಹಿಂದಿನ ಸಂಧ್ಯಾ ಮಂಟಪವೊಂದನ್ನು ದೇವಣ್ಣ ಹೆಬ್ಬರುವರು ನಾರಸಿಂಹ ದೇವನು ತಿಂಮಣ್ಣಗಳ ದೇವರು ಕಟ್ಟಿಸಿದ್ದರೆಂದು ಇಲ್ಲಿನ ಶಾಸನ[೨೧] ಹೇಳುವುದರಿಂದ ಅದೇ ಮಂಟಪದ ಕಂಬದ ಮೇಲೆ 'ಶಂಕರ ಭಾರತಿ' ಎಂದಿರುವುದರಿಂದ ಮಠವು, ಸಂಧ್ಯಾಮಂಟಪವು ಸ್ಮಾರ್ಥ ಅಥವಾ ವೈಷ್ಣವರದೆಂದು ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ.

ಹಾರನಹಳ್ಳಿಯಲ್ಲಿ ಶೃಂಗೇರಿ ಪೀಠದ ಸಂಬಂಧಿತ ಮಠವಿದ್ದಿತೆಂಬುದನ್ನು ಸ್ಥಳೀಯರು ಸ್ಪಷ್ಟಪಡಿಸುತ್ತಾರೆ. ಅರೈಕಲಾ ಶ್ರೀ ವೆಂಕಟನಾರಾಯಣ ಭಾರತಿಗಳು ಅವರ ಹಿರಿಯರಾದ ಪರಮಾನಂದ ಸ್ವಾಮಿಗಳು, ನರಸಿಂಹ ಭಾರತಿಗಳವರು ಮಠದಲ್ಲಿ ನೆಲಸಿದ್ದು ಧರ್ಮ ಪ್ರಚಾರ ಪುರಾಣ ಶ್ರವಣ ಕಥಾಕಾಲಕ್ಷೇಪಗಳನ್ನು ನಡೆಸುತ್ತಿದ್ದು, ವೇದ ಉಪನಿಷತ್ತುಗಳ ಅಧ್ಯಯನವೂ ನಡೆಯುತ್ತಿತ್ತು. ಕಂಠೀರವ ನರಸರಾಜ ವಡೆಯರು ಅವರ ವಂಶಸ್ಥರಾದ ಕೃಷ್ಣರಾಜ ಒಡೆಯರು ಕಾಲಕಾಲಕ್ಕೆ ಪ್ರೋತ್ಸಾಹ ನೀಡಿ ಪುರಾತನ ಆರಾಧನಾ ವೇದಿಕೆ ಸಂಪ್ರದಾಯಗಳು ಮುಂದುವರೆಯಲು ದಾನದತ್ತಿ ನೀಡಿ ಸಹಕರಿಸಿದ್ದಾರೆ. ಈ ವೇದಿಕೆಯ ಜೀರ್ಣೋದ್ಧಾರಕ್ಕೆ ೧೫೦ ವರಹ ವ್ಯಯಿಸಿದ್ದಲ್ಲದೆ ಮಾಕನಹಳ್ಳಿಯನ್ನು ಜೋಡಿಮಾನ್ಯವಾಗಿ ನೀಡಿದ್ದಾರೆ.[೨೨] ಆರಾಧನೆಯು ಮೂರು ದಶಕಗಳ ಹಿಂದಿನವರೆಗೂ ನಡೆಯುತ್ತಿದ್ದು ಕೃಷ್ಣಭಾರತಿಗಳು ತೀರ್ಥಹಳ್ಳಿ ಅರಗಕ್ಕೆ ಸ್ಥಳಾಂತರಗೊಂಡದ್ದರಿಂದ ನಿಂತುಹೋಗಿವೆ.

ತಳಿರೂರಿನಲ್ಲಿ ಸ್ಮಾರ್ಥ ಶ್ರೀಮಠವೊಂದು ಇತ್ತೆಂದು ತಿಳಿದುಬರುತ್ತದೆ. ಶ್ರೀ ಮನ್ಮಹಾ ಯೋಗೇಶ್ವರ ಬ್ರಹ್ಮಾನಂದ ಸ್ವಾಮಿಗಳ ಉಲ್ಲೇಖವನ್ನು ಇಲ್ಲಿನ ಶಾಸನವೊಂದು ನೀಡಿದೆ.[೨೩]

ಚಿಕ್ಕ ಗಂಡಸಿಯಲ್ಲಿ ಸಂದರಾಮಠದ ಉಲ್ಲೇಖವನ್ನು ಶಾಸನವೊಂದು ನೀಡಿದೆ.[೨೪] ಅಲ್ಲಿನ ಮಹಾಜನಗಳೂ ಸುಂಕದ ಪುಟ್ಟರಸೈಯ್ಯನವರೂ ಮಠದ ಗೋಪೀ ಚಂದನಕ್ಕೆ ಆ ಊರಿನ ಮಗ್ಗದೊಳಗೆ ಮೂರು ವೀಸದ ಒಂದು ಮಗ್ಗದತೆರೆಯನ್ನು ನಡೆಸಿಕೊಂಡು ಬರುತ್ತೇವೆಂದು ನಿಯಮ ಮಾಡಿ ಶಾಸನ ಹಾಕಿಸಿದ್ದಾರೆ. ಅದೇ ಗ್ರಾಮದಲ್ಲಿ ಅಲ್ಲಿನ ಕೇಶವನಾಥ ಗೋಪೀನಾಥ ದೇವರಿಗೆ ಎಣ್ಣೆ ಮಜ್ಜನಕ್ಕೆ[೨೫] ವಸ್ತುಗಳಿಗೆ ಮಗ್ಗ ತೆರೆಯನ್ನು ಮದುವೆ ತೆರೆಯನ್ನು ನೀಡಿರುವುದು ಕಂಡುಬರುತ್ತದೆ. ಗೋಪಿ ಚಂದನವನ್ನು ವಿಶೇಷವಾಗಿ ಮಾಧ್ವರು ಬಳಸುವುದು ರೂಢಿಯಲ್ಲಿದ್ದು, ಇಲ್ಲಿದ್ದ ಸಂದರಾಮಠವು ಮಾಧ್ವಮಠವಾಗಿತ್ತೆ ಎಂಬ ಅನುಮಾನ ಬರುತ್ತದೆ. ಅಲ್ಲದೆ ಈ ಚಿಕ್ಕ ಗಂಡಸಿಯನ್ನು ಬ್ರಾಹ್ಮಣರಿಗೆ ಅಗ್ರಹಾರದಾನ ಗ್ರಾಮವಾಗಿ ನೀಡಿದವನು ವಿಜಯನಗರದ ಅಚ್ಚುತರಾಯನ ಅಧಿಕಾರಿ ಅಮರನಾಯಕ

ಬಯಕಾರ ರಾಮಪ್ಪಯ್ಯ. ಅಗ್ರಹಾರಕ್ಕೆ ವಲಸೆ ಬಂದು ನೆಲೆಸಿದ ಅನೇಕ ಬ್ರಾಹ್ಮಣರು ವಿಜಯನಗರ ಹಂಪಿಯ ಪ್ರದೇಶದಿಂದ ಬಂದವರಾಗಿರುವ ಸಾಧ್ಯತೆಯೂ ಇದೆ. ಕ್ರಿ.ಶ.೧೫೩೫ರಲ್ಲಿ ಈ ದಾನ ಕಾರ್ಯ ನಡೆದಿದ್ದು, ದಾಸಪರಂಪರೆಯ ಮೂಲಕ ಇಲ್ಲಿ ಮಾಧ್ವ ಪಂಥವು ಹರಡಿರುವ ಸಾಧ್ಯತೆಯಿದೆ.

ವಿಜಯನಗರ ಅರಸರಿಂದ ವಿಷ್ಣುವಿನ ಯಾವ ಗುಡಿಗಳು ಈ ಪ್ರದೇಶದಲ್ಲಿ ನಿರ್ಮಾಣಗೊಳ್ಳದಿದ್ದರೂ ಅವರ ಅಧಿಕಾರಿಗಳು, ಅಮರನಾಯಕರು ಸ್ಥಳೀಯ ನಾಯಕರು ವೈಷ್ಣವ ಧರ್ಮಕ್ಕೆ ಪ್ರೋತ್ಸಾಹ ನೀಡಿದ್ದಾರೆ. ಅಗ್ರಹಾರಗಳನ್ನು ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿರುವುದಲ್ಲದೆ, ಕೆಲವು ದೇವಾಲಯಗಳ ಆವರಣದಲ್ಲಿ ಕಲ್ಯಾಣ ಮಂಟಪಗಳನ್ನು ಪರಿವಾರ ದೇವತಾ ಗುಡಿಗಳನ್ನು ಮುಖಮಂಟಪಗಳನ್ನು ಗೋಪುರಗಳನ್ನು ನಿರ್ಮಿಸಿದ್ದಾರೆ. ಜಾವಗಲ್ಲಿನಲ್ಲಿ ಲಕ್ಷ್ಮಿ ಅಮ್ಮನವರ ಗುಡಿಯ ಮುಂದಿನ ಕಲ್ಯಾಣ ಮಂಟಪ, ನರಸಿಂಹ ದೇವಾಲಯದ ಮುಖಮಂಟಪ ಪಾತಾಳಾಂಕಣ ಗರುಡಗಂಬ ಸ್ಥಾಪನೆ ಇತ್ಯಾದಿಗಳು ಜಾವಗಲ್ಲ ನಾಯಕರ ಕಾಲದಲ್ಲಿ ನಡೆದಿದೆ. ಈ ಪ್ರದೇಶದ ತೊಂಬತ್ತು ಭಾಗ ಊರುಗಳಲ್ಲಿ ಹನುಮಂತನ ಗುಡಿಗಳಿವೆ. ಇವೆಲ್ಲವೂ ವಿಜಯನಗರ ಕಾಲದ ರಚನೆಗಳೇ ಆಗಿವೆ.

### ೬.೨.೩. ಶೈವ ಧರ್ಮ

ಶೈವೋಪಾಸನೆ ವೇದಪೂರ್ವದಿಂದ ತೊಡಗಿ ನಾನಾ ರೂಪಗಳಲ್ಲಿ ವೇದ ಆಗಮ, ತಾಂತ್ರಿಕ ಬೆರಕೆಯ ವಿಶಿಷ್ಟ ಆರಾಧನೆಯಾಗಿ ಉಳಿದುಬಂದಿದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಶಾಸನೋಲ್ಲೇಖಿತ ಶಿವಾಲಯಗಳು ನೂರಿಪ್ಪತ್ತೈದಕ್ಕೂ ಹೆಚ್ಚು ಇದ್ದು ಉಲ್ಲೇಖವಿಲ್ಲದವೆಷ್ಟೋ ಇದ್ದಿರುವ ಸಾಧ್ಯತೆಯಿರುವುದರಿಂದ ಇಲ್ಲಿ ಶೈವ ಧರ್ಮದ ಪ್ರಾಬಲ್ಯವಿದ್ದುದು ಸ್ಪಷ್ಟವಾಗಿದೆ. ಹೇರಳವಾದ ಕಾಳಾಮುಖ ಶೈವರ ದೇವಾಲಯಗಳು ಮಠಗಳೂ ಅಲ್ಲಿನ ಪ್ರಭಾವೀ ಸ್ಥಾನಿಕರು ಅವರ ಸಾಂಘಿಕ ಚಟುವಟಿಕೆಗಳು, ಆಡಳಿತ ವರ್ಗದವರೊಂದಿಗಿನ ಅವರ ಸಂಪರ್ಕ ಅವರ ದೇವಾಲಯಗಳ ಸಂಪತ್ತು ಇವುಗಳಿಂದ ಇಲ್ಲಿ ಪ್ರಮುಖ ಕಾಳಾಮುಖ ಕೇಂದ್ರಗಳಿದ್ದವೆಂಬುದು ತಿಳಿದುಬರುತ್ತದೆ. ಮತ್ತು ಸಾಮಾಜಿಕವಾಗಿ ಹಾಗೂ ಧಾರ್ಮಿಕವಾಗಿ ಅವುಗಳ ಪ್ರಭಾವ ಪ್ರೇರಣೆ ಗಮನಾರ್ಹವಾದುದು. ಇಂದಿಗೂ ಸುಮಾರು ೩೦ಕ್ಕೂ ಹೆಚ್ಚು ಶೈವ ಮಠಗಳು ಈ ಪ್ರದೇಶದಲ್ಲಿದ್ದು ಎಲ್ಲವುಗಳಿಗೂ ಶಾಸನೋಲ್ಲೇಖಗಳು ದೊರಕದಿದ್ದರೂ ಅವುಗಳ ಮೂಲ ಮಧ್ಯಕಾಲೀನ ಕಾಳಾಮುಖ ಸ್ಥಾನಗಳು ಪರಿವರ್ತನೆಗೊಂಡು ವೀರಶೈವಕ್ಕೆ ತಿರುಗಿರುವ ಹಿನ್ನೆಲೆಯಲ್ಲಿ ಆ ಎರಡು ಕವಲುಗಳಲ್ಲಾಗಿರುವ ಬೆಸುಗೆಯನ್ನು ಗಮನಿಸಬಹುದು. ಇಂದಿಗೂ ಈ ಧರ್ಮ ಇಲ್ಲಿ ಪ್ರಬಲವಾಗಿದ್ದು, ಸಮಾಜದ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿದೆ.

#### ೬.೨.೩.೧. ಶಿವಾಲಯ ನಿರ್ಮಾಣ-ನಿಮಾತೃಗಳು

ಒಂಬತ್ತನೇ ಶತಮಾನದ ಪೂರ್ವದಲ್ಲೂ ಇಲ್ಲಿ ಶಿವಾಲಯಗಳಿದ್ದಿರಬೇಕು. ಗಂಗರ ನೇರ್ಲಿಗೆ ಶಾಸನದ ಶಾಪಾಶಯದಲ್ಲಿ[೭೬] ಲಿಂಗಮನಳಿದ ಪಾಪ'ವನ್ನು ಹೇಳಿದೆ. ಹೊಯ್ಸಳ ವಿನಯಾದಿತ್ಯ ಮತ್ತು

ಎರೆಯಂಗರ ಕಾಲದಲ್ಲಿ ೬, ವಿಷ್ಣುವರ್ಧನನ ಕಾಲದಲ್ಲಿ ೧೪, ಒಂದನೇ ನರಸಿಂಹನಕಾಲದಲ್ಲಿ ೧೧, ಇಮ್ಮಡಿ ವೀರಬಲ್ಲಾಳನ ಕಾಲದಲ್ಲಿ ೩೯, ಅವನ ಮಗ ನರಸಿಂಹನ ಕಾಲಲ್ಲಿ ೬, ಸೋಮೇಶ್ವರನ ಕಾಲದಲ್ಲಿ ೪, ಮೂರನೇ ನರಸಿಂಹನಕಾಲದಲ್ಲಿ ೫, ವಿಜಯನಗರ ಅರಸರ ಕಾಲದಲ್ಲಿ ಒಂದು ಶಿವಾಲಯ ನಿರ್ಮಾಣವಾದ ದಾಖಲೆಗಳಿವೆ.

ಮಹಾಪ್ರಚಣ್ಡ ದಂಡನಾಯಕ ಏಚಿಮಯ್ಯನ ಮಗ ಸನ್ಧಿವಿಗ್ರಹಿ ಪೋಚಿಮಯ್ಯನ ಆರು ಜನ ಭಟರು ಕೋಳಿಗುಂದದಲ್ಲಿ ಎತ್ತಿಸಿದ ಶಿವಾಲಯ ಇಲ್ಲಿನ ಮೊದಲ ಶಿವಾಲಯ ನಿರ್ಮಾಣದ ಉಲ್ಲೇಖವಾಗಿದೆ.[೭೭] ಇಮ್ಮಡಿ ವೀರ ಬಲ್ಲಾಳನ ಕಾಲದಲ್ಲಿ ಶೈವ ಧರ್ಮಕ್ಕೆ ದೇವಾಲಯ ನಿರ್ಮಾಣಕ್ಕೆ ಈ ಪ್ರದೇಶದಲ್ಲಿ ಮಹಾಪೂರವೇ ಬಂದಂತೆ ತೋರುತ್ತದೆ. ಅವನು ಅರಸೀಕೆರೆಯಲ್ಲಿ ಬಲ್ಲಾಳೇಶ್ವರ ದೇವಾಲಯವನ್ನು[೭೮] ಕಟ್ಟಿಸಿ ದಾನ ನೀಡಿದ್ದಾನೆ.

ಹೆಚ್ಚಾಗಿ ಅಧಿಕಾರಿಗಳು ದಂಡನಾಯಕರು[೭೯], ಹೆಗ್ಗಡೆಗಳು[೮೦], ವರ್ತಕರು[೮೧] ವಿವಿಧ ಶ್ರೇಣಿಗಳು ಗೊಜ್ಜರು[೮೨], ಕೊಯ್ಲಾಳ್ಗಳು[೮೩], ಕೃಷಿಕರು ಮೇಳಿಸಾಸಿರ್ವರು[೮೪], ಜಗತಿ ಕೊತ್ತಳಿಗಳು[೮೫], ಸ್ತ್ರೀಯರು[೮೬] ಶಿವಾಲಯಗಳನ್ನು ನಿರ್ಮಿಸಿದ್ದಾರೆ, ಜೀರ್ಣೋದ್ಧಾರ ಮಾಡಿದ್ದಾರೆ. ಭೂದಾನ, ಹೊನ್ನುಗಳ ದಾನ ನೀಡಿದ್ದಾರೆ. ಸ್ವತಃ ಕಾಳಾಮುಖ ಸ್ಥಾನಿಕರು ದೇವಾಲಯ ನಿರ್ಮಾಣ ಜೀರ್ಣೋದ್ಧಾರ ಕೈಗೊಂಡಿದ್ದಾರೆ.[೮೭] ಬಳಿಗೆಲಸವನ್ನು ಮಾಡಿದ್ದಾರೆ.[೮೮] ಸ್ಥಳೀಯ ಒಡೆಯರು ಗಾವುಂಡುಗಳು ತಮ್ಮ ಆಳ್ವಿಕೆಯ ಗ್ರಾಮಗಳಲ್ಲಿ ದೇವಾಲಯ ನಿರ್ಮಿಸಿ ದಾನದತ್ತಿ ಬಿಟ್ಟಿರುವುದು ಹೆಚ್ಚಿದ್ದು, ಸ್ಥಳೀಯರ ಪ್ರೀತಿಯನ್ನು ಗಳಿಸುವುದಕ್ಕೆ ಇವು ಕಾರಣವಾಗಿವೆ.[೮೯] ಮಾವಂತರು[೯೦], ಜಟ್ಟಿಗಳು[೯೧], ವೈದ್ಯರು[೯೨], ಓಜರು[೯೩], ಮಹಾಜನರು ಬ್ರಾಹ್ಮಣರು[೯೪] ಹೀಗೆ ಸಮಾಜದ ನಾನಾವರ್ಣ ವರ್ಗದ ಶಿವಭಕ್ತರು ದೇವಾಲಯಗಳನ್ನು ನಿರ್ಮಿಸಿ ದಾನದತ್ತಿ ನೀಡಿರುವುದು ಶೈವ ಧರ್ಮ ಹೇಗೆ ಸಮಾಜದ ಮೇಲೆ ಪ್ರಭಾವ ಬೀರಿತ್ತೆಂಬುದನ್ನು ಸೂಚಿಸುತ್ತದೆ. ರಾಜಧಾನಿಯಾಗಿದ್ದು ತೆಂಕಣ ಅಯ್ಯಾವಳೆ ಎಂದು ಪ್ರಸಿದ್ಧವಾಗಿದ ವಾಣಿಜ್ಯ ಕೇಂದ್ರವಾಗಿದ್ದು, ಅರಸೀಕೆರೆಯಲ್ಲಿ ಒಂದು ವೈಷ್ಣವ ಎರಡು ಜಿನಾಲಯಗಳನ್ನು ಬಿಟ್ಟರೆ ಮತ್ತೆಲ್ಲಾ ಶಿವಾಲಯಗಳೇ ಆಗಿದ್ದುವು. ಅಧಿಕಾರಿಗಳ, ವರ್ತಕರ ಶೈವಧರ್ಮ ಪ್ರೇಮ, ಇಮ್ಮಡಿ ವೀರ ಬಲ್ಲಾಳನ ಶೈವ ಧರ್ಮದ ಬಗೆಗಿನ ಒಲವು ಇದಕ್ಕೆ ಕಾರಣವೆನ್ನಬಹುದು.

ಶೈವ ಧರ್ಮದ ಒಳಗೆ ಶಿವ ಶಿವೆಯರನ್ನು ನಾನಾರೂಪ ಅವತಾರಗಳಲ್ಲಿ ಆರಾಧಿಸುವ ಕಾಪಾಲಿಕರು (ಮಹಾವ್ರತಿಗಳು) ಪಾಶುಪತರು ಕಾಳಾಮುಖರು, ಕೌಳರು, ನಾಥರು, ಶರಣರು ಇತ್ಯಾದಿ ನಾನಾಪಂಥದ ಅನುಯಾಯಿಗಳು ಕಂಡುಬರುತ್ತಾರೆ.

ಶೈವಧರ್ಮದ ಪ್ರಭೇದಗಳನ್ನು ಗುರುತಿಸುವಲ್ಲಿ ಏಕರೂಪತೆಯಿಲ್ಲವಾದರೂ ಅದರಲ್ಲಿ ಸಮಾಜ ಸಂಮುಖವಾದದ್ದು ಮತ್ತು ವಾಮಾಚಾರ ತಾಂತ್ರಿಕ ಆಚರಣೆಗಳುಳ್ಳದ್ದು ಎಂದು ಎರಡು ಭಾಗ ಮಾಡಬಹುದೆನಿಸುತ್ತದೆ. ಗ್ರಾಮಗಳ ಒಳಗೆ ಕಂಡುಬರುವ ಕಾಳಾಮುಖ ಸ್ಥಾನಗಳು ಸಿದ್ಧೇಶ್ವರ ದೇವಾಲಯಗಳು, ಮೈಲಾರ, ವೀರಭದ್ರ, ಬಸವಣ್ಣ (ನಂದಿ) ದೇವಾಲಯಗಳು, ಅನೇಕ ಸಿದ್ಧರ ಸಾಧಕರ ಗದ್ದುಗೆಗಳು ಏಕಾಂತ ಪ್ರದೇಶಗಳಲ್ಲಿ ಕಂಡುಬರುವ ಭೈರವ ದೇವಾಲಯ ಬಲಿಪೀಠಗಳು, ಪಂಚ ಪೀಠಮಠಗಳು ಈ ಪ್ರದೇಶವು ಎಲ್ಲ ರೀತಿಯ ಶೈವ ಶಾಖೋಪಶಾಖೆಗಳಿಗೆ ಪಂಥಗಳಿಗೆ ತೆರೆದುಕೊಂಡಿತ್ತೆಂಬುದನ್ನು ಸಾಬೀತುಪಡಿಸುತ್ತಿವೆ. ಪ್ರಧಾನವಾಗಿ ಈ ಪ್ರಾಂತ್ಯ ಕಾಳಾಮುಖ ಶೈವ ಕೇಂದ್ರವಾಗಿ ಶಾಸನಾಧ್ಯಯನದಿಂದ ತಿಳಿದುಬರುತ್ತದೆ.

### ೬.೨.೩.೨. ಕಾಳಾಮುಖ ಶೈವ ಸ್ಥಾನಿಕರು ಮತ್ತು ಸಾಂಘಿಕ ಚಟುವಟಿಕೆ

ಪಂಡಿತ ರಾಸಿ ಶಕ್ತಿ ಮತ್ತು ಜೀಯ ಎಂಬುದು ಇಲ್ಲಿನ ಶೈವಸ್ಥಾನದ ಮುನಿಗಳ, ಸ್ಥಾನಿಕರ ಹೆಸರಿನೊಂದಿಗೆ ಕಾಣಿಸಿಕೊಂಡಿದೆ. ಇವರು ಕಾಳಾಮುಖ ಶೈವರಾಗಿದ್ದು ಇವರ ಧಾರ್ಮಿಕ ಸಾಮಾಜಿಕ ಚಟುವಟಿಕೆಗಳನ್ನು ಅರ್ಥಮಾಡಿಕೊಳ್ಳಲು ಈ ಶಾಸನಗಳು ನೆರವಾಗುತ್ತವೆ. ಸುಮಾರು ೧೫೦ಕ್ಕೂ ಮಿಕ್ಕು ಇವರ ಹೆಸರುಗಳು ಶಾಸನಗಳಲ್ಲಿ ಕಾಣಿಸಿಕೊಂಡಿವೆ. ಇವರು ಬಹಳ ವ್ಯವಸ್ಥಿತವಾದ ರೀತಿಯಲ್ಲಿ ದೇವಸ್ಥಾನ ಮಠಗಳ ಮೂಲಕ ಧಾರ್ಮಿಕ ಸಾಮಾಜಿಕ ಚಟುವಟಿಕೆಗಳನ್ನು ನಡೆಸುತ್ತಿದ್ದರು. ಪಟ್ಟಣಗಳಿರಲಿ, ಹಳ್ಳಿಗಳಿರಲಿ ರಾಜಪೋಷಿತ ದೇವಾಲಯವಿರಲಿ ಸಾಮಾನ್ಯ ದೇವಾಲಯವಿರಲಿ ಅವುಗಳ ಸ್ಥಾನಿಕರಲ್ಲಿ ಒಂದು ಒಗ್ಗಟ್ಟು ಸ್ನೇಹ ಸಂಬಂಧಗಳಿದ್ದು ಪ್ರಮುಖ ಧಾರ್ಮಿಕ ಚಟುವಟಿಕೆಗಳಲ್ಲಿ ಒಟ್ಟಾಗಿ ಭಾಗವಹಿಸುತ್ತಿದ್ದರು. ಇದಕ್ಕೆ ಕೆಲವು ಉದಾಹರಣೆಗಳನ್ನು ನೋಡಬಹುದು.

ಮುತ್ತನ ಹೊಸ ಊರಿನಲ್ಲಿ ಕಂಡ ನಂಬಿಯು ಕುಂಜೇಶ್ವರ ದೇವಾಲಯವನ್ನು ಕಟ್ಟಿಸಿ ಮಗಳು ಚಂದವ್ವೆಗೆ ವಹಿಸಿಕೊಡುವ ಸಂದರ್ಭದಲ್ಲಿ ರಾಜಗುರು ರುದ್ರಶಕ್ತಿ ದೇವರು, ನೂರಿಪ್ಪತ್ತು ಸ್ಥಾನಿಕರು ಕಂಪಣಾಚಾರ್ಯ್ಯರು ರಾಜಧಾನಿ ಅರಸಿಯಕೆರೆಯ ಮಾದಜೀಯ ಭೂತಜೀಯ ಮಚ್ಚರಜೀಯ ಅನಂತ ಜೀಯರನ್ನು ಒಳಗೊಂಡ ಅಸಂಖ್ಯಾತ ಮಹಾಗಣಂಗಳು ನೆರದು ಆ ಚಂದವ್ವೆಗೆ ವಿಭೂತಿ ಪಟ್ಟವನ್ನು ಕಟ್ಟಿ ಗಣಕುಮಾರಿತನವನ್ನು ಕೊಟ್ಟು ಮಠದೆರೆ ಇತ್ಯಾದಿ ತೆರೆಗಳನ್ನೆಲ್ಲ ಸರ್ವಮಾನ್ಯ ಮಾಡಿ ಧಾರೆಯೆರೆದು ಕೊಟ್ಟಿದ್ದಾರೆ.[೯೫] ಮತ್ತೆರಡು ಶಾಸನಗಳು[೯೬] ಈ ಸಾಂಘಿಕ ಚಟುವಟಿಕೆಯನ್ನು ದಾಖಲಿಸಿವೆ. ವೈದ್ಯ ದೇವಣ್ಣ ಪಿಳ್ಳೆಯು ಮೊಸಳೆಯಲ್ಲಿ ಕಟ್ಟಿಸಿದ ಗೌರೇಶ್ವರ ದೇವಾಲಯದ ಪ್ರತಿಷ್ಠಾಪನೆಯ ಸಂದರ್ಭದಲ್ಲಿ ರಾಜಗುರು ಮುಖ್ಯವಾದ ನೂರಇಪ್ಪತ್ತು ಸ್ಥಾನಿಕರ ಸಮಕ್ಷದಲ್ಲಿ ಆ ದೇವಾಲಯದ ಸ್ಥಾನವನ್ನು ವೈದ್ಯನಿಗೆ ವಹಿಸಿಕೊಟ್ಟು ದಾನದತ್ತಿಗಳನ್ನು ಬಿಡಲಾಗಿದೆ. ಮತ್ತು ರಾಜಗುರುಗಳ ಮಕ್ಕಳಾದ ಸೋಮೇಶ್ವರ, ಚಂದಗುರುಗಳೂ ದಾನ ನೀಡಿದ್ದಾರೆ. ಒಂದು ದೇವಾಲಯದ ಅಮೃತ ಪಡಿಗೆ ನೀಡಿದ್ದ

ಭೂಮಿಯಲ್ಲಿ ಮತ್ತೊಂದು ದೇವಾಲಯಕ್ಕೆ ದಾನನೀಡಿರುವುದೂ ಕಂಡುಬಂದಿದ್ದು ಇದಕ್ಕೆ ನೂರಿಪ್ಪತ್ತು ಶೈವ ಸ್ಥಾನಿಕರ ಒಪ್ಪಿಗೆ ಇರುತ್ತಿತ್ತು. ಬಾಗಡೆಯ ಭೋಗೇಶ್ವರ ಸ್ಥಾನದ ಸ್ಥಾನಪತಿಯ ಸಾವಿನಿಂದ ಆಸ್ತಿಹಂಚಿಕೆಗೆ ಸಂಬಂಧಿಸಿ ಉಂಟಾದ ಗೊಂದವನ್ನು ರಾಜಗುರು ಚಂದ್ರಭೂಷಣದೇವರು ಹಾಗೂ ನೂರಿಪ್ಪತ್ತು ಸ್ಥಾನಿಕರು ಮುಂದೆ ನಿಂತು ಬಾಗಡೆಯ ಮೂರು ಶೈವದೇವಾಲಯಗಳ ಭೂಮಿಯನ್ನು ಸೋಮಜೀಯನ ಸೋದರರು ಮತ್ತು ಆತನ ಹೆಂಡತಿ ಹಾಗೂ ಅವಳ ಗಂಡು ಮತ್ತು ಹೆಣ್ಣು ಮಕ್ಕಳಿಗೆ ಹಂಚಿಕೊಟ್ಟು ಅದನ್ನು ಮೀರಿದರೆ ರಾಜಗುರುಗಳಿಗೂ ಸಮಯಕ್ಕೂ ಹೊರಗೆಂಬ ನಿಯಮ ಮಾಡಿದ್ದಾರೆ.[೯೭] ಕಲ್ಲಿಸೆಟ್ಟಿ ಎಂಬುವವನು ಜಾಜೂರಿನಲ್ಲಿ ಕಲಿದೇವಾಲಯ ನಿರ್ಮಿಸಿ ತನ್ನ ಅಳಿಯನಿಗೆ ಸ್ಥಾನವನ್ನು ವಹಿಸಿಕೊಟ್ಟಿದ್ದು ಕಾಲಾಂತರದಲ್ಲಿ ಅದು ಕೈತಪ್ಪಿ ಹೋಗಿದ್ದಾಗ ಅರಸಿಯಕೆರೆಯ ಪ್ರಸಿದ್ಧ ಗುರುಗಳು ಶಿವಶಕ್ತಿ ಮತ್ತು ಚಂದ್ರಭೂಷಣರು ಪೂರ್ವಮರ್ಯಾದೆಯನ್ನು ತಪ್ಪಿಸಬಾರದೆಂದು ಆ ವಂಶದವರಿಗೆ ಸ್ಥಾನವನ್ನು ವಹಿಸಿಕೊಡುತ್ತಾರೆ.[೯೮] ಇಂತಹ ಉದಾಹರಣೆಗಳು ಪ್ರಮುಖ ಯತಿಗಳು ಗುರುಗಳು ಇತರ ಸ್ಥಾನಿಕರ ಮೇಲೆ ಹೊಂದಿದ್ದ ಹಿಡಿತವನ್ನು ಸೂಚಿಸುತ್ತವೆ. ಭೂಮಿದಾನವಿರಲಿ, ಹಂಚಿಕೆಯಿರಲಿ, ಸ್ಥಾನಿಕರ ಅಧಿಕಾರದ ಹಂಚಿಕೆಯಿರಲಿ, ಆಡಳಿತ, ನ್ಯಾಯ ತೀರ್ಮಾನಗಳಲ್ಲಿ, ಅನ್ಯಧರ್ಮದೊಂದಿಗಿನ ಸಂಬಂಧ ಸೂತ್ರಗಳು ಇತ್ಯಾದಿಗಳ ಬಗೆಗೆ ಸಾಂಘಿಕವಾಗಿ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ.

**ಸ್ಥಾನಿಕರ ಪಾಂಡಿತ್ಯ ಪ್ರಭಾವ** : ಸ್ಥಾನಿಕರಲ್ಲಿ ನೈಷ್ಠಿಕರಾದ ಗುರುಗಳು ಗೃಹಸ್ಥರೂ ಇರುತ್ತಿದ್ದರು. 'ಯಮನಿಯಮಸ್ವಾದ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ ಜಪತಪ ಸಮಾಧಿಶೀಲ ಗುಣ ಸಂಪನ್ನರಾಗಿದ್ದು[೯೯] ಲಾಕುಳಾಗಮ ಶೈವ ಸಿದ್ಧಾಂತಗಳಲ್ಲೂ, ವೇದಗಳಲ್ಲೂ ಪಾರಂಗತರಾಗಿರುತ್ತಿದ್ದರು. ವಿದ್ಯಾರ್ಥಿಗಳಿಗೆ ವಿದ್ಯಾದಾನವನ್ನು ಮಾಡುತ್ತಿದ್ದರು. ದೇಶಾಣಿಯ ಜೈತೇಶ್ವರ ದೇವಾಲಯದ ಮಠದಲ್ಲಿ ಗಂಗರಾಶಿ ಪಂಡಿತರ ದೀಕ್ಷಾಪುತ್ರ ತ್ರಿಭುವನ ಶಕ್ತಿ ಪಂಡಿತ ಸೋದರ ವಾಮಜೀಯ, ವಾಮಶಕ್ತಿ ಪಂಡಿತರು ಬೆರೆಸಿ ತನ್ನ ಐವ್ವರು ಮಕ್ಕಳೊಂದಿಗೆ ನೆಲೆಸಿದ್ದನಂತೆ ಈ ಗುರು 'ಶಿವಶಾಸ್ತ್ರಸಾರ' ನಿಪುಣನಾಗಿದ್ದನೆಂದು ಶಾಸನ ಹೊಗಳಿದೆ.[೧೦೦]

ಅರಸೀಕೆರೆಯ ಪ್ರಸಿದ್ಧ ಕಾಳಾಮುಖಮುನಿ ತ್ರೈಲೋಕಶಕ್ತಿ ಪಂಡಿತರನ್ನು 'ಲಾಕುಳಾಗಮ ಸಮಯ ಸಮುದ್ಧರಣರುಂ ಕಾಳಾಮುಖ ಪ್ರತಿಬದ್ಧರು" ಎಂದು ಕರೆದಿದೆ. ಕಾಳಾಮುಖ ಮುನಿಗಳಲ್ಲಿ ಅನೇಕರು ವಿಶೇಷ ರಾಜಮಾನ್ಯತೆಗೆ ಪಾತ್ರರಾಗಿದ್ದು ರಾಜಗುರು[೧೦೧] ಶ್ರೀಮದ್ ರಾಜಗುರುನಾಥ[೧೦೨] ಶ್ರೀ ಸಮಸ್ತ ಪ್ರಶಸ್ತಿ ಸಹಿತ ಶ್ರೀಮದ್ರಾಯ ರಾಜಗುರು ಮಂಡಲಾಚಾರ್ಯ ಸಮೆಯಚಕ್ರವರ್ತಿ[೧೦೩] ಇತ್ಯಾದಿ ವಿಶೇಷಣಗಳನ್ನು ಹೊಂದಿದ್ದು ತಮ್ಮ ಧರ್ಮಕ್ಕೆ ಪ್ರಭುತ್ವದ ಮಾನ್ಯತೆ ದೊರಕಿಸುವಲ್ಲಿ ಸಫಲರಾಗಿದ್ದರು.

**ಸ್ಥಾನಿಕರ ಶಿಷ್ಯರು ಮತ್ತು ಮಕ್ಕಳು :** ಈ ಪ್ರದೇಶದಲ್ಲಿ ಕಾಳಾಮುಖ ದೀಕ್ಷಿತರಾಗಿದ್ದ ಜಗತೀಶ್ವರ ಪಂಡಿತ,[೧೦೪] ಶಿವಶಕ್ತಿದೇವ ಚಂದ್ರಮೌಳಿಗಳು,[೧೦೫] ತ್ರೈಲೋಕ್ಯ ಶಕ್ತಿ,[೧೦೬] ತೇಜೋನಿಧಿ ಪಂಡಿತ,[೧೦೭] ರುದ್ರಶಕ್ತಿ,[೧೦೮] ಪರೇಶ್ವರ ಪಂಡಿತರ ಶಿಷ್ಯ ಕ್ರಿಯಾಶಕ್ತಿ ಪಂಡಿತ, ಇವರ ಶಿಷ್ಯ ಬಳಗ ಹಾಗೂ ತ್ರಿಭುವನ ಶಕ್ತಿ, ಮಾಮಶಕ್ತಿಗಳ ಶಿಷ್ಯ, ಇವರ ಶಿಷ್ಯ ಬಳಗ,[೧೦೯] ದೇವೇಂದ್ರ ಶಕ್ತಿ,[೧೧೦] ಅವರ ಶಿಷ್ಯ ಬಳಗ ಇವರಲ್ಲದೆ ಅಸಂಖ್ಯ ಜೀಯರು ಶೈವ ಧರ್ಮವನ್ನು ನಿಷ್ಠೆಯಿಂದ ಪಾಲಿಸಿಕೊಂಡು ಬಂದವರಾಗಿದ್ದಾರೆ. ಇವರಲ್ಲಿ ಅನೇಕರು ಗೃಹಸ್ತರಾಗಿದ್ದುದು ಕಂಡುಬರುತ್ತದೆ. ಅವರ ಮಕ್ಕಳು ದೇವಾಲಯದ ಕೆಲಸ ಕಾರ್ಯಗಳಲ್ಲಿ ತಂದೆಗೆ ನೆರವಾಗುವುದರೊಂದಿಗೆ ವಿದ್ಯಾಭ್ಯಾಸವನ್ನು ಪಡೆಯುತ್ತಿದ್ದರೆನಿಸುತ್ತದೆ. ತಂದೆ ಮಕ್ಕಳು ಶಿಷ್ಯರು ಕೆಲವು ದೇವಾಲಯದ ಮಠಗಳಲ್ಲಿ ಇದ್ದಂತೆ ತೋರುತ್ತದೆ. ಹೊಳಲಕೆರೆಯ ರಾಮೇಶ್ವರ ದೇವಾಲಯದಲ್ಲಿ ರಾಮನಾಥ ಜೀಯರ ಅನೇಕ ಶಿಷ್ಯರು, ವಾಮಶಕ್ತಿ ಅವರ ಮಗ ಚಿಕ್ಕ ವಾಮಶಕ್ತಿ ಒಟ್ಟಾಗಿ ಇದ್ದುದನ್ನು ಶಾಸನ ದಾಖಲಿಸಿದೆ.[೧೧೧] ಕೆಲವು ಪ್ರಭಾವಿ ಮುನಿಗಳ, ಸ್ಥಾನಿಕರ ಆಡಳಿತಕ್ಕೆ ಒಳಪಟ್ಟ ಅನೇಕ ದೇವಾಲಯಗಳಿರುತ್ತಿದ್ದು, ಅವುಗಳಲ್ಲಿನ ಸ್ಥಾನಿಕರ ಜಾಗಕ್ಕೆ ತಮ್ಮ ಶಿಷ್ಯರನ್ನು, ಮಕ್ಕಳನ್ನು ಆಯ್ಕೆ ಮಾಡಿ ಹಂಚಿಕೊಟ್ಟಿರುವುದು ಕಂಡುಬರುತ್ತದೆ. ಹಿರಿಯ ಬೆಟ್ಟದ ಜೀಯನು ತನ್ನ ಮಕ್ಕಳುಗಳು ಸಿದ್ಧಯ್ಯ, ಬಯಿಚಯ್ಯರುಗಳಿಗೆ ಭೂಮಿಯನ್ನು ವಿಭಾಗಿಸಿ ಕೊಟ್ಟಿದ್ದಾನೆ.[೧೧೨] ಸಾಸಮುನಿ ದೇವರು ಸಿಂಗೇಶ್ವರ ದೇವಾಲಯದ ಸ್ಥಾನವನ್ನು ತಮ್ಮ ಪುತ್ರ ಸಂತೆಯ್ಯನಿಗೆ ವಹಿಸಿಕೊಟ್ಟುದನ್ನು ಶಾಸನ[೧೧೩] ದಾಖಲಿಸಿದೆ. ಬೆಳ್ಳಿಗುಂಬದ ಶಿವಾಲಯಗಳ ಸ್ಥಾನಿಕರಾಗಿದ್ದ ಧರ್ಮರಾಶಿ ಪಂಡಿತರು ಬ್ರಹ್ಮೇಶ್ವರ ಸ್ಥಾನವನ್ನು ಹಿರಿಯ ಮಗಳು ಹರ್ಮಿಕಬ್ಬೆಗೂ, ಮೂಲಸ್ಥಾನದ ಕಲಿದೇವರ ದೇವಾಲಯ ಸ್ಥಾನವನ್ನು ಕಿರಿಯಮಗಳು ಮಾಚವೆಗೂ ನೀಡಿದ್ದಾರೆ.[೧೧೪]

### ೬.೨.೩.೩. ಗೊರವರು-ಎಕ್ಕೋಟಿಗಳು-ಮೈಲಾರನ ಆರಾಧಕರು

ಮೈಲಾರ, ಮಾರ್ತಾಂಡ ಭೈರವ ಮುಂತಾದ ಹೆಸರಿನಿಂದ ಕರೆಯಲ್ಪಡುವ ಮೈಲಾರ ಲಿಂಗನ ಆರಾಧನೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಉಳಿದುಬಂದಿದೆ. ಶಾಸನಗಳಲ್ಲಿ ಗೊರವ, ಮಾಳಚೀದೇವಿ, ಮಾಳವ್ವೆ ಮೈಲಾರಯ್ಯ ಇತ್ಯಾದಿ ಹೆಸರುಗಳು ಉಲ್ಲೇಖವಾಗಿವೆ. ಕಣೆಕಟ್ಟೆಯಲ್ಲಿ ಆಳ್ವಿಕೆ ಮಾಡುತ್ತಿದ್ದ ಸಾಮಂತ ಮಲ್ಲರಸನನ್ನು 'ಮಾಳಚೀದೇವಿ ಲಬ್ದವರ ಪ್ರಸಾದ'ನೆಂದು 'ಸೌರ್ಯ ಪಾರಾಯಣ' ಎಂದು ಕರೆಯಲಾಗಿದೆ.[೧೧೫] ಮಾಳಜೀ ದೇವಿಯು ಮಾರ್ತಾಂಡ ಭೈರವ ಮೈಲಾರನ ಪತ್ನಿ ಶಿವನು ಭೈರವ ರೂಪ ಧರಿಸಿ ಕುಬೇರನ ಗಹಿರ ಎಂಬ ಕುದುರೆ ಏರಿ ಏಳುಕೋಟಿ ಗಣಗಳೊಂದಿಗೆ ಮಲ್ಲಾಸುರನ ಸಂಹಾರಕ್ಕೆ ಹೋಗುತ್ತಾನೆ. ಈ ಏಳುಕೋಟಿ ಗಣಗಳು ಮಂತ್ರಗಳೆಂದೂ ಹೇಳಲಾಗಿದೆ.[೧೧೬] ಇಂದಿಗೂ ಮೈಲಾರನ ಒಕ್ಕಲು ಏಳುಕೋಟಿ ಉಘೇ ಚಾಂಗು ಬಲಾ ಎಂದು ಜಯಘೋಶ ಮಾಡುತ್ತಾರೆ. ಮೈಲಾರನ ಭಕ್ತರನ್ನು ಗೊರವಯ್ಯಗಳೆನ್ನುತ್ತಾರೆ.

ಕಾಳಾಮುಖ ಸಮಯವನ್ನು ಎಕ್ಕೋಟಿ ಸಮಯವೆಂದೂ ಕಾಳಾಮುಖರನ್ನು ಗೊರವರೆಂದೂ ಕರೆಯಲಾಗಿದೆ. ಹಲುಕೂರಿನ ಶಾಸನದಲ್ಲಿ[೧೧೬] ಕಾಳಾಮುಖ ಪತ್ರಿಬದ್ಧರಾದ ದೇವೇಂದ್ರ ಶಕ್ತಿ ಪಂಡಿತನನ್ನು 'ಎಕ್ಕೋಟಿ ಮುನೀಂದ್ರ ವಂದನಾನಂದ'ನೆಂದು ಕರೆಯಲಾಗಿದೆ. ಅನೇಕ ಶಾಸನಗಳ ಶಾಪಾಶಯ ಭಾಗದಲ್ಲಿ[೧೧೭] ಎಕ್ಕೋಟಿ ಮುನೀಂದ್ರರನ್ನು ಕೊಂದ ಪಾಪದ ಬಗೆಗೆ ಹೇಳಿರುವುದರಿಂದ ಅವರ ಬಗೆಗಿದ್ದ ಭಯಭಕ್ತಿ ಗೌರವಗಳು ವ್ಯಕ್ತವಾಗುತ್ತದೆ.

ಅರಸೀಕೆರೆ, ಬಾಣಾವರ, ಅಗ್ರಹಾರ, ಕಣಕಟ್ಟೆ, ಮುದುಡಿ, ಹಾರನಹಳ್ಳಿ, ಗಂಡಸಿ ತಳಲೂರುಗಳಲ್ಲಿ ಮೈಲಾರನ ಬ್ರಾಹ್ಮಣ ಒಕ್ಕಲುಗಳಿದ್ದರು. ಬಾಣಾವರದಲ್ಲಿ ಸುಮಾರು ೩೦ ಕುಟುಂಬಗಳು ಮೈಲಾರನ ಒಕ್ಕಲಾಗಿದ್ದರೆಂದು ತಿಳಿದುಬರುತ್ತದೆ. ಅಲ್ಲಿ ಮೈಲಾರ ಲಿಂಗೇಶ್ವರ ದೇವಾಲಯವಿದೆ. ಲಿಂಗದ ಪಾಣಿ ಪೀಠದಲ್ಲಿ ಕುದುರೆಯ ರೇಖಾಚಿತ್ರವಿದೆ. ಮೈಲಾರ ಮಾಳಚಿಯರ ಉತ್ಸವ ಮೂರ್ತಿಗಳಿವೆ. ಕೊಲ್ಲಾಪುರದ ಕಡೆಯ ಕೆಲವು ಬ್ರಾಹ್ಮಣ ಒಕ್ಕಲು ಇಲ್ಲಿನ ದೇವರಿಗೆ ನಡೆದುಕೊಳ್ಳುತ್ತಾರೆ.[೧೧೯] ಮೈಲಾರನ ಆರಾಧಕ ಬ್ರಾಹ್ಮಣರು ಶಂಕರರ ಕಾಲದಲ್ಲೇ ಇದ್ದರೆಂದು ಆನಂದಗಿರಿಯ 'ಶಂಕರ ವಿಜಯ'ದಲ್ಲಿ ಹೇಳಿದೆ. ಕಣಕಟ್ಟೆ ಹೋಬಳಿ ಶೆಟ್ಟಿಹಳ್ಳಿಯ ಬಂಡೆಯೊಂದರ ಮೇಲೆ ಬೀವುತ ಗೊರವನೆಂಬ ಅಂಕಿತವಿದೆ. ಇವನು ಜೈನ ಮುನಿಯೋ ಕಾಳಮುಖ ಗೊರವನೋ ತಿಳಿಯುವುದಿಲ್ಲ. ಬಾಣಾವರದ ಕೋಡಿಯ ಮಠದಲ್ಲಿ ಕುದುರೆಯ ಮೇಲೆ ಶಿವಲಿಂಗವಿರುವ ಶಿಲ್ಪವಿದೆ. ಈ ಮಠ ಹೊಯ್ಸಳ ನರಸಿಂಹನ ಕಾಲದಲ್ಲಿದ್ದ ಕಾಳಾಮುಖ ಮಠವಾಗಿತ್ತು.[೧೨೦] ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹಳೆಮೈಲಾರ ಹೊಸಮೈಲಾರ ಗ್ರಾಮಗಳು ಪ್ರಸ್ತುತ ಅಧ್ಯಯನ ಪ್ರದೇಶದ ಮುಖ್ಯ ಮೈಲಾರ ಕ್ಷೇತ್ರವಾಗಿದ್ದು ಸ್ಪೃಶ್ಯ-ಅಸ್ಪೃಶ್ಯ ಭೇದ ಭಾವವಿಲ್ಲದೆ ನಾನಾ ಜಾತಿ ಜನಾಂಗಗಳ ಮನೆದೇವರಾಗಿದೆ.

**೬.೩.೩ ೪.ತಾಂತ್ರಿಕ ಪಂಥಗಳು**

ದೇಹವನ್ನೇ ಸಕಲ ಸಾಧನೆಗೆ ಆಧಾರವೆಂದು ತಿಳಿದು ಹಠಯೋಗ ಸಿದ್ಧಿಯಿಂದ ಇಂದ್ರಿಯ ನಿಗ್ರಹ ಚಿತ್ತಶುದ್ಧಿಗಳನ್ನು ಸಾಧಿಸುವುದು ಆ ಮೂಲಕ ಆನಂದವನ್ನು ಪಡೆಯುವುದೇ ಪರಮಗಮ್ಯವೆಂಬ ನಂಬಿಕೆಯಿಂದ ತಾಂತ್ರಿಕ ಆಚರಣೆಗಳು ಹುಟ್ಟಿಕೊಂಡವು. ಕ್ರಿ.ಶ.ಕದ ಆರಂಭದ ಹೊತ್ತಿಗೆ ಕಾಣಿಸಿಕೊಳ್ಳತೊಡಗಿದ ಈ ತಾಂತ್ರಿಕ ಆಚರಣೆಗಳು ಬೌದ್ಧ, ಕಾಪಾಲಿಕ, ಕೌಳ, ಜೈನ, ಎಲ್ಲರನ್ನು ತನ್ನತ್ತ ಆಕರ್ಷಿಸಿತು. ಕ್ರಿ.ಶ.೬ ರಿಂದ ೧೦ನೇ ಶತಮಾನದವರೆಗೆ ಪ್ರಬಲವಾಗಿ ಬೆಳೆಯ ತೊಡಗಿದ ಈ ತಂತ್ರ ಸಾಧನೆಯು ವೈದಿಕ ಆಚರಣೆಗಳ ವಿರುದ್ಧ ದನಿಯೆತ್ತಿದವು.

ಅನೇಕ ಜೈನ ಯಾಪನೀಯ ಸಂಘದ ಮುನಿಗಳು, ಕಾಳಾಮುಖ ಮನಿಗಳು ಈ ಮಂತತಂತ್ರ ಸಿದ್ಧಿಗಳನ್ನು ಪಡೆದಿದ್ದುದನ್ನು ಶಾಸನಗಳು ಹೇಳಿವೆ. ಆದರೂ ಜೈನರು, ವೈದಿಕರು, ವೀರ ಶೈವರು ಈ

ವಾಮಾಚಾರದ ತಾಂತ್ರಿಕ ಪಂಥಗಳನ್ನು ಹಿಂಸ್ರಕವಾದ ಆರಾಧನಾ ವಿಧಾನವೆಂದು ತೀವ್ರವಾಗಿ ವಿಡಂಬಿಸಿದರು ಮತ್ತು ತಿರಸ್ಕರಿಸಿದರು. ನಿಜವಾಗಿ ಈ ವಿರೋಧದ ಹಿಂದೆ ಕೇವಲ ಉಗ್ರ ಆಚರಣೆ ಅತಿಮಾರ್ಗವಷ್ಟೇ ಕಾರಣವಾಗಿರಲಿಲ್ಲ. ಅದು ಸ್ಥಾಪಿತ ವರ್ಗಗಳ ವ್ಯವಸ್ಥೆಯನ್ನೇ ಬುಡಮೇಲು ಮಾಡುವ ಅಸ್ತ್ರವನ್ನು ತನ್ನೊಳಗೆ ಇಟ್ಟುಕೊಂಡಿತ್ತು. ಅವುಗಳಿಗೆ ಪ್ರಭುತ್ವದ ಹಾಗೂ ವೇದ ಶಾಸ್ತ್ರ ಪುರಾಣ ಇತ್ಯಾದಿ ಕಟ್ಟುಗಳ ಹಂಗಿರಲಿಲ್ಲ ಎಂಬುದು ಮುಖ್ಯ ಕಾರಣವಾಗುತ್ತದೆ. ಭೌತವಾದಿ ನೆಲೆಯಲ್ಲಿ ಹುಟ್ಟಿಕೊಂಡ ಈ ಪಂಥಗಳು ವೈದಿಕ ಪಠ್ಯಗಳನ್ನು ವರ್ಣಾಶ್ರಮ ಇತ್ಯಾದಿಗಳನ್ನು ಪಾಪ-ಪುಣ್ಯ, ಪವಿತ್ರ-ಅಪವಿತ್ರ ಪರಿಕಲ್ಪನೆಗಳನ್ನು ವಿರೋಧಿಸಿದ್ದವು. ಆ ಕಾರಣದಿಂದಲೇ ಸಾಮಾನ್ಯ ಸಮುದಾಯವನ್ನು ತನ್ನತ್ತ ಸೆಳೆದುಕೊಳ್ಳುತ್ತಿದ್ದವು. ಆ ಕಾರಣಕ್ಕಾಗಿಯೇ ಇಂತಹ ಪಂಥಗಳನ್ನು 'ವಾಮ'ವೆಂದು ಧರ್ಮ ಬಾಹಿರವೆಂದು ಆರೋಪಿಸಿ ಮುರಿಯುವ ಪ್ರಯತ್ನ ಮಾಡಲಾಯಿತು.

**ಕಾಪಾಲಿಕರು :** ಶೈವ ಶಾಕ್ತ ತಾಂತ್ರಿಕ ಪಂಥಗಳಾದ ಕಾಪಾಲಿಕ ಹಾಗೂ ಕೌಳರಿಗೆ ಸಂಬಂಧಿಸಿದಂತೆ ಶಾಸನಗಳು ಅತಿ ವಿರಳ. ಇದಕ್ಕೆ ಕಾರಣ ಅವರು ಎಂದೂ ಸಿರಿವಂತ ಸಾಮಾಜಿಕರು ಮತ್ತು ಪ್ರಭುತ್ವದ ಹಂಗಿಗೆ ಬಿದ್ದವರಲ್ಲವೆಂಬುದು. ಸಾಂಸ್ಥಿಕವಾಗಿ ನೆಲೆನಿಂತು ದಾನದತ್ತಿಗಳನ್ನು ವಿಶೇಷವಾಗಿ ಪಡೆದು ಧರ್ಮ ಪ್ರಚಾರ ಮಾಡುವ ಒತ್ತಡಕ್ಕೆ ಅವರು ಒಳಗಾಗಿದ್ದರೆನಿಸುವುದಿಲ್ಲ. ಏಕಾಂತ ಪ್ರಿಯರಾಗಿ ಗೋಪ್ಯವಾಗಿ ತಮ್ಮ ಸಾಧನೆ ಸ್ಥಿತಿಗಳಲ್ಲಿ ತೊಡಗುತ್ತಿದ್ದ ಇವರು ಗಿರಿ ಕಣಿವೆ ಕಾಡುಗಳನ್ನು ಸ್ಮಶಾಸನಗಳನ್ನು ತಮ್ಮ ನೆಲೆಯನ್ನಾಗಿ ಮಾಡಿಕೊಂಡಿರುತ್ತಿದ್ದರು.

ಕಾಪಾಲಿಕರ ಉಲ್ಲೇಖ ಸು. ಎರಡನೇ ಶತಮಾನದ ಹಾಲರಾಜನ 'ಗಾಥಾ ಸಪ್ತಶತಿ'ಯಲ್ಲೇ ಬಂದಿದ್ದು, ೭-ಅನೇ ಶತಮಾನಗಳ ಹೊತ್ತಿಗೆ ವ್ಯಾಪಕವಾಗಿ ಹರಡಿತ್ತು. ಇವರು ಭೈರವನ ಆರಾಧಕರಾಗಿದ್ದರು. ಇವರು ಕಠಿಣವಾದ ವ್ರತಾಚರಣೆಗಳ ಕಾರಣದಿಂದ 'ಮಹಾವ್ರತಿಗಳೆಂದು' ಕರೆಯಲ್ಪಡುತ್ತಿದ್ದರು. ಪಂಚಮಕಾರಗಳಾದ ಮಧು, ಮಾಂಸ, ಮೀನು, ಮಧ್ಯ, ಮೈಥುನಗಳಿಂದ ಕೂಡಿದ ಆಚರಣೆಗಳು ತಲೆಯೋಡಿನಲ್ಲಿ ಆಹಾರ ಸೇವನೆ, ಎಲುಬುಧಾರಣೆ, ಸ್ಮಶಾನ ವಾಸ, ನಗ್ನ ದೇಹ, ಭಸ್ಮ ಲೇಪನ, ನರಬಲಿ, ನರಮಾಂಸ ಭಕ್ಷಣೆ ಇತ್ಯಾದಿಗಳಿಂದ ಅತಿ ಭೀಭತ್ಸರಾಗಿರುತ್ತಿದ್ದರು ಎಂಬ ಚಿತ್ರಗಳು ನಮಗೆ ದೊರಕುತ್ತವೆ. ಯೋಗಿಕ ಅಂಗಸಾಧನೆಯ ಮೂಲಕ ಅದನ್ನು ಪಡೆಯುವ ತಾತ್ವಿಕ ನಿಲುವಿನಿಂದ ಹೊರಟ ಇವರು ದೈವಿಕಾನಂದವನ್ನು ಐಂದ್ರಿಕ ಸುಖಾನುಭವದೊಂದಿಗೆ ಸಮೀಕರಿಸಿ ಸ್ತ್ರೀ ಸಂಗಾದಿ ಪಂಚ ಮಕಾರಗಳ ಮಿತಿಮೀರಿದ ಆಚರಣೆಗಳಿಂದಾಗಿ ಸಮಾಜ ಮುಖಿಯಾಗಲು ಸಾಧ್ಯವಿಲ್ಲವಾಯಿತೆನಿಸುತ್ತದೆ. ಅವರ ಸಿದ್ಧಿಗಳ ಪಲವು ವ್ಯಕ್ತಿನಿಷ್ಠವಾಗಿದ್ದು ಸಾಂಘಿಕ ಲಕ್ಷಣಗಳನ್ನು ಪಡೆದಿರಲಿಲ್ಲ. ಜೊತೆಗೆ ವೈದಿಕರೊಂದಿಗಿನ ಪೈಪೋಟಿಗಳಲ್ಲಿ ಇದು ಕಾಲಾಂತರದಲ್ಲಿ ಇತರ ಶೈವ ಪಂಥಗಳಲ್ಲಿ ಸೇರಿಕೊಂಡಿತು. ಅನೇಕ ಬದಲಾವಣೆಗಳಿಂದಾಗಿ, ತನ್ನ ಪ್ರತ್ಯೇಕ ಅಸ್ತಿತ್ವವನ್ನು ಕಳೆದುಕೊಂಡಿತು.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಪಾಲ ಭೈರವ, ಕಾಳಭೈರವ, ಸ್ಮಶಾನ ಭೈರವ ಹೆಸರಿನ ದೇವತೆಗಳು ಸಣ್ಣ ಗುಡಿಗಳು ಭೈರವೇಶ್ವರನ ವ್ಯವಸ್ಥಿತ ದೇವಾಲಯ, ಭೈರವ ಬಲಿಪೀಠಗಳು, ತರಿದ ರುಂಡ ಶಿಲ್ಪಗಳು, ಅನೇಕ ಮುನಿಗಳ ಉಬ್ಬು ಶಿಲ್ಪಗಳು ಮುಳ್ಳಾಸನದ ಮೇಲೆ ಕುಳಿತ ಮುನಿ ಶಿಲ್ಪ (ಕಲ್ಲುಗುಂಡಿ) ಯಂತ್ರಗಲ್ಲುಗಳು[೨೨] ಬೆಟ್ಟಗಳ ಕಲ್ಲಾಸರೆಯಲ್ಲಿ ಮಿಥುನ ರೇಖಾಶಿಲ್ಪಗಳು, ಮಠಗಳಲ್ಲಿ ಮಿಥುನ ಉಬ್ಬುಶಿಲ್ಪಗಳು ಕಾಳಭೈರವಿಯ ಮೂರ್ತಿಗಳು, ಕಂಡುಬಂದಿದ್ದು ಈ ಪ್ರದೇಶದಲ್ಲಿ ಸಾಕಷ್ಟು ಕಾಪಾಲಿಕರ, ಶಾಕ್ತರಾದ ಕೌಳರ ನೆಲೆಗಳು ಇದ್ದುವೆಂಬುದನ್ನು ಸೂಚಿಸುತ್ತಿವೆ. ದಾನ ಶಾಸನಗಳ ಶಿಲ್ಪಗಳಲ್ಲಿ ಜಟೆಸುತ್ತಿ ಕಟ್ಟಿರುವ ಧ್ಯಾನಭಂಗಿಯಲ್ಲಿರುವ ಮುನಿಗಳು, ಜಟೆಬಿಟ್ಟು ಲಿಂಗವನ್ನು ಅರ್ಚಿಸುತ್ತಿರುವ ಮುನಿಗಳು ಸರ್ಪಗಳ ಹುತ್ತದಲ್ಲಿ ನಡುವೆ ಮುಡಿಕೆದರಿ ಇಷ್ಟಲಿಂಗಕಟ್ಟಿ ಧ್ಯಾನಸ್ಥರಾದ ಮುನಿಗಳನ್ನು, ಬಂಡೆಯ ಮೇಲೆ, ದೇವಾಲಯ ಬಿತ್ತಿಗಳಲ್ಲಿ ಕಾಣುತ್ತೇವೆ. ಇವೆಲ್ಲವುಗಳಲ್ಲಿ ಕಾಪಾಲಿಕ, ಕಾಳಾಮುಖ ಸಿದ್ಧನಾಥ ಮುನಿಗಳೆಂದು ಪ್ರತ್ಯೇಕವಾಗಿ ಗುರುತಿಸುವುದು ಕಷ್ಟ. ಈ ಪಂಥಗಳು ಒಂದರೊಳಗೊಂದು ಸಂಕರಗೊಂಡಿರುವ ಕಾಲದಲ್ಲೇ ೧೧-೧೨ನೇ ಶತಮಾನ ಹಾಗೂ ನಂತರದಲ್ಲೇ ಈ ಶಿಲ್ಪಗಳು ಕಾಣಿಸಿಕೊಂಡಿರುವುದು.

ಈ ಪ್ರದೇಶದ ಸಿದ್ಧನಾಥ, ಸಿದ್ದೇಶ್ವರ, ತಂತ್ರೇಶ್ವರ ಇತ್ಯಾದಿ ದೇವಾಲಯಗಳ ಮುಂದೆ ಭೈರವ ಪಾದಗಳೂ, ಭೈರವ ವಿಗ್ರಹಗಳೂ, ರುಂಡ ಶಿಲ್ಪಗಳು, ಅಲ್ಲಲ್ಲಿ ಕಂಡುಬರುತ್ತವೆ. (ಹಿರಿಯೂರು, ಬೆಂಡೆಕೆರೆ, ಬಾಣಾವರ ಕೋಡಿಮರ ಶಿಲ್ಪಗಳು ಕಲ್ಲುಗುಂಡಿ ಮನಕತ್ತೂರು)

ಈಗಲೂ ಕರ್ನಾಟಕದಲ್ಲಿ ಕಾಪಾಲಿಕರು ಎಂಬ ನಾಥಪಂಥಿ ಸಮುದಾಯವಿರುವುದನ್ನು ಅವರ ಆಚರಣೆಗಳಲ್ಲಿ ಈಗಲೂ ಕೆಲವು ಕಾಪಾಲಿಕರ ಮೂಲ ಆಚರಣೆಯನ್ನು ನೆನಪಿಗೆ ತರುವಂತಹವಾಗಿದ್ದು, ಸಾಂಕೇತಿಕವಾಗಿರುವುದನ್ನು ರಹಮತ್ ತರಿಕೆರೆಯವರು ತಮ್ಮ 'ಕರ್ನಾಟಕದ ನಾಥಪಂಥ' ಕೃತಿಯಲ್ಲಿ ಗುರುತಿಸಿದ್ದಾರೆ.

**ಭೈರವಾರಾಧನೆ :** ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ೨೫ಕ್ಕೂ ಹೆಚ್ಚು ಭೈರವ ಮೂರ್ತಿಗಳೂ ಭೈರವನ ಬಲಿಪೀಠಗಳೂ ಕಂಡುಬರುತ್ತಿದ್ದು, ಭೈರವಾರಾಧನೆ ವ್ಯಾಪಕವಾಗಿದ್ದುದನ್ನು ಸಾರುತ್ತಿವೆ. ಗ್ರಾಮಗಳ ಒಳಗೆ ಮುಖ್ಯ ದೇವಾಲಯಗಳಲ್ಲಿ, ಹೊರಗೆ ಏಕಾಂತ ಪ್ರದೇಶಗಳಲ್ಲಿ, ಸ್ಮಶಾನಗಳ ಅಂಚುಗಳಲ್ಲಿ ಕಂಡುಬರುವ ಹಾಳಾದ ಗುಡಿಗಳಲ್ಲಿ ಮುರಿದ ಭೈರವ, ಭೈರವಿ, ಭೈರವನ ಪಾದಗಳು ಉಳಿದುಬಂದಿವೆ. ಶೈವ ಧರ್ಮದ ಪ್ರಾಬಲ್ಯವಿದ್ದ ಈ ಪ್ರದೇಶದಲ್ಲೂ ಇಷ್ಟೊಂದು ಪ್ರಮಾಣದಲ್ಲಿ ಈ ಭೈರವನ ಮೂರ್ತಿಗಳು ಒಡೆದಿರುವುದಕ್ಕೆ ದೇವಾಲಯದ ಹೊರಗೆ ಎಸೆದಿರುವುದಕ್ಕೆ ಕಾರಣವೇನು? ಅನೇಕ ವೃಶ್ಚಿಕ ಪೀಠಗಳಲ್ಲಿ ಗಣಪತಿ, ನರಸಿಂಹ, ಇತ್ಯಾದಿಗಳು ಕಾಣಿಸಿಕೊಳ್ಳಲು (ಯಲಗುಂದ ಶಿವಾಲಯ) ಕಾರಣವೇನು? ಎಂಬುದು ಅಧ್ಯಯನ ಯೋಗ್ಯವಾದ ವಿಚಾರವೇ ಆಗಿದೆ.

ಕಾಪಾಲಿಕರಂತೆ ಕಾಳಾಮುಖರೂ ಭೈರವನ ಆರಾಧಕರಾಗಿದ್ದರು. ಆದರೆ ಇವರಿಬ್ಬರಲ್ಲಿ ಸ್ಪಷ್ಟವಾದ ವ್ಯತ್ಯಾಸಗಳಿವೆ. ಕಾಪಾಲಿಕರ ಭೈರವನಿಗೆ ನರಬಲಿ ನೀಡಲಾಗುತ್ತಿತ್ತು. ಕಪಾಲ ಭೈರವ, ಸ್ಮಶಾನ ಭೈರವ, ಕಾಳಭೈರವ ಎಂಬ ಹೆಸರುಗಳು ಕೆಲವು ಗುಡಿಗಳಿಗೆ ಉಳಿದು ಬಂದಿದ್ದು ಅಲ್ಲಿ ಒಡೆದ ಭೈರವ ಮೂರ್ತಿಯನ್ನು ಬಲಿಪೀಠವನ್ನು, ಒಳಗೆ ಲಿಂಗವಿರುವುದನ್ನು ನೋಡಬಹುದು. ಮತ್ತೆ ಕೆಲವು ಗುಡಿಗಳಲ್ಲಿ ಮೂಲ ಭೈರವ ದೇವರು ನರಬಲಿಬೇಡುತ್ತದೆಂದು ಅದನ್ನು ಒಡೆದು ಹಾಕಲಾಯಿತೆಂದು, ಕಿತ್ತು ಕೆರೆಗೆ ಹಾಕಲಾಯಿತೆಂದು ಸ್ಥಳೀಯರು ಹೇಳುತ್ತಾರೆ. ಅಲ್ಲಿ ಲಿಂಗ ಸ್ಥಾಪನೆ ಮಾಡಿ ಕಪಾಲೇಶ್ವರನೆಂದು ಕರೆದು ಹಾಲು ಹಣ್ಣಿನ ನೈವೇದ್ಯ ನೀಡಲಾಗುತ್ತಿದೆ. (ನೀರ್ಗುಂದ ತುರುವೇಕೆರೆ ತಾಲ್ಲೂಕು) ಮನಕತ್ತೂರಿನ ಭೈರೇದೇವರ ಮೂರ್ತಿಯ ರುಂಡಮಾಲೆ ಲಿಂಗಾಕಾರದಿಂದ ಕೂಡಿದ ಮಾಲೆಯಾಗಿದೆ. ಜೀರ್ಣೋದ್ಧಾರಗೊಳ್ಳುತ್ತಿರುವ ಭೈರವ ದೇವಾಲಯಗಳಲ್ಲಿ ಪುಟ್ಟದಾದ ಸೌಮ್ಯವಾದ ಭೈರವನನ್ನು ಪ್ರತಿಷ್ಠೆ ಮಾಡಲಾಗುತ್ತಿದೆ. ಅರಸೀಕೆರೆಯಲ್ಲಿ ಒಡೆದ ಭೈರವನ ಸಣ್ಣ ಸಣ್ಣ ತುಂಡುಗಳನ್ನೇ ಇಟ್ಟು 'ಮುರುಕಲು ಭೈರವ'ನೆಂದು ಪೂಜಿಸಲಾಗುತ್ತಿದೆ. ನವರಂಗದಲ್ಲಿ ಹೊಸ ಭೈರವ ಮೂರ್ತಿಯನ್ನು ಸ್ಥಾಪಿಸಿದ್ದರೂ ಈ ಮುರುಕಲು ಭೈರವನೇ ಸತ್ವವುಳ್ಳವನೆಂದು ಆರಾಧನೆಗೊಳ್ಳುತ್ತಿರುವುದು ವಿಶೇಷ. ದೇವಾಲಯದ ಎದುರು ಕತ್ತರಿಸಿದ ರುಂಡ ಶಿಲ್ಪವಿದೆ.

ಭೈರವನ ಪಾದಗಳ ಶಿಲ್ಪವನ್ನು ಗಮನಿಸಿದಾಗ ಮುಖ ಅಡಿಯಾಗಿ ಮಲಗಿರುವ ಸ್ತ್ರೀಯರ, ಅಂಗಾತ ಮಲಗಿರುವ ಪುರುಷರ ಕತ್ತನ್ನು ಕತ್ತರಿಸಿರುವುದೂ ಮೇಕೆ ಟಗರುಗಳನ್ನು ಬಲಿನೀಡಿರುವುದೂ ವೀರನೊಬ್ಬ ಕತ್ತಿಯಿಂದ ತನ್ನ ಕತ್ತನ್ನು ತಾನೇ ಕತ್ತರಿಸಿಕೊಳ್ಳುತ್ತಿರುವುದೂ ಸ್ಪಷ್ಟವಾಗಿ ಕಂಡುಬರುತ್ತದೆ. ಇದಲ್ಲದೆ ಕೆಲವು ಭೈರವೇಶ್ವರ ದೇವಾಲಯಗಳಲ್ಲಿ (ಕಣಕಟ್ಟೆ ಅರಸೀಕೆರೆ) ಕತ್ತರಿಸಿದ ಶಿರೋಭಾಗದ ಶಿಲ್ಪಗಳಿದ್ದು ಅದನ್ನು ಅರ್ಧತಲೆನೋವಿನ ಈರಣ್ಣನೆಂದು ದಕ್ಷನ ತಲೆಯೆಂದು ಸ್ಥಳೀಯರು ಹೇಳುತ್ತಾರೆ ಜನರನಂಬಿಕೆ ಏನೇ ಇರಲಿ ಈ ಭೈರವನ ಪಾದದ ಶಿಲ್ಪಗಳು, ರುಂಡಶಿಲ್ಪಗಳೂ ನರಬಲಿಯನ್ನೇ ಸೂಚಿಸುತ್ತವೆ. ನೀರುಗುಂದದ (ತುರುವೇಕೆರೆ ತಾಲ್ಲೂಕು) ಕಪಾಲ ಭೈರವ ದೇವಾಲಯದ ಆವರಣದಲ್ಲಿ ಭೂಮಿಯೊಳಗೆ ತಲೆ ಬುರುಡೆಗಳು ಪುಟ್ಟ ಮಡಿಕೆಯಲ್ಲಿ ಬೆರಳುಗಳ ಮೂಳೆಗಳು ದೊರಕಿವೆ. ಇಪ್ಪತ್ತನೆಯ ಶತಮಾನದ ಆದಿಭಾಗದವರೆಗೂ ಭೈರವನಿಗೆ ಬೆರಳುಗಳನ್ನು ಕತ್ತರಿಸಿ ಬಲಿನೀಡುತ್ತಿದ್ದ ಆಚರಣೆ ಇತ್ತೆಂದು ಅದನ್ನು ಸರ್ಕಾರ ನಿಶೇಧಿಸಿತೆಂಬುದು ತಿಳಿದುಬರುತ್ತದೆ.[೨೨] ಈಗ ಬೆರಳಿಗೆ ವಿಳ್ಳೆಯದೆಲೆಯನ್ನು ಸುತ್ತಿ ಬೆರಳಿನಾಕಾರ ಮಾಡಿ ಅದನ್ನು ದೇವರಿಗೆ ಒಪ್ಪಿಸುವುದರ ಮೂಲಕ ಬಲಿಯನ್ನು ಸಾಂಕೇತಿಕವಾಗಿ ಆಚರಿಸಲಾಗುತ್ತದೆ. ಕಣಕಟ್ಟೆಯಲ್ಲಿ ಭೈರವೇಶ್ವರ ಆರಾಧನೆ ವಿಶೇಷವಾಗಿದೆ. ಬ್ರಾಹ್ಮಣರೂ ಭೈರವನಿಗೆ ನಡೆದುಕೊಳ್ಳುತ್ತಾರೆ. ಹಿರಿಯೂರಿನಲ್ಲಿ ಐದು ಅಡಿಯ ಹೊಯ್ಸಳರ ಕಾದಲ ಸುಂದರ ಕಾಳಭೈರವ ಮೂರ್ತಿಯಿದೆ. ಕೋಳಿಗುಂದದ ಮಯಮಾವಂತ ಭೈರವ ದೇವರಿಗೆ ಹತ್ತು ಕೊಳಗ

ಗದ್ದೆಯನ್ನು ದೇವಭೂಮಿಯಾಗಿ ನೀಡಿದ್ದಾನೆ.[೧೨೩] ಬೆಂಡೆಕೆರೆಯಲ್ಲಿ ಭೈರವ ದೇವ ಪಟ್ಟಕ್ಕೆ ಹೊನ್ನು ದಾನ ನೀಡಿದ್ದನ್ನು ಶಾಸನ ದಾಖಲಿಸಿದೆ.[೧೨೪] ಕಣೆಕಟ್ಟೆಯ ಭೈರೇದೇವರ ಪಾಳು ದೇವಾಲಯದ ಶಾಸನದಲ್ಲಿ ಅಲ್ಲಿನ ನೀಲೇಶ್ವರ ದೇವಾಲಯದಲ್ಲಿ ಲಾಕುಳ ಸಮಯದ ಸಿಂಗಿ ಪಂಡಿತನಿದ್ದು, ಯೋಗಿನೀಶ್ವರ ಭಕ್ತರ ಉಲ್ಲೇಖವಿದೆ.[೧೨೫]

**ಶಾಕ್ತರು, ಕೌಳರು, ಶಕ್ತಿಯ ಆರಾಧನೆ :** ಮಾತೃ ಪ್ರಧಾನ ಸಂಸ್ಕೃತಿಯ ಆದಿಮ ಆಚರಣೆಗಳು ಮುಂದೆ ಶಾಕ್ತ ಪಂಥವಾಗಿ ಬೆಳೆಯಿತೆನ್ನಬಹುದು. ಸ್ತ್ರೀ ಮತ್ತು ಪ್ರಕೃತಿಯ ಸೃಷ್ಟಿಶಕ್ತಿಯೇ ಇಡೀ ಜಗತ್ತಿನ ಮೂಲವೆಂಬ ಕಾರಣಕ್ಕೆ ಆರಾಧನೆಗೊಳ್ಳ ತೊಡಗಿದವು. ಈ ಸೃಷ್ಟಿ ಶಕ್ತಿಯ ದೇವೀ ರೂಪವೆ ಶಕ್ತಿ. ಅವಳ ಆರಾಧಕರೇ ಶಾಸ್ತರು. ಕೌಳರೂ ಈ ಶಕ್ತಿಯ ಆರಾಧಕರು. ಅಂಗಸಾಧನೆಯನ್ನೇ ಪ್ರಧಾನವಾಗಿ ಮಾಡಿಕೊಂಡು ದೇಹದ ಕುಂಡಲಿನೀ ಶಕ್ತಿ ಮತ್ತು ಸಹಸ್ರಾರಪುರುಷ(ಶಿವ) ಮಿಲನಗೊಂಡು ಪಡೆಯುವ ದೈವೀ ಆನಂದವನ್ನು ಮೋಕ್ಷವೆಂದು ಯೋಗ ಸಾಧನೆಯಲ್ಲಿ ಹೇಳಲಾಗುವುದು. ಈ ತತ್ವವನ್ನು ಶಾಕ್ತರು ಹಾಗೂ ಕೌಳರು ಆಚರಣೆಗೆ ಇಳಿಸಿದರು. ಯೋನಿ ಚಿತ್ರ ಶಿಲ್ಪ ಅಥವಾ ಸ್ತ್ರೀಯೋನಿ ಪೂಜೆಗಳು ಆಚರಣೆಯಲ್ಲಿದ್ದವು.

ಕೌಳರು ಪಂಚಮಕಾರಗಳೊಂದಿಗೆ ಈ ತತ್ವವನ್ನು ಲೈಂಗಿಕ ಕ್ರಿಯಾಚರಣೆಗಳಾಗಿ ರೂಢಿಸಿದರು. ಕೌಳ ಯೋಗಿಗಳ ಸಾಧನೆಗೆ ಯೋಗಿನಿಯರು ಸಾಧನವಾಗಿ ಬಳಕೆಗೊಂಡರು. ಪ್ರಸ್ತುತ ಅಧ್ಯಯ ಪ್ರದೇಶದಲ್ಲಿ ಕೌಳರ ಉಲ್ಲೇಖವಿರುವ ಶಾಸನಗಳು ದೊರಕಿಲ್ಲ. ಲಜ್ಜಾಗೌರಿಯ ಶಿಲ್ಪಗಳೂ ಕಂಡುಬಂದಿಲ್ಲ.* ಕಣಕಟ್ಟೆಯ ಒಂದು ಶಾಸನದಲ್ಲಿ[೧೨೬] ಯೋಗಿನೀಶ್ವರಿಯ ಭಕ್ತ' ಎಂಬ ಉಲ್ಲೇಖವಿದೆ. ಒಡೆದ ಭೈರವಿಯ ವಿಗ್ರಹವೊಂದು ಭೈರವೇಶ್ವರ ಗುಡಿಯ ಆವರಣದಲ್ಲಿದೆ.

ನೀರ್ಗುಂದನಾಡಿನ ಯಲೆಗುಂದದ ಶಾಸನವು ವಿಷ್ಣುವರ್ಧನನ ರಾಣಿ ಚಿಕ್ಕಶಾಂತಲೆಯು ರಾಮದೇವರ ಹಳ್ಳದ ಚಂಡಿಮುಂಡಿಯ ತೀರ್ಥದ ದೇವಿಯ ಆರಾಧಕಳಾಗಿದ್ದಳು.[೧೨೭] ಇವತ್ತಿಗೂ ಈ ಕಾಡಿನ ಭಾಗದ ಏಕಾಂತ ಸ್ಥಳದಲ್ಲಿರುವ ಪುರದಮ್ಮ ಪ್ರಸಿದ್ಧ ದೇವತೆಯಾಗಿದೆ. ಸೋಮವಾರವೊಂದನ್ನು ಬಿಟ್ಟು ಇಲ್ಲಿ ನಿತ್ಯ ರಕ್ತ ಮಾಂಸ ಮಂದ್ಯಗಳ ಕೋಡಿಯೇ ಹರಿಯುತ್ತದೆ. ಈ ನೆಲೆ ಬಹುಶಃ ತಾಂತ್ರಿಕ ಶಾಕ್ತ ನೆಲೆಯಾಗಿದ್ದಿತೆನ್ನಬಹುದು. ಗ್ರಾಮ ದೇವತೆಗಳಿಗೆ ಉಗ್ರರೂಪದ ಬಲಿ ಆಚರಣೆಗಳು ದೇವಿಯ ಬನಗಳಲ್ಲಿ ನಡೆಯುತ್ತದೆ. ಮಧ್ಯರಾತ್ರಿಯಲ್ಲಿ ನಡೆಯುವ ಈ ಆಚರಣೆಗಳು ತಾಂತ್ರಿಕ ಪಂಥಗಳ ಪಳಯುಳಿಕೆಗಳೇ ಆಗಿವೆ. ಕಿತ್ತನ ಕೆರೆಯ ಕರಿಯಮ್ಮನ ಜಾತ್ರೆಯಲ್ಲಿ ಇಂದಿಗೂ ಮಧ್ಯರಾತ್ರಿ `ಬೇವಿನ ಸೀರೆಯ' ಸೇವೆ ನಡೆಯುತ್ತದೆ.

---

* ತೆರೆದ ಯೋನಿಯ ಸ್ತ್ರೀಶಿಲ್ಪವೊಂದು ಬಾಣಾವರದ ಕೋಟೆಯ ಬಾಗಿಲ ಬದಿಗೆ ಇದೆ. ಶತ್ರುಗಳಿಗೆ ಸಹಾಯ ಮಾಡಿ ಕೋಟೆ ಬಾಗಿಲು ತೆರೆಯುವ ಅಪರಾಧಿಗಳಿಗೆ ಈ ಶಿಲ್ಪದ ಯೋನಿಗೆ ಹೊಲಸು ಬಳಿದು ನೆಕ್ಕಿಸಲಾಗುತ್ತಿತ್ತಂತೆ. ಇದು ಕೋಟೆಯ ದೃಷ್ಟಿಬೊಂಬೆ ಎಂದು ಹೇಳುತ್ತಾರೆ.

**ಸಿದ್ಧರು-ಸಿದ್ದೇಶ್ವರ ಆರಾಧನೆ :** ನಾಥಪಂಥವು ಕರ್ನಾಟಕದಲ್ಲಿ ಪ್ರಚಾರದಲ್ಲಿತ್ತು. ಮಂಗಳೂರಿನ ಕದ್ರಿ ಗುಡ್ಡಗಳು ಆದಿಚುಂಚನ ಗಿರಿಯ ಮಠ ನಾಥ ಸಂಪ್ರದಾಯದ ಕೇಂದ್ರಗಳಾಗಿದ್ದವು.[೧೨೮] ಅರಸೀಕೆರೆ ತಾಲ್ಲೂಕಿನ ಜೆ.ಸಿ.ಪುರ, ಉಂಡಿಗನಾಳು, ರಾಂಪುರಗಳ ಸಿದ್ಧರ ಬೆಟ್ಟಗಳು, ಯಾದಾಪುರದ ಜೇನುಕಲ್ಲು, ಬೆಟ್ಟವು ಸಿದ್ಧಪ್ಪ ಅವಧೂತರ ಸಿದ್ಧ ಕ್ಷೇತ್ರವಾಗಿದೆ. ತಾಂತ್ರಿಕ ವಜ್ರಯಾನದ ಬೌದ್ಧ ಸಿದ್ಧರು ಕಾಳಾಮುಖ ಪಂಥಕ್ಕೆ ನಂತರ ವೀರಶೈವ ಮತಕ್ಕೆ ಬಂದವರು ಸಿದ್ದೇಶ್ವರನ ಆರಾಧನೆಯನ್ನು ಅಳವಡಿಸಿಕೊಂಡರು ಎಂಬ ಅಭಿಪ್ರಾಯವಿದೆ. ಇದಕ್ಕೆ ಪುಷ್ಟಿ ನೀಡುವ ಕೆಲವು ಉದಾಹರಣೆಗಳನ್ನು ಈ ಪ್ರದೇಶದಲ್ಲಿ ಕಾಣಬಹುದು.

ಬೆಂಡೆಕೆರೆಯಲ್ಲಿ ಸಿದ್ದೇಶ್ವರ ತಂತ್ರೇಶ್ವರ ದೇವಾಲಯಗಳು ಉಳಿದುಕೊಂಡು ಬಂದಿವೆ. ಕ್ರಿ.ಶ.೧೨೩೨ರ ಅಲ್ಲಿನ ಶಾಸನದಲ್ಲಿ ತಂತ್ರೇಶ್ವರ ದೇವರ ಹಾಗೂ ಸಿದ್ಧೇಶ್ವರ ದೇವರ ದೇವದಾನ ಭೂಮಿಯಿದ್ದುದರ ಉಲ್ಲೇಖವಿದೆ. ಸಿದ್ಧನಾಥ ದೇವರ ದೀವಿಗೆಗೆ ದಾನ ನೀಡಿದ ವಿವರವಿದೆ.[೧೨೯] ಸಿದ್ಧೇಶ್ವರ ದೇವಾಲಯ ಮಗ್ಗುಲಿಗೆ ೧೬-೧೭ನೇ ಶತಮಾನದಲ್ಲಿ ಶ್ರೀ ಶೈಲದ ಶಾಖಾಮಠವೊಂದು ಇದ್ದುದು ತಿಳಿದುಬರುತ್ತದೆ. "ಶ್ರೀಲಿಂಗ ಚಕ್ರವರ್ತಿ ಶ್ರೀಶೈಲದ ಮಲ್ಲಿಕಾರ್ಜುನನ ಪಾದಾರಾದಕರಾದ ವೀರಶೈವ ಜಂಗಮ ಭಿಕ್ಷಾವೃತ್ತಿಯ ಅಯ್ಯನ ಉಲ್ಲೇಖ ಸಿದ್ದೇಶ್ವರ ದೇವಾಲಯದ ಶಾಸನದಲ್ಲಿದೆ.[೧೩೦] ಶ್ರೀಶೈಲದಲ್ಲಿ ಇದ್ದ ಶೈವ ಸಿದ್ಧ ಪರಂಪರೆಯು ಈ ಪ್ರದೇಶಕ್ಕೂ ಹರಡಿರುವುದು ಕಂಡುಬರುತ್ತದೆ.

ಹಿರಿಯೂರಿನಲ್ಲಿ ಸಿದ್ಧನಾಥದೇವರ ಭೂಮಿಯ, ಹಳ್ಳದ ಉಲ್ಲೇಖವಿದೆ,[೧೩೧] ಚಲುವನಹಳ್ಳಿಯ ಗವಿಮಠದ ಕಲ್ಲಾಸರೆಯಲ್ಲಿ ಮಿಥುನ ರೇಖಾಚಿತ್ರಗಳಿದ್ದು, ತಾಂತ್ರಿಕ ಆಚರಣೆಗಳ ಕುರುಹು, ಅವಧೂತರೆಂದು ಕರೆಯಲ್ಪಡುವ ಸಿದ್ಧಮಲ್ಲಪ್ಪನ ಗದ್ದುಗೆಯೂ ಕರಸ್ಥಲದಲ್ಲಿ ಇಷ್ಟಲಿಂಗ ಹಿಡಿದು ಬಲಗೈಯಲ್ಲಿ ರುದ್ರಾಕ್ಷಿ ಮಾಲೆ ಹಿಡಿದು ಧ್ಯಾಯಮಗ್ನನಾದ ಹಾಲು ಸಿದ್ದೇಶ್ವರನ (ಯಡಿಯೂರು ಸಿದ್ಧಲಿಂಗ ಯತಿಯನ್ನು ಹೋಲುತ್ತದೆ) ಉಬ್ಬುಶಿಲ್ಪವೂ ಇದೆ.

ಒಟ್ಟಿನಲ್ಲಿ ಮೇಲಿನ ಉದಾಹರಣೆಗಳು ಸಿದ್ಧಮತ, ಸಿದ್ಧಮಾರ್ಗ, ಅವದೂತಮತ ಎಂದು ಕರೆಯಲ್ಪಡುವ ನಾಥಪಂಥವು ಬೌದ್ಧಸಿದ್ಧ ಮೂಲದಿಂದ ನಾನಾ ಪಂಥಗಳನ್ನು ಬೆಸೆದುಕೊಳ್ಳುತ್ತಾ ಬೆಳೆದು ಬಂದಿರುವುದನ್ನು ಸೂಚಿಸುತ್ತವೆ.

### ೬.೨.೩.೫. ವೀರಶೈವ ಧರ್ಮ

ಕಲ್ಯಾಣದ ಕ್ರಾಂತಿಯನಂತರ ಕಲ್ಯಾಣದಿಂದ ಶರಣರು ನಾನಾದಿಕ್ಕಿಗೆ ಚದುರಿಹೋದದ್ದು ವೀರಶೈವಧರ್ಮದ ಪ್ರಸರಣ ಮತ್ತು ಪರಿವರ್ತನೆಯ ದೃಷ್ಟಿಯಿಂದ ಮಹತ್ವವಾದುದು. ಕಲಚುರಿಗಳ ಪತನಾನಂತರ ಆಶ್ರಯವನ್ನು ಹುಡುಕುತ್ತಾ ಅಧಿಕಾರಿಗಳು, ಕವಿ, ಕಲಾವಿದರ ಕುಟುಂಬಗಳು ಹೊಯ್ಸಳ ನಾಡಿಗೆ ವಲಸೆ ಬಂದಂತೆ ವೀರಶೈವ ಧರ್ಮವೂ ಇಲ್ಲಿ ಬಂದು ಬೇರು ಬಿಡತೊಡಗಿತು. ದಕ್ಷಿಣ

ಕರ್ನಾಟಕದಲ್ಲಿದ್ದ ಶ್ರೀವೈಷ್ಣವ ಧರ್ಮದ ತೀವ್ರ ಪೈಪೋಟಿಯ ಮಧ್ಯೆ ಪ್ರಬಲರಾಗಿದ್ದ ಕಾಳಾಮುಖರ ನಡುವೆ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುವ ಸವಾಲಿಗೆ ವೀರಶೈವ ಧರ್ಮ ಸಿಕ್ಕಿಕೊಂಡಿತು. ಶೈವ ನಿಷ್ಠೆ ಸರಳ ಭಕ್ತಿಮಾರ್ಗವನ್ನು ಗಟ್ಟಿಯಾಗಿ ಹಿಡಿದು ನಾನಾ ಬಗೆಯ ಸಮನ್ವಯ ಒಡಂಬಡಿಕೆಗಳನ್ನು ಮಾಡಿಕೊಳ್ಳುತ್ತ ತನ್ನ ಜನಪರ ಧೋರಣೆಯಿಂದ ಹೆಚ್ಚು ಪ್ರಭಾವಶಾಲಿಯಾಗಿ ಬೆಳೆಯತೊಡಗಿತು.

ಪ್ರಸ್ತುತ ಪ್ರದೇಶದ ಶಾಸನಗಳಲ್ಲಿ ಶಿವಗಣಗಳು, ದೀಕ್ಷಾಪುತ್ರ, ಗಣಕುಮಾರಿ, ವಿಭೂತಿಪಟ್ಟ, ಜಂಗಮ, ಮಹೇಶ್ವರ, ಗಣಾಚಾರ ಇತ್ಯಾದಿ ವೀರಶೈವ ಪಾರಿಭಾಷಿಕ ಪದಗಳು ಕಾಣಿಸಿಕೊಂಡಿವೆ. ಅನೇಕ ಶಿವಭಕ್ತರು, ಶಿವ ಶರಣರ ಉಲ್ಲೇಖಗಳು ಬಂದಿವೆ. ಶಿಲ್ಪದಲ್ಲಿ ಇಷ್ಟಲಿಂಗ ಆರಾಧನೆಯು ಕಾಣಿಸಿಕೊಂಡಿದೆ.

**ಶಿವಭಕ್ತರು, ಶರಣರು :** ಹಿರಿಯೂರಿನ ಶಾಸನದಲ್ಲಿ[೧೩೨] ವೀರಶೈವ ವಚನಕಾರರು ಕವಿಗಳ ಮೇಲೆ ವಿಶೇಷ ಪ್ರಭಾವವನ್ನು ಬೀರಿದ ತಮಿಳು ನಾಡಿನ ೬೩ ಪುರಾತನ ಶಿವಭಕ್ತರುಗಳಲ್ಲಿ ಸಿರಿಯಾಳ, ಸುಂದರ (ನಂಬಿಯಣ್ಣ) ಚೋಳ, ಸಿಂಧು ಬಲ್ಲಾಳರನ್ನು ಬಸವ ಪೂರ್ವದ ಶಿವಭಕ್ತರಾದ ಬಾಣ, ಉದ್ಭಟರನ್ನು, ಬೋಗಣ್ಣ (ಕೆಂಬಾವಿ) ಮತ್ತು ದಾಸಿಮಯ್ಯ (ಜೇಡರ)ರನ್ನು ಹಾಗೂ ಅವರ ಸಾಲಿನಲ್ಲಿ ಬಸವಯ್ಯನನ್ನು ಸೇರಿಸಿ ಇಂತಹ ಭಕ್ತ ಸಂದೋಹವು ಆದರದಿಂದ ಕಾಕರ ಕಂಡನಂಬಿಗೆ ಉದ್ಬೋದ ಸಂಪತ್ತನ್ನು ನೀಡಲಿ ಎಂಬ ಹಾರೈಕೆಯನ್ನು ನೀಡಲಾಗಿದೆ.

ಅತ್ಯಂತ ಸಿರಿವಂತ ವ್ಯಾಪಾರಿಯಾಗಿದ್ದ ಕಂಡನಂಬಿಯರ ಕುಟುಂಬ ವೀರಶೈವ ಧರ್ಮದ ಪ್ರಭಾವಕ್ಕೆ ಒಳಗಾಗಿತ್ತು. ಅವರ ಶೆಟ್ಟಿ ಪಟ್ಟಣವಾಗಿದ್ದ ಮುತ್ತನ ಹೊಸವೂರಿಗೆ ಪಾಂಡ್ಯನಾಡಿನಿಂದ (ಉಚ್ಚಂಗಿ ಪಾಂಡ್ಯನಾಡು) ಮಾರಜೀಯನ ನೇತೃತ್ವದಲ್ಲಿ ಇಡೀ ಊರೇ ಗುಳೆ ಹೊರಟು ಬಂದು ಇಲ್ಲಿ ನೆಲಸಿದ ಧಾರ್ಮಿಕ ವಲಸೆಯ ಬಗ್ಗೆ ಹಿಂದೆ ತಿಳಿದುಕೊಂಡಿದ್ದೇವೆ. ಅನೇಕ ಶಿವಾಲಯಗಳಿದ್ದು, ಸಂಪೂರ್ಣ ಶೈವ ವಾತಾವರಣವಿದ್ದ ಮುತ್ತನ ಹೊಸವೂರು ವೀರಶೈವ ಧರ್ಮಕ್ಕೂ ಆಶ್ರಯತಾಣವಾಯಿತು. ಕಂಡನಂಬಿಯ ಮಗ ಕುಂಜನು ಸುಕೃತ ಪುಂಜನೆನಿಸಿದ್ದು ಹರಪದ ಪೂಜೆಯೊಳು ಹರ ಕಥೋಚಿತ ತತ್ತ್ವ ಸುಖಾನುಸೇವೆಯೊಳು, ಹರಸಮಯ ಪ್ರಭಾವ ಪರಿವರ್ತನದೊಳು, ಹರಭಕ್ತಿಯೊಳು, ಹರಸ್ಮರಣದೊಳು ಸದಾಕಾಲವೂ ತನು ಮನ ಧನವನ್ನು ಬೆಸೆದುಕೊಂಡಿದ್ದನು. ಈ ರೀತಿ ತನುವನ್ನು ಜಂಗಮದೆಡೆಯಲ್ಲಿ ಮನವನ್ನು ಶ್ರೀ ಸೋಮನಾಥ ಪಾದಪಂಕಜದಲ್ಲಿ ವಿನಿಯೋಗಿಸುತ್ತಿದ್ದ ಕುಂಜನು ಶಿವಪಾದವನ್ನು ಸೇರಿ ಪುಣ್ಯವನ್ನು ಪಡೆದನೆಂದು ಹೇಳಿರುವ ಪದ್ಯವು ಕುಂಜನ ಚರಮಗೀತೆಯೇ ಆಗಿದೆ. ಕಿರಿವಯಸ್ಸಿನಲ್ಲೇ ತೀರಿಹೋದ ಶಿವಭಕ್ತಿಯ ಸಾಕಾರ ಮೂರ್ತಿಯಂತಿದ್ದ ಈ ಕುಂಜನಿಗಾಗಿ ತಂದೆ ಕಂಡನಂಬಿ ಸುಂದರವಾದ ಕುಂಜೇಶ್ವರ ದೇವಾಲಯವನ್ನು ನಿರ್ಮಿಸಿದ್ದಾನೆ.[೧೩೩]

ಅಪಾರವಾದ ಭೂಮಿಯನ್ನು ಕುಂಜೇಶ್ವರನಿಗೆ ನೀಡಿ ಕಿರಿಯಮಗಳು ಚಂದವ್ವೆಗೆ ಕಂಡನಂಬಿ ಕುಂಜೇಶ್ವರದ ಶ್ರೀಕಾರ್ಯವನ್ನು ನಡೆಸಿ ಆ ಸ್ಥಾನಕ್ಕೆ ಒಡತಿಯಾಗಿ ಇರುವಂತೆ ರಾಜಗುರು ಮುಖ್ಯರಾದ

ನೂರಿಪ್ಪತ್ತು ಸ್ಥಾನಿಕರು ಕಂಪಾಣಾಚಾರ್ಯರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ಸಂನ್ನಿಧಾನದಲ್ಲಿ ವಹಿಸಿಕೊಟ್ಟಾಗ ಅವರೆಲ್ಲರೂ ಒಮ್ಮತದಿಂದ ಚಂದವ್ವೆಗೆ ವಿಭೂತಿ ಪಟ್ಟವನ್ನು ಕಟ್ಟಿ ಗಣಕುಮಾರಿ ತನವನ್ನು ಕೊಟ್ಟು ಮಠದೆರೆ ಮುಖ್ಯವಾದ ತೆರಿಗೆಗಳನ್ನು ಮಾನ್ಯವಾಗಿ ನೀಡಿದ್ದಾರೆ. ಈ ಘಟನೆಯು ವೀರಶೈವ ಮತ್ತು ಕಾಳಾಮುಖ ಮತ ಪಂಥಗಳು ಸಮನ್ವಯಗೊಂಡಿರುವುದನ್ನು ಸೂಚಿಸುತ್ತಿದೆ. ಇಮ್ಮಡಿ ವೀರಬಲ್ಲಾಳನ ಕಾಲದಲ್ಲಿ ಈ ಪ್ರದೇಶಕ್ಕೆ ಪಾದಾರ್ಪಣೆ ಮಾಡಿದ ವೀರಶೈವ ಧರ್ಮವು ಸೋಮೇಶ್ವರನ ಕಾಲಕ್ಕಾಗಲೇ ವ್ಯಾಪಕವಾಗಿ ಹರಡಿ ಪ್ರಭಾವಿಸುತ್ತಿತ್ತು ಎಂಬುದು ಸ್ಪಷ್ಟವಾಗುತ್ತದೆ. ಶೆಟ್ಟಿ ಪಟ್ಟವಾಗಿದ್ದ ಮುತ್ತನ ಹೊಸವೂರಿನ ವರ್ತಕ ಸಮೂಹ ವೀರಶೈವ ದೀಕ್ಷೆ ಪಡೆದಿತ್ತೆಂದು ಊಹಿಸಬಹುದು. ಇವತ್ತಿಗೂ ಆಗ್ರಾಮದಲ್ಲಿ (ಹಿರಿಯೂರು) ಬಣಜಿಗ ಲಿಂಗಾಯತರ ಸಂಖ್ಯೆ ಅಧಿಕವಾಗಿದ್ದು ಕುಂಜೇಶ್ವರ ದೇವಾಲಯದ ಆಡಳಿತ ಪೂಜೆಗಳನ್ನು ಅವರೇ ನಡೆಸಿಕೊಂಡು ಬರುತ್ತಿದ್ದಾರೆ. ಶಾಸನದಲ್ಲಿಯೂ ಅಲ್ಲಿದ್ದ ಮಾಹೇಶ್ವರ ಶ್ರೇಣಿಗೆ ಕುಂಜೇಶ್ವರ ಸುಖವನ್ನು ನೀಡಲಿ ಎಂಬ ಪ್ರಾರ್ಥನೆಯಿದೆ[೧೩೪]

**ಜೇಡರ ದಾಸಿಮಯ್ಯ :** ಈ ಪ್ರದೇಶದಲ್ಲಿ ಹೆಚ್ಚು ಪ್ರಭಾವ ಬೀರಿರುವ ವಚನಕಾರ ಜೇಡರ ದಾಸಿಮಯ್ಯನೆಂಬುದನ್ನು ಶಾಸನಗಳಿಂದ ತಿಳಿಯಬಹುದು. ಈ ಪ್ರದೇಶದಲ್ಲಿ ಸಿದ್ಧರಾಮನ ಗದ್ದುಗೆಗಳೂ ಸಿದ್ಧರಾಮೇಶ್ವರನ ಒಕ್ಕಲುಗಳೂ ಹೆಚ್ಚು ಇದ್ದರೂ ಅವನ ಉಲ್ಲೇಖ ಶಾಸನದಲ್ಲಿ ಕಾಣಿಸಿಕೊಂಡಿಲ್ಲ. ಬಸವ ಪೂರ್ವಕಾಲದ ಆದ್ಯ ವಚನಕಾರನೆನಿಸಿಕೊಂಡಿರುವ ಜೇಡರ ದಾಸಿಮಯ್ಯನ ಕಾಯಕನಿಷ್ಠೆ ಬದುಕು ಜೇಡ ಸಮುದಾಯದ ಮೇಲೆ ವಿಶೇಷ ಪ್ರಭಾವ ಬೀರಿದೆ. ನೀರ್ಗುಂದ ನಾಡಿನ ಕಗ್ಗನ ಬಿದಿರೆಯ ಪಸಾಯ್ತ ಕಲಿದೇವರ ವರಪ್ರಸಾದನೆನಿಸಿದ್ದ ಬೆಳ್ಳಪ್ಪ ನಾಯಕನನ್ನು 'ಬಡವರು ಚಿಂತಾಮಣಿಯಂ ಪಡೆದಂತಿದರೆ ದಾನನೀಸನ ಕೈಯಲು ಪಡೆದಾ ತವನಿಧಿಯಂತೆ" ಅವನ ತಾಯಿ ಚಾಕಣವ್ವೆ ಪಡೆದಳು ಎಂದು ಅಲ್ಲಿನ ಶಾಸನವೊಂದು[೧೩೫] ಹೇಳಿದೆ. ಜೇಡರ ದಾಸಿಮಯ್ಯನ ಬದುಕಿನೊಂದಿಗೆ, ತನ್ನ ದಾನ ಗುಣದಿಂದ ಶಿವನಿಂದ ತವನಿಧಿಯನ್ನು ಪಡೆದನೆಂಬ ಪವಾಡದ ಕತೆ ಪ್ರಚಲಿತವಿದ್ದು ಅದನ್ನು ಕವಿ ಇಲ್ಲಿ ಬಳಸಿಕೊಂಡಿದ್ದಾನೆ.*

ಈ ತವನಿಧಿಯ ಪವಾಡದ ಉಲ್ಲೇಖ ಬಂದೂರಿನ ಜೈನ ಶಾಸನದಲ್ಲೂ ಕಾಣಿಸಿಕೊಂಡಿರುವುದು ಆಶ್ಚರ್ಯ ಉಂಟು ಮಾಡುತ್ತದೆ.[೧೩೬] ಬೆಳ್ಳಿಯ ದಾಸಿಸೆಟ್ಟಿಯ ದಾನಗುಣವನ್ನು ಹೊಗಳುತ್ತ "...ನ್ಯಾಯದಿಂದ ಪಡೆದರ್ತ್ಥಮಂ ದೇವತಾ ಪೂಜೆಗೆ ಬಸದಿಗೆ ಶಿಷ್ಟೇಷ್ಟದಾನಕ್ಕೆ ನಿಚ್ಚಂ ಕುಡೆ ಮತ್ತಂ ತನ್ನ ಭಾಗ್ಯಂ ತವನಿಧಿಯೆನೆ ನೀಳ್ದುಣ್ಮೆ ಕೈಗಣ್ಮೆ ಪೆಂಪಂ ಪಡೆದಂ ದಾಸಂ..." ಎಂದು ವರ್ಣಿಸಲಾಗಿದೆ. ತವನಿಧಿಯ ಪವಾಡ ಎಲ್ಲ ಧರ್ಮದವರ ಮೇಲೆ ಪ್ರಭಾವ ಬೀರಿತ್ತು ಎನ್ನಬಹುದು.

* ಈ ಶಾಸನ ಬರವಣಿಗೆಯನ್ನು ಗಮನಿಸಿದರೆ ವೀರಶೈವ ಧರ್ಮದ ಪ್ರಭಾವಕ್ಕೆ ಒಳಗಾದ ಶಿವಭಕ್ತ ಕವಿಯ ರಚನೆಯಂತಿದೆ. ಬೆಳ್ಳಪ್ಪನ ತಂದೆ ಕೇತಯ್ಯ ನಾಯಕನು ಪ್ರಸಿದ್ಧವಾದ ರಾಯ ಚಳುಕ್ಯ ಕಟಕದೊಳಗೆ ಅಂಗರಕ್ಷಕನಾಗಿದ್ದನೆಂಬು ತಿಳಿದು ಬರುತ್ತದೆಯಾದ್ದರಿಂದ ಈ ಕುಟುಂಬ ಹೊಯ್ಸಳನಾಡಿಗೆ ವಲಸೆ ಬಂದಿದೆ.

ಗೀಜಿಹಳ್ಳಿಯ ಎರಡು ಶಾಸನಗಳಲ್ಲಿ[೧೩೭] ಜೇಡರ ದಾಸಿಮಯ್ಯನ ಮಗ ಕಾಟಿಗೌಡ ಮತ್ತು ಅವನ ಮಗ ದಾಸಿಯನ ಉಲ್ಲೇಖವಾಗಿದ್ದು, ಈ ಕಾಟಿ ಗೌಡನು ಗೀಜಿಹಳ್ಳಿಯಲ್ಲಿ ಕೆರೆಯನ್ನು ಕಟ್ಟಿಸಿ ಪಡೆದ ಕೆರೆಕೊಡಗಿಯಲ್ಲಿ ಅರಸೀಕೆರೆಯ ಗೋಜ್ಜೇಶ್ವರ ಮತ್ತು ಕೋಟೆಹಾಳ ಗೊಜ್ಜೇಶ್ವರ ದೇವರಿಗೆ ಭೂದಾನ ನೀಡಿದ್ದಾನೆ. ಜೇಡರು, ಜೇಡ ಗೊತ್ತಳಿಗಳ ಆರಾಧ್ಯ ದೈವ ಗೊಜ್ಜೇಶ್ವರನಾಗಿದ್ದು ಇವರು ಜೇಡರ ದಾಸಿಮಯ್ಯನ ಪ್ರಿಯಪುತ್ರರೆಂದು ಕರೆದುಕೊಳ್ಳುವ ಹಿನ್ನೆಲೆಯಲ್ಲಿ ಈ ಕಾಟಿ ಗೌಡನು ವಚನಕಾರ ಜೇಡರ ದಾಸಿಮಯ್ಯನ ಶಿಷ್ಯ ಪರಂಪರೆಯವನೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೧೩೮] ಕಾಟಿಗೌಡನು ತನ್ನ ಮಗನಿಗೆ ದಾಸಯ್ಯನೆಂದು ಹೆಸರಿಟ್ಟಿರುವುದನ್ನು ಗಮನಿಸಬಹುದು.

ಹಿರಿಯೂರಿನ ಶಾಸನದಲ್ಲಿಯೂ[೧೩೯] ಶಿವಭಕ್ತರ ಸಾಲಿನಲ್ಲಿ "ಧರೆ ಕೊಂಡಾಡುವ ದಾಸಿಮಯ್ಯ..."ನೆಂದು ಹೇಳಿದೆ. ಇದನ್ನೆಲ್ಲ ಗಮನಿಸಿದಾಗ ದಾಸಿಮಯ್ಯನ ವ್ಯಕ್ತಿತ್ವ, ಬದುಕು ಶರಣ ಸಮುದಾಯಕ್ಕೊಂದು ಹಿರಿಯ ಮಾದರಿಯಾಗಿದ್ದಂತೆ ಜೇಡ ಸಮುದಾಯಕ್ಕೆ ಒಂದು ಐಡೆಂಟಿಟಿಯನ್ನು ತಂದುಕೊಟ್ಟಿತ್ತು ಎನ್ನಬಹುದು. ತಮ್ಮ ದೈವದೊಂದಿಗೆ, ತಮ್ಮ ಜಾತಿ ಜನಾಂಗಕ್ಕೆ ಹೆಮ್ಮೆಯನ್ನು, ಗೌರವವನ್ನು ತಂದುಕೊಟ್ಟ 'ದೈವಿ ಪುರುಷರು' ನೇತಾರರ ಹೆಸರಿನೊಂದಿಗೆ ತಮ್ಮನ್ನು ಬೆಸೆದುಕೊಳ್ಳುವುದು, ಸಂಬಂಧವನ್ನು ಗಟ್ಟಿಗೊಳಿಸುತ್ತ ಪುನರ್ ಸ್ಥಾಪಿಸುವುದರ ಮೂಲಕ ತಮ್ಮ ಸಮುದಾಯಕ್ಕೆ ಒಂದು ನೈತಿಕ ಶಕ್ತಿಯನ್ನು ಪಡೆಯುವುದು ಹಿಂದಿನಂತೆ ಇಂದಿಗೂ ಕಾಣಿಸಿಕೊಳ್ಳುತ್ತಿದೆ.*

**ಕೆಂಬಾವಿ ಬೊಗಣ್ಣ :** ಕ್ರಿ.ಶ.೧೨೫೮ರ ಅರಸೀಕೆರೆಯ ಹಿರಿಯೂರಿನ ಶಾಸನ ಶಿವಭಕ್ತರ ನಡುವೆ 'ಭೋಗ' ಎಂಬ ಶಿವಭಕ್ತನ ಉಲ್ಲೇಖ ಮಾಡಿದ್ದು, ಇದು ಬಸವ ಪೂರ್ವಕಾಲದ ಪ್ರಸಿದ್ಧ ಶರಣನಾದ ಕೆಂಬಾವಿ ಭೋಗಣ್ಣನನ್ನು ಸೂಚಿಸುತ್ತದೆ. ಕ್ರಿ.ಶ.೧೧೮೪ರ ಶಾಸನವೊಂದು ಭೋಗಣ್ಣನಿಂದ ಪ್ರಸಿದ್ಧವಾದ ಕೆಂಬಾವಿಯನ್ನು ವೀರಶರಣಗ್ರಾಮವೆಂದು ಗುರುತಿಸಿದೆ.[೧೪೦]

**ಬಸವಣ್ಣ :** ವಚನ ಚಳುವಳಿಯ ನೇತಾರ ಬಸವಣ್ಣನವರನ್ನು ಕುರಿತ ಕೆಲವು ಶಾಸನಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಹಿರಿಯೂರಿನ ಶಾಸನದಲ್ಲಿ[೧೪೧] ಶಿವಭಕ್ತರ ಸಾಲಿನಲ್ಲಿ ಉಲ್ಲೇಖಗೊಂಡಿರುವ 'ಬಸವಯ್ಯ' ಎಂಬುದು ದೊರೆತಿರುವ ಶಾಸನಗಳಲ್ಲಿ ಮೊತ್ತಮೊದಲ ಉಲ್ಲೇಖವಾಗಿದೆ.[೧೪೨]

**ಚೆನ್ನಬಸವಣ್ಣ :** ಇವನ ಉಲ್ಲೇಖವನ್ನು ಅರಸೀಕೆರೆಯ ಮಾಲೆ ಕಲ್ ತಿರುಪತಿಯ ಶಾಸನದಲ್ಲಿ[೧೪೩] ಕಾಣುತ್ತೇವೆ. ಬಾಣಾವರದ ಕಂಠೀರಾಯಪೇಟೆಯ ಉಭಯ ನಾನಾದೇಸೀ ಪೃಥ್ವೀಸೆಟ್ಟಿಯಾದ ರಾಯರ ಮಂತ್ರಿ ಭಾಸ್ಕರಣ್ಣಂಗಳನ್ನು ಸಜ್ಜನ ಶುದ್ಧ ಶಿವಾಚಾರ ಸಂಪನ್ನರೆಂದೂ, ಗುರುಲಿಂಗ ಜಂಗಮ

---

* ಬೆಳೆಯುತ್ತಿರುವ ನಗರಗಳಲ್ಲಿ ಕುಲಪ್ರಜ್ಞೆ, ಸಮುದಾಯ ಪ್ರಜ್ಞೆ ಕಳೆದುಹೋಗುವ ಭಯದಿಂದ ಇಂಥ ಪ್ರವೃತ್ತಿ ಹೆಚ್ಚು ಕಾಣಿಸಿಕೊಳ್ಳತೊಡಗಿದೆ ಎನ್ನಬಹುದು

ಪ್ರೇಮಿಗಳೆಂದೂ ಹರ, ಗುರು ಭಕ್ತಿ ಪಾರಾಯಣರೆಂದೂ ಗಣೇಶ್ವರ ಗೌರೀಶ್ವರ ಪಾದ ಪಂಕಜರೆಂದೂ ಚೆನ್ನಬಸವೇಶ್ವರ ದೇವರ ಸಂಪ್ರದಾಯಕ್ಕೆ ಸೇರಿದವರೆಂದೂ ಹೊಗಳಿದೆ.

**೬.೨.೩.೬. ಶೈವ ಮಠಗಳು**

ತಳತೊರೆಯ ಶಾಸನವೊಂದು[೧೪೪] ರಾಮಗುರುಗಳ ಮಗ ಕಲ್ಲಯ್ಯನ ವೀರ ಮರಣವನ್ನು ಹೊಗಳುತ್ತ ಅವನನ್ನು ಶಿವಶರಣ ದೀಕ್ಷೆಪುತ್ರನು ಹರಗಣಂಗಳ ಬ್ರಿಂಗಿ ಈಶದಾಸರ ದಾಸನೆಂದು ಕರೆದು ಧರೆಯ ಜನ ಹೊಗಳುವಂತೆ ನಂದಿನಾಥ ವೀರಭದ್ರ ಮೆಚ್ಚುವಂತೆ ಹೋರಾಡಿ ಮಡಿದನೆಂದಿದೆ. ಅದೇ ಗ್ರಾಮದಲ್ಲಿ ರಾಮನಾಥ ದೇವಾಲಯವಿದ್ದು ಅದನ್ನು ಕಾಳಾಮುಖ ಕರಿಯ ಜೀಯರ ಮಗನಿಗೆ ನೀಡಲಾಗಿತ್ತು.[೧೪೫] ಈ ರಾಮನಾಥ ದೇವಾಲಯಕ್ಕೆ ಹೊಂದಿಕೊಂಡಂತೆ ಮಠವೊಂದಿದ್ದು, ಅಲ್ಲಿದ್ದ ರಾಮಗುರುಗಳು ಕಲ್ಲಯ್ಯನಿಗೆ ದೀಕ್ಷೆ ನೀಡಿದ್ದರೆಂದು ಊಹಿಸಬಹುದು. ಈ ಶಾಸನದಲ್ಲಿ ಬಳಸಲಾಗಿರುವ ವೀರಶೈವ ಪಾರಿಭಾಷಿಕ ಪದಗಳು, ಸುರಕನ್ನಿಕೆಯ ಮೆಚ್ಚುಗೆಯ ಬದಲಾಗಿ ನಂದಿನಾಥ ವೀರಭದ್ರದ ಮೆಚ್ಚುಗೆಗೆ ಶಿವಶರಣ ಕಲ್ಲಯ್ಯ ಪಾತ್ರನಾದನೆಂಬ ಅಭಿವ್ಯಕ್ತಿ ಸ್ಪಷ್ಟವಾಗಿ ವೀರಶೈವ ಧರ್ಮದ ಪ್ರಭಾವವನ್ನು ಎತ್ತಿ ತೋರಿಸುತ್ತದೆ. ೧೨೭೪ರ ಕಾಲಕ್ಕಾಗಲೇ ವೀರಶೈವ ಧರ್ಮವು ಇಲ್ಲಿ ಮಠಮಾನ್ಯ ವ್ಯವಸ್ಥೆಯನ್ನು ಹೊಂದಿದ್ದು ಪ್ರಭಾವ ಬೀರುತ್ತಿತ್ತೆಂಬುದನ್ನು ಊಹಿಸಬಹುದು.

ವೀರಶೈವ ಧರ್ಮವು ತಂದ ಮುಖ್ಯ ಪಲ್ಲಟಗಳಲ್ಲಿ ರಾಜಭಕ್ತಿಗೆ ಬದಲಾಗಿ ಶೈವಭಕ್ತಿ, ಚಕ್ರವರ್ತಿಗೆ ಬದಲಾಗಿ ಶಿವನನ್ನು ಹಾಗೂ ಭಕ್ತರನ್ನು, ಅರಸರ ದಿಗ್ವಿಜಯದ ಬದಲಾಗಿ ಭಕ್ತನ ಸಾಧನೆಯನ್ನು ಎತ್ತಿ ಹಿಡಿದದ್ದು ಪ್ರಮುಖವಾದದು. ಬೆಂಡೆಕೆರೆಯ ಶಾಸನದಲ್ಲಿ ಇದನ್ನು ಗಮನಿಸಬಹುದು.[೧೪೬] 'ಶ್ರೀ ವೀರಪ್ರತಾಪ ಶ್ರೀಮನು ಮಹಾಲಿಂಗ ಚಕ್ರವರ್ತಿ ಶ್ರೀಮಲ್ಲಿಕಾರ್ಜುನ ದೇವರ ದಿವ್ಯ ಶ್ರೀಪಾದಪದ್ಮಾರಾಧಕರಾದ ಭಿಕ್ಷವೃತ್ತಿ ಅಯ್ಯನವರು ಬೆಂಡೆಕೆರೆಯ ಶಿವಸ್ಥಳಗಳಿಗೆ ಗಣಾಚಾರದ ಹಣಕಾಸನು..." ಇತ್ಯಾದಿ ಹೇಳಿದೆ. ಭಿಕ್ಷಾವೃತ್ತಿ, ಗಣಾಚಾರದ ಹಣಕಾಸು ಇತ್ಯಾದಿ ವಿವರಗಳು ಇಲ್ಲಿದ್ದ ಮಠವು ವೀರಶೈವ ಮತಕ್ಕೆ ಸೇರಿತ್ತೆಂಬುದನ್ನು ದೃಢಪಡಿಸುತ್ತವೆ.

ಚಲುವನಹಳ್ಳಿ ಗವಿಮಠ ಶ್ರೀಶೈಲದ ಶಾಖಾಮಠವಾಗಿದೆ. ಚೆಲುವನಹಳ್ಳಿ, ರಾಂಪುರ, ಸಾಲಾಪುರಗಳಲ್ಲಿ ವೀರಭದ್ರನ ಗುಡಿಗಳಿವೆ. ಈ ಅಧ್ಯಯನ ಪ್ರದೇಶದಲ್ಲಿ ವೀರಭದ್ರ ದೇವರು ಪ್ರಮುಖವಾಗಿ ಆರಾಧನೆಗೊಳ್ಳುತ್ತಿದ್ದಾನೆ.

ಹಾರನಹಳ್ಳಿಯ ಕೋಡಿಮಠವನ್ನು ಅನಾದಿ ನಿರಂಜನ ಜಗದ್ಗುರು ಜಂಗಮ ಪೀಠವೆಂದು ಹೇಳಲಾಗುತ್ತದೆ. ಹಾರನಹಳ್ಳಿಯಲ್ಲಿ ಕ್ರಿ.ಶ.೧೧೩೪ರಲ್ಲೇ ಕಾಳಾಮುಖಮಠವೊಂದಿದ್ದು ಅಲ್ಲಿನ ತಪೋಧನರಿಗೆ, ವಿದ್ಯಾರ್ಥಿಗಳಿಗೆ ದಾನ ನೀಡಿದ್ದುದು ತಿಳಿದುಬರುತ್ತದೆ.[೧೪೭] ಕೋಡಿ ಮಠವು ಬಸವ

ಪೂರ್ವಕಾಲದ ಮಠವೆಂದು ಹೇಳುತ್ತಾರೆ ಮತ್ತು ಜಾತ್ರೆಯಲ್ಲಿ ಬಸವ ಮುಂದಿರದೆ, ಹಿಂದೆ ಬರುವ ವಾಡಿಕೆಯಿದೆ.[೧೪೮] ಬಹುಶಃ ಇಲ್ಲಿನ ಕಾಳಾಮುಖ ಮಠವೇ ಮುಂದೆ ವೀರಶೈವ ಮಠವಾಗಿ ಪರಿವರ್ತನೆಯಾಗಿರಬಹುದು.

ಸಾತಂಗೆರೆಯಲ್ಲಿ ಸಾವನೇಶ್ವರ ದೇವಾಲಯವಿದ್ದು ಕಾಳಾಮುಖ ಪಂಡಿತರುದ್ರಶಕ್ತಿ, ಮಗ ಉತ್ತಮ ಶಕ್ತಿ ನೆಲೆಸಿದ್ದರು.[೧೪೯] ಈಗ ರಂಭಾಪುರಿಯ ಪೀಠಕ್ಕೆ ಸೇರಿದ ಮಠವಿದೆ. ಹಲಕೂರಿನಲ್ಲಿ ಕಾಳಾಮುಖ ಮಠವಿದ್ದು, ಅನೇಕ ಶಿಷ್ಯರೊಂದಿಗೆ ಮುನಿಗಳು ನೆಲಸಿದ್ದರು.[೧೫೦] ಈಗ ವೀರಶೈವಮಠವಿದೆ. ಕಣಕಟ್ಟೆಯಲ್ಲಿ ಜಗತೀಶ್ವರ ದೇವಾಲಯವಿದ್ದು ಅಲ್ಲಿದ್ದ ಮಠದಲ್ಲಿ ಮಠಪತಿಗಳು ವಾಸವಾಗಿದ್ದರು.[೧೫೧] ಅರಸೀಕೆರೆಯ ಕೆಂಗಲ್ಲು ಸಿದ್ಧೇಶ್ವರನೆಂದು ಕರೆಯುವ ದೇವಾಲಯದ ಶಾಸನದಲ್ಲಿ[೧೫೨] ಧರ್ಮೇಶ್ವರ ದೇವರಿಗೆ ೩ ಮನೆ ನೀಡಲಾಗಿದ್ದು, ಅಲ್ಲಿ ತಪೋದನರು ನೆಲೆಸಿದ್ದರು ಈಗ ಕೆಂಗಲ್ಲು ಸಿದ್ದೇಶ್ವರ ಮಠವಿದೆ, ಅರಸೀಕೆರೆಯ ಗೊಜ್ಜೇಶ್ವರ ದೇವಾಲಯಕ್ಕೆ ಸಂಬಂಧಿಸಿದ ಮಠವೊಂದಿದ್ದು ಅಲ್ಲಿ ತ್ರೈಲೋಕ್ಯ ಪಂಡಿತರ ಶಿಷ್ಯರು ನೆಲೆಸಿದ್ದರು.[೧೫೩] ಅರಸೀಕೆರೆಯಲ್ಲಿ ದೊಡ್ಡಮಠ ಸಣ್ಣ ಮಠಗಳೆಂಬ ಶೈವ ಮಠಗಳಿವೆ. ಈ ತಾಲ್ಲೂಕಿನಲ್ಲಿರುವ ೩೫ಕ್ಕೂ ಹೆಚ್ಚು ಮಠಗಳಿಗೆಲ್ಲಾ ಶಾಸನೋಲ್ಲೇಖಗಳು ದೊರಕದಿದ್ದರೂ ಅವುಗಳಲ್ಲಿ ಕೆಲವುಗಳ ಮೂಲವಾದರೂ ಮಧ್ಯಕಾಲೀನ ಕಾಳಾಮುಖ, ನಾಥಸಿದ್ಧ ಸ್ಥಾನಗಳೊಂದಿಗೆ ಗುರುತಿಸಿಕೊಳ್ಳಬಹುದು.

ಒಟ್ಟಿನಲ್ಲಿ ಈ ಪ್ರದೇಶ ಮಧ್ಯಕಾಲೀನ ಸಮಾಜದಲ್ಲಿ ಪ್ರಭಾವೀ ಶೈವ ಕೇಂದ್ರವಾಗಿದ್ದುದಷ್ಟೇ ಅಲ್ಲ ಇಂದಿಗೂ ಈ ಧರ್ಮ ಇಲ್ಲಿ ಪ್ರಬಲವಾಗಿದೆ. ಸಾಮಾಜಿಕ, ರಾಜಕೀಯ, ಧಾರ್ಮಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡಿದೆ.

## ೬.೩. ಧಾರ್ಮಿಕ ಸಂಘರ್ಷ ಮತ್ತು ಸಮನ್ವಯ

ಭಾರತದ ಧಾರ್ಮಿಕ ಕಥನವೆಂದರೆ, ಇಲ್ಲಿನ ಭೌತವಾದಿ ಭಾವನಾವಾದಿ ದರ್ಶನಗಳ ನಡುವೆ, ವಿವಿಧ ಧರ್ಮ ಮತ್ತು ಪಂಥಗಳ ಒಳಗೆ ಮತ್ತು ಹೊರಗೆ ಪರಸ್ಪರವಾಗಿ ನಡೆದ ಸಂಘರ್ಷ ಸಮನ್ವಯಗಳ ಕಥನವೇ ಆಗಿದೆ. ಪ್ರತಿಯೊಂದೂ ತಾನು ಅನನ್ಯವೆಂದು ಸ್ಥಾಪಿಸಬೇಕೆಂಬ ಹಟದಿಂದಲೇ ಹೊರಟು ಅನೇಕ ಒತ್ತಡಗಳಿಂದ ಅನ್ಯ ದರ್ಶನ, ಧರ್ಮ ಮತ ಪಂಥಗಳೊಂದಿಗೆ ಬೆರೆಯುತ್ತ ಕರಗುತ್ತ ಹೊಸ ರೂಪ ಪಡೆದುಕೊಳ್ಳುತ್ತಾ ಸಾಗಿರುವುದು ಕಂಡುಬರುತ್ತದೆ.

ಇತಿಹಾಸದುದ್ದಕ್ಕೂ ಕಾಣಿಸಿಕೊಳ್ಳುವ ಮತಧರ್ಮಗಳ ಸಂಘರ್ಷವು ರಾಜಕೀಯ ಮತ್ತು ಆರ್ಥಿಕ ಶಕ್ತಿಕೇಂದ್ರದ ಚುಕ್ಕಾಣಿ ಹಿಡಿಯುವ ಮೇಲಾಟವಾಗಿದೆ. 'ಧರ್ಮ ಸಂಘರ್ಷದ ಬೀಜವಿರುವುದು ಆರ್ಥಿಕ

ಕ್ಷೇತ್ರದಲ್ಲಿ" ಎನ್ನುತ್ತಾರೆ ಆರ್.ಎನ್.ನಂದಿ.[೧೫೪] ಭಾರತದ ವಾಣಿಜ್ಯೋದ್ಯಮದಲ್ಲಿ ಮೊದಲಿಗೆ ಬೌದ್ಧರು ಪ್ರಧಾನ ಸ್ಥಾನ ಪಡೆದಿದ್ದುದು ತಿಳಿದುಬರುತ್ತದೆ. ಈ ಧರ್ಮವನ್ನು ಪ್ರಚಾರಮಾಡುತ್ತಿದ್ದ ಭಿಕ್ಷುಗಳ ಸಲುವಾಗಿ ಶ್ರೀಮಂತರು ಬೃಹತ್ ಮೊತ್ತಗಳನ್ನು ವೆಚ್ಚಮಾಡುತ್ತಿದ್ದರು. ಕ್ರಿಸ್ತಪೂರ್ವ ಮೂರನೇ ಶತಮಾನದಿಂದ ಬೌದ್ಧ ಧರ್ಮ ಭಾರತದ ಅತ್ಯಂತ ದೊಡ್ಡ ಸಾಮ್ರಾಜ್ಯದ ಅಧಿಕೃತ ಧರ್ಮವಾಯಿತು.[೧೫೫] ಅಶೋಕ ತೋರಿದ ಪ್ರೇಮದಿಂದಾಗಿ ಬೌದ್ಧ ಧರ್ಮವು ವಿಶಾಲವಾಗಿ ಹರಡಿತಷ್ಟೇ ಅಲ್ಲ ಅದರ ಮೂಲಕ ಅವನು ಸಾಮ್ರಾಜ್ಯವನ್ನು ಬೆಸೆದು ಬಲಪಡಿಸಿಕೊಂಡನು. ಅವನು ಶಾಸನ ಹಾಕಿಸಿದ ನೆಲೆಗಳೆಲ್ಲ ಪುರಾತನ ಹೆದ್ದಾರಿಗಳಲ್ಲಿದ್ದು, ಧಾರ್ಮಿಕ, ವಾಣಿಜ್ಯ, ಪ್ರಾಮುಖ್ಯತೆ ಪಡೆದ ನೆಲೆಗಳೆ ಆಗಿದ್ದವು. ಬೌದ್ಧ ಧರ್ಮವನ್ನು ರಾಜಕೀಯ ನೆಲೆಯಿಂದ ಪ್ರೋತ್ಸಾಹಿಸಿದ ಮೊದಲ ದೊರೆಯೆಂದು ಅಶೋಕ ಕರೆಸಿಕೊಳ್ಳುತ್ತಾನೆ.[೧೫೬] ಕರ್ನಾಟಕದಲ್ಲಿ ಮೌರ್ಯರು ಶಾತವಾಹನರು ಬೌದ್ಧಧರ್ಮಕ್ಕೆ ಆಶ್ರಯ ನೀಡಿದ್ದರು. ಕದಂಬರು ಬಾದಾಮಿ ಚಾಲುಕ್ಯರು ವೈದಿಕ ಧರ್ಮಕ್ಕೆ ಪ್ರೋತ್ಸಾಹ ನೀಡಿದರು. ರಾಷ್ಟ್ರಕೂಟರು ಗಂಗರ ಪೋಷಣೆಯಲ್ಲಿ ಜೈನಧರ್ಮ ಕರ್ನಾಟಕದಲ್ಲಿ ಉಚ್ಛ್ರಾಯ ಸ್ಥಿತಿಯನ್ನು ಕಂಡಿತು. ಜೈನವರ್ತಕರ ಸಮೂಹ ವಾಣಿಜ್ಯ ಕ್ಷೇತ್ರದ ಸ್ವಾಮ್ಯವನ್ನು ಸಾಧಿಸಿಕೊಂಡಿತು. ಕಲ್ಯಾಣ ಚಾಲುಕ್ಯರು ಶೈವ ಧರ್ಮ ಪಕ್ಷ ಪಾತಿಗಳಾಗಿದ್ದರಿಂದ ೧೧ನೇ ಶತಮಾನದ ನಂತರ ನಿಧಾನವಾಗಿ ಕರ್ನಾಟಕದ ವಾಣಿಜ್ಯ ಕ್ಷೇತ್ರವು ಶೈವರ ಕೈವಶವಾಯಿತು. ಒಂದು ಕಾಲಕ್ಕೆ ಪ್ರಬಲವಾಗಿದ್ದ ಧರ್ಮವನ್ನು ಮುರಿದು ಮತ್ತೊಂದು ಧರ್ಮ ಅದರ ಸ್ಥಾನವನ್ನು ಪಡೆಯುವುದು ಆಳರಸರ ಕೃಪೆಯನ್ನು ವಾಣಿಜ್ಯ, ಕ್ಷೇತ್ರದ ಹಿಡಿತವನ್ನು ಪಡೆದುಕೊಳ್ಳುವುದು ಧರ್ಮದ ಇತಿಹಾಸದಲ್ಲಿ ಉದ್ದಕ್ಕೂ ಕಂಡುಬರುತ್ತದೆ. ಆರ್ಥಿಕವಾಗಿ ರಾಜಕೀಯವಾಗಿ ಉತ್ತಮ ಸ್ಥಾನ ಪಡೆಯುವುದೇ ಗುರಿಯಾಗಿ ಮತ ಪ್ರಚಾರವು ಧರ್ಮಗಳ ನಡುವೆ ವಾಗ್ಯುದ್ಧ, ಆಕ್ರಮಣ, ರಕ್ತಪಾತಗಳಿಗೂ ಎಡೆಮಾಡಿಕೊಟ್ಟಿತೆಂಬುದನ್ನು ಹೇಳಲೇಬೇಕಾಗುತ್ತದೆ.

ಕರ್ನಾಟಕದ ಸಮಾಜೋ ಧಾರ್ಮಿಕ ಕಥನದ ಒಂದು ಭಾಗವೇ ಆಗಿರುವ ಪ್ರಸ್ತುತ ಅಧ್ಯಯನ ಪ್ರದೇಶದ ಧಾರ್ಮಿಕ ಸ್ಥಿತಿಗತಿಯು ಇದಕ್ಕಿಂತ ಭಿನ್ನವಾಗಿಲ್ಲ. ಇಲ್ಲಿಯ ಧರ್ಮಗಳ ಸ್ಥಾನಮಾನಕ್ಕೂ ರಾಜಕೀಯ, ಆರ್ಥಿಕ ಸ್ಥಾನಮಾನಕ್ಕೂ ನೇರವಾದ ಸಂಬಂಧವಿದ್ದುದು ಕಂಡುಬರುತ್ತದೆ.

ಬೌದ್ಧ ಧರ್ಮವು ವೈದಿಕ ಹಾಗೂ ಜೈನಧರ್ಮಗಳಿಂದ ತೀವ್ರ ಪೈಪೋಟಿಯನ್ನು ಎದುರಿಸಬೇಕಾಗಿ ಬಂದಿತು. ವಾದದ ಕಟ್ಟೆಗಳಲ್ಲಿ ಬೌದ್ಧರನ್ನು ಸೋಲಿಸಿದ ಪ್ರಖಾಂಡ ಪಾಂಡಿತ್ಯ ಪಡೆದ ತಾರ್ಕಿಕರು, ವಾದಿಗಳು ಅನೇಕ ಬಿರುದುಗಳನ್ನು ಧರಿಸುತ್ತಿದ್ದರು ಹಾಗೂ ತಮ್ಮ ಮತವನ್ನು ಸ್ಥಾಪಿಸುತ್ತಿದ್ದರು. ಮುದುಡಿಯ ಶಾಸನದಲ್ಲಿ[೧೫೭] ಉಲ್ಲೇಖಗೊಂಡಿರುವ 'ಜಿತ ಬುದ್ಧಸ್ವಾಮಿ' ಎಂಬ ನಾಮದೇಯವು ಬೌದ್ಧಧರ್ಮೀಯ ವಾದಿಗಳನ್ನು ಗೆದ್ದು ಪಡೆದ ಬಿರುದಿನಂತೆ ತೋರುತ್ತದೆ. ಇದು ಆ ವ್ಯಕ್ತಿ ಅಥವಾ ಅವನ ವಂಶದವರ ಬಿರುದಾಗಿರುವ ಸಾಧ್ಯತೆಯಿದೆ.

## ೬.೩.೧. ಜೈನರೊಂದಿಗೆ ಶೈವ ವೈಷ್ಣವರ ಮುಖಾಮುಖಿ

ಬೌದ್ಧ ಧರ್ಮದೊಂದಿಗೆ ಸೆಣಸಿ ಔನ್ನತ್ಯಕ್ಕೆ ಏರಿ ಶ್ರೀಮಂತವಾಗಿ ವ್ಯಾಪಕವಾಗಿ ಬೆಳೆದ ಜೈನ ಧರ್ಮವು ೧೨ನೇ ಶತಮಾನದ ಹೊತ್ತಿಗೆ ಪತನದ ಹಾದಿ ಹಿಡಿಯಿತು. ಇದಕ್ಕೆ ಆಂತರಿಕವಾದ ಬಿಕ್ಕಟ್ಟುಗಳು ಬಸದಿಗಳೊಳಗಿನ ನೈತಿಕ ಸಡಿಲತೆ ಇತ್ಯಾದಿಗಳೊಂದಿಗೆ ಬಾಹ್ಯವಾಗಿ ಅದು ಎದುರಿಸಬೇಕಾಗಿ ಬಂದ ಶೈವರ ವಿರೋಧ ಹಾಗೂ ವೈಷ್ಣವರ ಪೈಪೋಟಿಗಳೂ ಕಾರಣವಾದವು.

ಎಕ್ಕೋಟಿ ಜಿನಾಲಯಗಳು, ಬ್ರಹ್ಮಜಿನಾಲಯಗಳು, ಯಕ್ಷ ಯಕ್ಷಿಯರ ಆರಾಧನೆ ಇತ್ಯಾದಿ ನಾನಾ ಒಡಂಬಡಿಕೆಗಳನ್ನು ಮಾಡಿಕೊಂಡು ಜೈನಧರ್ಮ ಉಳಿದುಕೊಳ್ಳುವ ಪ್ರಯತ್ನ ಮಾಡುತ್ತಿದ್ದುದನ್ನು ಗಮನಿಸಿದ್ದೇವೆ. ಇಷ್ಟಾದರೂ ಜಿನ ಬಸದಿಗಳು ದೇವತೆಗಳು ಅನ್ಯ ಧರ್ಮದ ಗುಡಿಗಳಾಗಿ ದೇವತೆಗಳಾಗಿರುವ ಸತ್ಯ ನಮ್ಮ ಕಣ್ಣ ಮುಂದಿದೆ. ಕಾಳಾಮುಖ ಮುನಿಗಳ ವರ್ಣನೆಯಲ್ಲಿ ಅವರ ಪ್ರತಾಪ ಪ್ರಭಾವಗಳನ್ನು ವಿಶೇಷವಾಗಿ ವರ್ಣಿಸಲಾಗಿದೆ. ಕುಮತದೊಳೊಳ್ಪುವೆತ್ತ ನುಡಿಯಿಂ ನೆಲೆಭಂಗಿಸಿ ಪೆಂಪುವೆತ್ತ ಶೈವಮನ್ ಇಳೆಯೊಳ್ ಪ್ರತಿಷ್ಠಿಸಿ ಪರಾಕ್ರಮದಿಂದವಿದಿರ್ಚೆ ತಂನ ವಿಕ್ರಮದೊಳದಿರ್ಪ" ಸಮಯಪ್ರತಿಪಾಳಕ ಪ್ರಭುತ್ವವನ್ನು ಪಡೆದ ಶಿವಶಕ್ತಿಗೆ ಯಾರು ಸಮ ಎಂದು ಸವಾಲೆಸೆಯಲಾಗಿದೆ. ರಾಜ್ಯ ಪ್ರತಿಪಾಳಕ ಪ್ರಭುತ್ವವನ್ನು ಪಡೆಯುವುದು ಅರಸನಿಗೆಷ್ಟುಮುಖ್ಯವಾಗಿತ್ತೋ ಸಮಯ (ಧರ್ಮ) ಪ್ರತಿಪಾಳಕ ಪ್ರಭುತ್ವವನ್ನು ಪಡೆಯುವುದು ಧಾರ್ಮಿಕ ಗುರುವಿಗೆ ಅಷ್ಟೇ ಮುಖ್ಯವಾಗಿತ್ತೆಂಬುದು ಇಲ್ಲಿ ಗಮನಿಸಬೇಕಾದ ಅಂಶ. "ಈಶ ಪದಾರ್ಚನೆಯ ವಿಧಿ ವಿಧಾನ ಪ್ರೌಢನೆಂದೂ ಅನ್ಯ ದುರ್ಮತ ನಿರ್ಮೂಳನೆಂದು ಕಾಳಾಮುಖ ಸ್ಥಾಪಕೋದ್ಯತನೂ ಸದ್ಗುಣಿಯೂ ದಾನಿಯೂ ಮಾನಿಯೂ" ಆದ ಚಂದ್ರಭೂಷಣ ಪ್ರಸಿದ್ಧನಾಗಿದ್ದನು. ಶಿವಶಕ್ತಿಯ ಮಗ ಕಲ್ಯಾಣಶಕ್ತಿಯೂ 'ಕಾಳಾಮುಖ ಸಮಯ ಪ್ರತಿಪಾಳಕ'ನಾಗಿದ್ದನು. ಈ ಹೇಳಿಕೆಗಳಲ್ಲಿ ಕುಮತ, ದುರ್ಮತಗಳೆಂದು ಅನ್ಯಮತಗಳನ್ನು ಕರೆದಿರುವುದು ಧಾರ್ಮಿಕ ಅಸಹನೆಯನ್ನೇ ಹೇಳುತ್ತಿದೆ.[೧೫೮]

ಪರಸ್ಪರ ಧಾರ್ಮಿಕ ವಾದಗಳಿಗೆ ಇಳಿಯುತ್ತಿದ್ದ ಮುನಿಗಳ ವಾದ ವೈಖರಿ ಪ್ರಖಾಂಡ ಪಾಂಡಿತ್ಯಗಳು ಅನ್ಯಧರ್ಮಗಳನ್ನು ತಲ್ಲಣಗೊಳಿಸುತ್ತಿದ್ದವು. "ಪರವಾದಿಗಳೆದೆ ಚೆಕ್ಕನೆ ಬಿರಿಯೆ ಸಭಾಸದರ್ಗವವನಿ ಪತಿಗಂ ಪುಳಕೋತ್ತರಮಾದ ಚೆನ್ನುಡಿದು ಗೆಲ್ವಂ ಧಾರೆಯ" ತ್ರೈಲೋಕ್ಯ ಶಕ್ತಿ ಎನ್ನುವ ಅಭಿವ್ಯಕ್ತಿ[೧೫೯] ಇಂತಹ ವಾದ ಗೋಷ್ಠಿಗಳಲ್ಲಿ ಸಭಾಸದರೂ ಮುನಿಗಳೂ ಅವನಿಪತಿಗಳೂ ಇರುತ್ತಿದ್ದು, ಈ ಧಾರ್ಮಿಕ ಮೇಲಾಟವೆಂಬುದೊಂದು ಕೇವಲ ಧಾರ್ಮಿಕವಾಗಿರದೇ ಅದರ ರಾಜಕೀಯ ಸಾಮಾಜಿಕ ಆಯಾಮದ ಕಡೆಗೆ ನಮ್ಮ ಗಮನಸೆಳೆಯುತ್ತದೆ.

ಇಂತಹ ಒತ್ತಡಗಳ ಮಧ್ಯೆ ಜೈನ ಮುನಿಗಳೂ ಈ ಪೈಪೋಟಿಗೆ ಸಿದ್ಧವಾಗಿದ್ದರು.[೧೬೦] ಜೈನ ಮುನಿ ವಾದಿರಾಜನು ಜಗದೇಕ ಮಲ್ಲನೆಂಬ ಬಿರುದನ್ನು ಪಡೆದಿದ್ದನು, ಅವನ ವಾದ ವೈಖರಿಯನ್ನು ಕರಿಗುಂದದ

ಶಾಸನ ವರ್ಣಿಸಿದೆ. 'ಆದಿತ್ಯನ ಕೆಲದೊಳು ಚಂದ್ರೋದಯಮೆಸೆಯದವೋಲೀ ಧರಾಮಂಡಲದೊಳು ವಾದಿಗಳೇವೆಂಬ ಟುಂಟುಕವಾದಿಗಳೆಸೆದಪರೆ" ಎಂದು ಕಟಕಿಯಾಡಿರುವುದು ಕಂಡುಬರುತ್ತದೆ. ಶ್ರೀಪಾಲ ತ್ರೈವಿದ್ಯನೆಂಬ ಮುನಿಯು ಅಕಳಂಕ ಸಿಂಹಾಸನಾರೂಢನೆಂದೂ, ತಾರ್ಕಿಕ ಚಕ್ರವರ್ತಿಯೆಂದು ಬಿರುದನ್ನು ಪಡೆದಿದ್ದು ಶಟ್ತರ್ಕಾವಿಳ ಬಹುಭಂಗಿ ಸಂಗತನಾಗಿ ಗದ್ಯ ಪದ್ಯ ವಚೋವಿನ್ಯಾಸವಾಗಿ ಸದಾ ವಿಜಯವನ್ನು ಸಾಧಿಸುವಂತಹವನಾಗಿದ್ದು, ಅತ್ಯಂತ ಪ್ರಭಾವೀ ಯತಿಯಾಗಿದ್ದನು. ಸ್ವತಃ ವಿಷ್ಣುವರ್ಧನನೇ ಈತನಿಗೆ ಚಲ್ಯ ಗ್ರಾಮದಲ್ಲಿ ಬಸದಿ ನಿರ್ಮಿಸಿಕೊಟ್ಟಿದ್ದಾನೆ. ಅವರ ಶಿಷ್ಯವಾದಿರಾಜನಿಂದ ಕುಂಬೇನಹಳ್ಳಿಯಲ್ಲಿ ಈ ಯತಿಯ ಪರೋಕ್ಷ ವಿನಯಕ್ಕೆ ಪರವಾದಿ ಮಲ್ಲ ಎಂಬ ಹೆಸರಿನ ಜಿನಾಲಯ ನಿರ್ಮಾಣವಾಗಿದೆ.[೧೬೧] ಇದೇ ಪರಿಸರದಲ್ಲಿ ರಚನೆಗೊಂಡಿರುವ ಯಶೋಧರ, ಚರಿತ್ರೆಯ ಮಾರಿದತ್ತ ಮತ್ತು ಅಭಯಮತಿ, ಅಭಯರುಚಿಯರ ಮುಖಾಮುಖಿಯು ಮಾರಿಗುಡಿಯ ಸಂಸ್ಕೃತಿ ಮತ್ತು ಜೈನ ಸಂಸ್ಕೃತಿಗಳ ಮುಖಾಮುಖಿಯೇ ಆಗಿದೆ. ಯಶೋಧರ ಅವನ ತಾಯಿ, ಮಡದಿ ಅಮೃತ ಮತಿ, ಮಾರಿದತ್ತ ಇವರೆಲ್ಲರೂ ಆ ಸಂಕ್ರಮಣ ಯುಗದ ಎಲ್ಲ ತಳಮಳಗಳಿಗೂ ಒಳಗಾದ ಸಮಾಜದ ಬಿಂಬಗಳೇ ಆಗಿದ್ದಾರೆ. ಹತ್ತಿರದ ಜೈನ ಕೇಂದ್ರಶ್ರವಣಬೆಳಗೊಳದ ಬುಕ್ಕರಾಯನ ಶಾಸನವು[೧೬೨] ಜೈನ ಸಮಾಜದ ಮೇಲೆ, ಧರ್ಮದ ಮೇಲೆ ವೈಷ್ಣವರಿಂದ ಆಗುತ್ತಿದ್ದ ಆಕ್ರಮಣದ ಅಳಲನ್ನು ತೋಡಿಕೊಂಡಿದೆ. ಇಲ್ಲಿನ ಶಾಸನಗಳು ಅಂತಹ ಆಕ್ರಮಣಗಳನ್ನು ಹೇಳಿಲ್ಲದಿದ್ದರೂ ಇಲ್ಲಿನ ಸಂಘರ್ಷದ ಪರಿಣಾಮಗಳನ್ನು ಕಾಣಬಹುದಾಗಿದೆ.

ಜೈನ ಧರ್ಮವು ಎಕ್ಕೋಟಿ ಜಿನಾಲಯಗಳ ಮೂಲಕ ಶೈವರೊಂದಿಗೆ ಒಡಂಬಡಿಕೆ ಮಾಡಿಕೊಂಡು ಉಳಿದುಕೊಳ್ಳುವ ಪ್ರಯತ್ನ ಮಾಡುತ್ತಿರುವಾಗಲೇ ಉಗ್ರ ನರಸಿಂಹ ಮತ್ತು ವೀರಭದ್ರ ದೇವತೆಗಳ ಪ್ರತಾಪ ಪ್ರಭಾವಗಳು ಹೆಚ್ಚತೊಡಗಿದವು. ಅವುಗಳ ಅವತಾರದ ಕಥೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಈ ಎರಡೂ ದೇವತೆಗಳು ಮಧ್ಯಕಾಲೀನ ಕರ್ನಾಟಕದಲ್ಲಿ ಮತ ಧರ್ಮ ಸಂಘರ್ಷದ ಸಂಕೇತಗಳೇ ಆಗಿವೆ. ದುಷ್ಟ ಶಕ್ತಿಗಳನ್ನು (ಅನ್ಯ ನಂಬಿಕೆ ಧರ್ಮಗಳನ್ನು) ಸಂಹರಿಸಲೆಂದೇ ಅವುಗಳ ಅವತಾರವಾಯಿತೆಂದು, ಅವುಗಳಿಗೆ ಪ್ರಾಧಾನ್ಯತೆಯಿತ್ತು. ಅಸಂಖ್ಯ ದೇವಾಲಯಗಳು ಅವುಗಳಿಗಾಗಿ ನಿರ್ಮಾಣವಾಗತೊಡಗಿದವು. ಕಾವ್ಯಗಳು ರಚನೆಗೊಂಡವು. ಇದು ಸಂಘರ್ಷವನ್ನು ತೀವ್ರಗೊಳಿಸಿತು.

### ೬.೩.೨. ಶೈವ ವೈಷ್ಣವರ ಸಂಘರ್ಷ-ಸಮನ್ವಯ

ವಿಷ್ಣುವರ್ಧನ ಹಾಗೂ ರಾಮಾನುಜರ ಕಾರಣದಿಂದ ಶ್ರೀ ವೈಷ್ಣವಧರ್ಮ ಹಾಗೂ ತಮಿಳುನಾಡಿನೊಂದಿಗಿನ ಸಂಪರ್ಕ ಬೆಳೆಯತೊಡಗಿತು. ಇಮ್ಮಡಿ ವೀರಬಲ್ಲಾಳ ಅವನ ಮಕ್ಕಳಾದ ಇಮ್ಮಡಿ ನರಸಿಂಹ ಮತ್ತು ಸೋವಲೆಯರ ಕಾರಣದಿಂದ ಹೊಯ್ಸಳ ರಾಜ್ಯದ ಗಡಿ ತಮಿಳುನಾಡಿನಲ್ಲಿ ವಿಸ್ತರಿಸಿ ವೈವಾಹಿಕ

ಸಂಬಂಧಗಳೂ ಏರ್ಪಟ್ಟವು. ಧಾರ್ಮಿಕ ಸಂಬಂಧ ರಾಜಕೀಯಾರ್ಥಿಕ ಸಂಬಂಧವಾಗಿ ಬೆಳೆಯತೊಡಗಿತು. ಪ್ರಾರಂಭದ ಹಂತದಲ್ಲಿ ಹೊಸ ಅಗ್ರಹಾರಗಳು ನಿರ್ಮಾಣಗೊಂಡವಾದರೂ ನಂತರದ ಕಾಲದಲ್ಲಿ ಹೆಚ್ಚಿನ ವೈಷ್ಣವ ಜನಸಂಖ್ಯೆಯ ಕಾರಣದಿಂದ, ಅನೇಕ ಗ್ರಾಮಗಳನ್ನು ಕೇಶವಪುರ ನರಸಿಂಹ ಪುರಗಳಾಗಿ ಪರಿವರ್ತನೆಗೊಳಿಸಲಾಯಿತು. ಈ ಅಗ್ರಹಾರಗಳಲ್ಲಿ ಗ್ರಾಮಗಳಲ್ಲಿ ಆ ಹೊತ್ತಿಗಾಗಲೇ ಜೈನರು ಶೈವರ ಮಂದಿರಗಳು ಮಠಗಳೂ ಇದ್ದವಷ್ಟೇ, ಶೈವ ಬ್ರಾಹ್ಮಣರಿಗೂ ವೈಷ್ಣವರಿಗೂ ಅಗ್ರಹಾರಗಳಲ್ಲಿ ಒಟ್ಟಾಗಿ ಬಿಟ್ಟಂತಹ ವೃತ್ತಿಗಳನ್ನು ದಾನಗಳನ್ನು ಹಂಚಿಕೊಂಡು ಬದುಕಬೇಕಾಗಿತ್ತು.

ಮೊದಲ ಹಂತದಲ್ಲಿ ಶೈವರ ಪ್ರಾಬಲ್ಯದಲ್ಲಿ ವೈಷ್ಣವರು ಹೊಂದಿಕೊಂಡು ಬದುಕುತ್ತಿದ್ದರು. ಆದರೆ ಕ್ರಮೇಣ ಹೆಚ್ಚಿದ ಒಳವಲಸೆ ಅವರಿಗೆ ದೊರೆತ ರಾಜಾಶ್ರಯ ದಾನದತ್ತಿಗಳಿಂದ ವೈಷ್ಣವರು ಪ್ರಬಲರಾಗತೊಡಗಿದರು. 'ವೈಷ್ಣವ ದೀಕ್ಷೆ ಮತಾಂತರಗಳಿಂದ ಭಿನ್ನ ಭಿನ್ನ ಅಭಿರುಚಿ ಪ್ರವೃತ್ತಿಗಳ ಜನರ ಮಿಶ್ರಣ ಉಂಟಾಯಿತು. ತಮಿಳು ನಾಡಿನಲ್ಲಿದ್ದ ಶೈವ ವೈಷ್ಣವ ಮತದ ವೈಶಮ್ಯ ಕ್ರಮೇಣವಾಗಿ ಕರ್ನಾಟಕದಲ್ಲೂ ಇವರ ವೈಷಮ್ಯಕ್ಕೆ ಕಾರಣವಾಯಿತು.[೧೬೩]

ಇಂತಹ ವಾತಾವರಣವನ್ನು ತಿಳಿಗೊಳಿಸಲೋ ಎಂಬಂತೆ ಹರಿಹರ ಪುರಗಳ ಸ್ಥಾಪನೆ. ಹರಿಹರೇಶ್ವರ ದೇವಾಲಯ ನಿರ್ಮಾಣ, ಹರಿಹರ ಭೇದವಿಲ್ಲವೆಂದು ಸಾರುವ ವಾಕ್ಯಗುಚ್ಛಗಳು, ಶಿಲ್ಪಗಳು, ದೇವಾಲಯ ಭಿತ್ತಿಗಳು, ನಾನಾಜಾತಿ ಜನಾಂಗ ಧರ್ಮ ಆಚರಣೆಗಳುಳ್ಳವರನ್ನು ಬೆಸೆಯಲೋ ಎಂಬಂತೆ ತ್ರಿಕೂಟಗಳಲ್ಲಿ ವಿಷ್ಣು, ಅವನ ನಾನಾ ಅವತಾರಗಳು, ಶಿವನ ನಾನಾರೂಪ, ಶಕ್ತಿಯ ನಾನಾರೂಪ, ಸೂರ್ಯ, ನಾಗಾರಾಧನೆ, ಕಾರ್ತಿಕೇಯ, ಗಣಪತಿ ದ್ವಾದಶಾದಿತ್ಯರು ನವಗ್ರಹಗಳು, ಇತ್ಯಾದಿಗಳನ್ನು ಒಂದೇ ದೇವಾಲಯದಲ್ಲಿ ಸ್ಥಾಪಿಸುವ ಪರಿವಾರ ದೇವತೆಗಳಾಗಿ ಭಿತ್ತಿ ಶಿಲ್ಪಗಳಾಗಿ ಖಂಡರಿಸುವ ಪ್ರಯತ್ನಗಳನ್ನು ಮಾಡಲಾಯಿತು. ಅರಸೀಕೆರೆಯ ಶಿವಾಲಯ ಇದಕ್ಕೆ ಅದ್ಭುತ ಉದಾಹರಣೆ ಗರ್ಭಗೃಹದಲ್ಲಿ ಶಿವಲಿಂಗವನ್ನು ಹೊಂದಿರುವ ಈ ದೇವಾಲಯದ ಹೊರಬಿತ್ತಿಯಲ್ಲಿ ವಿಷ್ಣುವಿನ ವಿವಿಧ ಮೂರ್ತಿಗಳಿಗೇ ಪ್ರಾಧಾನ್ಯತೆಯಿದೆ. ಮಾವುತನ ಹಳ್ಳಿಯ 'ಬಲ್ಲಾಳ ಹರಿಹರ ನಾರಸಿಂಗೇಶ್ವರ' ತ್ರಿಕೂಟದೇವಾಲಯದ ದೇವರ ದೇವಗಾನ ಭೂಮಿಯನ್ನು ಒಟ್ಟಾಗಿ ಬಿಡಲಾಗಿದೆ.[೧೬೪] ಮಧುಸೂಧನಪುರ ಅಗ್ರಹಾರದಲ್ಲಿ ಮಧುಸೂಧನ ದಂಡನಾಯಕನು ಮಲ್ಲಿಕಾರ್ಜುನ, ಮಧುಸೂಧನ, ಅರ್ಕರಿಗೆ ತ್ರಿಕೂಟ ದೇವಾಲಯವನ್ನು ನಿರ್ಮಿಸಿದ್ದಾನೆ.[೧೬೬] 'ವಿಷ್ಣು ವಿರಂಚಿ ಧೂರ್ಜಟಿ'ಗಳನ್ನು ಏಕವಾಗಿ ಪ್ರಾರ್ಥಿಸಿರುವುದನ್ನು ಕೆಲ್ಲಂಗೆರೆಯ ಶಾಸನದಲ್ಲಿ ನೋಡಬಹುದು. ಕ್ರಿ.ಶ.೧೧೪೨ಕ್ಕೂ ಮೊದಲೇ ಕೆಲ್ಲಂಗೆರೆಯನ್ನು ಹರಿಹರ ಪುರವೆಂದು ಕರೆದು ಅಗ್ರಹಾರ ಮಾಡಲಾಗಿದೆ. ಶ್ರೀವರ ಗೌರಿನಾಥರು ಅಕ್ಕರೆಯಿಂದ ಇಲ್ಲಿ ನೆಲೆಸಿರುವುದರಿಂದ ಹರಿಹರ ಪುರವಾಯಿತೆಂದಿದೆ ಶಾಸನ[೧೬೬] 'ಭೇದಂ ಮೂರ್ತಿಯೊಳಲ್ಲದೆ ಆದಂ ಪರಮಾರ್ಥ್ದ ತತ್ವದೊಳು ಸಲ್ಲದೆನಲು ಮೂದೇವರಾದ ಭರದಿಂದ ಮಾದೇವಂ ದೇವನೀಗೆ ತಾನೆಮಗೊಳ್ಪಂ' ಎಂಬ ಶಾಂತಿನಾಥ

ಪಂಡಿತನ ಅಭಿಪ್ರಾಯ ಆಗಿನ ಧಾರ್ಮಿಕ ಪರಿಸರದ ಗೊಂದಲಕ್ಕೆ ಪ್ರತಿಕ್ರಿಯೆಯಾಗಿ ಮೂಡಿದೆ.[೧೬೭] ಬೇಲೂರಿನ ಕೇಶವ ದೇವಾಲಯದ ಶಾಸನದ 'ಯಂ ಶೈವ...' ಶ್ಲೋಕ ಹರಿಹರದ ಹರಿಹರೇಶ್ವರ ದೇವಾಲಯದ ಶಾಸನದ ಪದ್ಯ ಗುಚ್ಛಗಳು ಬಿಗಡಾಯಿಸುತ್ತಿದ್ದ ಶೈವ ವೈಷ್ಣವ ಮತಗಳ ವಿವಿಧ ಧರ್ಮಗಳ ಸಂಘರ್ಷವನ್ನು ಇಲ್ಲವಾಗಿಸಿ ಸಮನ್ವಯವನ್ನು ಸಾರಲೆಂದೇ ಮೂಡಿಬಂದವೆಂಬುದು ಸ್ಪಷ್ಟವಾಗಿದೆ. ದೇವನೊಬ್ಬ ನಾಮ ಹಲವೆಂಬ ತತ್ವವನ್ನು ಬಿತ್ತುವ ಪ್ರಯತ್ನ ಮಾಡಿದರೂ ಆರ್ಥಿಕ, ರಾಜಕೀಯ ಶಕ್ತಿ ಕೇಂದ್ರದ ಚುಕ್ಕಾಣಿ ಹಿಡಿಯುವ ಸ್ಪರ್ಧೆಗೆ ಇಳಿದಿದ್ದ ಧರ್ಮಗಳಿಗೆ ಈ ಸೌಹಾರ್ದತೆ ಬೇಕಾಗಿರಲಿಲ್ಲ. ಹಾಗಾಗಿ ಈ ಪ್ರಯತ್ನದಿಂದ ಪರಿಸ್ಥಿತಿಯು ಸುಧಾರಿಸಿದಂತೆ ಕಂಡುಬರುವುದಿಲ್ಲ.

ತಳಲೂರು ಅಗ್ರಹಾರದ ದೇವಭೂಮಿಗಳಿಗೆ ಸಂಬಂಧಿಸಿದ ನೀರಿನ ಪಂಥ ಮತದ್ವೇಶ[೧೬೮] ಕಣೆಕಟ್ಟೆಯ ಶೈವ ಸ್ಥಾನಿಕರಿಗೂ ಮಹಾಜನರಿಗೂ ನಡುವೆ ಎದ್ದ ದೇವಭೂಮಿಗಳ ಜಗಳ[೧೬೯] ಹಾರನಹಳ್ಳಿಯ ಶೈವಸ್ಥಾನ ಮತ್ತು ವೈಷ್ಣವ ಸ್ಥಾನಗಳು ದೇವಾಲಯ ಭೂಮಿ ತೋಟಗಳ ಉಳುಮೆ ಇತ್ಯಾದಿಗಳಿಗೆ ಸಂಬಂಧಿಸಿದ ವೈಮನಸ್ಯ ಹೊಸ ನಿಬಂಧನೆಗಳು ಮತ ದ್ವೇಷವನ್ನೇ ಸಾರುತ್ತಿವೆ. ಕಿತ್ತನಕೆರೆ ಅಗ್ರಹಾರವು ಸಂಪೂರ್ಣ ಹಾಳುಬಿದ್ದು ಅಲ್ಲಿನ ಲಕ್ಷ್ಮಿನರಸಿಂಹನ ವಿಗ್ರಹದ ಮುಖವನ್ನು ಕೆತ್ತಿ ಹಾಕಿದ್ದಾರೆ. ಕ್ರಿ.ಶ.೧೩೩೫ರಲ್ಲಿ ಮತ್ತೆ ಮಹಾಜನರ ಬೇಡಿಕೆಯಂತೆ ಮೂರನೇ ಬಲ್ಲಾಳನ ಮಂತ್ರಿ ಕಾಮೆಯ್ಯ ದಂಣಾಯಕರು ಜೀರ್ಣೋದ್ಧಾರ ಮಾಡಿಸಿದ್ದಾರೆ. ಮುರುಂಡಿ ಮುದುಡಿಯ ವಿಷ್ಣು ದೇವಾಲಯಗಳು ಹಾಳಾಗಿ ವಿಗ್ರಹಗಳು ಭಿನ್ನವಾಗಿವೆ.

ಅರಸೀಕೆರೆಯಲ್ಲಿ ನಿರ್ಮಿಸಲಾಗಿದ್ದ ಪ್ರಸನ್ನ ಚೆನ್ನಕೇಶವ ದೇವಾಲಯ ೧೫ನೇ ಶತಮಾನದವರೆಗೂ ಉಳಿದುಬಂದಿದ್ದು ದಾನ ನೀಡಿದ ವಿವರವಿದೆ.[೧೭೦] ಆದರೆ ಇಂದು ಸುಳಿವಿಲ್ಲದಂತೆ ಮಾಯವಾಗಿದೆ. ಒಡೆದ ಸುಂದರ ಕೇಶವ ವಿಗ್ರಹ ಸಹಸ್ರಕೂಟ ಬಸದಿಯ ಹಿಂಭಾಗದ ಭೂಮಿಯೊಳಗೆ ಇತ್ತೀಚೆಗೆ ದೊರಕಿದೆ. ಜಾವಗಲ್ಲು, ಹುಲ್ಲೇಕೆರೆ, ಹಾರನಹಳ್ಳಿ, ಚಿಕ್ಕಗಂಡಸಿ, ನೇರ್ಲಿಗೆ, ಬಾಣಾವರ, ಅರಕೆರೆಯಲ್ಲಿನ ವಿಷ್ಣುದೇವಾಲಯಗಳು ಜೀರ್ಣೋದ್ದಾರಗೊಂಡಿದ್ದು ಪೂಜೆ ನಡೆಯುತ್ತಿದೆ.

### ೬.೩.೩. ಶೈವ-ಇಸ್ಲಾಂ ಧರ್ಮ ಸಂಘರ್ಷ-ಸಮನ್ವಯ

ಕರ್ನಾಟಕದ ಕೈಫಿಯತ್ತುಗಳಲ್ಲಿ ಜನಮನದಲ್ಲಿ ನೆನಪಾಗಿ ಉಳಿದಿರುವ ವೈದಿಕರ ವೀರಶೈವರ ಘರ್ಷಣೆ ಮುಸಲ್ಮಾನ್ ಆಕ್ರಮಣದ ಘಟನೆಗಳು ಉಲ್ಲೇಖಗೊಂಡಿದೆ.[೧೭೧] ಇಂತಹ ಸಂಘರ್ಷದ ಉಲ್ಲೇಖಗಳು ಪ್ರಸ್ತುತ ಅಧ್ಯಯನ ಪ್ರದೇಶದ ಶಾಸನಗಳಲ್ಲಿ, ಕೈಫಿಯತ್ತುಗಳಲ್ಲಿ ಉಲ್ಲೇಖವಾಗಿಲ್ಲ. ಕ್ರಿ.ಶ.೧೩೩೧ರ ಕಲ್ಗುಂಡಿಯ ಶಾಸನದಲ್ಲಿ 'ತುರುಕರದಂಡು' ಗೊರವನ ಕಲ್ಲಿನವರೆಗೆ ಬಂದಿದ್ದು (ಕಣೆಕಟ್ಟೆಯನ್ನು ದಾಟಿ ಸೆಟ್ಟಿಕೆರೆಯ ಗುಡ್ಡಗಳ ಹತ್ತಿರ) ಅದನ್ನ ಸ್ಥಳೀಯರು ಎದುರಿಸಿ ಅವರ

ಕುದುರೆಗಳನ್ನು ವಶಪಡಿಸಿಕೊಂಡ ವಿಚಾರವಿದೆ.[೧೬೨] ಆನಂತರದ ಕಾಲದ ಮಹಮ್ಮದೀಯರ ದಾಳಿಗಳು ರಾಜಕೀಯ ಧಾರ್ಮಿಕ ಕ್ಷೇತ್ರದಲ್ಲಿ ಬದಲಾವಣೆಗೆ ಕಾರಣವಾದವು. ಸಿರಾದ ನವಾಬರ ಕಾಲ ಹೈದರ್ ಟಿಪ್ಪುಗಳ ಕಾಲದಲ್ಲಿ ಈ ಪ್ರದೇಶದಲ್ಲಿ ಮಸೀದಿಗಳು, ಮುಸಲ್ಮಾನರಿಗಾಗಿ ಊರುಗಳು ನಿರ್ಮಾಣಗೊಂಡಿವೆ. ಅರಸೀಕೆರೆ ಬಾಣಾವರಗಳಲ್ಲಿ ಸೂಫಿ ಸಂತರಿದ್ದಾರೆ. ಜೇನುಕಲ್ಲು ಸಿದ್ಧರಬೆಟ್ಟದ ಬುಡದಲ್ಲಿರುವ ಜವನೇ ದೇವರೆಂಬ ಇಸ್ಲಾಮೀ ಸಂತನ ಸಮಾಧಿಗೆ ಹಿಂದೂಗಳು ಹರಕೆ ಕಟ್ಟಿಕೊಳ್ಳುತ್ತಾರೆ. ಹಾರನಹಳ್ಳಿಯ ಕೋಡೀ ಮಠವು ಈ ಪ್ರದೇಶದ ಪ್ರಸಿದ್ಧವಾದ ಸಂಸ್ಥಾನವಾಗಿದೆ. ಈ ಪ್ರದೇಶವನ್ನಾಳುತ್ತಿದ್ದ ಹೈದರ್ ಟಿಪ್ಪುಗಳು ಮಠದೊಂದಿಗೆ ಹೊಂದಿದ್ದ ಸಂಬಂಧದಿಂದಾಗಿ ಹಿಂದೂ ಮುಸ್ಲಿಮರ ಸೌಹಾರ್ದಕ್ಕೆ ಈ ಮಠ ಸಾಕ್ಷಿಯಾಗಿದೆ ಎನ್ನುತ್ತಾರೆ. ಅದಕ್ಕಿಂತ ಹೆಚ್ಚಾಗಿ ಈ ಮಠಕ್ಕೆ ಸಂಬಂಧಿಸಿದ ಕಥೆಗಳು ಈ ಮಠವು ಸೂಫಿ ಸಂಪ್ರದಾಯಗಳ ಗುರುಪರಂಪರೆಗೆ ಸೇರಿದ್ದುದೇ ಇಲ್ಲಿನ ಮತಾತೀತವಾದ ಆಚರಣೆಗೆ ಹಿಂದು ಮುಸ್ಲಿಂ ಬಾಂಧವ್ಯಕ್ಕೆ ಕಾರಣವೆನಿಸುತ್ತದೆ. ಈ ಮಠದ ಆದಿಗುರು ನೀಲಕಂಠ ಸ್ವಾಮಿ (ನೀಲಮಜ್ಜಯ್ಯ)ಗಳು ಉತ್ತರ ದೇಶದವರು ಇವರೊಂದಿಗೆ ಉತ್ತರ ಕರ್ನಾಟಕದಿಂದ ಮುಸ್ಲಿಂ ಫಕೀರರೂ ಸಹ ಬಂದು ನೆಲಸಿದರಂತೆ. ಹೊಸದಾಗಿ ಪಟ್ಟಾಧಿಕಾರವಾಗುವ ಸಂದರ್ಭದಲ್ಲಿ ಮುಸ್ಲಿಮರು ನಮಾಜು ಮಾಡಿ 'ದೀನ್ ಹರಹರ ಮಹಾದೇವ' ಎಂದು ಘೋಷಣೆ ಕೂಗುತ್ತಾರೆ. ಈ ಮಠದ ದಾಖಲೆಗಳಲ್ಲಿ ತಿಳಿದುಬರುವಂತೆ ಮೈಸೂರಿನ ಚಾಮರಾಜ ಒಡೆಯರು ಮತ್ತು ನವಾಬರು ವಿಜಯಪುರದ (ಬಿಜಾಪುರ) ಪಾಲುಜ ಸಾಹೇಬರು ಡಿಲ್ಲಿ ಪಾಲೂಜ ಸಾಹೇಬರು ಈ ಮಠಗಳಿಗೆ ನಡೆದುಕೊಳ್ಳುತ್ತಿದ್ದರಂತೆ. ಕೊಡಗಿನ ದೊಡ್ಡ ವೀರ ರಾಜೇಂದ್ರನು ನೀಡಿದನೆನ್ನಲಾದ ಒಂದು 'ವಿ' ಮುದ್ರೆಯುಳ್ಳ ಟೋಪಿ ಮತ್ತು ಹೈದರ್ ಅಲಿ ನೀಡಿದನೆನ್ನಲಾದ ದಂತದ ಪಾದುಕೆಗಳು ಮಠದಲ್ಲಿವೆ. ಪಾದುಕೆಯ ಮೇಲೆ 'ವೀರ ಹೈದರ್ ಖರತ್' ಎಂದು ಬರೆಯಲಾಗಿದೆ.[೧೬೩]

### ೬.೩.೪. ಕುಂದಿದ ಧಾರ್ಮಿಕ ಶ್ರದ್ಧೆ

ಇಂದು ಹಾಳಾಗಿರುವ ಎಲ್ಲ ಬಸದಿ ದೇವಾಲಯ ಕಟ್ಟಡಗಳು ಕೇವಲ ಧಾರ್ಮಿಕ ಸಂಘರ್ಷಗಳಿಂದಾಗಿಯೇ ಎಂದು ಹೇಳುವುದು ತಪ್ಪಾಗುತ್ತದೆ. ಜನರ ಧರ್ಮಶ್ರದ್ಧೆ ಕುಂದಿರುವುದೂ ಇದಕ್ಕೆ ಕಾರಣವಾಗಿದೆ. ದೇವಾಲಯ ನಿರ್ಮಾಣ ದಾನ ದತ್ತಿಗಳನ್ನು ನೀಡುವ ಮಹಾಪೂರ ನಿಧಾನವಾಗಿ ಬತ್ತಿದಂತೆ ಕಂಡುಬರುತ್ತದೆ. ಈ ಧರ್ಮಗಳ ಮೇಲಾಟ, ಆಂತರಿಕ ಬಿಕ್ಕಟ್ಟು ಸಡಿಲತೆ, ಸ್ವಾರ್ಥ ಧನದಾಹ ಇತ್ಯಾದಿಗಳಿಂದ ಜನಸಾಮಾನ್ಯರು ಧರ್ಮಗಳಲ್ಲಿ ನಂಬಿಕೆಯನ್ನು, ಆಸಕ್ತಿಯನ್ನು ಕಳೆದುಕೊಳ್ಳುವಂತೆ ಮಾಡಿತು. ದೊಡ್ಡ ಶ್ರೀಮಂತ ಸಾಮ್ರಾಜ್ಯಗಳು ಅಳಿದು ಅರಸರ ಶ್ರೀಮಂತರ ಅಧಿಕಾರಿಗಳ ಆಶ್ರಯ ಪ್ರೋತ್ಸಾಹ ತಪ್ಪಿತು. ಕ್ರಿ.ಶ.೧೬೫೪ರಲ್ಲಿ ನೀರ್ಗುಂದ ನಾಡಿನ ನವಿಲೆಯಲ್ಲಿ ವಿಷ್ಣುವರ್ಧನನ ಕಾಲದ ನಾಗೇಶ್ವರ ದೇವಾಲಯವು ಹಾಳಾಗಿದ್ದು, ಅಲ್ಲಿನ ಸ್ಥಾನಿಕರು ಭಿಕ್ಷೆ ಮಾಡಿ ತಂದು ದೇವಾಲಯ

ಜೀರ್ಣೋದ್ಧಾರ ಮಾಡಿಸಬೇಕಾದ ಪರಿಸ್ಥಿತಿ ಒದಗಿದೆ.[೧೭೪] ಬೆಂಡೆಕೆರೆಯ ಶೈವ ಸ್ಥಾನಗಳಿಗೆ ಗಣಾಚಾರದ ಹಣಕಾಸು ಸರಿಯಾಗಿ ಸಂದಾಯವಾಗುತ್ತಿರಲಿಲ್ಲವಾಗಿ ಅಲ್ಲಿನ ಭಿಕ್ಷಾವೃತ್ತಿ ಅಯ್ಯನವರು, ತಡ ಮಾಡದೆ ಸಕಾಲದಲ್ಲಿ ಸಂದಾಯ ಮಾಡಬೇಕೆಂದು ಕೋರಿ ಶಾಸನವನ್ನು ಹಾಕಿಸಿದ್ದಾರೆ.[೧೭೫] ದೇವಾಲಯದ ಆಸ್ತಿಯು ಸ್ವಂತ ಆಸ್ತಿಯಂತೆ ಬಳಕೆಗೊಳ್ಳತೊಡಗಿ ದೇವಾಲಯ ಆದಾಯ ತಗ್ಗಿತು. ಆಡಂಬರದ ಪೂಜೆ ಆಚರಣೆಗಳು ಕಡಿಮೆಯಾಗತೊಡಗಿದವು.

ಜನಸಾಮಾನ್ಯರ ಅವಜ್ಞೆಗೆ ಮತ್ತೊಂದು ಕಾರಣ ಮುಖ್ಯವೆನಿಸುತ್ತದೆ. ಈ ರೀತಿ ಸಾಂಸ್ಥಿಕ ಸ್ವರೂಪ ಪಡೆದ ದೇವಾಲಯಗಳ ಮಡಿವಂತಿಕೆ, ಶಿಷ್ಟಾಚಾರಗಳು ಜಾತ್ರೆ ಮಹೋತ್ಸವಗಳನ್ನು ಬಿಟ್ಟರೆ ಉಳಿದಂತೆ ಸಾಮಾನ್ಯರನ್ನು ಹತ್ತಿರಕ್ಕೆ ಬಿಟ್ಟುಕೊಳ್ಳುತ್ತಿರಲಿಲ್ಲ. ಯಾವ ಪೂಜೆ ಆಚರಣೆಗಳಲ್ಲಿ ಸಾಮಾನ್ಯನ ಭಾಗವಹಿಸುವಿಕೆಗೆ ಅವಕಾಶವಿಲ್ಲವಾಗುತ್ತದೋ ಅಂತಹ ದೈವಗಳು ಸಾಮಾನ್ಯನಿಂದ ದೂರವೇ ಉಳಿಯುತ್ತವೆ. ಇಂಥ ಶಿಷ್ಟ ದೇವತೆಗಳ ಮಹಿಮೆಗಳನ್ನು ಎತ್ತಿ ಹಿಡಿದು ದೇವಾಲಯವನ್ನೂ ತನ್ನನ್ನೂ ಕಾಪಾಡಿಕೊಳ್ಳುತ್ತಿದ್ದ ಪುರೋಹಿತ ವರ್ಗ ಗ್ರಾಮಗಳನ್ನು ತ್ಯಜಿಸಿ ಪಟ್ಟಣಗಳತ್ತ ಹೊರಟಿರುವುದು ಅಥವಾ ಪೌರೋಹಿತ್ಯ, ಪುಜಾರಿ ವೃತ್ತಿಗಳನ್ನೇ ತ್ಯಜಿಸುತ್ತಿರುವುದು ಕಾರಣವಾಗಿದೆ. ಅತೀ ಹೆಚ್ಚು ಅಗ್ರಹಾರಗಳು, ದೇವಾಲಯಗಳಿದ್ದ ಈ ಪ್ರದೇಶದಲ್ಲಿ ಕೆಲವು ಗ್ರಾಮಗಳಲ್ಲಿ ಒಂದೂ ಬ್ರಾಹ್ಮಣ ಕುಟುಂಬ ಉಳಿದಿಲ್ಲ ಎಂಬುದನ್ನು ಗಮನಿಸಬೇಕಾಗುತ್ತದೆ.

### ೬.೩.೫. ಜನಸಾಮಾನ್ಯರು ಮತ್ತು ದೈವಗಳು

ಇಂದು ಗ್ರಾಮದೇವತೆಗಳು, ರಕ್ಷಕ ದೇವತೆಗಳು, ಫಲವಂತಿಕೆಯ ದೇವತೆಗಳು, ಮಾರಿ, ಚೌಡಿ, ಕರಿಯಮ್ಮ, ಕನ್ನೇರಮ್ಮ ಮಾಸ್ತ್ಯಮ್ಮ ಮುಂತಾದ ಮಾತೃ ದೇವತೆಗಳು, ಕೆಂಚರಾಯ, ಭೂತರಾಯ, ಮಸಿಯಪ್ಪ, ಈರಣ್ಣ ಇತ್ಯಾದಿ ಬಂಟ ದೇವತೆಗಳು ಕೊತ್ಲದಮ್ಮ, ದುರುಗಮ್ಮರಂತಹ ರಕ್ಷಕ ದೇವತೆಗಳು ಗಣಪತಿ, ಹನುಮಂತರಂತಹ ಸಾರ್ವತ್ರಿಕ ದೇವತೆಗಳು ಹಳ್ಳಿ ಊರುಗಳಲ್ಲಿ ಮಹಿಮೆ ಪಡೆದು ಉಳಿದುಕೊಂಡು ಬಂದಿವೆ. ಕಾರಣ ಅವು ಜನ ಬದುಕಿನ ಒಂದು ಭಾಗವಾಗಿ ಆಚರಣೆಗಳಲ್ಲಿ ಅವರನ್ನು ಒಳಗು ಮಾಡಿಕೊಳ್ಳುತ್ತವೆ. ವಚನಕಾರರು, ಜೈನ ವಿಡಂಬನಾ ಕವಿಗಳು ಜನಪದ ಮೂಲದ ದೇವತೆಗಳನ್ನು ಕ್ಷುದ್ರ ದೇವತೆಗಳೆಂದು ಕರೆದು ಕಂಡಿಸಿದ್ದರೂ, ದೊಡ್ಡ ದೇವಾಲಯ ನಿರ್ಮಾಣ ಸಂಸ್ಕೃತಿಯ ಅಬ್ಬರದ ಎರಡನೇ ಸಹಸ್ರ ಮಾನವ ಆದಿಭಾಗದಲ್ಲಿ ಈ ದೇವತೆಗಳು ಸ್ವಲ್ಪ ಹಿನ್ನೆಲೆಗೆ ಸರಿದಿದ್ದರೂ ಸ್ಥಳೀಯ ಪಾಳೇಗಾರರ ಆಳ್ವಿಕೆಯ ಕಾಲದಲ್ಲಿ ಮತ್ತೆ ಪ್ರಾಮುಖ್ಯತೆ ಪಡೆದುಕೊಂಡವು. ಯಶೋಧರ ಚರಿತೆಯ ಮಾರಿಗುಡಿಯ ವರ್ಣನೆ ಈ ಪ್ರದೇಶದ ಮಾರಿಯ (ಬಳರಿಯಬನ ಆನೆಕೆರೆ) ಜಾತ್ರೆಗಳನ್ನು ಕಣ್ಣಿಗೆ ಕಟ್ಟಿಸುವಂತಿದೆ. ಶ್ರೀ ಸ್ವಸನಕವ್ವೆ, ಶ್ರೀ ಮಾರಿಕವ್ವೆ ದೇವತೆಗಳ ಹೆಸರಿನ ಒಪ್ಪಗಳನ್ನು ಇಲ್ಲಿನ ಶಾಸನಗಳಲ್ಲಿ ಕಾಣುತ್ತೇವೆ.[೧೭೬] ಭದ್ರಕಾಳಿ [೧೭೭] ಮಾಕಾಳಿ[೧೭೮] ಭಗವತಿದೇವಿ[೧೭೯]

ಹೆಸರು ಶಾಸನಗಳಲ್ಲಿದೆ. ಸಿದ್ಧರಾಮೇಗವುಡನೆಂಬ ಭಕ್ತ ೮ ಅಡಿ ಸಿಡಿಕಂಬವನ್ನು ಮಾವುತನಹಳ್ಳಿಯಲ್ಲಿ ಮಾಡಿಸಿದ್ದಾನೆ.[೧೮೦] ಉಂಡಿಗನಾಳಿನ ನಿಂಬಜಾದೇವಿ ಮತ್ತು ಚೌಡೇಶ್ವರಿ ದೇವತೆಗಳಿಗೆ ಶ್ರೀ ಕೃಷ್ಣ ರಾಜವಡೆಯರ (೧೯ನೇ ಶತಮಾನ) ಊಳಿಗದಲ್ಲಿದ್ದ ಕೋನಾಚೆಟ್ಟಿಯ ಮಗ ವೆಂಕಾಚೆಟ್ಟಿ ಹಿತ್ತಾಳೆಯ ಪ್ರಭಾವಳಿಗಳನ್ನು ಮಾಡಿಸಿಕೊಟ್ಟಿದ್ದಾನೆ.[೧೮೧] ಕ್ರಿ.ಶ.೧೫೮೭ರಲ್ಲಿ ರಾಯರ ಹಡಪದ ಪೋತಮನಾಯಕರು ದ್ಯಾಮೇನಹಳ್ಳಿಯಲ್ಲಿ ಶಕುನದ ರಾಯನ ಶ್ರೀಪಾದಗಳಿಗೆ ಒಂದು ಹಳ್ಳಿಯನ್ನು ತೋಟ ಗದ್ದೆ, ನಾಯಿಂದರ ತೆರಿಗೆ ಇಷ್ಟನ್ನು ನೀಡಿದ್ದಾನೆ.[೧೮೨] ಈಗ ಈ ದೇವರನ್ನು ಕೆಂಚರಾಯನೆಂದು ಕರೆಯುತ್ತಾರೆ. ಇಂತಹ ದೇವತೆಗಳ ಉಲ್ಲೇಖ ಶಾಸನಗಳಲ್ಲಿ ಹೆಚ್ಚಾಗಿ ಕಂಡುಬರದಿದ್ದರೂ, ಶಾಸನೋಲ್ಲೇಖವಿಲ್ಲದ, ಜನಪದರ ಬದುಕಿನಲ್ಲಿ ಹಾಸುಹೊಕ್ಕಾಗಿರುವ ನೂರಾರು ಗುಡಿಗಳಲ್ಲಿ ಈ ದೇವತೆಗಳು ಪೂಜೆಗೊಳ್ಳುತ್ತಿವೆ. ಗಜವಾಹಿನಿಯಾದ ಕರಿಯಮ್ಮ ಈ ಪ್ರದೇಶದ ಹೆಚ್ಚು ಗ್ರಾಮುಗಳ ದೇವತೆಯಾಗಿದ್ದಾಳೆ. ಉಬ್ರಾಣಮ್ಮ (ಬಂದೂರು) ಹೊನ್ನಮ್ಮ (ಕೋಳಿಗುಂದ) ಕೊಲ್ಲಾಪುರದಮ್ಮ (ಚಿಕ್ಕಗಂಡಸಿ) ಮಾರಮ್ಮ (ಸಾಲಾಪುರ, ಕಣಕಟ್ಟೆ)ಗಳು ಪ್ರಭಾವಿ ದೇವತೆಗಳಾಗಿದ್ದಾರೆ. ಸಪ್ತಮಾತೃಕೆಯರನ್ನು ಕನ್ನೇರಮ್ಮ, ಏಳುಮಕ್ಕಳತಾಯಿ, ಸಪ್ತ ಕನ್ನೇರು, ಅಕ್ಕತಂಗಿ ದೇವತೇರು ಇತ್ಯಾದಿಯಾಗಿ ಕರೆಯುತ್ತ ಫಲವಂತಿಕೆಗಾಗಿ ಸ್ತ್ರೀಯರು ಆರಾಧಿಸುತ್ತಿದ್ದಾರೆ. ಈಶ್ವರನ ಪರಿವಾರ ದೇವತೆಯಾಗಿದ್ದ ಸಪ್ತಮಾತೃಕೆಯರ ಸಣ್ಣಪಟ್ಟಿಕೆಗಳು ಹೆಚ್ಚು ಕಂಡುಬಂದರೂ ಹೆಗ್ಗಟ್ಟದಲ್ಲಿ ಗಂಗರ ಕಾಲದ ಸುಮಾರು ಎರಡುವರೆ ಅಡಿ ಎತ್ತರದ ಬಿಡಿ ಪ್ರತಿಮೆಯ ಸಪ್ತಮಾತೃಕೆಯರನ್ನು ನೋಡಬಹುದು.

ಒಂದೇ ಕುಟುಂಬದೊಳಗೆ ಭಿನ್ನ ಮತ ಧರ್ಮಗಳನ್ನು ಅನುಸರಿಸುತ್ತಿದ್ದ ವ್ಯವಸ್ಥೆಯಿದ್ದ ಮಧ್ಯಕಾಲೀನ ಕರ್ನಾಟಕವು ಸರ್ವಧರ್ಮಕ್ಕೆ ಆಡುಂಬೊಲವಾಗಿ ಧಾರ್ಮಿಕ ಸ್ವಾತಂತ್ರ್ಯವನ್ನು ಸಾರುತ್ತಿದ್ದರೂ, ಧಾರ್ಮಿಕ ಸಹಿಷ್ಣುತೆ ಸಮನ್ವಯಕ್ಕೆ ವ್ಯಕ್ತಿ ವಿಕಸನಕ್ಕೆ ಅವಕಾಶ ಮಾಡಿಕೊಟ್ಟಿದ್ದರೂ, ಇದು ವೈಷಮ್ಯಕ್ಕೂ ಸಂಘರ್ಷಕ್ಕೂ ಕಾರಣವಾಗಿತ್ತು. ಸಾಮಾನ್ಯ ಜನರು ಸುಖವನ್ನು ಶಾಂತಿಯನ್ನು ಅರಸಿ ತಮ್ಮ ದುಸ್ಥಿತಿಯಿಂದ ತಪ್ಪಿಸಿಕೊಳ್ಳಲು ಒಂದಲ್ಲ ಒಂದು ಧರ್ಮದ ಬಾಗಿಲಿಗೆ ಎಡತಾಕುತ್ತಿದ್ದರು. ಪ್ರತಿಷ್ಠಿತ ವರ್ಗ, ಅರಸರು, ಕೀರ್ತಿಗೆ, ಪುಣ್ಯಪ್ರಾಪ್ತಿಗೆ, ಆರ್ಥಿಕ, ರಾಜಕೀಯ ಲಾಭಗಳಿಗೆ ಧರ್ಮಗಳ ಹಿಂದೆ ಬೀಳುತ್ತಿದ್ದರೆನಿಸುತ್ತದೆ. ಧರ್ಮ-ಜಾತಿ-ಮತಗಳು ಇಂದಿಗೂ ಸಮಾಜದಲ್ಲಿ ಪ್ರಭಾವೀಶಕ್ತಿಯಾಗಿದೆ.

## ೬.೫. ಸಮಾಜ ಮುಖಿಯಾಗಿ ಧರ್ಮ-ಸ್ಥಿತಿ ಸಂಚಲನ

ಧರ್ಮಗಳು, ತತ್ವಗಳು ಮನುಷ್ಯನ ಬದುಕನ್ನು ಹಸನಾಗಿಸಬೇಕೆಂಬ, ಸತ್ಯವನ್ನು ಅರಿಯಬೇಕೆಂಬ ಉಮೇದಿನಿಂದಲೇ ಹುಟ್ಟಿಕೊಳ್ಳುತ್ತವಾದರೂ ಅವುಗಳಲ್ಲಿ ಅವು ಹುಟ್ಟಿಕೊಂಡ ವ್ಯವಸ್ಥೆಯ ಎಲ್ಲ ಮಿತಿಗಳು ಇದ್ದು ಅನೇಕ ಬಾರಿ ವ್ಯವಸ್ಥೆಯ ಹಿಡಿತದಿಂದ ಬಿಡಿಸಿಕೊಳ್ಳಲಾರದೆ ತನ್ನ ಸಿದ್ಧಾಂತಗಳನ್ನೇ ಮಾರ್ಪಡಿಸಿಕೊಂಡಿರುವುದು ಕಂಡುಬರುತ್ತದೆ. ಅಷ್ಟೇ ಅಲ್ಲ ವಿಕೃತವೆಂದರೆ ವ್ಯವಸ್ಥೆಯ ಪ್ರಾಬಲ್ಯದ

ಮುಂದೆ ಸೋತು ಮಾನವ ಪರವಾದ ಧೋರಣೆಗಳನ್ನು ಬಿಟ್ಟುಕೊಟ್ಟು ವ್ಯವಸ್ಥೆಗೆ ಪೂರಕವಾಗಿ ದುಡಿಯತೊಡಗುತ್ತವೆ. ಇಲ್ಲವೆ ವಸ್ತುಸ್ಥಿತಿಗೆ ಮುಖಾಮುಖಿಯಾಗದೆ ಕೆಲವು ಹುಸಿ ಭ್ರಮೆಗಳನ್ನು ಸೃಷ್ಟಿಸುತ್ತವೆ. ವ್ಯವಸ್ಥೆಯನ್ನು ಬದಲಾಯಿಸದೆ ಪ್ರಜ್ಞೆಯ ಮಟ್ಟದಲ್ಲಿ ಮಾತ್ರ ಬದಲಾವಣೆ ತರಬಯಸುವ ಧರ್ಮಗಳು ಸೋಲುವುದು ಖಂಡಿತ. ಅವು ತಮ್ಮ ಉಳಿವಿಗಾಗಿ ವ್ಯವಸ್ಥೆಯೊಂದಿಗೆ ಅನ್ಯ ಧರ್ಮಾಚರಣೆಗಳೊಂದಿಗೆ ಸಮಜಾಯಿಶಿ, ಒಡಂಬಡಿಕೆ ಮಾಡಿಕೊಳ್ಳಬೇಕಾಗುತ್ತದೆ.

## ೬.೪.೧. ಬೌದ್ಧಧರ್ಮ

ಕ್ರೂರ ರೀತಿಯಲ್ಲಿ ಬುಡಕಟ್ಟು ಸಮಾಜಗಳನ್ನು ಸದೆ ಬಡಿಯುತ್ತ ತಮ್ಮ ಅಂಕೆಯೊಳಗೆ ಹಿಡಿದು ರಾಜಸತ್ತೆಗಳೇಳುತ್ತಿದ್ದ ಕಾಲದಲ್ಲಿನ ಸಮಾಜದ ದುಃಖಕ್ಕೆ ಪರಿಹಾರ ಕಂಡುಕೊಳ್ಳಬೇಕೆಂದೇ ಬುದ್ಧ ಧರ್ಮವೊಂದನ್ನು ಸ್ಥಾಪಿಸಿದ. ಅದಕ್ಕಾಗಿ ಗಣಪದ್ಧತಿ (ಟ್ರೈಬಲ್ ಸೊಸೈಟಿ)ಯ ಸಾಂಘಿಕ ಜೀವನ ವರ್ಗರಹಿತ ಸಮಾನತೆಯ ಮೌಲ್ಯಗಳನ್ನು ತನ್ನ ಧರ್ಮದಲ್ಲಿ ಅಳವಡಿಸಿಕೊಂಡ. ಸರಳ ಬದುಕು ಅಹಿಂಸೆ ಸಹಜೀವನ ಸಹಕಾರತತ್ವ ಸೇವಾಭಾವಗಳನ್ನು ಬೆಳೆಸಲು ಪ್ರಯತ್ನಿಸಿದ ಅವನ ಧರ್ಮ ನಿರೀಶ್ವರವಾದಿಯಾಗಿತ್ತು. ಕರುಣೆ ಪ್ರೇಮಗಳೇ ದೈವವೆಂದು ಅವನು ಬೋಧಿಸಿದ. ಆದರೆ ಅವನ ಧರ್ಮವು ವ್ಯವಸ್ಥೆಯನ್ನು ಬದಲಾಯಿಸುವ ಶಕ್ತಿಯಿಲ್ಲವಾಗಿ ಅದರೊಂದಿಗೆ ಮುಖಾಮುಖಿಗೆ ಇಳಿಯದೆ ಅನೇಕ ಬದಲಾವಣೆಗೆ ಒಳಗಾಗಬೇಕಾಯಿತು.

## ೬.೪.೨. ಜೈನಧರ್ಮ

ಇಡೀ ಜೀವ ಜಗತ್ತಿನ ಬಗೆಗೆ ಕಾಳಜಿ ಹೊಂದಿದ್ದ ಜೈನಧರ್ಮವು ಜೀವ ಹಿಂಸೆಯನ್ನು ವಿರೋಧಿಸಿತು. ಹಿಂಸೆಗೆ ಪ್ರೇರಕವಾಗುವ ಎಲ್ಲ ವ್ಯಾಮೋಹಗಳನ್ನು ತ್ಯಜಿಸುವ, ಅಹಿಂಸೆಯ, ತೀವ್ರ ವೈರಾಗ್ಯದ, ತಪಸ್ಸಿನ ಮಾರ್ಗದಿಂದ 'ಕೇವಲಜ್ಞಾನ' ಪ್ರಾಪ್ತಿಯನ್ನು ಪ್ರತಿಪಾದಿಸಿತು. ಅವರ ಕಠಿಣವಾದ ತಪಸ್ಸು ವ್ರತ ಆಚರಣೆಗಳು ಲೌಕಿಕನಾದ ಸಾಮಾನ್ಯನಿಗೆ ಎಟುಕುವಂತದ್ದಾಗಿರಲಿಲ್ಲ. ಅಂತಹ ಧರ್ಮವನ್ನು ಸಮಾಜ ಮುಖಿಯಾಗಿಸುವ ಪ್ರಯತ್ನಗಳು ನಡೆದುವು. ವೈದಿಕ ಅವೈದಿಕ ಧರ್ಮಗಳ ಮುಖಾಮುಖಿಯ ತಾತ್ವಿಕ ಹಾಗೂ ಭೌತಿಕ ಸಂಘರ್ಷಗಳ ಕಾರಣದಿಂದ ಅನೇಕ ಬದಲಾವಣೆಗಳನ್ನು ಮಾಡಿಕೊಳ್ಳ ತೊಡಗಿತು. ಸಮನ್ವಯ ಸೂತ್ರಗಳನ್ನು ಜನಪರ ಧೋರಣೆಯನ್ನು ಬೆಳೆಸಿಕೊಳ್ಳುವ ಅಗತ್ಯತೆಯನ್ನು ಮನಗಂಡ ಶ್ವೇತಾಂಬರ ಯಾಪನೀಯ ಸಂಘಗಳು ಹೆಚ್ಚು ಜನಪರ ಧೋರಣೆಗಳನ್ನು ಆಚರಣೆಗಳನ್ನು ರೂಢಿಸಿಕೊಂಡವು. ಗೃಹಸ್ಥರಾದ ಫಲಾಪೇಕ್ಷಿಗಳಾದ ಲೌಕಿಕ ಶ್ರಾವಕ ಸಮುದಾಯಕ್ಕೆ ವರದಾಯಿನಿಯರಾದ ಮಂಗಳವನ್ನು ಸಿರಿಯನ್ನೂ ಉಂಟು ಮಾಡುವ ಯಕ್ಷಿಯರ, ಯಕ್ಷರ ಕ್ಷೇತ್ರಪಾಲರ ವಿದ್ಯಾದೇವತೆ ಸರಸ್ವತಿಯರ ಪೂಜೆ ಆರಾಧನೆಗಳನ್ನು ಆಚರಣೆಗೆ ತಂದರು. ಮಂತ್ರ, ತಂತ್ರ, ಯಂತ್ರಗಳನ್ನು

ರೂಢಿಸಿಕೊಂಡು ಭೂತ ಪ್ರೇತ ಪಿಶಾಚಿಗಳನ್ನು ಓಡಿಸುವವರೆಂದು ಕೆಲವು ಜೈನ ಮುನಿಗಳು ಪ್ರಸಿದ್ಧರಾಗಿ ಪ್ರಭಾವ ಬೀರತೊಡಗಿದರು. ಜನಪ್ರಿಯವಾಗುವ ಪ್ರಯತ್ನದಲ್ಲಿ ವೈದಿಕರ ಪುರಾಣ ಕಥೆಗಳನ್ನು ಜೈನೀಕರಣಗೊಳಿಸುವ ಪ್ರಯತ್ನವನ್ನು ಜೈನ ಕವಿಗಳು ಮಾಡಿದರು.

ಈ ಹೊಸ ಅಲೆಯ ಪ್ರಭಾವದಿಂದ ಅಂತ್ಯಜರು, ಚಂಡಾಲರು, ಮಾದಿಗರು, ಹೊಲೆಯರು ಜೈನ ಮತ ಸೇರಿದರು. ಒಕ್ಕಲಿಗರು, ಶೂದ್ರರು, ಎಲ್ಲ ವರ್ಗದ ಸ್ತ್ರೀಯರು ಮತಾಂತರಗೊಂಡು ಜೈನಧರ್ಮದ ಕೊಡೆಯ ಕೆಳಗೆ ಸೇರಿದರು.[೧೮೩] ಮತಾಂತರಗೊಂಡ ಜನವರ್ಗದ ಬಗೆಗೆ ಮಡಿವಂತ ಜೈನರಲ್ಲಿ ಮೂಡಿರಬಹುದಾದ ಮುಜುಗರ, ಅಂತಹವರನ್ನು ಯತಿಗಳೆಂದು ಪೂಜಿಸುವಾಗಿನ ಅಳುಕು ಹಿಂಜರಿಕೆಗಳು ತಾಕಲಾಟಗಳನ್ನು ಬ್ರಹ್ಮ ಶಿವನು ಸಮಯ ಪರೀಕ್ಷೆಯಲ್ಲಿ ಹಿಡಿದಿಟ್ಟಿದ್ದಾನೆ. ಆ ತಳಮಳಗಳನ್ನು ನಿವಾರಿಸಿಕೊಂಡು ಜೈನರು ಒಗ್ಗಟ್ಟಾಗದಿದ್ದರೆ ಅದಕ್ಕೆ ಉಳಿಗಾಲವಿಲ್ಲವೆಂಬುದನ್ನರಿತು ಅದಕ್ಕಾಗಿ ಪ್ರಾಮಾಣಿಕ ಕರೆ ನೀಡಿದ್ದಾನೆ. 'ಕ್ಷತ್ರಿಯನಾದಿಯಾಗಿ ಕಡೆಯೊಳ್ಪೊಲೆಯಂಬರವೆಲ್ಲ ಜಾತಿಗಂ ಧಾತ್ರಿಯೊಳೆಲ್ಲಿ ನೋಡುವಡಮೇತೆರದಿಂ ಕಜೆಯಿಲ್ಲ ಶುದ್ಧ ಚಾರಿತ್ರಮದೊಂದೆ ಮಾರ್ಗ''[೧೮೪] ಪೊಲೆಯಂ ಶ್ರಾವಕನಾದೊಡೆ ಪಲರೊಳವಂ ಮಾನ್ಯನಪ್ಪನ್[೧೮೫] ಎಂದೂ ಹೇಳಿದ್ದಾನೆ. ಎಲ್ಲ ಜಾತಿ ಜನರಿಗೂ ಜೈನ ಧರ್ಮವೂ ಮುಕ್ತವಾಗಿ ತೆರೆದು ಕೊಳ್ಳುತ್ತಿದ್ದ ಪ್ರಯತ್ನವನ್ನು ಇಲ್ಲಿ ಕಾಣಬಹುದು. ನಯಸೇನನೂ ಬ್ರಾಹ್ಮಣರಿಂದ ಬೆಸ್ತನವರೆಗೆ, ಅರಸನಿಂದ ಕಳ್ಳನವರೆಗೆ ಎಲ್ಲರನ್ನು ಜೈನದೀಕ್ಷೆಗೊಳ್ಳುವಂತೆ ತೆರೆದ ಬಾಹುಗಳಿಂದ ಆಹ್ವಾನಿಸಿದ್ದಾನೆ.

ಇಷ್ಟೆಲ್ಲಾ ಜನಪರ ಧೋರಣೆಗಳನ್ನು ಇಟ್ಟುಕೊಂಡಿದ್ದರೂ, ಜೈನಧರ್ಮ ವೈಷ್ಣವ, ವೀರಶೈವದ ಪ್ರಾಬಲ್ಯದಿಂದ ಹಿನ್ನೆಲೆಗೆ ಸರಿಯಬೇಕಾಯಿತು. ಇವರ ಅಹಿಂಸಾವಾದವೂ ಕಟ್ಟುನಿಟ್ಟಾದ ಸಸ್ಯಾಹಾರ ಪದ್ಧತಿಯೂ ಸಮಾಜದ ದೊಡ್ಡ ಮೊತ್ತವು ಈ ಧರ್ಮದಿಂದ ದೂರ ಉಳಿಯುವಂತೆ ಮಾಡಿತೆಂಬುದೂ ಸತ್ಯ. ವೀರಶೈವ ಧರ್ಮವೂ ಅಹಿಂಸೆ ಮತ್ತು ಸಸ್ಯಾಹಾರವನ್ನು ಬೋಧಿಸಿ ಮತಾಂತರಕ್ಕೆ ಅವಕಾಶ ಮಾಡಿಕೊಟ್ಟಿದ್ದರೂ, ಕೆಲವು ಮತಾಂತರಗೊಂಡ ಪಂಗಡಗಳು ತಮ್ಮ ಮೂಲ ಮಾಂಸಾಹಾರ ಪದ್ಧತಿಯನ್ನು ಉಳಿಸಿಕೊಂಡಿವೆ.

### ೬.೪.೩. ಶೈವ ಧರ್ಮ

**ಕಾಳಾಮುಖ ಪಂಥ :** ಈ ಪಂಥವು ಸಮಾಜ ಮುಖಿಯಾದದ್ದು. ಜನಪರವಾದ ಸಾಂಘಿಕ ಚಟುವಟಿಕೆಗಳಿಂದ ಇವರ ದೇವಾಲಯ ಮಠಗಳು ಜನಸಾಮಾನ್ಯರನ್ನು ಆಕರ್ಷಿಸುತ್ತಿದ್ದವು. ಮುನಿಗಳು, ಸ್ಥಾನಿಕರು ಕೇವಲ ಧಾರ್ಮಿಕ ಕಾರ್ಯ ಕಲಾಪಗಳಲ್ಲದೆ ಕೆರೆ ಕಟ್ಟೆಗಳ ನಿರ್ಮಾಣ ಊರು ನಿರ್ಮಾಣವನ್ನು ಮಾಡಿದ್ದಾರೆ.[೧೮೬] ಅರಸೀಕೆರೆಯಲ್ಲಿ ಕೆರೆ ನಿರ್ಮಾಣ ಧರ್ಮೇಶ್ವರ ದೇವಾಲಯ ನಿರ್ಮಾಣವನ್ನು ಧರ್ಮರಾಶಿ ಮಾಡಿದ್ದಾನೆ.[೧೮೭]

ಕಾಳಾಮುಖರ ಕೆಲವು ಮಠಗಳು ವಿದ್ಯಾದಾನ[೧೮೮] ಆಹಾರ, ಅಭಯ, ಭೈಷಜ್ಯಗಳಿಂದ ಸುಶ್ರೂಷೆ ಸೇವೆಗಳಿಂದ ಜನಪ್ರಿಯವಾಗಿದ್ದವು.[೧೮೯] ಜಾತಿ ಭೇದವೆಣಿಸದೆ ಎಲ್ಲ ಜನಾಂಗದವರಿಗೂ ಈ ದೇವಾಲಯ ಧರ್ಮವು ತೆರೆದುಕೊಂಡಿದ್ದು, ಸಮಾಜದ ಎಲ್ಲ ಜಾತಿಗಳೂ ಶಿವಾಲಯ ನಿರ್ಮಾಣ ದಾನ ಧರ್ಮಗಳಲ್ಲಿ ಕೆರೆಕಟ್ಟೆ ನಿರ್ಮಾಣಗಳಲ್ಲಿ ತೊಡಗಿಕೊಳ್ಳುವಂತೆ ಪ್ರೋತ್ಸಾಹಿಸಿತು. ಸ್ತ್ರೀಯರಿಗೂ ಮಾನ್ಯತೆಯಿತ್ತು. ರಾಣಿ ಉಮಾದೇವಿ ಶಿವಾಲಯಗಳಿಗೆ ದಾನ ನೀಡಿದ್ದಾಳೆ.[೧೯೦] ತೆಲ್ಲಿಗ ಜಕ್ಕವ್ವೆ ತಮ್ಮನಿಗಾಗಿ ಶಿವಾಲಯ ಮಾಡಿಸಿದ್ದಾಳೆ.[೧೯೧] ಬೇಡ ಜನದ ಹೆಗ್ಗಡೆ ಮಾದಿ ದಯಾಳು'ವಿನ ಕುಟುಂಬದವರು ದೇವಾಲಯ ಮಾಡಿಸುವಲ್ಲಿ ಸ್ವತಃ ದೇವರಾಶಿ ಪಂಡಿತರು ಬಳಿಗೆಲಸ ಮಾಡಿದ್ದಾರೆ.[೧೯೨] ಹೀಗೆ ಲಿಂಗ ಪ್ರತಿಷ್ಠೆ, ಪರೋಕ್ಷ ವಿನಯದ ಅನೇಕ ಉದಾಹರಣೆಗಳನ್ನು ನೀಡಬಹುದು. ಸುಮಾರು ೩೦ಕ್ಕೂ ಹೆಚ್ಚು ಲಿಂಗ ಪ್ರತಿಷ್ಠೆಗಳ ಉಲ್ಲೇಖ ಇಲ್ಲಿನ ಶಾಸನಗಳಲ್ಲಿದೆ. ಇದಕ್ಕೆ ಕಾರಣ ಜಾತಿಭೇದವಿಲ್ಲದೆ, ಲಿಂಗಪ್ರತಿಷ್ಠೆ ಮಾಡಿದವನು ಸ್ವಯಂ ಲಿಂಗವೇ ಆಗುತ್ತಾನೆ, ಪುಣ್ಯ ಪಡೆಯುತ್ತಾನೆ ಎಂಬ ನಂಬಿಕೆಯನ್ನು ಕಾಳಾಮುಖರು ಪ್ರಧಾನವಾಗಿ ಎತ್ತಿ ಹಿಡಿದು ಎಲ್ಲರನ್ನು ಧರ್ಮಕಟ್ಟುವ ತಮ್ಮ ಕಾರ್ಯದಲ್ಲಿ ತೊಡಗಿಸಿಕೊಂಡದ್ದು. ಅರಸರು ಅಧಿಕಾರಿಗಳು ಸಿರಿವಂತರು ವರ್ತಕರು ಈ ನಿರ್ಮಾಣ ಕಾರ್ಯದಲ್ಲಿ ಹಿಂದೆ ಬೀಳಲಿಲ್ಲ.

ಇದೆಲ್ಲದರ ಪರಿಣಾಮವಾಗಿ ಈ ಪ್ರದೇಶದಲ್ಲಿ ಶೈವಧರ್ಮವು ಪ್ರಬಲವೂ ಶ್ರೀಮಂತವೂ ಆಯಿತು. ಈ ಶಿವಸ್ಥಾನಗಳಲ್ಲಿ ಮೊದಲಿಗೆ ನೈಷ್ಠಿಕ ಮುನಿಗಳು ಗುರುಗಳು ಕಂಡುಬರುತ್ತಿದ್ದು ನಂತರದ ಕಾಲದಲ್ಲಿ ಗೃಹಸ್ತ ಸ್ಥಾನಿಕರು ಕಾಣಿಸಿಕೊಳ್ಳತೊಡಗಿ ಅವರ ಸಂಖ್ಯೆ ಹೆಚ್ಚಾಗುತ್ತಾ ಬಂದಿದೆ. ಈ ಬೆಳವಣಿಗೆ ನಿಧಾನವಾಗಿ ಕಾಳಾಮುಖ ಕೇಂದ್ರಗಳ ಸಮುದಾಯ ಪರ ಚಟುವಟಿಕೆಗಳು, ಚಿಂತನೆಗಳು ಮಾಯವಾಗಿ ಸ್ಥಾನಿಕರ ಪದವಿಗೆ ಮತ್ತು ಆಸ್ತಿ ಹಂಚಿಕೆ, ಹಾಗೂ ಅದಕ್ಕೆ ಸಂಬಂಧಿಸಿದಂತೆ ಅಸಮಾಧಾನಗಳು ಜಗಳಗಳು ಹುಟ್ಟಿಕೊಂಡಿರುವುದನ್ನು ಶಾಸನಗಳು ದಾಖಲಿಸಿವೆ.[೧೯೩]

ನೈಷ್ಠಿಕ ಮುನಿಗಳು ಸ್ಥಾನವನ್ನು ತಮ್ಮ ಹಿರಿಯ ಶಿಷ್ಯನಿಗೆ ವಹಿಸಿಕೊಡುತ್ತಿದ್ದ ಶಿಷ್ಯ ಪರಂಪರೆಯಲ್ಲಿ ಬಹುಷ ಇಂಥ ಸ್ವಾರ್ಥಪರ ಜಗಳಗಳಿಗೆ ಅವಕಾಶವಿರುತ್ತಿರಲಿಲ್ಲ. ಆದರೆ ಗೃಹಸ್ತರಾದ ಸ್ಥಾನಿಕರು ತಮ್ಮ ಅನೇಕ ಮಕ್ಕಳಿಗೆ ಭೂಮಿಗಳನ್ನು ಹಂಚಿಕೊಟ್ಟಾಗ ಸ್ಥಾನಗಳ ಮೇಲಿನ ಹಿಡಿತ ಸಡಿಲವಾಗಿ ಜಗಳಗಳಿಗೆ ಕಾರಣವಾಯಿತು. ಸ್ಥಾನಾಚಾರ್ಯನಾಗಲು ಅರ್ಹತೆ ಮತ್ತು ನಿಷ್ಠೆಗೆ ಬದಲಾಗಿ ಹಕ್ಕು ಚಲಾವಣೆಗೊಂಡಾಗ ಅನೇಕ ಆಂತರಿಕ ಬಿಕ್ಕಟ್ಟುಗಳು ಕಾಣಿಸಿ ಜನಸಾಮಾನ್ಯರು ಈ ದೇವಾಲಯಗಳ ವ್ಯವಸ್ಥೆಯ ಬಗೆಗೆ ವಿಶ್ವಾಸ ಕಳೆದುಕೊಂಡು ದಾನಧರ್ಮಗಳ ನೀಡಿಕೆ ಕಡಿಮೆಯಾಯಿತೆಂದೇ ಹೇಳಬೇಕು. ಜೊತೆಗೆ ಬಾಹ್ಯ ಕಾರಣಗಳಾಗಿ ವೈಷ್ಣವ ಧರ್ಮ ಮತ್ತು ವೀರಶೈವ ಧರ್ಮದ ಪ್ರಭಾವವೂ ಕಾರಣವೆಂಬುದು ಸತ್ಯ.

**ವೀರಶೈವ ಧರ್ಮ :** ಇದು ಶೈವಧರ್ಮದ ನಾನಾ ಶಾಖೆಗಳಲ್ಲಿ ಹೆಚ್ಚು ಸಮಾಜ ಮುಖಿಯಾಗಿ ಜನಪರವಾಗಿ ಮಿಡಿದ ಧರ್ಮ. ೧೨ನೇ ಶತಮಾನದ ಹೊತ್ತಿನಲ್ಲಿದ್ದ ಉಸಿರು ಕಟ್ಟುವ ಸಾಮಾಜಿಕ,

ಧಾರ್ಮಿಕ ವಾತಾವರಣದ ವಿರುದ್ಧ ಬಂಡೆದ್ದು ವೀರಶೈವ ಧರ್ಮವು ಹುಟ್ಟಿಕೊಂಡಿತು. ಸ್ಥಾವರ ಲಿಂಗಾರಾಧನೆಯ ನಿರಾಕರಣೆ ಇಷ್ಟಲಿಂಗ ಕಲ್ಪನೆ, ವೈದಿಕ ಆಡಂಬರದ ಆಚರಣೆಗಳ ಖಂಡನೆ, ದೇವಾಲಯ ಸಂಸ್ಥೆಯ ನಿರಾಕರಣೆ, ದೇಹ ದೇವಾಲಯದ ಕಲ್ಪನೆ, ವರ್ಣವ್ಯವಸ್ಥೆಯ ವಿಪರೀತಗಳ ಖಂಡನೆ ಜಾತಿಕಲ್ಪನೆಯ ಮರುವ್ಯಾಖ್ಯಾನ, ಜಾತಿ ಲಿಂಗ ಭೇದವಿಲ್ಲದ ಸಮಭಾವ ಸಮಾನತೆ, ಅಂತರಂಗ ಬಹಿರಂಗ ಶುದ್ಧಿ, ಸತಿಪತಿಗಳೊಂದಾದ ಸರಳಭಕ್ತಿ, ಕಾಯಕನಿಷ್ಠೆ, ಸರಳ ಭಾಷೆಯ ಬಳಕೆ ಮುಂತಾದ ವಿಶಿಷ್ಟಾಂಶಗಳನ್ನು ಒಳಗೊಂಡು ವೀರಶೈವ ಧರ್ಮವು ೧೨ನೇ ಶತಮಾನದ ಸಮಾಜದಲ್ಲಿ ಬಿರುಗಾಳಿಯನ್ನೆಬ್ಬಿಸಿತು. ವೈದಿಕ ಧರ್ಮಗಳು ವಿಚಲಿತಗೊಂಡವು. ಈ ಆಂದೋಲನವು ಕಲ್ಯಾಣ ಪಟ್ಟಣದಲ್ಲಿ ಆರಂಭವಾದ್ದರಿಂದ ಇದು ನಗರ ಕೇಂದ್ರಿತ ಆಂದೋಲನವಾಗಿತ್ತು. ವರ್ತಕ ಜನಾಂಗಗಳಿಂದಲೂ ವಿವಿಧ ರೈತಾಪಿವರ್ಗ ಹಾಗೂ ಕುಶಲಕರ್ಮಿಗಳಿಂದಲೂ ಬೆಂಬಲ ಪಡೆಯಿತು. ಈ ಸಮಾಜೋಧಾರ್ಮಿಕ ಆಂದೋಲನವನ್ನು ಅದರ ಸಾಮಾಜಿಕ ಆರ್ಥಿಕ ಆಯಾಮಗಳ ಮೂಲಕ ಅರ್ಥಮಾಡಿಕೊಳ್ಳಬೇಕಾಗುತ್ತದೆ.[೧೯೪]

ಸಮಾಜದ ತಳಸ್ತರದಲ್ಲಿ, ಅಂಚಿನಲ್ಲಿ ನಿಂತವರಿಗೆ, ಹೀನಾಯ ಸ್ಥಿತಿಗೆ ತಳ್ಳಲ್ಪಟ್ಟ ಸ್ತ್ರೀಯರಿಗೆ ಒಂದು ಅಸ್ಮಿತೆಯನ್ನು ಈ ಧರ್ಮ ಒದಗಿಸಿಕೊಡುವ ಪ್ರಯತ್ನ ಮಾಡಿತು. ಸಹಸ್ರ ಸಂಖ್ಯೆಯಲ್ಲಿ ಜನ ಈ ಧರ್ಮವನ್ನು ಸ್ವೀಕರಿಸಿದರು. ಜೈನ ಸಮಾಜದಿಂದ ದೊಡ್ಡ ಗುಂಪು ವೀರಶೈವ ಧರ್ಮದೆಡೆಗೆ ಆಕರ್ಷಿತವಾಯಿತು. ಈ ಮತಾಂತರಗಳು ಹೊಸ ಸಮಾಜ ವ್ಯವಸ್ಥೆಗೆ ಕಾರಣವಾಯಿತು.

ವೀರಶೈವ ಧರ್ಮವು ಆರಂಭದಲ್ಲಿ ಸಾಮಾಜಿಕ ಸಮಸ್ಯೆಗಳ ಕಡೆಗೆ ಅವುಗಳ ಪರಿಹಾರದ ಕಡೆಗೆ ಮುಖ ಮಾಡಿತ್ತು. ಪಾರಲೌಖಿಕ ಸುಖಕ್ಕೆ ಮುಕ್ತಿಗೆ ಮೊದಲು ಈ ಲೋಕದಲ್ಲಿನ ಹಸನಾದ ಬದುಕಿಗೆ ಒತ್ತು ನೀಡಲಾಯಿತು. ಕಾಯಕ ನಿಷ್ಠೆಯು ವ್ಯಕ್ತಿಯ ಆರ್ಥಿಕ ಸ್ವಾತಂತ್ರ್ಯಕ್ಕೆ ದಾರಿ ಮಾಡಿಕೊಡುವುದರ ಮೂಲಕ ಆತ್ಮಾಭಿಮಾನವನ್ನು ಒಂದು ಅಸ್ಮಿತೆಯನ್ನು ಸಮಾಜದಲ್ಲಿ ಪಡೆಯಲು ಅವಕಾಶ ಮಾಡಿಕೊಟ್ಟಿತು. ರಾಜಕೀಯ ಪ್ರಭುತ್ವವನ್ನೂ ಧಾರ್ಮಿಕ ಪ್ರಭುತ್ವವನ್ನು ಒಟ್ಟಿಗೇ ವಿರೋಧಿಸುತ್ತ ವ್ಯಕ್ತಿ ಸ್ವಾತಂತ್ರ್ಯಕ್ಕೆ ಗಮನ ಹರಿಸಿತು. ಅತಿಯಾದ ಅರ್ಥಸಂಚಯವನ್ನು ಖಂಡಿಸಿ ದಾಸೋಹದ ತತ್ವವನ್ನು ಅಳವಡಿಸಿಕೊಳ್ಳಲು ಪ್ರೇರಣೆ ನೀಡಿತು. ದೈವದ ಕೊಡುಗೆಯಾಗಿರುವ ಈ ಭೂಮಿ ಸಂಪತ್ತನ್ನು ಎಲ್ಲರೂ ದಾಸೋಹದ ಮೂಲಕ ಹಂಚಿಕೊಳ್ಳುವ ಈ ತತ್ವವು ಇಂದಿನ ಸಮತಾವಾದವನ್ನು (ಸಮಾಜವಾದೀ ಚಿಂತನೆ) ಹೋಲುತ್ತದೆ. ಸಂಪತ್ತಿನ ಅಸಮಾನ ಹಂಚಿಕೆಯಿಂದ ಉಂಟಾಗುವ ಸಾಮಾಜಿಕ ಶ್ರೇಣೀಕರಣವನ್ನು ತಡೆಯುವ ಆ ಮೂಲಕ ಆಳು ಅರಸ, ದಾಸ-ಒಡೆಯ ವ್ಯವಸ್ಥೆಯ ಅನಿಷ್ಟದಿಂದ ಸಮಾಜವನ್ನು ಮುಕ್ತಗೊಳಿಸಲು ಈ ತತ್ವವು ಉಪಯುಕ್ತವಾಗಿತ್ತು. ಆದರೆ ಇದು ಸಿರಿವಂತ ಭೂಒಡೆಯರ ಅಧಿಕಾರಿಗಳ ಅರಸರ ಕ್ರೋಧಕ್ಕೆ ಕಾರಣವಾಯಿತು. ಇದರೊಂದಿಗೆ ಸಮಾಜದ ಕ್ರೂರವಾದ ವರ್ಣ ವ್ಯವಸ್ಥೆಯನ್ನು ಒಡೆಯುವ

ವೀರಶೈವರ ಪ್ರಯತ್ನವು ವೈದಿಕರಲ್ಲಿ ಅಸಹನೆಯನ್ನು ಎಬ್ಬಿಸಿತು. ಇದು ಕಲ್ಯಾಣದ ಕ್ರಾಂತಿಗೆ ಕಾರಣವಾಯಿತು.

ಈ ವಿಪ್ಲವದಿಂದ ಕಲ್ಯಾಣದ ಅನುಭವ ಮಂಟಪ ವಿಘಟನೆಗೊಂಡಿತು. ಅಲ್ಲಿದ್ದ ಶರಣ ಸಮೂಹ ಚದುರಿ ಹತ್ತು ಹಲವು ದಿಕ್ಕಿಗೆ ಹರಿದು ಹಂಚಿಹೋಯಿತು. ದಕ್ಷಿಣ ಕರ್ನಾಟಕದಲ್ಲಿ ಹೊಯ್ಸಳರ ವ್ಯವಸ್ಥಿತ ಆಡಳಿತ ಮತ್ತು ಪ್ರೋತ್ಸಾಹದಿಂದ ಒಳವಲಸೆಗಳು ವಿಶೇಷವಾಗಿ ನಡೆಯುತ್ತಿದ್ದ ಕಾಲವದು. ಇಮ್ಮಡಿ ವೀರ ಬಲ್ಲಾಳನ ಶೈವಧರ್ಮದ ಬಗೆಗಿನ ಒಲವು ಅಪಾರ ಸಂಖ್ಯೆಯಲ್ಲಿ ಶೈವರನ್ನು ಇತ್ತ ಆಕರ್ಷಿಸಿತ್ತು. ಮತ್ತು ಹೆಚ್ಚು ಸಂಖ್ಯೆಯಲ್ಲಿ ಶಿವಾಲಯಗಳು ನಿರ್ಮಾಣಗೊಂಡು ದಾನ ದತ್ತಿಗಳಿಂದ ಪೋಷಿಸಲ್ಪಡುತ್ತಿದ್ದವು. ಹಾಗಾಗಿ ಸಹಜವಾಗಿಯೇ ವೀರಶೈವ ಶರಣರೂ ಇಲ್ಲಿ ಬಂದು ನೆಲೆಸತೊಡಗಿದರೆಂದು ತೋರುತ್ತದೆ.

ಅಂತಹ ಸಂದರ್ಭದಲ್ಲಿ ಇತರ ಶೈವ ಮತಪಂಥಗಳನ್ನು ವೀರಶೈವವು ಪ್ರಭಾವಿಸುವುದರ ಜೊತೆಗೆ ತನ್ನ ಉಳಿವಿಗಾಗಿ ಅನೇಕ ಮೂಲ ತತ್ವಗಳು ಮೌಲ್ಯಗಳನ್ನು ಬದಲಾಯಿಸಿಕೊಂಡು ದೇವಾಲಯ ನಿರ್ಮಾಣ, ಮೂರ್ತಿ ಪೂಜೆ ದಾನ ದತ್ತಿಗಳ ಸ್ವೀಕಾರ, ಶಿವಪುರಗಳ ನಿರ್ಮಾಣಗಳಿಗೆ ಅವಕಾಶ ನೀಡಿತು. ಈ ಹೊಸ ಒಡಂಬಡಿಕೆಗಳಿಂದ ವರ್ಣ ಭೇದವನ್ನು ಎಣಿಸದ ವೀರಶೈವ ಸಮಾಜದಲ್ಲಿ ವೃತ್ತಿ ಮೂಲ ಭೇದದ ಅನೇಕ ಜಾತಿ ಉಪಪಂಗಡಗಳು ಗಟ್ಟಿಗೊಳ್ಳತೊಡಗಿದವು. ನಾನಾ ಜಾತಿಗಳಿಂದ ಬಂದು ವೀರಶೈವ ದೀಕ್ಷೆ ಪಡೆದಿದ್ದವರು ಜಾತಿ ಮೂಲದ ಪೂರ್ವವಾಸನೆಯಿಂದ ಸಂಪೂರ್ಣವಾಗಿ ಬಿಡಿಸಿಕೊಂಡಿರಲಿಲ್ಲವೆಂಬುದೂ ಸತ್ಯ. ಜೊತೆಗೆ ಮಠ ಮೂಲವಾದ ಸಾಂಸ್ಥಿಕ ವ್ಯವಸ್ಥೆಯೂ ವೀರಶೈವ ಧರ್ಮವನ್ನು ಸಾಂಪ್ರದಾಯಿಕವಾದ ನಿಯಮಗಳಿಗೆ ಬದ್ಧವಾಗುವಂತೆ ಮಾಡಿತು.

ಇದೇ ರೀತಿ ವೀರಶೈವದ ಸಾತ್ವಿಕ ಆಚರಣೆಗಳು, ಭಕ್ತಿ ಸಾಮಾನ್ಯರ ಒಲವುಗಳಿಗೆ ಮಣಿದ ಅನೇಕ ಶೈವ ಪಂಥಗಳೂ ಭಕ್ತಿ ಮತ್ತು ಶಿವನಿಷ್ಠೆಯ ಏಕಸೂತ್ರಗಳಲ್ಲಿ ಹೆಣೆದುಕೊಳ್ಳತೊಡಗಿದವು. ಹಾಗಾಗಿ ಪ್ರಸ್ತುತ ಪ್ರದೇಶದ ಶಾಸನಗಳಲ್ಲಿ ವೀರಶೈವದ ಪ್ರಭಾವ, ಪರಿಭಾಷೆ ಭಕ್ತ ಸಂದೋಹ, ಸಂಘಟಿತ ಶಿವಗಣಗಳ, ಶೈವ ಸ್ಥಾನಗಳ ಸ್ಥಾನಿಕರ ಚಟುವಟಿಕೆಗಳಲ್ಲಿ ಕಾಣಿಸಿಕೊಳ್ಳುತ್ತವೆ. ಇಲ್ಲಿನ ಕಾಳಾಮುಖ ಗುಡಿಗಳು ಮಠಗಳು ವೀರಶೈವ, ಲಿಂಗಾಯತವೆಂಬ ಹೆಸರಿನಲ್ಲಿ ಅಂತರ್ಗತಗೊಂಡಿವೆ.

### ೬.೪.೪. ವೈಷ್ಣವ ಧರ್ಮ

ವೈಷ್ಣವಧರ್ಮ ಪ್ರಾಚೀನವಾದ ಧರ್ಮವಾಗಿದ್ದರೂ ಅದು ಸಮಾಜಮುಖಿಯಾಗಿ ಜನಸಾಮಾನ್ಯರತ್ತ ಮುಖ ಮಾಡಿದ್ದು ಮಾತ್ರ ರಾಮಾನುಜಾಚಾರ್ಯರ ಪ್ರವೇಶದೊಂದಿಗೆ, ಶ್ರೀ ವೈಷ್ಣವ ಧರ್ಮವೆಂಬ ಹೆಸರಿನಲ್ಲಿ. ಮಧ್ಯಕಾಲೀನ ಕರ್ನಾಟಕದಲ್ಲಿ ಭಾಗವತ ಮೂಲದ ವಿಷ್ಣುವಿನ ಆರಾಧನೆಯೊಂದಿಗೆ

ಮಿಳಿತವಾದ ಶ್ರೀವೈಷ್ಣವ ಪಂಥದ ಪೂರ್ಣ ಶರಣಾಗತಿಯ ಪ್ರಪತ್ತಿಯ ಕಲ್ಪನೆ, ಮಾಧ್ವರ ಸೇವಾ ಪ್ರಧಾನವಾದ ದಾಸತ್ವ ಭಕ್ತಿಗಳು ಬೆರೆತು ವೈಷ್ಣವ ಧರ್ಮವನ್ನು ಜನಪ್ರಿಯಗೊಳಿಸಿದವು. ವೈಷ್ಣವಧರ್ಮ ರಾಜಾಶ್ರಯವನ್ನು ಪಡೆದು ಪ್ರಭಾವೀ ಧರ್ಮವಾದ್ದರಿಂದ ಕರ್ನಾಟಕದ ತುಂಬಾ ತುಂಬಿರುವ ಸುಂದರ ವಿಷ್ಣು ದೇವಾಲಯಗಳೂ, ವಿಷ್ಣು ಪ್ರಾಧಾನ್ಯತೆಯನ್ನು ಬಿಂಬಿಸುವ ಮಧ್ಯಕಾಲೀನ ಕನ್ನಡ ಸಾಹಿತ್ಯ ಕೃತಿಗಳೂ, ಕೀರ್ತನ ಸಾಹಿತ್ಯವೂ ವಿಪುಲವಾಗಿ ರಚನೆಗೊಂಡಿರುವುದು ಈ ಜನಪ್ರಿಯತೆಗೆ ಸಾಕ್ಷಿಯಾಗಿದೆ.

ವೈಷ್ಣವ ಧರ್ಮವು ಕೇವಲ ಅರಸೊತ್ತಿಗೆಯ ವೈದೀಕರ ಧರ್ಮವಾಗಿ ಉಳಿಯದೆ ಅದು ಸಾಮಾನ್ಯರಲ್ಲಿ ಅತಿಸಾಮಾನ್ಯನನ್ನೂ ಅಂತ್ಯಜನನ್ನೂ ತನ್ನ ತೆಕ್ಕೆಗೆ ತೆಗೆದುಕೊಂಡು ಆ ಸಮುದಾಯದಲ್ಲೊಂದು ರೋಮಾಂಚನವನ್ನು, ಆಶ್ಚರ್ಯಕರ ಬ್ರಾಹ್ಮಣೀಕರಣ (ಸಂಸ್ಕೃತಿಕರಣ) ಪ್ರಕ್ರಿಯೆಯನ್ನು ಉಂಟು ಮಾಡಿದುದರ ಪೂರ್ಣ ಯಶಸ್ಸು ರಾಮಾನುಜರಿಗೆ ಸೇರುತ್ತದೆ. ಈ ಧರ್ಮವು ಸಾಮಾಜಿಕ ಸ್ಥರವಿನ್ಯಾಸದ ಅಂಚುಗಳವರೆಗೆ ಪ್ರಭಾವಿಸಿದ್ದಷ್ಟೇ ಅಲ್ಲ, ಇಲ್ಲಿನ ಬುಡಕಟ್ಟುಗಳನ್ನೂ ಪ್ರಭಾವಿಸಿದ್ದರ ಬಗೆಗೆ ಬಿಳಿಗಿರಿ ರಂಗನ ಪುರಾಣ ಬೆಳಕು ಚೆಲ್ಲುತ್ತದೆ. ರಂಗಯ್ಯನ ಅವತಾರದ ವಿಷ್ಣುವು ಸೋಲಿಗರ ಹೆಣ್ಣನ್ನು ಮದುವೆಯಾಗಿ ಸೋಲಿಗರ ಪ್ರೀತಿಯ ಅಳಿಯನಾದುದಷ್ಟೇ ಅಲ್ಲ ಅವರ ಆರಾಧ್ಯ ದೇವನಾಗಿ ಬಿಳಿಗಿರಿ ಬೆಟ್ಟದಲ್ಲಿ ನೆಲೆಸಿದನಂತೆ ಸೋಲಿಗ ಬುಡಕಟ್ಟು ಹಾಗೂ ವೈಷ್ಣವ ಧರ್ಮದ ಸಂಬಂಧವನ್ನು ಇಲ್ಲಿ ಪುರಣೀಕರಿಸಲಾಗಿದೆಯಷ್ಟೆ.

ಉತ್ತರ ಕರ್ನಾಟಕದಲ್ಲಿ ವೀರಶೈವ ಧರ್ಮವು ಜಾತಿ ಪರಿಕಲ್ಪನೆಯನ್ನು ಒಡೆದು ಮುಕ್ತ ವಾತಾವರಣವನ್ನು ಸೃಷ್ಟಿಸಲು ಪ್ರಯತ್ನಿಸುವುದಕ್ಕೆ ಮೊದಲೇ ೧೨ನೇ ಶತಮಾನದ ಆದಿ ಭಾಗದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಈ ಸಾಮಾಜಿಕ ಸಂಚಲನವು ಸಮಾಜ ಸುಧಾರಕ ದೃಷ್ಟಿಯುಳ್ಳ ರಾಮಾನುಜರಿಂದ ಪ್ರಾರಂಭವಾಗಿತ್ತು. ಎಲ್ಲರಿಗೂ ಪ್ರಪತ್ತಿಯಿಂದ (ದೈವಕ್ಕೆ ಸಂಪೂರ್ಣ ಒಪ್ಪಿಸಿಕೊಳ್ಳುವುದು) ಮುಕ್ತಿಗೆ ಅವಕಾಶವಿದೆ ಎಂದು ಸಾರಿದರು. ವೈಷ್ಣವ ದೀಕ್ಷೆ ನೀಡಲು ಪ್ರಾರಂಭಿಸಿ, ಸಮಾಜದ ಎಲ್ಲ ಸ್ಥರಗಳನ್ನು ವಿಷ್ಣುಭಕ್ತಿಯ ಒಂದು ಸೂರಿನಡಿಗೆ ತರಲು ಪ್ರಯತ್ನಿಸಿದರು. ಹಾಗಾಗಿ ಅಗ್ರಹಾರಗಳೊಂದಿಗೆ ಕೇಶವಪುರಿಗಳ ನಿರ್ಮಾಣ ವಿಶೇಷವಾಗಿ ನಡೆಯಿತು. ದೇವ ಊಳಿಗಕ್ಕೆ ರಾಮಾನುಜರೊಂದಿಗೆ ಬಂದ ಹಾಗೂ ನಂತರದ ಕಾಲದಲ್ಲಿ ವಲಸೆಗೊಂಡ ಬ್ರಾಹ್ಮಣರು ಮತ್ತು ಇತರರು ಸ್ಥಳೀಯ ನಾನಾ ಜಾತಿಗಳ ಜನರು ಈ ಕೇಶವಪುರಗಳಲ್ಲಿ ನೆಲಸ ತೊಡಗಿದರು. ವಿಷ್ಣುವು ನಾನಾ ಅವತಾರಗಳಲ್ಲಿ ಪೂಜೆಗೊಳ್ಳ ತೊಡಗಿದನು. ಕೃಷ್ಣನ ವ್ಯಕ್ತಿತ್ವವಂತೂ ಜನಮನ ಸೂರೆಗೊಳ್ಳ ತೊಡಗಿತು. ಪಶುಪಾಲಕ ಗೋಪನು ಸಾಮಾನ್ಯನಿಗೆ ಅತ್ಯಂತ ಆಪ್ತನಾದದ್ದರಲ್ಲಿ ಆಶ್ಚರ್ಯವಿಲ್ಲ. ವಿಷ್ಣವಿನ ದಶಾವತಾರಗಳೊಂದಿಗೆ ಈ ಕೃಷ್ಣನ ವಿಶೇಷ ಅವತಾರವೆಂದು ಕರೆಯುವ ಶ್ರೀನಿವಾಸ ಅಥವಾ ವೆಂಕಟರಮಣನು ವಿಜಯನಗರ ಅರಸರ ಕಾಲದಲ್ಲಿ ಪ್ರಭಾವಿಸ ತೊಡಗಿದನು. ಈ ದೈವವು ಸಕಲ ಜಾತಿ ಜನಾಂಗಗಳ ಆರಾಧ್ಯ ಮೂರ್ತಿಯಾಗಿ ಇಂದಿಗೂ

ಆರಾಧನೆಗೊಳ್ಳುತ್ತಿದ್ದಾನೆ. ದೇವಾಲಯಗಳಲ್ಲಿನ ವೈಭವಯುತ ಆರಾಧನೆಗಳು ಸಾಂಸ್ಕೃತಿಕ ಉತ್ಸವ ಜಾತ್ರೆ ಪರ್ವಗಳು ಸಾಮಾನ್ಯರನ್ನು ಹತ್ತಿರಕ್ಕೆ ಸೆಳೆದವು. ರೂವಾರಿಗಳು, ನೇಕಾರರು, ಕುಂಬಾರರು ಮೊದಲಾಗಿ ನಾನಾ ವೃತ್ತಿವಂತರು ವಣಿಕರು ವೈಷ್ಣವ ಧರ್ಮದೆಡೆಗೆ ಆಕರ್ಷಿತರಾಗಿ ಸಂಸ್ಕೃತೀಕರಣಕ್ಕೆ ಒಳಗಾದರು. ವೈಷ್ಣವ ಧರ್ಮದೆಡೆಗೆ ಆಕರ್ಷಿತರಾಗಿ ಸಂಸ್ಕೃತೀಕರಣಕ್ಕೆ ಒಳಗಾದರು. ವೈಷ್ಣವ ಧರ್ಮ ಸ್ವೀಕರಿಸಿದ ಹೊಸ ದೊಡ್ಡ ಗುಂಪೊಂದು ಸಮಾಜದಲ್ಲಿ ಪ್ರಮುಖ ಸ್ಥಾನ ಪಡೆದುಕೊಳ್ಳ ತೊಡಗಿತು. ಅವರ ಆಚಾರ ವಿಚಾರಗಳಲ್ಲಿ ಬದಲಾವಣೆ ಕಾಣಿಸಿಕೊಂಡಿತು. ಸಾತಾನಿಗಳು, ವುಷ್ಟುಮರು, ದಾಸಬ್ರಾಹ್ಮಣರು, ವಿಶ್ವಕರ್ಮ ಬ್ರಾಹ್ಮಣರು, ದೇವಾಂಗ ಬ್ರಾಹ್ಮಣರು, ನಾಮದಾರಿಗಳು ಮುಂತಾದ ಹೆಸರುಗಳಿಂದ ಕರೆದುಕೊಳ್ಳುವ ಅನೇಕ ಪಂಗಡಗಳು ಈ ವೈಷ್ಣವ ಧರ್ಮದ ಪ್ರಭಾವಕ್ಕೆ ಒಳಗಾದವರೇ.

ಸಾಮೂಹಿಕವಾಗಿ ದೀಕ್ಷೆನೀಡಿ ಎಲ್ಲರಿಗೂ ಧಾರ್ಮಿಕ ಸ್ಥಾನಮಾನ ಒದಗಿಸುವುದು, ದೇವಾಲಯಗಳಿಗೆ ಪ್ರವೇಶ ನೀಡುವುದು, ದೈವ ಕೈಂಕರ್ಯಗಳಲ್ಲಿ ಅವರನ್ನು ತೊಡಗಿಸಿಕೊಳ್ಳುವುದು, ಕೆಳಜಾತಿಯವರ ಮೇಲ್ಮುಖ ಚಲನೆಗೆ ಅವಕಾಶ ಮಾಡಿಕೊಟ್ಟಿತು. ಇದನ್ನು ಅಂದಿನ ಸಂಪ್ರದಾಯ ಸಮಾಜ ಅಷ್ಟು ಸುಲಭವಾಗಿ ಒಪ್ಪಿಕೊಂಡಿರಲಿಲ್ಲ. ಆದರೆ ರಾಜಾಶ್ರಯ ಪಡೆದು ಪ್ರಬಲವಾದ ಧರ್ಮವಾಗಿದ್ದರಿಂದ ವೈಷ್ಣವ ಧರ್ಮವನ್ನು ಸಹಿಸಿಕೊಳ್ಳಲೇ ಬೇಕಾದ ಅನಿವಾರ್ಯತೆ ಅಂಥವರ ಮೇಲಿತ್ತು. ಆದರೂ ಇದು ಧಾರ್ಮಿಕ ಸಂಘರ್ಷಕ್ಕೆ ಎಡೆ ಮಾಡಿಕೊಟ್ಟಿತ್ತು. ಶಾಸನ ಕವಿಯೊಬ್ಬ ನರಸಿಂಹನನ್ನು ಹೊಗಳುತ್ತ ಯುದ್ಧಗಳಲ್ಲಿ ಊರ್ಜಿತ ಅರ್ಥಚಯವನ್ನು ಮಾಡಿದ್ದರಿಂದ ಅವನು ಶೂದ್ರನಾದ, ಪರಸೈನ್ಯವೆಂಬ ಅಂಬುದಿ ಬಡಬಾಗ್ನಿಯನ್ನು ಎದುರಿಸಿ ಧೈರ್ಯ ತೋರಿದ್ದರಿಂದ ಕ್ಷತ್ರಿಯನಾದ ಇದು ವಿನಃ 'ವರ್ಣಸಂಕರಂ ಈ ರಾಷ್ಟ್ರದೊಳಿಲ್ಲೆನಿಸಿ' ಧಾತ್ರೀ ಚಕ್ರವನ್ನು ರಕ್ಷಿಸುತ್ತಿದ್ದಾನೆ, ಇದು ಆಶ್ಚರ್ಯ ಎಂದು ಉದ್ಘರಿಸಿದ್ದಾನೆ.[೯೫] ಈ ಅಭಿವ್ಯಕ್ತಿಯು ಆ ಕಾಲದಲ್ಲಿ ಹೊಯ್ಸಳ ನಾಡಿನಲ್ಲಿ ಅಂತ್ಯಜರಿಗೆ ದೀಕ್ಷೆ ನೀಡುವ ರಾಮಾನುಜರ ಕ್ರಮದ ಬಗೆಗೆ ಎದ್ದಿರಬಹುದಾದ ಅಸಮಾಧಾನ, ವಿರೋಧಕ್ಕೆ ಸಮಜಾಯಿಷಿಯೂ ಅದೇ ಕಾಲದಲ್ಲಿ ಉತ್ತರ ಕರ್ನಾಟಕದ ಬಿಜ್ಜಳನ ರಾಜ್ಯದ ವೀರಶೈವ ಧಾರ್ಮಿಕ ಕ್ರಾಂತಿಯ ವರ್ಣಸಂಕರದ ಬಗೆಗಿನ ಪ್ರತಿಕ್ರಿಯೆಯೂ ಆಗಿರುವುದು ಸ್ಪಷ್ಟವಾಗಿದೆ.

ವೀರಶೈವ ಧರ್ಮದ ದೀಕ್ಷೆಗೂ ವೈಷ್ಣವ ಧರ್ಮದೀಷೆಗೂ ಒಂದು ವ್ಯತ್ಯಾಸವನ್ನು ಗುರುತಿಸಬೇಕಾಗುತ್ತದೆ. ವೈದಿಕರ ಸಂಸ್ಕೃತಿಯನ್ನು ಜಾತಿ ವ್ಯವಸ್ಥೆಯನ್ನು ಭಂಜಿಸಿ ಜಾತಿಗೆ ಹೊಸ ವ್ಯಾಖ್ಯಾನವನ್ನು ಶರಣರು ನೀಡಿದರು. ಆದರೆ ವೈಷ್ಣವ ಧರ್ಮ ಆ ವ್ಯವಸ್ಥೆಯ ಒಳಗೇ ಅಂತ್ಯಜನ ಮೇಲ್ಮುಖ ಚಲನೆಗೆ ಅವಕಾಶ ಮಾಡಿಕೊಟ್ಟು ಬ್ರಾಹ್ಮಣೀಕರಿಸುವ, ವೈದಿಕ ಸಂಸ್ಕೃತಿಗೆ ಕಟ್ಟಿ ಹಾಕುವ ಕೆಲಸವನ್ನು ಮಾಡಿತು. ಅವನು ಯಾವ ಜಾತಿ ಪಂಗಡಕ್ಕೆ ಸೇರಿರಲಿ ವೈಷ್ಣವ ಭಕ್ತನಾಗಿ ಭಗವಂತನಿಗೆ ಶರಣಾಗಿ ಮುಕ್ತಿಗೆ ಯೋಗ್ಯನಾಗಬಹುದಿತ್ತಷ್ಟೇ. ಒಟ್ಟಿನಲ್ಲಿ ವೈಷ್ಣವ ಧರ್ಮ ಸರ್ವಜಾತಿಗೂ ದೀಕ್ಷೆಯ

ಅವಕಾಶ ನೀಡುವ ಮೂಲಕ ಸಮಾಜಮುಖಿಯಾಗಿತ್ತಾದರೂ ಅದು ವೈದಿಕಸಂಸ್ಕೃತಿಯ ವರ್ಣ ಚೌಕಟ್ಟನ್ನು ಒಡೆಯುವಲ್ಲಿ ವಿಫಲವಾಯಿತೆಂದೇ ಹೇಳಬೇಕಾಗುತ್ತದೆ.

ಒಟ್ಟಿನಲ್ಲಿ ಜನಪರವಾಗುವತ್ತ ಮುಖಮಾಡಿದ ಎಲ್ಲ ಧರ್ಮಗಳನ್ನೂ ಕ್ರಮೇಣವಾಗಿ ಮಣಿಸಿ ತನಗೆ ಬೇಕಾದಂತೆ ಮುರಿದು ಕಟ್ಟಿಕೊಳ್ಳುವ ಶಕ್ತಿ 'ವ್ಯವಸ್ಥೆ'ಗಿದೆ. ಹಾಗಾಗಿ ಈ ಧರ್ಮಗಳು-ದೈವಗಳು ಅಪೌರುಷೇಯವಲ್ಲ. ಈ ಲೋಕದ ಅಂದಂದಿನ ಸಾಮಾಜಿಕ ವ್ಯವಸ್ಥೆಗೆ ಅಗತ್ಯವಾದ ತತ್ವಗಳನ್ನು, ಮೌಲ್ಯಗಳನ್ನು ಅಂತರ್ಗತಗೊಳಿಸಿಕೊಂಡು ರೂಪಿತವಾಗುವ ಆರ್ಥಿಕ, ಸಾಮಾಜಿಕ, ರಾಜಕೀಯ ಆಯಾಮಗಳುಳ್ಳ ಸಂಕೀರ್ಣವಾದ ವ್ಯವಸ್ಥೆಯೇ ಆಗಿರುತ್ತದೆ. ವ್ಯವಸ್ಥೆಯಲ್ಲಿರುವ ಎಲ್ಲ ಮಿತಿಗಳೂ ದೋಷಗಳೂ ಧರ್ಮದಲ್ಲೂ ಸೇರಿಕೊಂಡಿರುತ್ತವೆ.

**ಅಡಿಟಿಪ್ಪಣಿಗಳು**

೧. ದೇಬಿ ಪ್ರಸಾದ್ ಚಟ್ಟೋಪಾಧ್ಯಾಯ - ಲೋಕಾಯತ

೨. ಅದೇ, ಮಾತೆಯರು ಮಾನ್ಯರಾಗಿದ್ದಾಗ

೩. ಅದೇ, ಲೋಕಾಯತ

೪. ಸರ್ದೇಸಾಯಿ ಎಸ್.ಜಿ., ಪ್ರಾಚೀನ ಭಾರತದಲ್ಲಿ ದಾರ್ಶನಿಕ ಸಂಘರ್ಷ ಮತ್ತು ಅದರ ಸಾಮಾಜಿಕ ಮಹತ್ವ, ದೇ.ಪ್ರ.ಚ.ಭಾರತೀಯ ದರ್ಶನಗಳು, ಡಿ.ಡಿ.ಕೊಸಾಂಬಿ ಎನ್ .ಇನ್ಟ್ರೊಡಕ್ಷನ್ ಟು ದಿ ಸ್ಟಡಿ ಆಫ್ ಇಂಡಿಯನ್ ಹಿಸ್ಟರಿ, ಡಾಂಗೆ ಎಸ್ .ಎ., ಭಾರತ ಸಂಘಜೀವನದಿಂದ ಗುಲಾಮಗಿರಿಗೆ

೫. ಜಿ.ರಾಮಕೃಷ್ಣ, ದೇವಿಪ್ರಸಾದ್ ಚಟ್ಟೋಪಾದ್ಯಾಯ ಮತ್ತು ಲೋಕಾಯತ

೬. ಎ.ಕ.೯ (ಪರಿ) ಬೇಲೂರು, ಶಾ.ಸಂ.೪೧೦

೭. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೧೪೯, ೧೫೫, ೧೮೪, ೨೦೬, ೩೧೪, ೩೧೭, ೨೩೨, ಕ್ರಿ.ಶ.೧೨-೧೩ನೇ ಶತಮಾನ

೮. ಅದೇ, ಶಾ.ಸಂ.೧೪೯, ೨೭೩, ೨೦೬, ೨೪೬, ೧೨-೧೬ನೇ ಶತಮಾನ

೯. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೫೫, ಬಾಣಾವರ ಕ್ರಿ.ಶ.೧೧೮೭

೧೦. ಅದೇ, ಅ.ಕೆ.ಶಾ.ಸಂ.೨೨೭, ಮುರುಂಡಿ ಕ್ರಿ.ಶ.೧೧೭೪

೧೧. ಶ್ರೇಣಿ ಎನ್ನುವುದು ಒಂದೇ ಜಾತಿ ಅಥವಾ ಭಿನ್ನ ಜಾತಿಯ ಒಂದೇ ಉದ್ಯೋಗ ಮಾಡುವ ಕರ್ಮಿಗಳ ಸಹಕಾರ ಸಂಘವೆಂದು ವಿಜ್ಞಾನೇಶ್ವರ ಹೇಳಿದ್ದಾನೆ. ಮಿತಾಕ್ಷರ II, ೨೦, ಪು.೭೪೭

೧೨. ಬಿ.ಆರ್.ಹಿರೇಮಠ ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು.೭೦-೭೩

೧೩. ನಯಸೇನ, ಧರ್ಮಾಮೃತ, ೧-೬೩

೧೪. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೩೩, ೩೧೪, ೩೧೭, ೧೨-೧೩ನೇ ಶತಮಾನ

೧೫. ಅದೇ, ಶಾ.ಸಂ.೨೧೪, ೬೧, ೧೧೬, ೯೮, ೧೨೯, ಕ್ರಿ.ಶ.೧೧ ರಿಂದ ೧೪ನೇ ಶತಮಾನ

೧೬. ಅದೇ, ಶಾ.ಸಂ.೬೭ ಸೆಟ್ಟಿಕೆರೆ ಕ್ರಿ.ಶ.೯ನೇ ಶತಮಾನ

೧೭. ಅದೇ, ಶಾ.ಸಂ.೭೦, ಸೆಟ್ಟಿಕೆರೆ ೯-೧೦ನೇ ಶತಮಾನ

೧೮. ಅದೇ, ಶಾ.ಸಂ.೬೯, ೬೮, ೭೧, ಸೆಟ್ಟಿಕೆರೆ, ೭-೧೦ನೇ ಶತಮಾನ

೧೯. ಅದೇ, ಶಾ.ಸಂ.೨೦೩, ಗಂಡಸಿ ಕ್ರಿ.ಶ.೮೩೭-೪೩

೨೦. ಅದೇ, ಶಾ.ಸಂ.೧೫೮, ಕೆಲ್ಲಂಗೆರೆ, ೧೦ನೇ ಶತಮಾನ

೨೧. ಅದೇ, ಶಾ.ಸಂ.೯೪, ಕಣಕಟ್ಟೆ ೧೨ನೇ ಶತಮಾನ

೨೨. ಅದೇ, ಶಾ.ಸಂ.೭೩, ೮೫, ೯೫, ಕಣಕಟ್ಟೆ ೧೨ನೇ ಶತಮಾನ

೨೩. ಅದೇ, ಶಾ.ಸಂ.೨೭೬, ಜಾವಗಲ್ಲು ೯-೧೦ನೇ ಶತಮಾನ

೨೪. ಎ.ಕ.೯ (ಪರಿ) ಬೇಲೂರು ಶಾ.ಸಂ.೩೪೯ ಬಸ್ತಿಹಳ್ಳಿ

೨೫. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೨೫೪, ಕುರಾದಹಳ್ಳಿ, ೨೪೪ ಗೋವಿಂದಪುರ

೨೬. ಸಕಲೇಶ್ ಎಂ., ಹೊಯ್ಸಳೋದಯ, ಪು.೧೧೯-೧೨೧

೨೭. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೫೫, ಕುರಾದಹಳ್ಳಿ, ೧೧ನೇ ಶತಮಾನ

೨೮. ಸಕಲೇಶ್ ಎಂ., ಪೂರ್ವೋಕ್ತ

೨೯. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೪೪, ೨೪೧ ಕರುಗುಂದ ಕ್ರಿ.ಶ.೧೧೫೮

೩೦. ಅದೇ, ಶಾ.ಸಂ.೨೪೪, ಗೋವಿಂದಪುರ, ಕ್ರಿ.ಶ.೧೧೩೬-೩೭

೩೧. ಅದೇ, ಶಾ.ಸಂ.೨೬೮, ಬಂದೂರು ಕ್ರಿ.ಶ.೧೧೬೮

೩೨. ವಸಂತಲಕ್ಷ್ಮಿ, ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು, ಪು.೪೦

೩೩. ಹಂಪನಾ, ಯಾಪನೀಯ ಸಂಘ, ಪು.೨೭,೩೧

೩೪. ನಂದಿ ಆರ್.ಎನ್., ರಿಲಿಜಿಯನ್ ಇನ್ಸ್‌ಟಿಟೂಶನ್ಸ್ ಅಂಡ್ ಕಲ್ಟ್ಸ್ ಇನ್ ಡೆಕ್ಕನ್, ಪು.೬೧

೩೫. ಹಂ.ಪ.ನಾ, ಪೂರ್ವೋಕ್ತ

೩೬. ಶೆಟ್ಟರ್ ಎಸ್., ಕರ್ನಾಟಕ ಭಾರತಿ, ಸಂ.೧೦, ಪು.೧೫೯-೧೭೧

೩೭. ಅದೇ

೩೮. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೩೧, ಅರಸೀಕೆರೆ, ಕ್ರಿ.ಶ.೧೨೧೯

೩೯. ಅದೇ, ಶಾ.ಸಂ.೧೭, ೩೧, ಅರಸೀಕೆರೆ, ಕ್ರಿ.ಶ.೧೨೧೯

೪೦. ಶೆಟ್ಟರ್ ಎಸ್., ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ.೩, ಪು.೨೩

೪೧. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೧೮, ಅರಸೀಕೆರೆ, ಕ್ರಿ.ಶ.೧೨೧೯

೪೨. ಅದೇ, ಶಾ.ಸಂ.೩೧, ಅರಸೀಕೆರೆ, ಕ್ರಿ.ಶ.೧೨೧೯

೪೩. ಅದೇ, ಶಾ.ಸಂ.೩೨, ಅರಸೀಕೆರೆ, ಕ್ರಿ.ಶ.೧೨೩೦

೪೪. ಅದೇ, ಶಾ.ಸಂ.೧೯, ಅರಸೀಕೆರೆ, ಕ್ರಿ.ಶ.೧೪೯೧

೪೫. ಅದೇ, ಶಾ.ಸಂ.೨೦, ಅರಸೀಕೆರೆ, ಕ್ರಿ.ಶ.೧೨೧೯

೪೬. ಅದೇ, ಶಾ.ಸಂ.೯೬, ಹಲಕೂರು, ಕ್ರಿ.ಶ.೧೧೭೭

೪೭. ಅದೇ, ಶಾ.ಸಂ.೧೬೦, ಕೆಲ್ಲಂಗೆರೆ, ಕ್ರಿ.ಶ.೧೧೮೧

೪೮. ಅದೇ, ಶಾ.ಸಂ.೨೪೬, ಉಂಡಿಗನಾಳು, ಕ್ರಿ.ಶ.೧೧೩೯

೪೯. ಅದೇ, ಶಾ.ಸಂ.೩೧೪, ಅರಕೆರೆ, ಕ್ರಿ.ಶ.೧೨೩೩

೫೦. ಅದೇ, ಶಾ.ಸಂ.೩೧೪, ೩೧೭, ೨೩೯, ಕ್ರಿ.ಶ.೧೨೩೩ ರಿಂದ ೧೮೧೭

೫೧. ಅದೇ, ಶಾ.ಸಂ.೩೧೬, ಹಿರಿಯೂರು ಕ್ರಿ.ಶ.೧೨೫೪

೫೨. ಅದೇ, ಶಾ.ಸಂ.೧೧೯, ಸೊಪ್ಪಿನಹಳ್ಳಿ, ಕ್ರಿ.ಶ.೧೫೯೬

೫೩. ಅದೇ, ಶಾ.ಸಂ.೨೮೭, ಸಂಕಿಹಳ್ಳಿ, ಕ್ರಿ.ಶ.೧೮-೧೯ನೇ ಶತಮಾನ

೫೪. ಅದೇ, ಚನ್ನರಾಯಪಟ್ಟಣ, ಶಾ.ಸಂ.೬೩, ಕ್ರಿ.ಶ.೧೨೧೮

೫೫. ಎ.ಕ.೮ (ಪರಿ), ಹಾಸನ ಶಾ.ಸಂ.೮೭, ೭೬, ಕೆಲವತ್ತಿ, ಕ್ರಿ.ಶ.೧೧೨೩

೫೬. ಸ್ವಂತ, ಅನುಬಂಧ ಸಂಖ್ಯೆ ೪, ಉಬ್ಬೇನಹಳ್ಳಿ, ಕ್ರಿ.ಶ.೧೨೩೭

೫೭. ದಿ ಕಲ್ಚಲರ್ ಹೆರಿಟೇಜ್ ಆಫ್ಡಿಯ II, ಪು.೯೧

೫೮. ಎ.ಕ.೧೦ (ಪರಿ) ಚನ್ನರಾಯ ಪಟ್ಟಣ ಶಾ.ಸಂ.೮೩, ೭೦ ಕ್ರಿ.ಶ.೧೨-೧೩ನೇ ಶತಮಾನ

೫೯. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೧೪೯, ೧೬೦, ಕ್ರಿ.ಶ.೧೨ನೇ ಶತಮಾನ

೬೦. ಅದೇ, ಶಾ.ಸ.೧೬೨, ತಳಲೂರು ಕ್ರಿ.ಶ.೧೨ನೇ ಶತಮಾನ

೬೧. ಅದೇ, ಶಾ.ಸಂ.೧೮೪, ಹುಲ್ಲೇಕೆರೆ ಕ್ರಿ.ಶ.೧೧೬೩

೬೨. ಅದೇ, ಶಾ.ಸಂ.೧೧೩, ಕಿತ್ತನಕೆರೆ, ಕ್ರಿ.ಶ.೧೧೬೪

೬೩. ಅದೇ, ಶಾ.ಸಂ.೨೩, ಅರಸೀಕೆರೆ, ಕ್ರಿ.ಶ.೧೧೭೩

೬೪. ಅದೇ, ಚನ್ನರಾಯಪಟ್ಟಣ, ಶಾ.ಸಂ.೬೨, ಕ್ರಿ.ಶ.೧೨೫೨

೬೫. ಅದೇ, ಅ.ಕೆ.ಶಾ.ಸಂ.೨೪೭, ಉಂಡಿಗನಾಳು, ಕ್ರಿ.ಶ.೧೨೨೩

೬೬. ಅದೇ, ಶಾ.ಸಂ.೨೮೮, ಮೊಸಳೆ ಕ್ರಿ.ಶ.೧೨೬೭-೧೨೮೭

೬೭. ಅದೇ, ಶಾ.ಸಂ.೧೯೮, ಗಂಡಸಿ ಕ್ರಿ.ಶ.೧೪೦೩

೬೮. ಅದೇ, ಶಾ.ಸಂ.೫೩, ಬೆಂಡೆಕೆರೆ, ಕ್ರಿ.ಶ.೧೪೧೩

೬೯. ಅದೇ, ಶಾ.ಸಂ.೧೩೪, ತಿರುಪತಿ, ಕ್ರಿ.ಶ.೧೭೪೪

೭೦. ಅದೇ, ಶಾ.ಸಂ.೧೫೯, ಕೆಲ್ಲಂಗೆರೆ ಕ್ರಿ.ಶ.೧೨೮೮

೭೧. ಅದೇ, ಶಾ.ಸಂ.೭೫, ಕಣಕಟ್ಟೆ ಕ್ರಿ.ಶ.೧೫ನೇ ಶತಮಾನ

೭೨. ಅದೇ, ಶಾ.ಸಂ.೨೩೯, ಹಾರನಹಳ್ಳಿ, ಕ್ರಿ.ಶ.೧೮೧೭

೭೩. ಅದೇ, ಶಾ.ಸಂ.೧೬೩, ತಳಲೂರು ಕ್ರಿ.ಶ.೧೨ನೇ ಶತಮಾನ

೭೪. ಅದೇ, ಶಾ.ಸಂ.೨೦೮, ಚಿಕ್ಕಗಂಡಸಿ ಕ್ರಿ.ಶ.೧೫-೧೬ನೇ ಶತಮಾನ

೭೫. ಅದೇ, ಶಾ.ಸಂ.೨೦೯, ಚಿಕ್ಕಗಂಡಸಿ ಕ್ರಿ.ಶ.೧೫೭೬

೭೬. ಅದೇ, ಶಾ.ಸಂ.೨೮೪, ನೇರ್ಲಿಗೆ ಕ್ರಿ.ಶ.೯೭೧-೭೨

೭೭. ಅದೇ, ಶಾ.ಸಂ.೩೧೧, ಕೋಳಿಗುಂದ, ಕ್ರಿ.ಶ.೧೦೮೩

೭೮. ಅದೇ, ಶಾ.ಸಂ.೭, ಅರಸೀಕೆರೆ, ಕ್ರಿ.ಶ.೧೧೮೯

೭೯. ಅದೇ, ಶಾ.ಸಂ. ೩೧೧, ೧೧೬, ೧೩೯

೮೦. ಅದೇ, ಶಾ.ಸಂ.೨೪೨, ೩೯, ೨೧೪, ೧೪೦, ೨೬೨

೮೧. ಅದೇ, ಶಾ.ಸಂ.೫೫, ೩೧೪, ೩೧೭, ೧೨೧, ೪೭, ೬೦, ಕ್ರಿ.ಶ.೧೨-೧೩ನೇ ಶತಮಾನ

೮೨. ಅದೇ, ಶಾ.ಸಂ.೬, ಅರಸೀಕೆರೆ ಕ್ರಿ.ಶ.೧೧೮೩

೮೩. ಅದೇ, ಶಾ.ಸಂ.೩೩, ಅರಸೀಕೆರೆ ಕ್ರಿ.ಶ.೧೧೮೪

೮೪. ಅದೇ, ಶಾ.ಸಂ.೪೪, ಅರಸೀಕೆರೆ ಕ್ರಿ.ಶ.೧೧೮೬

೮೫. ಅದೇ, ಶಾ.ಸಂ.೪೨, ಅರಸೀಕೆರೆ ೯೨ ಕಣಕಟ್ಟೆ, ೧೨ನೇ ಶತಮಾನ

೮೬. ಅದೇ, ಶಾ.ಸಂ.೧೪೯, ಕೆಲ್ಲಂಗೆರೆ, ಕ್ರಿ.ಶ.೧೧೪೨

೮೭. ಅದೇ, ಶಾ.ಸಂ.೨೮೯, ೧೧೭, ೨೪೪, ೩೧೯, ಕ್ರಿ.ಶ.೧೨-೧೩ನೇ ಶತಮಾನ

೮೮. ಅದೇ, ಶಾ.ಸಂ.೩೨೫, ೨೪೨, ೨೪೫, ಕ್ರಿ.ಶ.೧೧೦೦ ರಿಂದ ೧೨೧೪

೮೯. ಅದೇ, ಶಾ.ಸಂ.೨೩೫, ೧೯೦, ೧೨೦, ೭೩, ೧೧೮, ೨೪

೯೦. ಅದೇ, ಶಾ.ಸಂ.೩೦೧, ೨೯೮ ಕೋಳಿಗುಂದ, ಕ್ರಿ.ಶ.೧೧೯೫-೧೧೯೭

೯೧. ಅದೇ, ಶಾ.ಸಂ.೨೪೬, ಉಂಡಿಗನಾಳು ಕ್ರಿ.ಶ.೧೧೩೯

೯೨. ಅದೇ, ಶಾ.ಸಂ.೨೫೩, ದೇಶಾಣಿ ೨೯೩, ಮೊಸಳೆ ಕ್ರಿ.ಶ.೧೧೩೯-೧೨೮೮

೯೩. ಅದೇ, ಶಾ.ಸಂ.೫೭, ಮನಗತ್ತೂರು ೮೨, ಕಣಕಟ್ಟೆ ೧೧೦೧-೧೧೬೫

೯೪. ಅದೇ, ಶಾ.ಸಂ.೧, ಅರಸೀಕೆರೆ ೯೫ ಕಣಕಟ್ಟೆ, ೧೬೧, ತಳಲೂರು, ಕ್ರಿ.ಶ.೧೨-೧೩ನೇ ಶತಮಾನ

೯೫. ಅದೇ, ಶಾ.ಸಂ.೩೧೭, ಹಿರಿಯೂರು ಕ್ರಿ.ಶ.೧೨೫೪

೯೬. ಅದೇ, ಶಾ.ಸಂ.೨೯೧, ೨೯೩, ಮೊಸಳೆ ಕ್ರಿ.ಶ.೧೨೮೮

೯೭. ಎ.ಕ.೯ (ಪರಿ), ಬೇಲೂರು ಶಾ.ಸಂ.೩೧೩, ಹಳೇಬೀಡು, ಕ್ರಿ.ಶ.೧೨೪೪

೯೮. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೪೭, ಜಾಜೂರು ೧೨ನೇ ಶತಮಾನ

೯೯. ಅದೇ, ಶಾ.ಸಂ.೩೧೭, ೨೯೩, ೯೦, ಕ್ರಿ.ಶ.೧೨೨೭ ರಿಂದ ೧೨೮೮

೧೦೦. ಅದೇ, ಶಾ.ಸಂ.೨೫೩, ದೇಸಾಣಿ ಕ್ರಿ.ಶ.೧೧೩೯

೧೦೧. ಅದೇ, ಶಾ.ಸಂ.೩೧೭, ಹಿರಿಯೂರು ಕ್ರಿ.ಶ.೧೨೫೪

೧೦೨. ಅದೇ, ಶಾ.ಸಂ.೨೩೪, ಹಾರನಹಳ್ಳಿ, ಕ್ರಿ.ಶ.೧೨೮೦

೧೦೩. ಅದೇ, ಶಾ.ಸಂ.೨೯೪, ಮೊಸಳೆ ಕ್ರಿ.ಶ.೧೨೮೯

೧೦೪. ಅದೇ, ಶಾ.ಸಂ.೮೨, ಕಣಕಟ್ಟೆ, ಕ್ರಿ.ಶ.೧೧ನೇ ಶತಮಾನ

೧೦೫. ಅದೇ, ಶಾ.ಸಂ.೪೭, ಜಾಜೂರು ೪೪, ಅರಸೀಕೆರೆ ಕ್ರಿ.ಶ.೧೧೮೯

೧೦೬. ಅದೇ, ಶಾ.ಸಂ.೩೨೫, ೪೪, ೪೬, ಅರಸೀಕೆರೆ ಕ್ರಿ.ಶ.೧೨-೧೩ನೇ ಶತಮಾನ

೧೦೭. ಅದೇ, ಶಾ.ಸಂ.೧೪೦, ಸೂಳೆಕೆರೆ, ಕ್ರಿ.ಶ.೧೧೫೯

೧೦೮. ಅದೇ, ಶಾ.ಸಂ.೨೪೫, ಹೊಸಕಲ್ಯಾಡಿ, ಕ್ರಿ.ಶ.೧೨೧೪

೧೦೯. ಅದೇ, ಶಾ.ಸಂ.೧೨೦, ಹೊಳಲಕೆರೆ, ಕ್ರಿ.ಶ.೧೧೮೫

೧೧೦. ಅದೇ, ಶಾ.ಸಂ.೯೬, ಹಲಕೂರು, ಕ್ರಿ.ಶ.೧೧೭೭

೧೧೧. ಅದೇ, ಶಾ.ಸಂ.೧೨೦, ಹೊಳಲಕೆರೆ, ಕ್ರಿ.ಶ.೧೧೮೫

೧೧೨. ಅದೇ, ಶಾ.ಸಂ.೫೧, ಬೆಂಡೆಕೆರೆ, ಕ್ರಿ.ಶ.೧೨೩೧

೧೧೩. ಅದೇ, ಶಾ.ಸಂ.೧೧೭, ಹೊನ್ನಕಟ್ಟೆ, ಕ್ರಿ.ಶ.೧೨೦೯

೧೧೪. ಅದೇ, ಶಾ.ಸಂ.೧೭೭, ಬೆಳಗುಂಬ, ಕ್ರಿ.ಶ.೧೧೩೯-೪೦

೧೧೫. ಅದೇ, ಶಾ.ಸಂ.೯೩, ಕಣಕಟ್ಟೆ, ೧೨ನೇ ಶತಮಾನ

೧೧೬. ಕಪಟರಾಳ ಕೃಷ್ಣರಾಯ, ಕರ್ನಾಟಕ ಲಾಕುಳ ಶೈವರ ಇತಿಹಾಸ, ಪು.೮೫-೮೬

೧೧೭. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೯೬, ಹಲುಕೂರು ೧೧೭೭

೧೧೮. ಅದೇ, ಶಾ.ಸಂ.೫೫, ೧೧೩, ೧೬೧, ೧೬೩, ೧೧೮, ೧೨-೧೩ನೇ ಶತಮಾನ

೧೧೯. ವಕ್ರ ಮಂಜುನಾಥ, ಅರ್ಚಕರು, ಬಾಣಾವರ

೧೨೦. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೧೭೪, ಕೋಡಿಹಳ್ಳಿ, ಕ್ರಿ.ಶ.೧೧೫೮

೧೨೧. ಅದೇ, ಶಾ.ಸಂ.೨೯೬, ೨೯೭ ಮೊಸಳೆ, ಕ್ರಿ.ಶ.೧೩-೧೪ನೇ ಶತಮಾನ

೧೨೨. ನರಸಿಂಹಾಚಾರ್ ಆರ್., ದಿ ಪ್ರಾಕ್ಟೀಸ್ ಆಫ್ ಆಫರಿಂಗ್ ದಿ ಫಿಂಗರ್ ಟು ಕಾಳಭೈರವ ಅಮಾಂಗ್ ಕಲ್ಟಿವೇಟಿಂಗ್ ಕ್ಲಾಸೆಸ್, ಎಂ.ಎ.ಆರ್ ೧೯೧೦, ಪು.೫, ಪ್ಯಾರಾ ೧೬

೧೨೩. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೩೦೭, ಕೋಳಿಗುಂದ, ಕ್ರಿ.ಶ.೧೧೬೧

೧೨೪. ಅದೇ, ಶಾ.ಸಂ.೫೧, ಬೆಂಡೆಕೆರೆ, ಕ್ರಿ.ಶ.೧೨೩೧

೧೨೫. ಅದೇ, ಶಾ.ಸಂ.೮೬, ಕಣಕಟ್ಟೆ, ಕ್ರಿ.ಶ.೧೧೫೩-೫೪

೧೨೬. ಅದೇ

೧೨೭. ಎ.ಕ.೮ (ಪರಿ), ಹಾಸನ ಶಾ.ಸಂ.೬೭, ಯಲಗುಂದ, ಕ್ರಿ.ಶ.೧೧೩೬

೧೨೮. ಚಿದಾನಂದಮೂರ್ತಿ ಎಂ., ಸಂಶೋಧನಾತರಂಗ ಭಾಗ ೨, ಪು.೨೬೦

೧೨೯. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೫೧, ೫೪, ಬೆಂಡೆಕೆರೆ, ಕ್ರಿ.ಶ.೧೨೩೨

೧೩೦. ಅದೇ, ಶಾ.ಸಂ.೫೦, ಬೆಂಡೆಕೆರೆ, ಕ್ರಿ.ಶ.೧೬-೧೭ನೇ ಶತಮಾನ

೧೩೧. ಅದೇ, ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೧೩೨. ಅದೇ, ಶಾ.ಸಂ.೩೧೮, ಹಿರಿಯೂರು, ಕ್ರಿ.ಶ.೧೨೫೮

೧೩೩. ಅದೇ, ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೧೩೪. ಅದೇ

೧೩೫. ಅದೇ, ಚನ್ನರಾಯಪಟ್ಟಣ, ಶಾ.ಸಂ.೭೬, ಬಿದರೆ, ಕ್ರಿ.ಶ.೧೧೬೫

೧೩೬. ಅದೇ, ಅ.ಕೆ.ಶಾ.ಸಂ.೨೬೮, ಬಂದೂರು, ಕ್ರಿ.ಶ.೧೧೬೮

೧೩೭. ಅದೇ, ಅ.ಕೆ.ಶಾ.ಸಂ.೨೨೨, ೨೨೩, ಗೀಜಿಹಳ್ಳಿ, ಕ್ರಿ.ಶ.೧೨ನೇ ಶತಮಾನ

೧೩೮. ಕಲಬುರ್ಗಿ ಎಂ.ಎಂ., ಶಾಸನಗಳಲ್ಲಿ ಶಿವಶರಣರು

೧೩೯. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೩೧೮, ಹಿರಿಯೂರು, ಕ್ರಿ.ಶ.೧೨೫೮

೧೪೦. ಸೌ.ಇ.ಇ.xv ನಂ.೫೬, ತಾಳಿಕೋಟೆ, ಕ್ರಿ.ಶ.೧೧೮೪

೧೪೧. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೩೧೮, ಕ್ರಿ.ಶ.೧೨೫೮

೧೪೨. ಕಲಬುರ್ಗಿ ಎಂ.ಎಂ., ಶಾಸನಗಳಲ್ಲಿ ಶಿವಶರಣರು

೧೪೩. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೧೩೪, ತಿರುಪತಿ ಕ್ರಿ.ಶ.೧೭೪೪

೧೪೪. ಅದೇ, ಶಾ.ಸಂ.೧೮೧, ತಳತೊರೆ, ಕ್ರಿ.ಶ.೧೨೭೮

೧೪೫. ಅದೇ, ಶಾ.ಸಂ.೧೭೮, ತಳತೊರೆ, ಕ್ರಿ.ಶ.೧೨-೧೩ನೇ ಶತಮಾನ

೧೪೬. ಅದೇ, ಶಾ.ಸಂ.೫೦, ಬೆಂಡೆಕೆರೆ, ಕ್ರಿ.ಶ.೧೬-೧೭ನೇ ಶತಮಾನ

೧೪೭. ಅದೇ, ಶಾ.ಸಂ.೨೩೫, ಹಾರನಹಳ್ಳಿ, ಕ್ರಿ.ಶ.೧೧೩೮

೧೪೮. ವಕ್ತೃ, ಡಾ. ಡಿ.ಸಿ.ರಮೇಶ್, ಪ್ರಾಥಮಿಕ ಆರೋಗ್ಯ ಕೇಂದ್ರ, ಹಾರನಹಳ್ಳಿ

೧೪೯. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೧೧೬, ಸಾತಂಗೆರೆ, ಕ್ರಿ.ಶ.೧೧೫೬

೧೫೦. ಅದೇ, ಶಾ.ಸಂ.೯೬, ಹಲಕೂರು, ಕ್ರಿ.ಶ.೧೧೭೭

೧೫೧. ಅದೇ, ಶಾ.ಸಂ.೮೮, ಕಣಕಟ್ಟೆ, ಕ್ರಿ.ಶ.೧೧೮೯

೧೫೨. ಅದೇ, ಶಾ.ಸಂ.೩೨೫, ಅರಸೀಕೆರೆ, ಕ್ರಿ.ಶ.೧೧೮೩

೧೫೩. ಅದೇ, ಶಾ.ಸಂ.೬, ಅರಸೀಕೆರೆ, ಕ್ರಿ.ಶ.೧೧೮೩

೧೫೪. ನಂದಿ ಆರ್.ಎನ್., ವೀರಶೈವ ಚಳುವಳಿಯ ಹುಟ್ಟು, ಬಸವಣ್ಣನ ವಚನಗಳು, ಸಾಂಸ್ಕೃತಿಕ ಮುಖಾಮುಖಿ

೧೫೫. ದೇಬಿ ಪ್ರಸಾದ್ ಚಟ್ಟೋಪಾಧ್ಯಾಯ, ಭಾರತೀಯ ದರ್ಶನಗಳು, ಪು.೧೫೭-೯೪

೧೫೬. ಲಕ್ಷ್ಮಣ್ ತೆಲಗಾವಿ, ಮೌರ್ಯ ಮತ್ತು ಶಾತವಾಹನ ಯುಗ, ಪು.೫೫

೧೫೭. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೧೬, ಮುದುಡಿ, ಕ್ರಿ.ಶ.೧೨೨೭

೧೫೮. ಅದೇ, ಶಾ.ಸಂ.೪೭, ಜಾಜೂರು, ಕ್ರಿ.ಶ.ಸು.೧೨೦೦

೧೫೯. ಅದೇ, ಶಾ.ಸಂ.೩೨೫, ಅರಸೀಕೆರೆ, ಕ್ರಿ.ಶ.೧೧೮೧

೧೬೦. ಅದೇ, ಶಾ.ಸಂ.೨೪೧, ಕರುಗುಂದ, ಕ್ರಿ.ಶ.೧೧೫೮

೧೬೧. ಎ.ಕ.೨, ಶ್ರವಣಬೆಳಗೊಳ, ಶಾ.ಸಂ.೫೨

೧೬೨. ಅದೇ, ೨, ಶ್ರ.ಬೆ.ಶಾ.ಸಂ.೪೭೫

೧೬೩. ಶೆಟ್ಟರ್ ಎಸ್., ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ.೩, ಪು.೨೭

೧೬೪. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೬೪, ಮಾವುತನಹಳ್ಳಿ, ಕ್ರಿ.ಶ.೧೨-೧೩ನೇ ಶತಮಾನ

೧೬೫. ಅದೇ, ಶಾ.ಸಂ.೧೩೯, ಬೊಮ್ಮನಹಳ್ಳಿ, ಕ್ರಿ.ಶ.೧೧೯೪

೧೬೬. ಅದೇ, ಶಾ.ಸಂ.೧೪೯, ೧೫೫, ಕೆಲ್ಲಂಗೆರೆ, ಕ್ರಿ.ಶ.೧೨-೧೩ನೇ ಶತಮಾನ

೧೬೭. ಅದೇ, ಶಾ.ಸಂ.೯೬, ಹಲಕೂರು, ಕ್ರಿ.ಶ.೧೧೭೭

೧೬೮. ಅದೇ, ಶಾ.ಸಂ.೧೬೧, ತಳಲೂರು, ಕ್ರಿ.ಶ.೧೧೯೧

೧೬೯. ಅದೇ, ಶಾ.ಸಂ.೮೯, ಕಣಕಟ್ಟೆ, ಕ್ರಿ.ಶ.೧೨೭೪

೧೭೦. ಅದೇ, ಶಾ.ಸಂ.೨೫, ಅರಸೀಕೆರೆ, ಕ್ರಿ.ಶ.೧೪೧೧

೧೭೧. ಕಲಬುರ್ಗಿ ಎಂ.ಎಂ. (ಸಂ), ಸಾಗರ ಕೈಫಿಯತ್ತು, ಕರ್ನಾಟಕದ ಕೈಫಿಯತ್ತುಗಳು

೧೭೨. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೬೩, ಕಲ್ಲುಗುಂಡಿ, ಕ್ರಿ.ಶ.೧೩೩೧

೧೭೩. ನಾಗರಾಜ್ ಎಂ.ಜಿ., ಹಾಸನ ಜಿಲ್ಲೆಯ ವೀರಶೈವ ಮಠಗಳು, ಇ.ದ.ಸಂ.೧೨, ಪು.೨೨೨

೧೭೪. ಎ.ಕ.೧೦ (ಪರಿ), ಚನ್ನರಾಯಪಟ್ಟಣ, ಶಾ.ಸಂ.೬೬, ನವಿಲೆ, ೧೭ನೇ ಶತಮಾನ

೧೭೫. ಅದೇ, ಶಾ.ಸಂ.೫೦, ಬೆಂಡೆಕೆರೆ, ಕ್ರಿ.ಶ.೧೬-೧೭ನೇ ಶತಮಾನ

೧೭೬. ಅದೇ, ಶಾ.ಸಂ.೨೮೯, ಮೊಸಳೆ, ಕ್ರಿ.ಶ.೧೨೮೭

೧೭೭. ಅದೇ, ಶಾ.ಸಂ.೩೧೪, ಅರಕೆರೆ ೩೧೭, ಹಿರಿಯೂರು, ಕ್ರಿ.ಶ.೧೨೩೪-೫೪

೧೭೮. ಅದೇ, ಶಾ.ಸಂ.೬೧, ಗಂಜಿಗೆರೆ ೯೬, ಹಲುಕೂರು, ೧೨ನೇ ಶತಮಾನ

೧೭೯. ಅದೇ, ಶಾ.ಸಂ.೬೧, ೯೮, ೧೧೬, ೧೨೯, ಕ್ರಿ.ಶ.೧೨-೧೩ನೇ ಶತಮಾನ

೧೮೦. ಅದೇ, ಶಾ.ಸಂ.೨೬೫, ಮಾವುತನಹಳ್ಳಿ, ಕ್ರಿ.ಶ.೧೮ನೇ ಶತಮಾನ

೧೮೧. ಸ್ವಂತ ಅನುಬಂಧ ಶಾ.ಸಂ.೬, ೭, ಉಂಡಿಗನಾಳು, ೧೯ನೇ ಶತಮಾನ

೧೮೨. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೭೮, ದ್ಯಾಮೇನಹಳ್ಳಿ, ಕ್ರಿ.ಶ.೧೫೮೬

೧೮೩. ಹಂ.ಪ.ನಾ, ಯಾಪನೀಯ ಸಂಘ, ಪು.೬೨

೧೮೪. ಬ್ರಹ್ಮಶಿವ, ಸಮಯ ಪರೀಕ್ಷೆ, ೨-೩೩

೧೮೫. ಅದೇ, ೨-೪೧

೧೮೬. ಎ.ಕ.೧೦ (ಪರಿ), ಚನ್ನರಾಯಪಟ್ಟಣ, ಶಾ.ಸಂ.೬೪, ೧೨ನೇ ಶತಮಾನ

೧೮೭. ಅದೇ, ಅ.ಕೆ.ಶಾ.ಸಂ.೩೨೫, ಅರಸೀಕೆರೆ, ಕ್ರಿ.ಶ.೧೧೮೧

೧೮೮. ಅದೇ, ಶಾ.ಸಂ.೨೩೫, ಹಾರನಹಳ್ಳಿ, ಕ್ರಿ.ಶ.೧೧೩೮

೧೮೯. ಅದೇ, ಶಾ.ಸಂ.೮೮, ಕಣಕಟ್ಟೆ, ಕ್ರಿ.ಶ.೧೧೮೯

೧೯೦. ಅದೇ, ಶಾ.ಸಂ.೮೬, ಕೆಲ್ಲಂಗೆರೆ, ಕ್ರಿ.ಶ.೧೧೫೩

೧೯೧. ಅದೇ, ಶಾ.ಸಂ.೧೪೯, ಕೆಲ್ಲಂಗೆರೆ, ಕ್ರಿ.ಶ.೧೧೪೨

೧೯೨. ಅದೇ, ಶಾ.ಸಂ.೨೪೨, ಕರುಗುಂದ, ಕ್ರಿ.ಶ.೧೧೬೨

೧೯೩. ಅದೇ, ಶಾ.ಸಂ.೮೭, ೮೯, ೧೨೬, ೨೪೨, ೧೩-೧೪ನೇ ಶತಮಾನ

೧೯೪. ನಂದಿ ಆರ್.ಎನ್., ಆರಿಜಿನ್ ಆಫ್ ದಿ ವೀರಶೈವ ಮೂವ್‌ಮೆಂಟ್, ಇಂಡಿಯನ್ ಹಿಸ್ಟಾರಿಕಲ್ ರಿವ್ಯೂ, ಸಂ.೨, ಸಂಚಿಕೆ ೧, ಪು.೩೨-೪೬

೧೯೫. ಎ.ಕ.೯ (ಪರಿ) ಬೇಲೂರು ಶಾ.ಸಂ.೪೧೦

## ಅಧ್ಯಾಯ ೭

# ಶಿಕ್ಷಣ ಸಾಹಿತ್ಯ ಕಲೆ-ಅಭಿವೃದ್ಧಿ

೭.೧. ಶಿಕ್ಷಣ

೭.೨. ಶಾಸನ ಸಾಹಿತ್ಯ ಆಶಯ ಆಕೃತಿಗಳ ಸಂಬಂಧ

೭.೩. ಕಲೆ

೭

# ಶಿಕ್ಷಣ ಸಾಹಿತ್ಯಕಲೆ-ಅಭಿವೃದ್ಧಿ

ರಾಜಕೀಯ ಸ್ಥಿರತೆ ಉತ್ತಮ ಆಡಳಿತ ಶಾಂತಿ ನೆಮ್ಮದಿಗಳು ನೆಲಸಿದ ಸಮಾಜದಲ್ಲಿ ಕೇವಲ ಭೌತಿಕವಾದ ಪ್ರಗತಿಯಷ್ಟೇ ಅಲ್ಲ ಭೌದ್ಧಿಕವಾದ ಪ್ರಗತಿಯೂ ಸಾಧಿತವಾಗುತ್ತದೆ. ಒಂದು ನಿರ್ದಿಷ್ಟ ಸಮಾಜದ ನಿರ್ದಿಷ್ಟಕಾಲದ ಶ್ರೇಷ್ಠತೆಯನ್ನು ಗುರುತಿಸುವಲ್ಲಿ ಆ ಸಮಾಜ ಆ ಕಾಲಖಂಡದ ಭೌತಿಕ ಸಂಪತ್ತಿನೊಂದಿಗೆ ಭೌದ್ಧಿಕ ಸಂಪತ್ತನ್ನು ಗಣಿಸುವುದು ಸಹಜ.

ಕರ್ನಾಟಕದ ಸಾಹಿತ್ಯ ಕಲೆ ವೈವಿಧ್ಯ ಪೂರ್ಣವೂ ವೈಶಿಷ್ಟ್ಯಪೂರ್ಣವೂ ಆಗಿದೆ. ೭-ಅನೇ ಶತಮಾನದ ನಂತರ ವಿವಿಧ ಜ್ಞಾನ ಶಾಖೆಗಳು ಆಳರಸರ ಪ್ರೋತ್ಸಾಹವನ್ನು ಪಡೆದು ಬೆಳೆಯತೊಡಗಿದವು. ಶಿಕ್ಷಣ ಸಂಸ್ಥೆಗಳಿಗೆ ದೊರೆತ ಮಾನ್ಯತೆ ಧನ ಸಹಾಯದಿಂದಾಗಿ, ಶಾಸ್ತ್ರಕಾರರು, ಕವಿಗಳು, ಗಮಕಿಗಳು, ಸಂಗೀತಗಾರರು ನೃತ್ಯಗಾರರು ಶಿಲ್ಪಿಗಳು, ರೂವಾರಿಗಳು ವೃತ್ತಿ ನಿಪುಣರು ತಮ್ಮ ಪಾಂಡಿತ್ಯ, ಕಲಾ ನೈಪುಣ್ಯತೆಗೆ ತಕ್ಕ ಪುರಸ್ಕಾರಗಳನ್ನು ಪಡೆದು ಶ್ರೇಷ್ಠ ಕೊಡುಗೆಗಳನ್ನು ನೀಡಲು ಸಾಧ್ಯವಾಯಿತು.

ಪ್ರಸ್ತುತ ಅಧ್ಯಯನ ಪ್ರದೇಶದ ಹೆಚ್ಚಿನ ಶಾಸನಗಳು ಉತ್ತಮ ಸಾಹಿತ್ಯ ಗುಣದಿಂದ ಕೂಡಿದ್ದು ಅನೇಕ ಶ್ರೇಷ್ಠ ಕವಿಗಳಿಂದ ರಚಿತವಾಗಿವೆ. ಅನೇಕ ಶ್ರೇಷ್ಠ ಕಲಾವಿದರ, ಶಿಲ್ಪಿಗಳ ಪರಿಚಯವನ್ನು ಇಲ್ಲಿನ ಶಾಸನಗಳು ನೀಡಿವೆ. ಅಷ್ಟೇ ಅಲ್ಲ ಈ ಪ್ರದೇಶದಲ್ಲಿ ಅದ್ಭುತ ಕಲಾ ಸೌಂದರ್ಯದಿಂದ ಕೂಡಿದ ದೇವಾಲಯಗಳು, ಸ್ಮಾರಕಗಳು ಕಲಾಪ್ರೌಢಿಮೆಗೆ ಸಾಕ್ಷಿಯಾಗಿವೆ.

## ೭.೧. ಶಿಕ್ಷಣ

ಶಿಕ್ಷಣ ಎನ್ನುವುದು ವಿಶಾಲ ಅರ್ಥದಲ್ಲಿ ಬದುಕಿಗೆ ಅವಶ್ಯಕವಾದ ನೈಪುಣ್ಯತೆಗಳನ್ನು ಕಲಿಸಿಕೊಡುವುದು. ವಿಶಿಷ್ಟ ಬೌದ್ಧಿಕ ವಿಕಾಸ ಹೊಂದಿದ ಮಾನವ ಸಮಾಜದಲ್ಲಿ ಶಿಕ್ಷಣವೆಂಬುದು ಅವನ ಸಂಸ್ಕೃತಿಯ ಹಿರಿಮೆಯೆಂದು ಪರಿಗಣಿತವಾಗುತ್ತದೆ. ಬದುಕಿಗೆ ಅವಶ್ಯಕವಾದ ಕಲೆಗಳಲ್ಲಿ ಕೆಲವು ಅಕ್ಷರ ಜ್ಞಾನದ ಮೂಲಕ ಪಡೆಯುವಂತಹ ಸಾಂಪ್ರದಾಯಿಕ, ಶಿಸ್ತುಬದ್ಧ ಔಪಚಾರಿಕ ಅಧ್ಯಯನದ ಮುಖಾಂತರ ಗುರುವಿನಿಂದ ಶಿಷ್ಯನಿಗೆ ದತ್ತವಾಗುವಂತಹುದಾದರೆ ಮತ್ತೆ ಕೆಲವು ಅಕ್ಷರದ ಹಂಗಿಲ್ಲದೆ ಅನೌಪಚಾರಿಕವಾಗಿ ಪಡೆಯುವಂಥದ್ದು. ಇದಕ್ಕೆ ಗುರುಕುಲ ಅಥವಾ ವ್ಯವಸ್ಥಿತ ಶಿಕ್ಷಣ ಸಂಸ್ಥೆಗಳ

ಅವಶ್ಯಕತೆಯಿಲ್ಲದೆ ಪರಂಪರಾಗತವಾಗಿ ಕುಟುಂಬದಲ್ಲಿ ತಂದೆ, ತಾಯಿಯಿಂದ ಮಕ್ಕಳು ಪಡೆಯುವಂತದ್ದಾಗಿರುತ್ತದೆ.

ಭಾರತದಂತಹ ದೇಶದಲ್ಲಿ ವಿದ್ಯೆ ಎನ್ನುವುದು ಆತ್ಮಜ್ಞಾನದ ಮಾರ್ಗವೆಂದು ಪರಿಗಣಿತವಾಗಿದ್ದು, ಈ ರೀತಿಯ ಪರಾವಿದ್ಯೆಯು ಲೌಕಿಕ ಸುಖ ಸಾಧನವಾದ ಅಪರಾವಿದ್ಯೆಗಿಂತ ಶ್ರೇಷ್ಠವೆಂಬ ಭಾವನೆಯನ್ನು ಬಿತ್ತಲಾಗಿತ್ತು. ಅಲ್ಲದೆ ಅಂತಹ ಅರಿವನ್ನು ಪಡೆದವರನ್ನು ಆರಾಧನಾ ಭಾವದಲ್ಲಿ ನೋಡುತ್ತಿತ್ತು. ಔಪಚಾರಿಕ ವಿದ್ಯೆಯನ್ನು ಪಡೆದ ವರ್ಗವು ಸಮಾಜದಲ್ಲಿ ಉನ್ನತ ಸ್ಥಾನಮಾನವನ್ನು ಪಡೆಯಿತು. ಆದರೆ ದೇಹಶ್ರಮ, ಕೌಶಲ್ಯ ಪೂರ್ಣವಾದ ಅನೇಕ ನೈಪುಣ್ಯತೆಯನ್ನು ಪಡೆದ ಪ್ರತಿಭಾವಂತರನ್ನು ಅಕ್ಷರ ಜ್ಞಾನ ಪಡೆಯದ ಕಾರಣ ಅಮುಖ್ಯರೆಂದು, ಸಮಾಜದ ಕೆಳಸ್ತರದಲ್ಲಿ ಇಡಲಾಯಿತು.

ಭಾರತೀಯ ಪ್ರಾಚೀನ ಮತ್ತು ಮಧ್ಯಕಾಲೀನ ಶಿಕ್ಷಣ ವ್ಯವಸ್ಥೆಯ ಬಗೆಗೆ ದೊರಕುವ ಮಾಹಿತಿಗಳು ಔಪಚಾರಿಕ ಶಿಕ್ಷಣ ವ್ಯವಸ್ಥೆಯನ್ನು ಕುರಿತಿದ್ದು ಅನೌಪಚಾರಿಕವಾದ ವೃತ್ತಿ ಪರವಾದ ಶಿಕ್ಷಣವನ್ನು ಕುರಿತ ಮಾಹಿತಿ ಕಡಿಮೆ.

ಪ್ರಸ್ತುತ ಅಧ್ಯಯನ ಪ್ರದೇಶದ ಶಾಸನಗಳೂ ಕೂಡ ಔಪಚಾರಿಕ ವಿದ್ಯಾಭ್ಯಾಸಕ್ಕೆ ಆಳರಸರಿಂದ ಅಧಿಕಾರಿಗಳಿಂದ ದೊರೆತ ಪ್ರೋತ್ಸಾಹವನ್ನೇ ದಾಖಲಿಸಿವೆ. ಪ್ರಾಚೀನ ಭಾರತದಲ್ಲಿ ಗುರುವಿನ ಸನ್ನಿಧಿಯಲ್ಲಿ ಗುರುಕುಲದಲ್ಲಿ ಉಳಿದು, ಶಿಷ್ಯನು ವಿದ್ಯೆ ಕಲಿಯಬೇಕಿತ್ತು. ಗುರುವಿನ ಸೇವೆ ಮಾಡುತ್ತ ಅವರ ಮನೆಯಲ್ಲಿ ಇದ್ದು ವಿದ್ಯೆ ಕಲಿಯುತ್ತಿದ್ದ ವಿದ್ಯಾರ್ಥಿಯನ್ನು 'ಅಂತೇವಾಸಿ' ಎಂದು ಕರೆಯುತ್ತಿದ್ದರು.[೧] ಈ ಪ್ರದೇಶದ ಪ್ರಸಿದ್ಧ ಶಾಸನ ಕವಿ ತ್ರಿವಿಕ್ರಮಾಂಕನು ತನ್ನನ್ನು ಗುಣನಿಧಿ ಬುಧನಿಧಿ ವಿವೇಕ ನಿಧಿಯಾದ ಆದಿತ್ಯನ ಅನುಜನೆಂದೂ 'ತದನ್ತೇ ವಾಸನ್ ' ಎಂದೂ ಹೇಳಿಕೊಂಡಿರುವುದರಿಂದ ಈತ ಅಣ್ಣನಾದ ಆದಿತ್ಯನ ಮನೆಯಲ್ಲಿ ಉಳಿದು ಅವನ ಶಿಷ್ಯನೂ ಆಗಿ ವಿದ್ಯೆಯನ್ನು ಪಡೆದಿರುವುದನ್ನು ಇದು ಸೂಚಿಸುತ್ತಿದೆ.[೨] ಇದನ್ನು ಹೊರುತುಪಡಿಸಿ ಗುರುಕುಲದ ವಿವರಗಳು ಬರದಿದ್ದರೂ ತಾವು ಇಂಥ ಗುರುವಿನ 'ಶಿಷ್ಯ', 'ದಾಸ' 'ಗುರು ಕುಲ ತಿಲಕ' ಎಂದು ಹೇಳಿಕೊಂಡಿದ್ದಾರೆ.[೩] ಹಾಗಾಗಿ ಇವರು ಅಗ್ರಹಾರ ಬ್ರಹ್ಮಪುರಿ ಮಠ ಇಂಥವುಗಳಲ್ಲಿದ್ದು ವಿದ್ಯಾಭ್ಯಾಸ ಮಾಡಿರುವ ಸಾಧ್ಯತೆ ಇದ್ದರೂ ಅಲ್ಲಿಯೂ ತಾವು ವಿಶೇಷ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳುವ ವಿಷಯವನ್ನು ಆಧರಿಸಿ ಪ್ರಮುಖನಾದ ಗುರು ಒಬ್ಬನೊಂದಿಗೆ ವಿಶೇಷವಾದ ಸಂಬಂಧವಿರುತ್ತಿದ್ದು ಗುರುವಿನ ಪ್ರಭಾವ, ಪ್ರೀತಿಗೆ ಒಳಗಾಗಿರುತ್ತಿದ್ದರೆನ್ನಬಹುದು. ಪ್ರಾಚೀನ ಮತ್ತು ಮಧ್ಯಕಾಲೀನ ಯುಗದಲ್ಲಿ ಸಾಂಸ್ಥಿಕವಾದ ವಿದ್ಯಾಕೇಂದ್ರಗಳಾದ ಬೌದ್ಧ ವಿಹಾರಗಳು, ಜೈನ ಬಸದಿಗಳು, ವೈದಿಕರ ಅಗ್ರಹಾರಗಳು, ಬ್ರಹ್ಮಪುರಿ, ಘಟಿಕಾ ಸ್ಥಾನಗಳು ಮತ್ತು ದೇವಾಲಯಕ್ಕೆ ಹೊಂದಿಕೊಂಡಿದ್ದ ಮಠಗಳು ಗುರುಕುಲದಲ್ಲಿ ಸೀಮಿತವಾಗಿದ್ದ ವಿದ್ಯಾದಾನ ಕಾರ್ಯವನ್ನು ಕೈಗೆತ್ತಿಕೊಂಡು ವಿದ್ಯಾ ಪ್ರಸರಣವನ್ನು ವ್ಯಾಪಕವಾಗಿ ಮಾಡತೊಡಗಿದವು.

ಹೊಯ್ಸಳರ ಉದಯದೊಂದಿಗೆ ಈ ಪ್ರದೇಶದಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳಿಗೆ ಚಾಲನೆ ದೊರೆತುದಲ್ಲದೆ ವಿಷ್ಣುವರ್ಧನನ ಕಾಲದಿಂದ ತೊಡಗಿ ಸೋಮೇಶ್ವರನವರೆಗೆ ಅನೇಕ ಅಗ್ರಹಾರಗಳ ಸ್ಥಾಪನೆ, ಪರಿವರ್ತನೆಯ ಕಾರ್ಯಗಳು ವಿಶೇಷವಾಗಿ ನಡೆದವು. ವಿಜಯನಗರದ ಅರಸರು ಈ ಅಗ್ರಹಾರಗಳನ್ನು ಉಳಿಸುವಲ್ಲಿ ಜೀರ್ಣೋದ್ಧಾರ ಕಾರ್ಯ, ದಾನ ದತ್ತಿಗಳ ವಿಸ್ತರಣೆ, ಅಗ್ರಹಾರಗಳ ಕೆರೆ ಕಾಲುವೆ ಇತ್ಯಾದಿಗಳ ದುರಸ್ತಿ ಮುಂತಾದ ಕಾರ್ಯಗಳಿಗೆ ಗಮನ ನೀಡಿದ್ದರು. ಆ ಮೂಲಕ ವಿದ್ಯೆಗೆ ಪ್ರೋತ್ಸಾಹ ನೀಡಿದ್ದರೆಂಬುದನ್ನು ಅರಿಯಬಹುದು.

### ೭.೧೧. ಅಗ್ರಹಾರಗಳು

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಹೊಯ್ಸಳ ವಿಷ್ಣುವರ್ಧನ ಕ್ರಿ.ಶ.೧೧೪೨ಕ್ಕೆ ಮೊದಲೇ ಕೊಡಂಗನೂರಿನಿಂದ ಮಹಾ ಮೇಧಾವಿ ಪಂಡಿತರನ್ನು ಕರೆತಂದು ಸ್ಥಾಪಿಸಿ ಅಗ್ರಹಾರ ಮಾಡಿದ್ದಾನೆ. ತೆಂಕಣ ಅಯ್ಯಾವಳೆಯೆಂದು ಪ್ರಸಿದ್ಧವಾಗಿದ್ದ ಕೆಲ್ಲಂಗೆರೆಯನ್ನು ಶ್ರೀಮದಗ್ರಹಾರ ಹರಿಹರಪುರವೆಂದು ನಾಮಕರಣ ಮಾಡಲಾಗಿದೆ.[೪] ಈ ಅಗ್ರಹಾರದಲ್ಲಿ ಇನ್ನೂರು ಮಹಾಜನರಿದ್ದರೆಂದು ಮತ್ತೊಂದು ಶಾಸನ ತಿಳಿಸುತ್ತಾ ಶೃತಿ, ಶಬ್ಧ, ಅರ್ಥಶಾಸ್ತ್ರ, ಬಹುತರ್ಕ ಪುರಾಣದರ್ತ್ಥವನ್ನು ಬೆಸಗೊಳ್ಳಬಲ್ಲವರಾಗಿದ್ದ ಅಲ್ಲಿನ ಮಹಾಜನರನ್ನು ಹೊಗಳಿದೆ. ಅಧ್ಯಯನ ನಿರತರಾಗಿ ಕಂಠಪಾಠ ಮಾಡುವ ವಿದ್ಯಾರ್ಥಿ ಮಾಣವಕರೊಡನೆ ಗಳಪುವ ಗಿಳಿಗಳ ಮಂಜುಳ ಧ್ವನಿಯಿಂದ ಅಗ್ರಹಾರವು ಅತಿ ರಮಣೀಯವಾಗಿತ್ತೆಂದು ಹೇಳಿದೆ.[೫]

ವಿಷ್ಣುವರ್ಧನನ ಅಧಿಕಾರಿಯಾದ ದಾಮ ದಂಡಾಧಿಪನೆಂಬುವವನು ತಳಲೂರನ್ನು ಅಗ್ರಹಾರ ಮಾಡಿ ಅರವತ್ತೆರಡು ವೃತ್ತಿಯಾಗಿ ಹಂಚಿಕೊಟ್ಟಿದ್ದಾನೆ.[೬] ಮತ್ತೊಂದು ಶಾಸನ 'ಸಾಮವೇದ ಸಂತತ ಪಠನ ಪವಿತ್ರೀಕೃತ ವದನಾರವಿಂದ'ನೆಂದು ಪ್ರಸಿದ್ಧನಾದ ತಳಲೂರಿನ ಶ್ರೀವಿಮಳ ಶಿವಾಚಾರ್ಯರ ಗುರುಕುಳ ತಿಳಕನಾದ ಶಿಷ್ಯ ಪೆರ್ಗಡೆ ಶಂಕರಣ್ಣನನ್ನು ಹೆಸರಿಸುತ್ತದೆ. ತಳಲೂರಿನ ಅಧ್ಯಯನ ಅಧ್ಯಾಪನ ಚಟುವಟಿಕೆಗಳನ್ನು ಕವಿ ವರ್ಣಿಸಿದ್ದಾನೆ. ಒಂದೆಡೆ ವೇದದ ನಾದ, ಮತ್ತೊಂದೆಡೆ ವಾದ ವಿನೋದದ ರಮ್ಯತೆ, ಇನ್ನೊಂದೆಡೆ ವಿಸ್ಮೃತ ಸ್ಮೃತಿಯ ವಿಭೂಷಿತವಾದರೆ ತಂತ್ರ ಸೇವ್ಯ ಮಗದೊಂದೆಡೆ, ಜೊತೆಗೆ ಶಬ್ಧ ಶಾಸ್ತ್ರವನ್ನು ಪರಿಭಾವಿಸುತ್ತಿರುವವರು ಇವರುಗಳಿಂದ ತುಂಬಿತ್ತು. ಅಲ್ಲದೆ ಹೋಮಸಮಾದಿ ಯಜ್ಞ ಜಪಮೌನ ಮಹಾಬ್ರತ ಶೀಲಧಾರಣ ಧಾಮರಾದ ಅನೇಕ ಶಾಸ್ತ್ರ ನಿಪುಣರೂ ಪರಮ ಆಗಮ ತತ್ವವೇದಿಗಳು ಇವರೆಲ್ಲರಿಂದ ಕೂಡಿದ್ದ ಪಲ್ಲವ ಪುರವು ವಿದಗ್ಧತಾ ಮಂದಿರವಾಗಿತ್ತಂತೆ.[೭] ಇಲ್ಲಿ ವೇದ ಶಾಸ್ತ್ರ ಅನೇಕ ತರ್ಕದೊಂದಿಗೆ ವ್ಯಾಕರಣ ಕಾವ್ಯ ನಾಟಕ ಭರತ ವಿದ್ಯೆಗೆ ಚತುರಾನನರಾದವರು, ಕರ್ನಾಟ, ಲಾಟ ದ್ರಾವಿಳ ನಾನಾ ದೇಶ ಭಾಷಾ ವಿಶೇಷ ಲಿಪಿ ನಿಪುಣ ವಿದ್ಯಾಧರರೂ ಇದ್ದರೆಂದು ತಿಳಿಸುತ್ತದೆ. ಅದಕ್ಕೆ ಸಾಕ್ಷಿಯಾಗಿ ಶ್ರೀಘ್ರ ಲಿಪಿಕಾರ ಶ್ರೀರಂಗದೇವನೆಂಬುವವನು ವಿದ್ಯಾಧರ ಬಿರುದನ್ನು ಹೊಂದಿದ್ದವನು

ಇಲ್ಲಿನ ಎರಡು ಶಾಸನ ಬರೆದಿದ್ದಾನೆ.[೮] ವೀರ ನರಸಿಂಹನ ಮಹಾಪ್ರಧಾನ ಬೂಚಿರಾಜನು ರಾಜನಿಂದ ಹುಲ್ಲೇಕೆರೆಯನ್ನು ಪಡೆದು ಅದನ್ನು ಸೋಮನಾಥ ಅಗ್ರಹಾರವನ್ನಾಗಿ ಮಾಡಿದ್ದಾನೆ.[೯]

ಇಮ್ಮಡಿ ವೀರಬಲ್ಲಾಳನು ಯುವ ರಾಜನಾಗಿದ್ದಾಗಲೇ ಬಲ್ಲಾಳಪುವೆಂಬ ಹೆಸರಿನಲ್ಲಿ ಕಿತ್ತನಕೆರೆಯನ್ನು ಅಗ್ರಹಾರವಾಗಿ ಮಾಡಿದ್ದಾನೆ.[೧೦] ಕ್ರಿ.ಶ.೧೧೭೩ರಲ್ಲಿ ಅವನ ಪಟ್ಟಬಂಧೋತ್ಸವದ ನಂತರ ಜಯಗೊಂಡ ಬಲ್ಲಾಳಪುರವೆಂಬ ಹೆಸರಿನಲ್ಲಿ ಬೆಂಡೆಕೆರೆಯನ್ನು ಅಗ್ರಹಾರವಾಗಿ ಮಾಡಿದ್ದಾನೆ. ನೇರ್ಲಿಗೆಯನ್ನು 'ವೀರ ಬಲ್ಲಾಳ ಚತುರ್ವೇದಿ ಮಂಗಲ'ವೆಂಬ ಹೆಸರಿನಲ್ಲಿ ಅಗ್ರಹಾರವಾಗಿ ಮಾಡಿ ಇನ್ನೂರೆರಡು ಮಹಾಜನರಿಗೆ ಇನ್ನೂರೆರಡು ವೃತ್ತಿಗಳನ್ನು ಹಂಚಿಕೊಟ್ಟಿದ್ದಾನೆ. ಇಲ್ಲಿನ ಮಹಾಜನರು ಸಕಲ ವಿದ್ಯಾ ಪಾರಂಗತರಾಗಿದ್ದು ಸಾಂಖ್ಯ, ವೇದ, ನ್ಯಾಯ, ಧರ್ಮಸ್ಮರಣ ಪುರಾಣ ಮೀಮಾಂಸ ಮುಂತಾದ ವಿದ್ಯೆ, ದರ್ಶನಗಳಲ್ಲಿ ನಿಪುಣರಾಗಿದ್ದರು. ಕ್ರಿ.ಶ.೧೧೭೪ರ ಹೊತ್ತಿಗಾಗಲೇ ಅರಕೆರೆ, ಹಾರುವನಹಳ್ಳಿ, ಭಗವತೀ ಘಟ್ಟ ಕೊಂಡಂವಾಗಿಲು ಮುಂತಾದ ಇತರ ಅಗ್ರಹಾರಗಳು ನಿರ್ಮಾಣಗೊಂಡಿದ್ದವು.[೧೧] ಇದರ ಜೊತೆಗೆ ಬಲ್ಲಾಳನ ಮಂತ್ರಿಗಳು ದಂಡನಾಯಕರು ಮತ್ತಷ್ಟು ಅಗ್ರಹಾರಗಳನ್ನು ಬ್ರಹ್ಮಪುರಿಗಳನ್ನು ನಿರ್ಮಿಸಿದರು.

ನಾಗವೇದಿಯನ್ನು ಮೈಜೀವಿತಕ್ಕೆ ಪಡೆದ ಬಲ್ಲಾಳನ ಅಧಿಕಾರಿ ಮಾಸಯ್ಯ ಅಗ್ರಹಾರ ಮಾಡಿ ಚಕ್ರವರ್ತಿಯ ಕಯ್ಯಿಂದ ಧಾರೆಯನ್ನೆರೆಸಿ ಕೊಟ್ಟಿದ್ದಾನೆ.[೧೨] ಮಧುಸೂಧನ ದಂಡಾದಿಪ ಮಧುಸೂಧನ ಪುರವೆಂಬ ಗ್ರಾಮವನ್ನು ಸ್ಥಾಪಿಸಿ ಅಗ್ರಹಾರ ಮಾಡಿದ್ದರೆ, ಅಮರಾವತಿ ಕೋಟೆಯೆಂದು ಪ್ರಸಿದ್ಧವಾದ ಹೊಳಲಕೆರೆಯನ್ನು ಅರವತ್ತ ಆರು ಮಹಾಜನಗಳಿಗೆ ಜಯಗೊಂಡನಾಯಕನೆಂಬ ಸಾಮಂತಾಧಿಕಾರಿ ಅಗ್ರಹಾರ ಮಾಡಿ ನೀಡಿದ್ದಾನೆ.[೧೩] ಹಿರಿಯ ಗಂಡಸಿಯೂ ಕೂಡ ಬಲ್ಲಾಳನ ಕಾಲದಲ್ಲೇ ಬಲ್ಲಾಳಪುರವೆಂಬ ಹೆಸರಿನಲ್ಲಿ ಅಗ್ರಹಾರವಾಗಿತ್ತು. ಇದು ವಿಜಯನಗರಅರಸರ ಕಾಲದಲ್ಲಿ ಜೀರ್ಣೋದ್ಧಾರಗೊಂಡಿತು. ಚಿಕ್ಕ ಗಂಡಸಿಯು ಅಗ್ರಹಾರವಾಗಿ ಪರಿವರ್ತನೆಗೊಂಡು ಬ್ರಾಹ್ಮಣರಿಗೆ ನೀಡಲ್ಪಟ್ಟಿತು.[೧೪]

ಇಮ್ಮಡಿ ನರಸಿಂಹ ಬಲ್ಲಾಳನ ಕಾಲದಲ್ಲಿ ಕಳಿಕಟ್ಟೆ, ಮುದುಡಿ, ಕೆಂಬಾಳುಗಳು ಅಗ್ರಹಾರವಾಗಿ ಪರಿವರ್ತನೆಗೊಂಡವು. ಇವನ ತಂಗಿ ಸೋವಲದೇವಿಯು ಪಿರಿಯ ಪಟ್ಟದ ಸೋಮನಾಥ ಪುರವಾದ ಹಾರನಹಳ್ಳಿಯನ್ನು ಮಲ್ಲಭಿಗೆ ಸಮಾನವಾದ ವಿದ್ಯಾಕೇಂದ್ರವನ್ನಾಗಿ ಮಾಡಿದ ಕೀರ್ತಿಗೆ ಪಾತ್ರಳಾಗಿದ್ದಾಳೆ.

ಹಾರನಹಳ್ಳಿಯಲ್ಲಿಯೂ ವಲ್ಲಭಿಯಂತೆ ಉನ್ನತ ಮಟ್ಟದ ಶಿಕ್ಷಣ ನೀಡುವ ವ್ಯವಸ್ಥೆಯನ್ನು ರಾಜಕುಮಾರಿ ಸೋವಲೆ ಮಾಡಿದ್ದಳೆಂಬುದು ಉತ್ಪ್ರೇಕ್ಷೆಯಲ್ಲ.* ಇದು ವಲ್ಲಭಿಯಂತೆ ಬೌದ್ಧ

---

* ಸೌರಾಷ್ಟ್ರವನ್ನು ಆಳಿದ ಮೈತ್ರಕ ಮನೆತನದ (ಕ್ರಿ.ಶ.೪೫೦ ರಿಂದ ೭೭೫) ಮೂಲದೊರೆ ಭಟಾರ್ಕನೆಂಬುವನ ಮೊಮ್ಮಗಳು ದುದ್ದಾ ಒಂದು ಭೌದ್ಧ ವಿಹಾರವನ್ನು ವಲ್ಲಭಿಯಲ್ಲಿ ಸ್ಥಾಪಿಸಿದ್ದಳು. ಇದು ಪ್ರಸಿದ್ಧ ವಿಶ್ವವಿದ್ಯಾಲಯವಾಗಿದ್ದು ಶಬ್ಧ, ನ್ಯಾಯ, ಅಭಿದಮ್ಮ ಚಿಕಿತ್ಸಾ, ಶಿಲ್ಪ ಮುಂತಾದ ವಿಷಯಗಳನ್ನು ಹೇಳಿಕೊಡಲಾಗುತ್ತಿತ್ತು ಜೊತೆಗೆ ವೇದ ಉಪನಿಷತ್ತು ಸಾಂಖ್ಯಗಳ ಪಾಠವಿತ್ತು. ಅಲ್ಲಿ ಒಂದು ನೂರು ವಿಹಾರಗಳೂ ೬೦೦೦ ಬೌದ್ಧ ಭಿಕ್ಷುಗಳಿದ್ದರೆಂದು ಹ್ಯೂಯೆನ್ ತ್ಸ್ಯಾಂಗ್ ಬರೆದಿದ್ದಾನೆ.- ಕನ್ನಡ ವಿಶ್ವಕೋಶ, ಮೈಸೂರು.

ವಿಹಾರವಾಗದಿದ್ದರೂ ಉನ್ನತ ಶಿಕ್ಷಣ ಕೇಂದ್ರವಾಗಿತ್ತು. ಇಲ್ಲಿನ ವಿದ್ಯಾವಂತರೂ, ಕವಿ, ಗಮಕಿ ಕಲಾವಿದರೂ ವೇದಾರ್ಥನಿಪುಣರೂ ಛಂದಃಶಾಸ್ತ್ರ ನಿಪೂಣರೂ ಲೇಖನ ಕಲೆ, ಅವಧಾನ ಕಲೆ, ಪುರಾಣ ಶ್ರವಣ, ಕಥಾಕಾಲಕ್ಷೇಪ ಇತ್ಯಾದಿಗಳಲ್ಲಿ ಚಕ್ರವರ್ತಿಗಳೆನಿಸಿಕೊಂಡವರನ್ನು ಇಲ್ಲಿನ ಶಾಸನಗಳು ಹೇಳುತ್ತವೆ.

ಇದೇ ರೀತಿ ಉನ್ನತ ಶಿಕ್ಷಣ ಕೇಂದ್ರಗಳಾಗಿದ್ದ ಅರಕೆರೆ, ಅರಸೀಕೆರೆಗಳನ್ನು ಉಲ್ಲೇಖಿಸಲೇಬೇಕು. ಇವೆರಡೂ ಪ್ರಸಿದ್ಧರಾದ, ಮೇಧಾವಿಗಳಾದ ವಿವಿಧ ಶಾಸ್ತ್ರಗಳಲ್ಲದೆ ೬೪ ಕಲೆಗಳಲ್ಲಿ ಪಾರಂಗತರಾದ ಪುರುಷರನ್ನು ಹೊಂದಿದ್ದು ಸರ್ವಜ್ಞ ಪುರಗಳೆನಿಸಿಕೊಂಡಿದ್ದವು. ಪಿರಿಯಗ್ರಹಾರವೆನಿಸಿದ್ದ ಅರಕೆರೆಯಲ್ಲಿ ವೇದಶಾಸ್ತ್ರ ಷಟ್ತರ್ಕಗಳನ್ನು ಓದುವ ಹಲವು ಬೀದಿಗಳಿದ್ದುವಂತೆ ಅಲ್ಲದೆ ಮಂಠೆಯ ಪೊಸ ವೀಖ್ಖಣ ಸಾಲೆ ಇದ್ದಿತಂತೆ. ಓದುವವರು ತರ್ಕಿಸುವವರು, ವಾದದಲ್ಲಿ ಮುಳುಗಿದವರು, ಶಾಸ್ತ್ರಗಳನ್ನು ಕೇಳುತ್ತಿದ್ದವರು, ಮನೋಹ್ಲಾದವಾಗುವಂತೆ ಪುರಾಣವನ್ನು ಹೇಳುತ್ತಿದ್ದವರು, ಸಕಲ ಸ್ಮೃತಿ, ನಾಟಕ, ಕಾವ್ಯದ ಅರ್ಥವನ್ನು ಸಾಧಿಸಿಕೊಳ್ಳುವಲ್ಲಿ ನಿರತರಾದ ಸಾಧಕರು ತುಂಬಿದ್ದು, ಇಲ್ಲಿ ೬೪ ವಿದ್ಯೆಗಳೂ ಪುರುಷ ರೂಪದಿಂದ ಪ್ರತ್ಯಕ್ಷವಾದಂತಿದ್ದ ಅತ್ಯುನ್ನತ ಮಹಿಮೆಯುಳ್ಳ ನೂರಿಪ್ಪತ್ತು ಮಹಾಜನರಿದ್ದರು.[೧೫]

ಇಲ್ಲಿ ಕಂಡುಬರುವ ಚಿತ್ರಣಗಳಿಂದ ಅಗ್ರಹಾರಗಳು ಯಾವ ರೀತಿ ಸವಲತ್ತುಗಳನ್ನು ಪ್ರೋತ್ಸಾಹವನ್ನು ಪಡೆದುಕೊಂಡು ನಿಷ್ಠೆಯಿಂದ ವಿದ್ಯಾಪ್ರಸಾರ ಮಾಡುವಲ್ಲಿ ತೊಡಗಿದ್ದವೆಂಬುದು ಸ್ಪಷ್ಟವಾಗುತ್ತದೆ. ಯಾವೆಲ್ಲ ರೀತಿಯ ವಿದ್ಯೆಯನ್ನು ಕಲಿಸಿಕೊಡಲಾಗುತ್ತಿತ್ತೆಂಬ ಕಲ್ಪನೆ ಬರುತ್ತದೆ. ಈ ಪ್ರದೇಶದ ದೇಸವಣಿಯ ಗಜವೈದ್ಯ ಜೈತುಗಿ, ಮೊಸಳೆ ಗ್ರಾಮದ ನೂತನ ವೈದ್ಯ ಕಲಾ ವಿಖ್ಯಾತನಾದ ಅಭಿನವ ದನ್ವಂತರಿ ದೇವರಾಜ ಪಿಳ್ಳೆ[೧೬]ಯಂತಹವರು ವೈದ್ಯ ವಿದ್ಯೆಯನ್ನು ಖಂಡಿತವಾಗಿಯೂ ಕಲಿಸಿಕೊಡುತ್ತಿದ್ದರೆಂದು ಊಹಿಸಬಹುದು. ದೇವ ಪಿಳ್ಳೆಯಣ್ಣನಿಗೆ ನೀಡಿದ ದೇವಾಲಯ ಸ್ಥಾನಿಕ ಅಧಿಕಾರದ ಜೊತೆಗೆ ಅನೇಕ ಮನೆಗಳನ್ನು ದೇವಾಲಯದ ಪಕ್ಕದಲ್ಲಿ ಒದಗಿಸಿರುವುದನ್ನು ಗಮನಿಸಿದರೆ ಅವುಗಳು ಆತನ ವೈದ್ಯಕೀಯ ಚಿಕಿತ್ಸಾ ಕೇಂದ್ರಗಳಾಗಿ ಅವುಗಳ ಸದ್ಬಳಕೆಗಾಗಿ ದಾನ ನೀಡಿರುವಂತೆನಿಸುತ್ತದೆ. ಅರಕೆರೆಯ ಮಂಠೆಯ ವೀಖ್ಖಣ ಶಾಲೆಯು ಎತ್ತರವಾದ ಸ್ಥಳದಲ್ಲಿ ನಿರ್ಮಿಸಲಾದ ಆಕಾಶ ಕಾಯಗಳ ವೀಕ್ಷಣ ಶಾಲೆಯಾಗಿರುವ ಸಾಧ್ಯತೆಯಿದೆ. (ವೀಖ್ಖಣ ಎಂಬುದು ವೀಕ್ಷಣಾ ಪದದ ಪ್ರಾಕೃತರೂಪ) ಖಗೋಳ ಶಾಸ್ತ್ರ, ಗ್ರಹಗತಿಗಳ ವೀಕ್ಷಣೆಗಳಲ್ಲಿ ಭಾರತೀಯರು ಪ್ರಸಿದ್ಧರೆಂಬುದು ತಿಳಿದ ವಿಚಾರವೇ. ಬಹುಷಃ ಅಂತಹ ಖಗೋಳ ಜ್ಯೋತಿಷ್ಯ ಶಾಸ್ತ್ರಗಳ ತರಬೇತಿಗಾಗಿ ಇಂತಹ ವೀಖ್ಖಣ ಶಾಲೆಗಳು ನಿರ್ಮಾಣಗೊಳ್ಳುತ್ತಿದ್ದಿರಬೇಕು.

### ೭.೧.೨. ಘಟಿಕಾ ಸ್ಥಾನ

ಈ ಎಲ್ಲ ಅಗ್ರಹಾರಗಳ ವಿವರಗಳಲ್ಲಿ ಉನ್ನತ ವಿದ್ಯಾಭ್ಯಾಸದ ವಿವರಗಳಿದ್ದರೂ ಘಟಿಕಾ ಸ್ಥಾನಗಳೆಂಬ ಹೆಸರಿಲ್ಲ. ದೇಸವಣಿಯ ಆಡಳಿತಕ್ಕೆ ಸೇರಿದ್ದ ಕುರಾದ ಹಳ್ಳಿಯ ಶಾಸನವೊಂದು ವಿಮಲಶಕ್ತಿ

ವ್ರತೀಶನ 'ಘುಳಿಗೆ ಪೀಳಿಗೆಗೆ' ನಿಂದರ್ ಎಂದು ಅವರ ಶಿಷ್ಯ ಸಂತತಿಯನ್ನು ಹೇಳಿದೆ. ಇದು 'ಘಟಿಕಾ ಪೀಳಿಗೆ' ಎಂದು ಅರ್ಥೈಸುವುದಾದರೆ. ಈ ವಿಮಲಶಕ್ತಿ ವ್ರತೀಶ್ವರನು ಅಲ್ಲಿದ್ದಿರಬಹುದಾದ ಘಟಿಕಾ ಸ್ಥಾನದ ಮುಖ್ಯಗುರುವಾಗಿರುವ ಸಾಧ್ಯತೆಯಿದೆ. 'ದಂಡಿತಂ ಪಾಪಗ್ರುಗ್ರರುಕುಳ ಮಂಡನ ಮಂಡಿತ ಶರೀರರ್ ಅಜೆವಿಂ ತಿಳಿವಿಂ ಪಾಂಣ್ಡುರತರ ಯಶವೆನಿಸಿದ" ಈ ವಿಮಲಶಕ್ತಿಯ ಮಗ ರುದ್ರಶಕ್ತಿ ಶಿಷ್ಯನಾದ ಧರ್ಮರಾಶಿ ಈ ಪ್ರದೇಶದಲ್ಲಿ ಅತ್ಯಂತ ಪ್ರಸಿದ್ಧ ವಿದ್ವಾಂಸರು, ವಾಸ್ತು ಶಿಲ್ಪಿಗಳೂ ಆಗಿದ್ದರು. ಧರ್ಮರಾಶಿ ಸ್ವತಃ ಕೆರೆ ದೇವಾಲಯಗಳನ್ನು ಎತ್ತಿಸಿ ಕೀರ್ತಿವಂತನಾಗಿದ್ದ. ರುದ್ರಶಕ್ತಿ ದೇವಾಲಯದ ಬಳಿಗೆಲಸ ಮಾಡಿ ಪ್ರಸಿದ್ಧನಾಗಿದ್ದ.[೧೭]

ಅನೆಕೆರೆಯ ಶಾಸನವೊಂದರಲ್ಲಿ[೧೮] ಸಾಮವೇದದಲ್ಲಿ ಉತ್ತಂಕನು ಹೇಳಿರುವ ಪ್ರಕಾರ ಘಟಿಕಾ ಸ್ಥಾನವೊಂದನ್ನು ನಿರ್ಮಿಸಲಾಯಿತೆಂದು ಹೇಳಿದೆ. ಶಾಸನ ಹಾಳಾಗಿದ್ದು ಇತರೆ ವಿಚಾರಗಳೇನೂ ತಿಳಿಯುವುದಿಲ್ಲ.

## ೭.೧.೩. ಬ್ರಹ್ಮಪುರಿ

ಬ್ರಹ್ಮಪುರಿ ಎಂಬುದು ನಗರ ಪಟ್ಟಣಗಳಲ್ಲಿ ಬ್ರಾಹ್ಮಣರ ವಾಸಕ್ಕಾಗಿ ಮೀಸಲಿರಿಸಿದ್ದ ಕೇರಿಗಳಾಗಿದ್ದವು. ವಿದ್ಯಾದಾನ ನಿಮಿತ್ತವಾಗಿಯೇ ಅನೇಕ ವೃತ್ತಿಗಳನ್ನಾಗಿ ವಿಂಗಡಿಸಿ ಭೂಮಿಗಳನ್ನು ಬ್ರಹ್ಮಪುರಿಯ ಬ್ರಾಹ್ಮಣರಿಗೆ ನೀಡಿದ ವಿಚಾರಗಳನ್ನು ಶಾಸನಗಳು ಹೇಳಿವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಇಪ್ಪತ್ತಕ್ಕೂ ಹೆಚ್ಚು ಅಗ್ರಹಾರಗಳಿದ್ದರೂ ಕೆಲವು ಪಟ್ಟಣಗ್ರಾಮಗಳಲ್ಲಿ ಬ್ರಹ್ಮಾಪುರಿಗಳನ್ನು ಸ್ಥಾಪಿಸಲಾಗಿತ್ತು.

ಮನಕತ್ತೂರಿನ ಒಂದು ಶಾಸನದಲ್ಲಿ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಗದ್ದೆ ಬೆದ್ದಲನ್ನು ದಾನ ನೀಡಿದುದು ದಾಖಲಾಗಿದೆ. ವಿಷ್ಣುವರ್ಧನನ ಕಾಲಕ್ಕೆ ಪೂರ್ವದಲ್ಲೇ ಮಹಾಪ್ರಭು ಚಾಮಗಾವುಣ್ಣನೆಂಬುವನಿಂದ ಈ ಗ್ರಾಮ ನಿರ್ಮಾಣವಾಗಿದ್ದು, ಕ್ರಿ.ಶ.೧೧೦೧ರ ಹೊತ್ತಿಗೆ ಇಲ್ಲಿ ಅನೇಕ ದೇವಾಲಯಗಳೊಂದಿಗೆ ಬ್ರಹ್ಮಪುರಿಯೂ ಸ್ಥಾಪಿತವಾಗಿ ದೇವದಾನದೊಂದಿಗೆ ಈ ಬ್ರಹ್ಮದೇಯವೂ ನಡೆದಿದೆ.[೧೯]

ಜಯಗೊಂಡ ಪುರವೆಂದು ಪ್ರಖ್ಯಾತವಾಗಿದ್ದ ಬೆಂಡೆಕೆರೆಯಲ್ಲಿ ಆರು ಬ್ರಹ್ಮಪುರಿಗಳಿಗೆ ಒಟ್ಟು ೩೬೦ ಕಂಬ ತೋಟ ಗದ್ದೆ ಹಾಗೂ ೧೧೫೦ ಕಂಬ ಬೆದ್ದಲನ್ನು ಮಹಾವಡ್ಡವ್ಯವಹಾರಿ ದಾಮೋದರ ಸೆಟ್ಟಿ ಬಿಟ್ಟಿದ್ದಾನೆ. ಈ ಬ್ರಹ್ಮಪುರಿಗಳನ್ನು ದೇವರ ಬ್ರಹ್ಮಪುರಿ ಎಂದು ಕರೆದಿದೆ. ದಾಮೋದರೇಶ್ವರ ಬ್ರಹ್ಮಪುರಿಗಳು ಇವಾಗಿವೆ. ಇದು ಆರು ವೃತ್ತಿಗಳನ್ನು ಹೊಂದಿದ ಆರು ವಿದ್ವಾಂಸರ ಬ್ರಹ್ಮಪುರಿ ಇರಬಹುದು. ಬೆಂಡೆಕೆರೆಯನ್ನು "ಶ್ರೀಮದನಾದಿ ಅಗ್ರಹಾರ ಜಯಗೊಂಡ ಪುರ"ವೆಂದು ಕರೆದು ಅಲ್ಲಿ

೫೨ ಮಹಾಜನರಿದ್ದುದನ್ನು ಅದೇ ಶಾಸನ ದಾಖಲಿಸಿದೆ. ಆದ್ದರಿಂದ ಹೊಸದೇವಾಲಯ ನಿರ್ಮಿಸಿದ ಸಂದರ್ಭದಲ್ಲಿ ಇದು ಅಗ್ರಹಾರವಾಗಿದ್ದರೂ ಮತ್ತೆ ಆರು ದೇವರ ಬ್ರಹ್ಮಪುರಿಗಳನ್ನು ನಿರ್ಮಿಸಲಾಗಿದೆ. ಇದರಿಂದ ಅಗ್ರಹಾರದೊಳಗೂ ಬ್ರಹ್ಮಪುರಿಗಳು ಪ್ರತ್ಯೇಕವಾಗಿರಲು ಸಾಧ್ಯವಿತ್ತು ಎಂದು ತೀರ್ಮಾನಿಸಬೇಕಾಗುತ್ತದೆ.[೨೦]

ಕೋಳಿಗುಂದದ ಶಾಸನವೊಂದು[೨೧] ಏಳು ಜನ ಭಟ್ಟೋಪಾಧ್ಯಾರುಗಳ ಏಳು ವೃತ್ತಿಗಳನ್ನು ಹೊಂದಿದ ಬ್ರಹ್ಮಪುರಿಯೊಂದಿದ್ದುದನ್ನು ತಿಳಿಸುತ್ತದೆ. ಕೋಳಿಗುಂದ ಅಗ್ರಹಾರವಲ್ಲ ಮಾವಟಿಗ ವಂಶದವರ ಆಳ್ವಿಕೆಗೆ ಒಳಪಟ್ಟ ಗ್ರಾಮ. ಈ ಶಾಸನ ಏಳು ವೃತ್ತಿಯ ಮಹಾಜನರನ್ನು ಹೆಸರಿಸಿದ್ದು ಅವರೆಲ್ಲರೂ ಶ್ರೇಷ್ಠ ಪಂಡಿತರೆಂದು ತಿಳಿದುಬರುತ್ತದೆ. ತಿಪ್ಪಣ್ಣನಾಯಕರು, ಲಕ್ಷ್ಮೀಧರ ಪೆದ್ದಿಗಳು, ಅತ್ತುಕೂರ ಬಸವಣ ಕ್ರಮಿತರು, ರುದ್ರಪ್ಪಯ್ಯ ವೇದಾರ್ಥದಯ್ಯನವರ ಅಳಿಯ ಮಾಧವದೇವ ತಿಪ್ಪಣನಾಯಕರ ಕೇಶವ ದೇವ, ಚತುರ್ಭಾಷೆಯ ಚಿಕ್ಕಭಾಸ್ಕರ ಪೆದ್ದಿ ಇವರುಗಳ ಜೀವಿತಕ್ಕೆ ಅನುಕೂಲವನ್ನು ಮಾಡಿಕೊಟ್ಟು ಕೆರೆಯನ್ನು ವಿಸ್ತರಿಸಿ ಸ್ಥಳೀಯ ಅಧಿಕಾರಿಗಳು ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿದ್ದಾರೆ. ಈ ಭಟ್ಟೋಪಾಧ್ಯಾಯರು ವೇದಾರ್ಥ, ವೇದ ಕ್ರಮಪಾಠ, ಚತುರ್ಭಾಷೆಯನ್ನು (ಸಂಸ್ಕೃತ ಕನ್ನಡ ತೆಲುಗು, ತಮಿಳು) ಬೋಧಿಸುವಂತಹವರಾಗಿದ್ದರು.

### ೭.೧.೪. ದೇವಾಲಯ ಮಠಗಳು

ಪ್ರಾಚೀನ ಭಾರತದ ಗುರುಕುಲ ಪದ್ಧತಿಯಲ್ಲಿ ನಡೆಯುತ್ತಿದ್ದ ಶಿಕ್ಷಣವನ್ನು ಮುಂದೆ ಸಾಂಸ್ಥಿಕವಾದ ವಿದ್ಯಾಕೇಂದ್ರಗಳು ವಹಿಸಿಕೊಂಡವು. ಬೌದ್ಧವಿಹಾರಗಳು, ಜೈನ ಬಸದಿಗಳಲ್ಲಿ ಮಹಾವಿದ್ವಾಂಸರಾದ ಮುನಿಗಳು ನೆಲಸತೊಡಗಿದಂತೆ ಅಲ್ಲಿ ಶಿಷ್ಯ ಪರಂಪರೆ ಬೆಳೆಯಲು ಅವಕಾಶವಾಯಿತು. ಅವರು ತಮ್ಮ ನಿತ್ಯ ಕರ್ಮಗಳೊಂದಿಗೆ ವಿದ್ಯಾಪ್ರಸರಣವನ್ನು ಮಾಡತೊಡಗಿದರು. ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ಯಾವುದೇ ಬೌದ್ಧ ವಿಹಾರದ ಉಲ್ಲೇಖಗಳಾಗಲಿ ಸ್ಮಾರಕಗಳಾಗಲೀ ಕಂಡುಬಂದಿಲ್ಲ. ಇಲ್ಲಿ ಅನೇಕ ಜೈನಬಸದಿಗಳು ನಿರ್ಮಾಣಗೊಂಡಿದ್ದು, ಮಹಾ ಮೇಧಾವಿಗಳಾದ ಜೈನ ಮುನಿಗಳ ವಿದ್ವತ್ತನ್ನು ಅವರ ಶಿಷ್ಯಪರಂಪರೆಯನ್ನು ಉಲ್ಲೇಖಿಸುವುದರಿಂದ ಬಸದಿಗಳಲ್ಲಿ ವಿದ್ಯಾಭ್ಯಾಸ ಚಟುವಟಿಕೆಗಳು ನಡೆಯುತ್ತಿದ್ದವೆಂದು ಹೇಳಬಹುದು. ಬಹುಷಃ ಇದು ಯತಿಗಳಿಗೆ ಮಾತ್ರ ಸೀಮಿತವಾಗಿದ್ದಿತು. ಕೆಲವು ಕಂತಿಯರ ಶಿಷ್ಯಿತಿಯರ ಉಲ್ಲೇಖ ಕಂಡುಬಂದಿದೆಯಾದರೂ ಅವರಿಗೆ ಎಂತಹ ಶಿಕ್ಷಣ ದೊರಕಿತ್ತೆಂಬ ವಿವರ ದೊರೆಯುವುದಿಲ್ಲ. ಯತಿಗಳಿಗೆ ಧಾರ್ಮಿಕ ಸಿದ್ಧಾಂತಗಳು, ವ್ಯಾಕರಣ ತರ್ಕ ಮೀಮಾಂಸ ತ್ರೈವಿದ್ಯೆಗಳು ಇತ್ಯಾದಿಗಳನ್ನು ಬೋಧಿಸಲಾಗುತ್ತಿತ್ತು.[೨೨]

ಅರಸೀಕೆರೆ ಪರಿಸರವು ಪ್ರಮುಖ ಶೈವ ಧಾರ್ಮಿಕ ಪರಿಸರವಾಗಿದ್ದು ಅಸಂಖ್ಯ ಶೈವ ದೇವಾಲಯಗಳಲ್ಲಿದ್ದ ಶೈವ ಸ್ಥಾನಿಕ ತಪೋಧನರು, ಮಹಾ ವಿದ್ವಾಂಸರಾಗಿರುತ್ತಿದ್ದರೆಂಬುದನ್ನು ಹಿಂದೆ

ಗಮನಿಸಲಾಗಿದೆ. ಇಂಥ ದೇವಾಲಯಗಳಿಗೆ ಹೊಂದಿಕೊಂಡಂತೆ ಮಠಗಳಿದ್ದು ಅಲ್ಲಿ ನೈಷ್ಠಿಕರಾದ ತಪೋಧನರು ನೆಲೆಸಿರುತ್ತಿದ್ದರು. ದೇವಾಲಯಕ್ಕೆ ದಾನ ನೀಡುವ ಸಂದರ್ಭಗಳಲ್ಲಿ ಈ ಮಠಗಳ ಮಠಪತಿ ತಪೋಧನರ ವಿದ್ಯಾರ್ಥಿಗಳ ಅತಿಥಿಗಳ ಅಹಾರಕ್ಕಾಗಿಯೂ ದಾನ ನೀಡಿರುವ ಉಲ್ಲೇಖಗಳು ಶಾಸನದಲ್ಲಿ ದಾಖಲಾಗಿದೆ. ಕಣೆಕಟ್ಟೆಯ ಸಿಂಘರಸ ಕಟ್ಟಿಸಿದ ಸಿಂಘೇಶ್ವರ ದೇವಾಲಯಕ್ಕೆ ಬಿಟ್ಟ ದಾನದೊಂದಿಗೆ "ತಪೋಧನರ ಆಹಾರದಾನಕ್ಕಂ ವಿದ್ಯಾದಾನಕ್ಕಂ..." ಕ್ರಿಯಾಶಕ್ತಿ ಪಂಡಿತರಿಗೆ ದೇವಾಲಯವನ್ನು ಮಠವನ್ನು ವಹಿಸಿಕೊಟ್ಟು ಭೂದಾನ ಮಾಡಲಾಗಿದೆ.[೨೩]

ಮಹಾ ಸಾಮನ್ತ ನಾಳ್ಪ್ರಭು ಎರಕಗಾವುಂಡನು ಹಾರುವನಹಳ್ಳಿಯನ್ನು ಆಳುತ್ತಿದ್ದು ಅಲ್ಲಿ ಎರಕೇಶ್ವರ ದೇವಾಲಯ ನಿರ್ಮಿಸಿ ದೇವ ದಾನದೊಂದಿಗೆ 'ಮಠದ ತಪೋಧನರಾಹಾರ ದಾನಕಂ ಅತಿಥಿ ಅಭ್ಯಾಗತರು ವಿದ್ಯಾರ್ತ್ಥಿಗಳ್ಗಂ" ಎಂದು ಸ್ಪಷ್ಟಪಡಿಸಿ ದಾನವನ್ನು ನೀಡಿದ್ದಾನೆ. ವಿದ್ಯಾರ್ಥಿಗಳ ಸಂಖ್ಯೆ ತಿಳಿಯುವುದಿಲ್ಲ.[೨೪] ವಿದ್ಯಾರ್ಥಿಗಳೆಂಬ ಉಲ್ಲೇಖವಿಲ್ಲದ ಎಷ್ಟೋ ದೇವಾಲಯದ ಶಾಸನದಲ್ಲಿನ ಮಠಗಳಲ್ಲಿ ಗುರು ಶಿಷ್ಯರು ಒಟ್ಟಾಗಿ ನೆಲೆಸಿದ್ದು ಮಹಾ ಪಂಡಿತರಾಗಿದ್ದರೆಂಬುದು ತಿಳಿಯುವುದರಿಂದ ಅಲ್ಲೆಲ್ಲ ವಿದ್ಯಾಭ್ಯಾಸ ಅದ್ಯಾಪನ ನಡೆಯುತ್ತೆನ್ನಬಹುದು. ಮತ್ತೆ ಇಲ್ಲಿನ ಶಿಕ್ಷಣವೂ ಸಾಂಪ್ರದಾಯಿಕವಾಗಿದ್ದು ಧಾರ್ಮಿಕವಾಗಿರುತ್ತಿತ್ತೆಂದು ಊಹಿಸಬಹುದು. ಈ ಮಠಗಳು ಬ್ರಾಹ್ಮಣೇತರರಿಗೂ ವಿದ್ಯೆಗೆ ಅವಕಾಶ ಕಲ್ಪಿಸಿಕೊಟ್ಟಿದ್ದಂತೆ ತೋರುತ್ತದೆ. ಇದೇ ರೀತಿ ಸ್ಮಾರ್ಥ, ಮಾಧ್ವ, ಶ್ರೀವೈಷ್ಣವ ಮಠಗಳೂ ಇದ್ದು ಅಲ್ಲಿಯೂ ವಿದ್ಯಾಭ್ಯಾಸಕ್ಕೆ ಅವಕಾಶವಾಗಿದ್ದಿತು. ಅದನ್ನು ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ೭.೧.೫. ಕನ್ನಡ ಶಾಲೆ ಮತ್ತು ಕರ್ನಾಟ ಬಾಲ ಶಿಕ್ಷಣ

ಆಳರಸರಿಂದ, ಅಧಿಕಾರಿಗಳಿಂದ ಶ್ರೀಮಂತ ವ್ಯಾಪಾರಿಗಳಿಂದ ಹೇರಳವಾಗಿ ದಾನದತ್ತಿಗಳನ್ನು ಜೀವಿತಾಧಾರಗಳನ್ನು ಪಡೆದು ನಿಶ್ಚಿಂತೆಯಿಂದ ಈ ಎಲ್ಲಾ ಕೇಂದ್ರಗಳೂ ಉತ್ತಮವಾದ ಶಿಕ್ಷಣ ಕೇಂದ್ರಗಳಾಗಿ ವಿದ್ಯಾ ಪ್ರಸಾರ ಕಾರ್ಯ ಸುಗಮವಾಗಿ ನೆರವೇರುತ್ತಿತ್ತು. ಮೇಲೆ ಗಮನಿಸಿದ ಉದಾಹರಣೆ ಉಲ್ಲೇಖಗಳೆಲ್ಲಾ ಉನ್ನತ ವಿದ್ಯಾಭ್ಯಾಸ ಧಾರ್ಮಿಕ ವಿದ್ಯಾಭ್ಯಾಸ ವಿಷಯವನ್ನು ಕುರಿತ ಮಾಹಿತಿಗಳನ್ನಷ್ಟೇ ನೀಡಿವೆ. ಆದರೂ ಪ್ರಾಥಮಿಕ ವಿದ್ಯಾಭ್ಯಾಸದ ಹಂತವೊಂದು ಇದ್ದೇ ಇರುತ್ತದೆ. ಅದಕ್ಕೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳು ಇಲ್ಲಿ ತಿಳಿದು ಬರುವುದಿಲ್ಲ. ಹೊಯ್ಸಳರು ಕನ್ನಡ ಭಾಷೆಯ ಅಭ್ಯಾಸಕ್ಕೆ ವಿಶೇಷ ಗಮನ ಹರಿಸಿದ್ದರೆಂಬುದಕ್ಕೆ ಮುರುಂಡಿಯ ಕನ್ನಡ ಶಾಲೆಯು ಅತ್ಯುತ್ತಮ ಉದಾಹರಣೆಯಾಗಿದೆ. ಮುರುಂಡಿಯ ಶಾಲೆಯು ಬಾಲ ಶಿಕ್ಷಣಕ್ಕಾಗಿ ಸ್ಥಾಪಿತವಾಗಿತ್ತು. ಇದನ್ನು ತಿಳಿಸುವ ಶಿಲಾಶಾಸನವೊಂದಿದ್ದು, ಇತ್ತೀಚೆಗೆ ತಾಮ್ರಶಾಸನವೊಂದು ಪತ್ತೆಯಾಗಿದೆ.[೨೫] ಹೊಯ್ಸಳ ವೀರಬಲ್ಲಾಳನ ಮಹಾಪ್ರಧಾನ ಸರ್ವಾಧಿಕಾರಿ ಮಹಾಪಸಾಯಿತ ಶ್ರೀಕರಣದ ಹೆಗ್ಗಡೆ ಎರೆಯಣ್ಣನು ಹಲವು ಬವರಗಳನ್ನು ಏಕಾಂಗದಿಂದ ಗೆದ್ದು

ಆಳ್ದನನ್ನು ಮೆಚ್ಚಿಸಿ ಅವನಿಂದ ಮುರುಹಿಂಡಿಯನ್ನು ಸರ್ವಬಾಧಾ ಪರಿಹಾರವಾಗಿ ಪಡೆದು ಸೋವಿಯಣ್ಣನೆಂಬ ಅಧ್ಯಾಯಪಕನನ್ನು ಜೀವಿತಗದ್ಯಾಣ ೧೨ಕ್ಕೆ ನಿಯಮಿಸಿ ಇಪತ್ತು ವಿದ್ಯಾರ್ಥಿಮಾಣಿಯರಿಗೆ ಕರ್ಣಾಟ ಬಾಲ ಶಿಕ್ಷೆಯನ್ನು ಮಾಡುವಂತೆ ಏರ್ಪಾಟು ಮಾಡುತ್ತಾನೆ ಮತ್ತು ಅವರಿಗೆ ಅಡುವ  ಬಾಣಸುಗಿತ್ತಿಯೊಬ್ಬಳನ್ನು ಜೀವಿತಗದ್ಯಾಣ ೩ಕ್ಕೆ ನಿಯಮಿಸಿ ಮುವತ್ತು ಕೈ ಅಳತೆಯ ಶಾಲೆಯನ್ನು, ನಾಕಿರಾಜಹೆಗ್ಗಡೆ ಕಟ್ಟಿಸಿದ ದೇವಾಲಯದಿಂದ ದಕ್ಷಿಣಕ್ಕೆ ಊರಭಾಗದಲ್ಲಿ ನಿರ್ಮಿಸಿ ಮುರುಂಡಿಯನ್ನು ಸರ್ವನಮಸ್ಯ ದಾರಾಪೂರ್ವಕ ಮಾಡಿಕೊಟ್ಟಿದ್ದಾನೆ.[೨೬]

ಈ ಶಾಲಾ ನಿವೇಶನದಲ್ಲಿ ನನಗೆ ದೊರೆತ ತಾಮ್ರ ಶಾಸನವು ಈ ಕನ್ನಡ ಶಾಲೆಯನ್ನು ಕುರಿತು ಹೊಸ ಬೆಳಕನ್ನು ಚೆಲ್ಲುತ್ತದೆ. ೧೧೭೪ರಲ್ಲಿ ೧೨ ಗದ್ಯಾಣಗಳಿಗೆ ಕನ್ನಡ ಬಾಲಶಿಕ್ಷೆಯ ಉಪಾಧ್ಯಾಯನಾಗಿ ನೇಮಕಗೊಂಡ ಈ ಸಾವಿಯಣ್ಣ ೧೧೯೩-೯೪ರ ವೇಳೆಗೆ ಬಲ್ಲಾಳನಿಂದ (ಬಾಗಳಿಯಿಂದ ಆಳ್ವಿಕೆ ಮಾಡುತ್ತಿದ್ದಾಗ) ಮುರುಂಡಿಯನ್ನು ಧಾರೆಯಾಗಿ ಪಡೆದಿದ್ದಾನೆ. ಅಲ್ಲದೆ ಅಷ್ಟು ಹೊತ್ತಿಗಾಗಲೇ ಆ ಗ್ರಾಮವು ನೀರ್ಗುಂದ ನಾಡಿನಲ್ಲಿ 'ವಿದ್ಯಾರ್ಥಿಗಳ ಮುರುಂಡಿ' ಎಂದು ಪ್ರಸಿದ್ಧವಾಗಿದ್ದು, ಇಪತ್ತು ಮಾಣಿಯರಿಗೆ ಕನ್ನಡ ಬಾಲ ಬೋಧನೆ ಸತತವಾಗಿ ನಡೆದುಕೊಂಡು ಬರುತ್ತಿತ್ತು.

ಮುಂದೆ ಬಲ್ಲಾಳನ ಮಗ ಇಮ್ಮಡಿ ನರಸಿಂಹನು ಪಟ್ಟಕ್ಕೆ ಬಂದ ಮೇಲೆ ೧೨೨೨ರ ಹೊತ್ತಿಗೆ ೪೮ ವರ್ಷಗಳ ಸುದೀರ್ಘ ಸೇವೆ ಸಲ್ಲಿಸಿದ ನಂತರ ವಯೋವೃದ್ಧನಾಗಿರಬಹುದಾದ ಸಾವಿಯಣ್ಣನು ತನ್ನ ಮಗನಾದ ಸೋವಣ್ಣನಿಗೆ ಮುರುಂಡಿಯನ್ನು ಅಗ್ರಹಾರವಾಗಿ ಕಾರುಣ್ಯ ಮಾಡಬೇಕೆಂದು ಅರಸನಲ್ಲಿ ಬಿನ್ನಹ ಮಾಡಿ ಪಡೆದಿದ್ದಾನೆ. ಇಮ್ಮಡಿ ನರಸಿಂಹ ಚಕ್ರವರ್ತಿಯು ಕಾರುಣ್ಯ ಚಿತ್ತನಾಗಿ ಸೋವಣ್ಣನಿಗೆ ಅತಿ ಪ್ರೀತಿಯಿಂದ ಆ ಊರನ್ನು ಇಪ್ಪತ್ತೈದು ವೃತ್ತಿಯಾಗಿ ಮಾಡಿ ಆ ಊರ ಮೊದಲು ಗದ್ಯಾಣ ೪೩ಕ್ಕೆ ಬದಲಾಗಿ ೮೬ ಗದ್ಯಾಣ ಹೊನ್ನನ್ನು ಕಳೆದುಕೊಂಡು ಇಪ್ಪತ್ತು ಮಾನಿಸ ವಿದ್ಯಾರ್ಥಿ ಮಾಣಿಯರಿಗೆ ಎರಡೂ ಹೊತ್ತು ಉಣಲಿಕ್ಕಿ ಕನ್ನಡವನೋದಿಸುವಂತಾಗಿ, ಆ ವಿದ್ಯಾರ್ಥಿ ಖಂಡಿಕ ಆಚನ್ದ್ರಾರ್ಕ್ಕ ಸಲ್ಲುವಂತೆ ಧಾರೆ ಎರೆದು ಕೊಟ್ಟಿದ್ದಾನೆ. ಶಾಲೆಯ ಐವತ್ತು ವರ್ಷಗಳ ಇತಿಹಾಸದಲ್ಲಿ ಅದರ ಆಧಾರಕ್ಕೆ ಸಹಾಯ ಧನವನ್ನು ದುಪ್ಪಟ್ಟು ಮಾಡಿದರೂ ವಿದ್ಯಾರ್ಥಿಗಳ ಸಂಖ್ಯೆಯನ್ನು ಮಾತ್ರ ಇಪ್ಪತ್ತಕ್ಕೆ ಮಿತಿಗೊಳಿಸಿರುವುದು ಗಮನಾರ್ಹ ವಿಷಯ. ೪೩ ಗದ್ಯಾಣಗಳು ಸಾಲದೆ ಬಹುಷಃ ವಿದ್ಯಾರ್ಥಿಗಳಿಗೆ ಒಂದು ಹೊತ್ತು ಊಟ ನೀಡಲಾಗುತ್ತಿದ್ದಿರಬೇಕು. ಅದಕ್ಕೆಂದೇ ಧನಸಹಾಯವನ್ನು ಹೆಚ್ಚಿಸಿ 'ಎರಡೂ ಹೊತ್ತು ಉಣಲಿಕ್ಕಿ ಕನ್ನಡವನ್ನೋದಿಸ'ಬೇಕೆಂದು ನಿಯಮಿಸಲಾಗಿದೆ. ೧:೨೦ರ ಅನುಪಾತದಲ್ಲಿ ಒಬ್ಬ ಗುರು ೨೦ ವಿದ್ಯಾರ್ಥಿಗಳಿಗೆ ಚೆನ್ನಾಗಿ ಕಲಿಸಬಲ್ಲನೆಂಬ ಅರಿವು ಅವರಿಗಿತ್ತು. ಈ ಗ್ರಾಮವು ಅಗ್ರಹಾರವಾಗಿ ಪರಿವರ್ತನೆಗೊಂಡರೂ ಶಾಲೆಯ ಆದಾಯ ಹೆಚ್ಚಿಸಿದರೂ ಆ ಶಾಲೆಯಲ್ಲಿ ಇತರ ಭಾಷೆ, ಇತರ ವಿಷಯಗಳನ್ನು ಕಲಿಸಲು ಪ್ರಾರಂಭಿಸದೆ ಕನ್ನಡ ಬಾಲಶಿಕ್ಷೆಗೇ ಮೀಸಲು ಮಾಡಿದ್ದುದು ಮುಖ್ಯ ವಿಚಾರ.

ಇಬ್ಬರು ಹೊಯ್ಸಳ ಚಕ್ರವರ್ತಿಗಳ ಪ್ರೀತಿಗೆ ಪಾತ್ರನಾಗಿ ಶಾಲೆಯು ಮುಂದುವರೆಯಲು ಪ್ರೋತ್ಸಾಹವನ್ನು ಪಡೆದ ಈ ಕನ್ನಡ ಉಪಾಧ್ಯಾಯ ಜಕ್ಕಿಲೆ ಎಂಬ ಅಗ್ರಹಾರದವನೆಂಬುದು ಈ ಶಾಸನದಿಂದ ಸ್ಪಷ್ಟವಾಗುತ್ತದೆ. ಮತ್ತು ಈತ ೪೮ ವರ್ಷಗಳ ಕಾಲ ಸುದೀರ್ಘವಾಗಿ ಸೇವೆ ಸಲ್ಲಿಸಿದ ಕನ್ನಡ ಬಾಲ ಶಿಕ್ಷಾ ಅಧ್ಯಾಪಕರಲ್ಲಿ ಮೊದಲಿಗನಾಗಿ ಕರ್ನಾಟಕದ ಕನ್ನಡ ಭಾಷಾ ಬೋಧನೆಯ ಚರಿತ್ರೆಯಲ್ಲಿ ದಾಖಲಾಗಬೇಕಾದವನು. ಅನೇಕ ಅಗ್ರಹಾರಗಳು ತುಂಬಿದ್ದ ನೀರ್ಗುಂದ ನಾಡಿನಲ್ಲಿ ಮುರುಂಡಿಯ ಕನ್ನಡಶಾಲೆಗೆ ಪ್ರಸಿದ್ಧಿಯನ್ನು ತಂದುಕೊಟ್ಟ ಕೀರ್ತಿಯು ಇವನಿಗೆ ಸೇರುತ್ತದೆ. ತನ್ನ ನಂತರದಲ್ಲಿ ಆ ಶಾಲೆಯನ್ನು ಮಗ ಸೋವಣ್ಣನಿಗೆ ವಹಿಸಿಕೊಟ್ಟಿದ್ದಾನೆ. ಹೊಯ್ಸಳರ ಪತನದವರೆಗೂ ಈ ಶಾಲೆ ಅವಿಚ್ಛಿನ್ನವಾಗಿ ನಡೆದಿದೆ ಎನ್ನಬಹುದು. ತಾಮ್ರ ಶಾಸನ ದೊರೆತ ನಿವೇಶನದಲ್ಲೇ ಇದ್ದ ಹಳೆಯ ಶಾಲೆಯಲ್ಲಿ ಕನ್ನಡ ಶಿಕ್ಷಣವು ೧೯೭೪-೭೫ರವರೆಗೆ ನಡೆದುಕೊಂಡು ಬಂದಿತ್ತೆಂಬುದನ್ನು ಗ್ರಾಮದವರು ಹೇಳುತ್ತಾರೆ. ವಿಜಯನಗರದ ಅರಸರ ಕಾಲದಲ್ಲಿ ಶಾಲೆಗೆ ಸಂಬಂಧಿಸಿದ ಯಾವ ದಾಖಲೆಯೂ ದೊರೆತಿಲ್ಲ. ಒಡೆಯರ ಕಾಲದಲ್ಲಿ ನಂಜನಗೂಡಿನಿಂದ ವಲಸೆ ಬಂದ ಭೀಮನಾಯಕರು ಅವರ ವಂಶದ ವೆಂಕಟ ವರದಪ್ಪ ಗೋವಿಂದಯ್ಯ, ರಾಮಪ್ಪ ಮುಂತಾದ ವ್ಯಕ್ತಿಗಳು ಈ ಊರಿನ ಒಡೆಯರಾಗಿದ್ದು ವಿದ್ಯೆಗೆ ಪ್ರೋತ್ಸಾಹ ನೀಡಿದ್ದರೆಂದು ಮೌಖಿಕ ಪರಂಪರೆಯಲ್ಲಿ ಉಳಿದುಬಂದಿರುವ ಘಟನೆಗಳನ್ನು ಸ್ಥಳೀಯರು ಹೇಳುತ್ತಾರೆ.

ಒಟ್ಟಿನಲ್ಲಿ ಕ್ರಿ.ಶ.೧೧೭೪ ರಿಂದ ೧೯೭೪-೭೫ರವರೆಗೆ ಅದೇ ನಿವೇಶನದಲ್ಲಿ (ಮಧ್ಯೆ ಜೀರ್ಣೋದ್ಧಾರಗೊಂಡಿರಬಹುದು) ಕನ್ನಡ ವಿದ್ಯಾಭ್ಯಾಸ ನಡೆದುಕೊಂಡು ಬಂದಿದೆ. ಸತತವಾಗಿ ನಡೆದಿದೆ ಎಂದು ಹೇಳಲು ಸಧ್ಯಕ್ಕಂತೂ ಆಧಾರ ಸಾಲದು. ಒಟ್ಟಿನಲ್ಲಿ ಬಾಲಶಿಕ್ಷಣ ಮಾತೃಭಾಷೆಯಲ್ಲಿ ನಡೆಯುತ್ತಿತ್ತು. ಬಿಸಿಯೂಟ, ವಸ್ತ್ರದಾನ ಯೋಜನೆಯೂ ಇತ್ತು!

## ೭.೨. ಶಾಸನ ಸಾಹಿತ್ಯ-ಆಶಯ ಆಕೃತಿಗಳ ಸಂಬಂಧ

ಶಾಸನದ ಉದ್ದೇಶ ಸಾಹಿತ್ಯ ನಿರ್ಮಿತಿಯಲ್ಲ. ಆದರೂ ಕವಿಯ ಪ್ರತಿಭೆಯಿಂದ ನಿರೂಪಣೆ, ಭಾಷೆಯ ಹದ, ಅಲಂಕಾರ, ಕಲ್ಪಕತೆ ಇತ್ಯಾದಿಗಳಿಂದ ಕೂಡಿದ ಶಾಸನ ಪದ್ಯಗಳು ರಸಾನುಭವವನ್ನು ನೀಡುತ್ತವೆ. ಕನ್ನಡ ಸಾಹಿತ್ಯಕ್ಕಿರುವಂತೆಯೇ ಕನ್ನಡ ಶಾಸನ ಸಾಹಿತ್ಯಕ್ಕೂ ಒಂದು ಸಾಹಿತ್ಯಚರಿತ್ರೆಯಿದೆ ಎಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ.

ಪ್ರಸ್ತುತ ಅಧ್ಯಯನ ಪ್ರದೇಶದ ಶಾಸನಗಳು ೮ನೇ ಶತಮಾನದಿಂದ ೧೯ನೇ ಶತಮಾನದವರೆಗೆ ಹರಡಿಕೊಂಡಿದ್ದು ಹೊಯ್ಸಳ ಪೂರ್ವ, ಹೊಯ್ಸಳಕಾಲ, ಹೊಯ್ಸಳೋತ್ತರಗಳೆಂದು ವಿಭಾಗಸಿಕೊಳ್ಳ ಬಹುದು. ಮೊದಲ ಹಂತದ ಶಾಸನಗಳು ಸರಳ ಸಂಕ್ಷಿಪ್ತವಾಗಿವೆ. ಎರಡನೆಯ ಹಂತದಲ್ಲಿ ಪ್ರೌಢ

ದೀರ್ಘ ಸಾಹಿತ್ಯಕವಾಗಿವೆ. ಮೂರನೆಯ ಹಂತದ ಶಾಸನಗಳು ಸಂಸ್ಕೃತ ಶಾಸನಗಳು, ಭಾಷೆ, ಕನ್ನಡ ದೇಸೀ ಸಂಕ್ಷಿಪ್ತವಾದ ಗದ್ಯ ಶಾಸನಗಳು ಹೆಚ್ಚು ಕಾಣಿಸಿಕೊಂಡಿವೆ.

ಕನ್ನಡ ಸಾಹಿತ್ಯವು ಕಾಲಕಾಲಕ್ಕೆ ಬದಲಾದ ಆಶಯಕ್ಕೆ ತಕ್ಕಂತೆ ಆಕೃತಿಗಳನ್ನು ಪಡೆಯುತ್ತ ಆಯಾ ಕಾಲ ಘಟ್ಟದ ಸಂಸ್ಕೃತಿಯ ಸಂವೇದನೆಗಳನ್ನು ಹಿಡಿದಿಟ್ಟಿದೆ. ಅವುಗಳನ್ನು ರಾಜನಿಷ್ಠ, ಧರ್ಮನಿಷ್ಠ, ಭಕ್ತಿ ನಿಷ್ಠ, ಸ್ವತಂತ್ರ ಇತ್ಯಾದಿಯಾಗಿ ವಿಭಾಗಿಸಿ ಅರ್ಥೈಸಿಕೊಳ್ಳುವ ಪ್ರಯತ್ನ ನಡೆದಿದೆ.

ಯಾವುದೇ ಸಾಹಿತ್ಯ ಒಂದು ಕಾಲದ ಸಾಮಾಜಿಕ ಸಂದರ್ಭದಲ್ಲಿ ಸಂಭವಿಸುತ್ತದೆಯಾದ್ದರಿಂದ ಈ ಎಲ್ಲ ಆಶಯ ಆಕೃತಿಗಳು ಆಯಾ ಸಮಾಜದ ಒತ್ತಡ ವಿನ್ಯಾಸಗಳ ಫಲವೇ ಆಗಿರುತ್ತದೆ ಎನ್ನುವುದಾದರೆ ಭಿನ್ನ ಭಿನ್ನ ಕಾಲದಲ್ಲಿ ಸೃಷ್ಟಿಯಾದ ಶಾಸನ ಸಾಹಿತ್ಯ ಏನಾಗಿದೆ. ಅದು ಆಯಾ ಕಾಲದ ಸಮಾಜದ ಸಾಂಸ್ಕೃತಿಕ ಕಥನವನ್ನು ಕಟ್ಟಿಕೊಳ್ಳಲು ಹೇಗೆ ಸಹಾಯಕವಾಗಿದೆ. ಕನ್ನಡ ಸಾಹಿತ್ಯಕ್ಕೂ ಶಾಸನ ಸಾಹಿತ್ಯಕ್ಕೂ ಇರುವ ಸಾಮ್ಯ ವ್ಯತ್ಯಾಸಗಳೇನು? ಮಿತಿ ಸ್ವಾತಂತ್ರ್ಯಗಳೇನೆಂಬುದನ್ನು ಗಮನಿಸಬೇಕಾಗುತ್ತದೆ.

ಕನ್ನಡ ಶುದ್ಧ ಸಾಹಿತ್ಯದಲ್ಲಿ ಧಾರ್ಮಿಕ ಮತ್ತು ವೀರ ಮೌಲ್ಯಗಳು ಕಾಣಿಸಿಕೊಳ್ಳುವುದಕ್ಕೆ ಮೊದಲೇ ಅವು ಶಾಸನಗಳಲ್ಲಿ ಕಾಣಿಸಿಕೊಂಡಿವೆ. ಅಶೋಕನ ಶಾಸನಗಳು ಧರ್ಮಶಾಸನಗಳೇ ಆಗಿವೆ. ಅದರ ಸಾಹಿತ್ಯ ಸರಳ ಗದ್ಯದಲ್ಲಿದ್ದು ಆತ್ಮೀಯವಾಗಿದೆ. ನಂದಿಸೇನ ಮುನಿಯ ವೈರಾಗ್ಯ, ಗುಣಮಧುರ, ಅರಭಟ್ಟರ ತೇಜಸ್ವಿಯಾದ ಪಾತ್ರ ಚಿತ್ರಗಳು ಅದ್ಭುತವಾಗಿ ಮೂಡಿಬಂದಿದ್ದು ಶಾಸನಗಳಲ್ಲೇ. ಒಂಬತ್ತು ಹತ್ತನೇ ಶತಮಾನದಲ್ಲಿ ಧಾರ್ಮಿಕ ವೀರರನ್ನು, ಕ್ಷಾತ್ರ ವೀರರನ್ನು ನಾಯಕರನ್ನಾಗಿ ಮಾಡಿಕೊಂಡು ಧರ್ಮ ಮತ್ತು ಅರಸೊತ್ತಿಗೆಯ ಕೊಂಡಾಟಕ್ಕಾಗಿ ಸೃಷ್ಟಿಯಾದ ಸಾಹಿತ್ಯಕೃತಿಗಳಂತೆ ಶಾಸನಗಳೂ ಕೂಡ ಅದೇ ನಿಯೋಗವನ್ನು ಹೊತ್ತಂತೆ ಧಾರ್ಮಿಕ ಕೊಡುಗೆಗಳನ್ನು, ದಿಗ್ವಿಜಯ ಸಾಧನೆಗಳನ್ನು, ಕೊಂಡಾಡಿ ವೀರ ಮೌಲ್ಯವನ್ನು, ಧರ್ಮನಿಷ್ಠೆಯನ್ನು ಪ್ರಸರಣ ಮಾಡಿವೆ. ಚಂಪೂ ಕಾವ್ಯದ ಎಲ್ಲ ಲಕ್ಷಣಗಳೂ ಇಲ್ಲಿ ಕಾಣಿಸಿಕೊಂಡವು. ೧೨ನೇ ಶತಮಾನದ ಹೊತ್ತಿಗೆ ಈ ಉಬ್ಬರವಿಳಿದು ಕನ್ನಡ ಸಾಹಿತ್ಯವಾಹಿನಿ ಹೊಸತಿರುವನ್ನು ಪಡೆದುಕೊಂಡಿತು. ಅರಮನೆಯ ಒತ್ತೆಯಿಂದ ಬಿಡಿಸಿಕೊಂಡು ಸ್ವತಂತ್ರವಾಗಿ ಜನಸಾಮಾನ್ಯನ ಹತ್ತಿರಕ್ಕೆ ಬಂದಿತು. ಚಕ್ರವರ್ತಿಯ ಜಾಗದಲ್ಲಿ ದೈವವೂ ಪರಾಕ್ರಮಿಯ ಶೌರ್ಯ ಸಾಹಸದ ಜಾಗದಲ್ಲಿ ಭಕ್ತನೂ ವೀರಭಕ್ತಿಯೂ ಕಾಣಿಸಿಕೊಂಡವು. ಪ್ರಸ್ತುತ ಅಧ್ಯಯನ ಪ್ರದೇಶದ ಶಾಸನದಲ್ಲಿ ಈ ಪಲ್ಲಟ ನೇರವಾಗಿ ಕಾಣಿಸಿಕೊಂಡದ್ದು ೧೬ನೇ ಶತಮಾನದ ಒಂದು ಶಾಸನದಲ್ಲಿ ಚಕ್ರವರ್ತಿಗಳ ಬಿರುದಾವಳಿ ವಂಶಾವಳಿಗಳಾವುವೂ ಕಾಣದೆ ಆ ಜಾಗದಲ್ಲಿ "ಶ್ರೀ ವೀರ ಪ್ರತಾಪ ಶ್ರೀ ಮನುಮಹಾ ಶ್ರೀಲಿಂಗ ಚಕ್ರವರ್ತಿ ಶ್ರೀ ಮಲ್ಲಿಕಾರ್ಜುನ ದೇವ"ರೆಂದೂ ಅರಸನ ಪಾದಪದ್ಮೋಪ ಜೀವಿಗಳಾದ ಅಧಿಕಾರಿಗಳೂ, ನಿಷ್ಠಾವಂತ ಬಂಟರ ಹೊಗಳಿಕೆಯ ಜಾಗದಲ್ಲಿ ಮಲ್ಲಿಕಾರ್ಜುನ ದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶ್ರೀ ಭಿಕ್ಷಾವೃತ್ತಿ ಅಯ್ಯನೆಂಬ ಶರಣನೊಬ್ಬನ ಹೆಸರು ಕಾಣಿಸಿಕೊಂಡಿದೆ.[೨೭]

ಈ ಪ್ರದೇಶದ ಪ್ರಾರಂಭಿಕ ಶಾಸನಗಳಲ್ಲಿ ಅರಸರ ಬಿರುದಾವಳಿ ಕಡಿಮೆಯಿದ್ದು ವೀರನಿಗೆ ಪ್ರಾಮುಖ್ಯತೆಯಿರುವುದು ಕಂಡುಬಂದಿದೆ. 'ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನ' ಎಂಬ ತತ್ವವನ್ನು ಹಿಡಿದು ಕ್ಷಣ ವಿಧ್ವಂಸಿಯಾದ ಕಾಯವನ್ನು ಅನ್ನದ ಋಣಕ್ಕೆ ಈಡಾಡಿ ಸಗ್ಗದ ಹಾದಿ ಹಿಡಿಯುವ ಇಂಥ ವೀರರನ್ನು 'ಉಣ್ಬುಟ್ಟು ಸಾಯಲಮ್ಮದ ಲೆಂಕರಗಂಡರೆಂದೂ[೨೮] ವೈರಿಗಳನ್ನು ಮೆಟ್ಟಿ ತಲೆಯಕಡಿವವರೆಂದು ಅರಸರ 'ಚಿತ್ತ ಸಂತಾನ'ವೆಂದೂ[೨೯] ಅವರ ಸ್ವಾಮಿನಿಷ್ಠೆಯನ್ನು ಶಾಸನ ಕವಿಗಳು ಹೊಗಳಿದ್ದಾರೆ. ಚಕ್ರವರ್ತಿಗಳ, ಸಾಮಂತರ ಮಾಂಡಲಿಕರ ಬಿರುದಾವಳಿಗಳು ಹೊಯ್ಸಳ ಶಾಸನಗಳಲ್ಲಿ ಉದ್ದುದ್ದವಾಗಿ ಬೆಳೆದಿವೆ. ಚಕ್ರವರ್ತಿ ಅಥವಾ ರಾಜ ಮತ್ತು ಸ್ಥಳೀಯ ಸಾಮಂತರು, ಅಧಿಕಾರಿಗಳ ಸಂಬಂಧಾಂತರಗಳಿಗೆ ತಕ್ಕಂತೆ ಅರಸರ ಬಲಿಷ್ಠತೆ, ದೌರ್ಬಲ್ಯಕ್ಕೆ ತಕ್ಕಂತೆ ಇದು ಹಿಗ್ಗುತ್ತ ಕುಗ್ಗುತ್ತ ಹೋದಂತೆ ಕಂಡುಬರುತ್ತದೆ. ಇದರಿಂದ ಶಾಸನ ಹಾಕಿಸಿದವರು ಯಾಕೆಂಬುದರ ಮೇಲೆ ಶಾಸನ ಸಾಹಿತ್ಯ ಭಾಷೆ ಮುಖ್ಯವಾಗುತ್ತದೆಯೇ ಹೊರತು ಯುಗಧರ್ಮ ಕಾರಣವಲ್ಲವೆನಿಸುತ್ತದೆ. ಜನಸಾಮಾನ್ಯರ ಶಾಸನಗಳು ಸರಳ ಗದ್ಯದಲ್ಲಿ ಘಟನೆಯನ್ನು ದಾಖಲಿಸಿರುತ್ತವೆ. ಅಥವಾ ಅವರ ಅಭಿವ್ಯಕ್ತಿಗೆ ಬರಹದ ಹಂಗೂ ಬೇಕಿಲ್ಲ. ಕೇವಲ ಸ್ಮಾರಕವಷ್ಟೇ ಇರುತ್ತದೆ. ಅರಸರು ಅಧಿಕಾರಿಗಳು, ಪಂಡಿತರನ್ನು ಕವಿಗಳನ್ನು ಶಾಸನ ರಚನೆಗೆ ನಿಯೋಜಿಸುತ್ತಿದ್ದುದರಿಂದ ಅಲ್ಲಿ ಸಾಹಿತ್ಯಾಂಶ ಹೆಚ್ಚು ಕಾಣುತ್ತದೆ.

ಮಧ್ಯಕಾಲೀನ ಭಕ್ತಿಯುಗದ ಕನ್ನಡ ಸಾಹಿತ್ಯವು ಭಕ್ತ ಮತ್ತು ಭಗವಂತರ ಸಂಬಂಧವನ್ನು ವೈಭವೀಕರಿಸಿತು. ಪ್ರಭುತ್ವದ ಪ್ರಾಬಲ್ಯವನ್ನು ವಿರೋಧಿಸಿತು. ಶಾಸನಗಳಲ್ಲಿ ಈ ಪ್ರಭುತ್ವ ವಿರೋಧಿನಿಲುವು ಕಂಡುಬರುವುದಿಲ್ಲ. ಹಾಗೊಮ್ಮೆ ಕಂಡುಬಂದರೂ ಅದು ಅತಿಸೂಕ್ಷ್ಮವಾಗಿ ಪರೋಕ್ಷವಾಗಿ ಕಾಣಿಸಿಕೊಂಡಿದೆ. ಕೊಟ್ಟ ದಾನವನ್ನು ಊರ್ಜಿತ ಮಾಡದೆ ಕೆಡಿಸುವ ಅರಸರನ್ನು 'ಅರಸಿನ ಮನುಷ್ಯರನ್ನು' ಮುಲಾಜಿಲ್ಲದೆ ಎಚ್ಚರಿಸಲಾಗಿದೆ. ತಾವು ಸುರಕ್ಷಿತವಾಗಿದ್ದು, ಇತರ ವೀರರನ್ನು ಸಾಯಲು ಮುನ್ನುಗ್ಗಿಸುವ ಅರಸರ ಸ್ವಾರ್ಥವನ್ನು ಒಂದು ಶಾಸನ ಕವಿ ವಿಡಂಬಿಸಿದ್ದಾನೆ.[೩೦] ಅರಸರ ಮಿತಿಮೀರಿದ ಹಿಂಸಾರುಚಿ, ದುರಾಚಾರದಿಂದಾಗಿ ಮಹೀಕಾಂತೆ ಬೇಸತ್ತು ಹೊಲೆಯಾಗಿ ಅಳವಳಿದಿದ್ದಾಳೆ. "ಈ ಪ್ರಬಲತರ ದುರಾಚಾರ ಸಂದೋಹದಿಂದ" ಅವಳನ್ನು ರಕ್ಷಿಸುವ ಅವಶ್ಯಕತೆಯಿದೆ ಎಂಬ ಭಾವ ಮತ್ತೊಂದು ಶಾಸನ ಪದ್ಯದಲ್ಲಿ ವ್ಯಕ್ತವಾಗಿದೆ.[೩೧]

ಮಧ್ಯಕಾಲೀನ ಕನ್ನಡ ಸಾಹಿತ್ಯದ ಪ್ರಧಾನ ಮೌಲ್ಯವಾದ ಭಕ್ತಿಯನ್ನು ರಾಜಭಕ್ತಿಯನ್ನಾಗಿಯೇ ವೈಭವೀಕರಿಸುತ್ತ ಶಾಸನಗಳು ಮುಂದುವರೆಸಿದವು. ಪೂರ್ಣ ಶರಣಾಗತಿಯ ಭಕ್ತಿ ಭಾವವು ಊಳಿಗಮಾನ್ಯತೆಗೆ ಪೂರಕವಾಗಿದ್ದು, ಆ ತತ್ವವು ಇಲ್ಲಿ ಮುಕ್ತಿ ಸಾಧನವಾಗದೇ ಪ್ರಭುತ್ವದ ವಿಜೃಂಭಣೆಗೆ ಪೋಷಕವಾಗಿ ಬಂದಿದೆ. ಪುರಾಣ ಪ್ರತೀಕ ಮತ್ತು ಆಶಯಗಳು ಯಜಮಾನ ಸಂಸ್ಕೃತಿಯನ್ನು ಪೋಷಿಸಿ ಪ್ರವಹಿಸುವಂತೆ ಮಾಡುತ್ತದೆಂಬುದನ್ನು ಅರಿತು ವಚನಕಾರರು ಅವುಗಳನ್ನು ಭಂಜಿಸಿ ತನ್ಮೂಲಕ ಜನಪರವಾದ ಪ್ರತಿ

ಸಂಸ್ಕೃತಿಯೊಂದನ್ನು ನಿರ್ಮಾಣ ಮಾಡಲು ಪ್ರಯತ್ನಿಸಿದರು.[೩೨] ಅರಸೊತ್ತಿಗೆಯನ್ನು ವೇಳೆವಾಳಿತನವನ್ನೂ ಕನ್ನಡ ಸಾಹಿತ್ಯ ನಿರಾಕರಿಸುತ್ತಿದ್ದ ಕಾಲದಲ್ಲೇ ಶಾಸನೋಲ್ಲೇಖಿತ ನೂರಾರು ಲೆಂಕರು, ಕೂಸರು, ಗರುಡರು, ಎಕ್ಕಟಿಗರು ಇತ್ಯಾದಿ ವೀರಸಮುದಾಯಗಳು, ರಾಜನಿಷ್ಠ ಊಳಿಗದವರು ವಿಜೃಂಭಿಸುತ್ತಿದ್ದರೆಂಬುದನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಂಡಿದ್ದೇವೆ. ಯಜಮಾನ ಸಂಸ್ಕೃತಿಯ ವಕ್ತಾರರಂತೆ ಶಾಸನಗಳ ತುಂಬಾ ಪುರಾಣದ ರೂಪಕ ಸಾಮತಿಗಳು, ಪ್ರತಿಮೆಗಳು, ಸನ್ನಿವೇಶಗಳೂ ಪದೇ ಪದೇ ಅನುರಣನಗೊಂಡಿವೆ. ಒಂದೇ ಸಂಸ್ಕೃತಿ ಕಾಲಘಟ್ಟದಲ್ಲಿ ಈ ರೀತಿ ವೈರುಧ್ಯ ಕಂಡುಬರಲು ಕಾರಣವೇನು? ಶರಣರ ಚಳುವಳಿ ಸಮಾಜದಲ್ಲಿ ಯಾವೆಲ್ಲ ಸ್ಥರಗಳನ್ನು ತನ್ನ ತೆಕ್ಕೆಗೆ ತೆಗೆದುಕೊಂಡಿತ್ತು? ಅಥವಾ ತೆಗೆದುಕೊಳ್ಳಲಾಗಲಿಲ್ಲ? ಎಂಬ ಪ್ರಶ್ನೆಗಳು ಏಳುತ್ತವೆ. ಕೆಲವು ವಚನಕಾರರ, ಶರಣನಾಯಕರ ವೈಚಾರಿಕತೆಯ ಪ್ರಭಾವದಿಂದ ಹಾಗೂ ಬಿಜ್ಜಳನ ಮಹತ್ವಾಕಾಂಕ್ಷೆ, ಆಕ್ರಮಣ ಶೀಲತೆ, ದೌರ್ಬಲ್ಯಗಳು ಕಾರಣವಾಗಿ ೧೨ನೇ ಶತಮಾನದಲ್ಲಿ ಕರ್ನಾಟಕದ ಕಲ್ಯಾಣದ ಭಾಗದಲ್ಲಿ ಕಂಡುಬಂದ ಈ ಪ್ರಭುತ್ವ ವಿರೋಧಿ ನೆಲೆಗಳು ಇಡೀ ಕರ್ನಾಟಕದಲ್ಲೇ ಇತ್ತು ಎಂದು ಹೇಳಲು ಸಾಧ್ಯವಾಗುವುದಿಲ್ಲ. ಹೊಯ್ಸಳರ ಅರಮನೆಯ ಆಶ್ರಯ ಪೋಷಣೆಯನ್ನು ತೊರೆದಾಗ ಮಾತ್ರ ಹರಿಹರ ತನ್ನ ನಾಲಗೆಯನ್ನು ವಿರೂಪಾಕ್ಷನಿಗೆ ಮೀಸಲು ಮಾಡಲು ಸಾಧ್ಯವಾಯಿತು. ಹರಿಹರನ ತೀವ್ರ ಪ್ರಭಾವಕ್ಕೆ ಒಳಗಾದ ರಾಘವಾಂಕ ಅರಸೊತ್ತಿಗೆಯಿಂದ ಬಿಡಿಸಿಕೊಂಡರೂ 'ಓರಂಗಲ್ಲಿನ ವೀರಭದ್ರ' ಪಂಥದ ಪ್ರಭಾವಕ್ಕೂ ಧಾರ್ಮಿಕ ಪ್ರಭುತ್ವಕ್ಕೂ ಒಳಗಾಗಿ 'ವೀರೇಶ ಚರಿತೆ', 'ಶರಭ ಚಾರಿತ್ರ್ಯ'ದಂತಹ ಮತ ಸಂಘರ್ಷ ಕಥನವನ್ನು ರಚಿಸಬೇಕಾಗಿ ಬಂತು.

ಹೊಯ್ಸಳ ಆಶ್ರಯಕ್ಕೆ ಒಳಪಟ್ಟಿದ್ದ ಈ ಪ್ರದೇಶದ ಕವಿ ಕಲಾವಿದರು ಬಿಂಬಿಸಿದ ಧೋರಣೆಗಳೆಂಥವು, ಅನೇಕ ಮಿತಿಗಳ ಮಧ್ಯೆ ಶಾಸನ ಕವಿ ತನ್ನಾವ ಸ್ವತಂತ್ರ ಧೋರಣೆಯನ್ನು ಅಥವಾ ಸಾಮಾಜಿಕ ಒತ್ತಡ ವಿನ್ಯಾಸವನ್ನು ಬಿಂಬಿಸಲು ಸಾಧ್ಯವಾಯಿತು ಎಂಬುದು ಚರ್ಚಿಸಬೇಕಾದ ವಿಷಯ.

ಇಷ್ಟೆಲ್ಲ ಚರ್ಚೆಗಳ ಫಲಿತಾಂಶವಿಷ್ಟೆ. ಶಾಸನ ಸಾಹಿತ್ಯ ಆಳರಸರ ಅಧೀನವಾಗಿತ್ತಾಗಿ ಆ ಯುಗ ಧರ್ಮದ ಸಂಪೂರ್ಣ ಮಿಡಿತಗಳಿಗೆ ತೆರೆದು ಕೊಳ್ಳಲಾಗಲಿಲ್ಲ ಎಂಬುದು. ಹಾಗೆಂದ ಮಾತ್ರಕ್ಕೆ ಶಾಸನ ಬರಹವನ್ನು ಕಡೆಗಣಿಸಬೇಕಿಲ್ಲ. ಅವು ಆಯಾ ಕಾಲದ ನಿರ್ದಿಷ್ಟ, ಸಾರ್ವತ್ರಿಕ ದಾಖಲೆಗಳಾಗಿ ವೈಯಕ್ತಿಕ ದಾಖಲೆಗಳಾಗಿ ಬಿತ್ತರಿಸಿರುವ ನೂರಾರು ವಿಚಾರಗಳು ಆಯಾ ಕಾಲದ ಸಮಾಜದ ಸ್ಥಿತಿ ಸಂಚಲನಗಳನ್ನು, ಆಶಯ, ಅಪೇಕ್ಷೆ, ಒತ್ತಡಗಳು, ಪ್ರಗತಿ, ಪತನಗಳನ್ನು ಸೆರೆಹಿಡಿದಿವೆ. ಇದನ್ನು ಈ ಹಿಂದಿನ ಅಧ್ಯಾಯಗಳಲ್ಲಿ ಕಂಡುಕೊಂಡಿದ್ದೇವೆ. ಕನ್ನಡ ಭಾಷೆ, ಛಂದಸ್ಸು, ಲಿಪಿಗಳಲ್ಲಿ ಕಾಲಕಾಲಕ್ಕೆ ಆಗಿರುವ ಅವಸ್ಥಾಂತರಗಳು ಕನ್ನಡದ ಆಡುಭಾಷೆ, ಸಾಮಾಜಿಕ ಮತ್ತು ಪ್ರಾದೇಶಿಕ ಉಪಭಾಷೆಗಳನ್ನು ಅರಿಯಲು, ದುಭಾಷಿಕ ಮತ್ತು ಬಹುಭಾಷಿಕ ಶಾಸನಗಳು. ಭಾಷಾಸ್ವೀಕರಣ ಮತ್ತು ಲಿಪಿಕರಣದ ಸಮಸ್ಯೆಗಳು, ಗಡಿನಾಡಿನ ಶಾಸನಗಳು

ಮತ್ತು ಭಾಷಾ ಬೆರಕೆ, ಭಾಷಾ ಸಂಗೋಪನೆ ಇತ್ಯಾದಿ ಅಧ್ಯಯನಗಳಿಗೆ ಶಾಸನ ಬರಹ ಅತ್ಯುತ್ತಮ ಆಕರವಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಇವುಗಳನ್ನು ಚರ್ಚಿಸಲು ಸಾಧ್ಯವಾಗಿಲ್ಲ. ಇಲ್ಲಿನ ಶಾಸನ ಕವಿಗಳು ಮತ್ತು ವರ್ಣನೆಗಳನ್ನಷ್ಟೇ ಗಮನಿಸಲಾಗಿದೆ.

**೭.೨.೧. ವರ್ಣನೆಗಳು**

**೧. ಶಾಸನ ಮತ್ತು ಪುರಾಣ :** ಕನ್ನಡದ ಶ್ರೇಷ್ಠ ಕವಿಗಳು ತಮ್ಮ ಕಾಲದ ಬದುಕನ್ನು ಅದಕ್ಕೆ ಹಿನ್ನೆಲೆಯಾದ ಯುಗಧರ್ಮವನ್ನು ಮೌಲ್ಯಗಳನ್ನು ಸಾಂಸ್ಕೃತಿಕ ಮುಖಾಮುಖಿಗಳನ್ನು ತನ್ನ ತೀವ್ರ ಸಂವೇದನೆಯಿಂದ ಕಾವ್ಯಾನುಭವವನ್ನಾಗಿ ಮಾಡಿದರೆ ಜನಪದರು ಅನೇಕ ರೀತಿಯ ಪುರಾಣಗಳನ್ನು ಗಾಥೆಗಳನ್ನು ಸೃಷ್ಟಿಸುವ ಮೂಲಕ ಸಾಂಕೇತಿಕ ಆಚರಣೆಗಳ ಮೂಲಕ ಸಮಾಜದ ಒಳ ಸೆಳವುಗಳನ್ನು ದಾಖಲಿಸುತ್ತಾರೆ. ಶಾಸನ ಬರಹಗಾರನಿಗೆ ಹೊಸ ಪ್ರತಿಮೆ ಸಂಕೇತಗಳನ್ನು ಸೃಷ್ಟಿಸಿ ತನ್ನ ಸಂವೇದನೆಗಳನ್ನು ಹಿಡಿಯಲು ಹೆಚ್ಚು ಅವಕಾಶವಿಲ್ಲ. ಹಾಗಾಗಿ ಜನಪ್ರಿಯವಾದ ಪುರಾಣ ಪ್ರತಿಮೆ ಪ್ರತೀಕ, ಘಟನೆಗಳನ್ನು ತಾನು ಬಿಂಬಿಸಬೇಕಾದ ಮೌಲ್ಯಕ್ಕೆ ತಕ್ಕಂತೆ ದುಡಿಸಿಕೊಂಡಿದ್ದಾನೆ.

ಪ್ರತಿಯೊಂದು ಸಂಸ್ಕೃತಿಯ ಒಡಲೂ ಅನೇಕ ಪುರಾಣಗಳನ್ನು ಅಡಗಿಸಿಕೊಂಡಿರುತ್ತದೆ. ಕಾಲಮಾನದ ಒತ್ತಡಗಳಿಗೆ ತಕ್ಕಂತೆ ಅದನ್ನು ಒಗ್ಗಿಸುತ್ತ, ಹಿಗ್ಗಿಸುತ್ತ ಮುರಿದುಕಟ್ಟುತ್ತ ತನ್ನ ಸಂಸ್ಕೃತಿಯ ಚಹರೆಗಳನ್ನು ಹಿಡಿಯುವ ಪ್ರಯತ್ನ ಈ ಪುರಾಣಗಳಲ್ಲಿ ನಿರಂತರವಾಗಿ ಸಾಗುತ್ತಿರುತ್ತದೆ. ಶಾಸನ ಸಾಹಿತ್ಯದಲ್ಲಿ ಈ ಪುರಾಣ ಪ್ರಜ್ಞೆಯು ಮೂಡಿ ಬಂದಿರುವ ಬಗೆಯನ್ನು ಪುರಾಣಗಳ ಸಂಕ್ಷಿಪ್ತತೆ, ಆಕರ್ಷಕತೆಯನ್ನು ಮತ್ತು ಯಾವ ನಿಯೋಗವನ್ನು ಹೊತ್ತು ಅವು ಅಲ್ಲಿ ಪ್ರಕಟಗೊಳ್ಳುತ್ತಿವೆ ಎಂಬುದನ್ನು ಗಮನಿಸುವ ಅವಶ್ಯಕತೆಯಿದೆ.

ಪುರಾಣ ಪುರುಷರೊಂದಿಗೆ ಬೆಸೆದುಕೊಳ್ಳುವ ರಾಜವಂಶಗಳು, ರಾಜರುಗಳು, ವಂಶೋತ್ಪತ್ತಿಯನ್ನು ಪುರಾಣೀಕರಿಸುವ ಬಗೆ ಬಗೆಯ ಕಥೆಗಳು, ಭಿನ್ನ ಭಿನ್ನ ಮೌಲ್ಯಗಳಿಗೆ ಪ್ರತೀಕಗಳಾದ ರಾಮಾಯಣ ಮಹಾಭಾರತ ಭಾಗವತಗಳ ಪಾತ್ರಗಳು, ಚರಿತ್ರೆಯ ಪ್ರಸಿದ್ಧ ವ್ಯಕ್ತಿಗಳು ಅವರುಗಳ ಗುಣವಿಶೇಷತೆಗಳಾದ ಶೌರ್ಯ, ಶೌಚ, ಔದಾರ್ಯ, ಸತ್ಯ ಸಂಧತೆ, ಚಾಣಾಕ್ಷತೆ, ಸ್ವಾಮಿನಿಷ್ಠೆ ಇತ್ಯಾದಿಗಳನ್ನು ಬಿಂಬಿಸುವ ಸಿದ್ಧ ಪಾತ್ರಗಳನ್ನು ಸನ್ನಿವೇಶಗಳನ್ನು ಶಾಸನ ಕವಿಗಳು ಯಥೇಚ್ಛವಾಗಿ ವರ್ಣನೆಯಲ್ಲಿ ತಂದಿದ್ದಾರೆ.

ಸಕಲ ಭೋಗ ಭಾಗ್ಯಗಳೂ ಶಿಷ್ಟ ರಕ್ಷಕನಾದ ಅರಸನಿಗೇ ಸೇರಬೇಕೆಂಬ ತತ್ವವನ್ನು ಮುಂದಿಟ್ಟು ತನ್ನ ಅರಸನನ್ನು ದೈವತ್ವಕ್ಕೇರಿಸುವ ಪ್ರಯತ್ನವನ್ನು ಶಾಸನ ಕವಿಗಳು ತಮ್ಮ ವರ್ಣನೆಗಳಲ್ಲಿ ಸಮರ್ಥವಾಗಿ ಮಾಡಿದ್ದಾರೆ. ದೇವಾಸುರ ಯುದ್ಧದ ಒಂದು ಭಾಗವಾದ ಸಮುದ್ರ ಮಂಥನದ ಘಟನೆಯನ್ನು ಇದಕ್ಕೆ ಬಳಸಿಕೊಂಡಿದ್ದಾರೆ. ನಾಗರೀಕತೆಯ ವಿಕಾಸದ ಹಂತದಲ್ಲಿ ತಮಗಿಂತ ಹಿಂದಿದ್ದ

ಜನವರ್ಗವನ್ನು ರಾಕ್ಷಸರೆಂದು ಕರೆದು ತಮ್ಮಂತೆ ನಯ ನಾಜೂಕು ಚಾಣಾಕ್ಷತೆಯಿಲ್ಲದ ದೇಹಶ್ರಮವನ್ನೇ ನಂಬಿಕೊಂಡಿದ್ದವರಿಗೆ ಸಮುದ್ರ ಮಂಥನದಲ್ಲಿ ಹುಟ್ಟಿದ ಯಾವ ಫಲವೂ ದೊರೆಯದಂತೆ ಮಾಡಿದ ಈ ಪುರಾಣ ವರ್ಗವೈಷಮ್ಯದ ಕಥನವೇ ಆಗಿದೆ ಎನ್ನಬಹುದು.

ಕರಿನಕ್ರಾಭೀಳ ಹೇಷಾರವಯುತ ಹಯ ಸಂದೋಹ ವೀಚೀಪದಾತಿ
ಕ್ಷುರದುತ್ಪಾಠೀನ ಕೋಳಾಹಳ ಸಮರ ಮಹಾಂಬೋಧಿಯೊಳ್ ತಂನ ದೋರ್ಮ್ಮಂ
ಧರದಿಂದಂ ಮಂಥನಾರಂಭಮಣೊದವಿಸಿ ವೈರಿಕ್ಷಮಾಪಾಳ ಲಕ್ಷ್ಮೀ
ಕರಿ ಜಾತ್ಯಶ್ವಂಗಳಂ ಕೊಂಡತುಳಬಳಯುತಂ ವೀರಬಲ್ಲಾಳ ಭೂಪಂ[೩೩]

ಮಂದರ ಪರ್ವತದಿಂದ ಕ್ಷೀರ ಸಾಗರವನ್ನು ಕಡೆಯುವಾಗಿನ ದೇವಾಸುರರ ಕೋಲಾಹಲ ಕ್ಷೀರ ಸಾಗರದ ಅಬ್ಬರದ, ಚತುರಂಗಬಲದ ಕೋಲಾಹಲದಿಂದ ತುಂಬಿಹೋದ ಸಮರಮಹಾಂಬೋಧಿಯ ಅಬ್ಬರದ ರೂಪಕ ಚಿತ್ರ ಇಲ್ಲಿ ಯಶಸ್ವಿಯಾಗಿದೆ.

ರುದ್ರನು ಸುರಸೈನ್ಯದೊಡನೆ ತ್ರಿಪುರವನ್ನು ದಹನ ಮಾಡಿದುದು, ಅರ್ಜುನನು ಕಾಂಡವ ವನ ದಹಿಸಿದುದನ್ನು ಶಾಸನ ಕವಿಗಳು ತಮ್ಮ ಒಡೆಯರ ಪ್ರತಾಪ ವರ್ಣನೆಗೆ ಬಳಸಿಕೊಂಡು ಸುಂದರ ಚಿತ್ರ ನೀಡಿದ್ದಾರೆ.[೩೪] ಧರೆಯನ್ನೇ ತೇರಾಗಿಸಿ ಸೂರ್ಯಚಂದ್ರರನ್ನು ಗಾಲಿಮಾಡಿಕೊಂಡು ದಿಗ್ಗಜಯುಗ್ಮವನ್ನು ಹೂಡಿ ಮೇರುಪರ್ವತವೇ ಬಿಲ್ಲಾಗಿ ಉರುಗೇಂದ್ರಹೆದೆಯಾಗಿ ಗಾಳಿಯ ಕೊಪ್ಪಿನ ಕೃಷ್ಣಬಾಣವನ್ನು ಹಿಡಿದು ಯುದ್ಧ ಸನ್ನದ್ಧನಾಗಿ ಹೊರಟಿರುವ ರುದ್ರನ ಚಿತ್ರ ಅದ್ಭುತ, ವೀರ ರಸವನ್ನು ಪ್ರಚೋದಿಸಿ ಒಂದು ಭವ್ಯತೆಯ ಅನುಭವವನ್ನು ತಂದುಕೊಡುವಂತಿದೆ.

'ಕಾಣ್ಡವ ಮನುಣ್ಡಡಳುರ್ದ್ದುದು ಮಂಡವಮಂ ವಿನ್ಧ್ಯಸೈಳದೊಳ್ನೆಗೆದುದು ಕೈ ಕೊಣ್ಡುದುಧ ಪುರಮನ್ ...'[೩೫] ಎಂಬ ಉಧಪುರವನ್ನು ಸುಟ್ಟ ಪರಾಕ್ರಮದ ಈ ವರ್ಣನೆಯು ಎರೆಯಂಗನ ಅಖಂಡಿತ ತೇಜಾಗ್ನಿಯನ್ನು ಮನಸ್ಸಿಗೆ ಮುಟ್ಟಿಸುವಂತಿದೆ. 'ಉದ್ದಂಡ ಮಣ್ಡಳಿತ ಮಂಡಳೀ ತರುಷಣ್ಡ ಮಂಡಿತಾ ಖಂಡ ಖಾಂಡವದಹನ ಪ್ರಚಂಡ ಕೋದಣ್ಡ ಪಾರ್ತ್ಥ ಗಂಡರತೀರ್ತ್ಥ'[೩೬] ಎಂಬ ಗದ್ಯ ಖಂಡವೂ ಶಬ್ದಾಲಂಕಾರದಿಂದ ಕೂಡಿ ವೀರರಸ ಪೋಷಕವಾಗಿದೆ.

ರಾಮಾಯಣದ ಸೇತು ಬಂಧ, ರಾಮನ ಧೀರತೆ, ರಾವಣನ ಅಗಾಧ ಸಾಮರ್ಥ್ಯ, ಹನುಮನ ಸೇವಾ ಭಾವಗಳು ಶಾಸನಗಳಲ್ಲಿ ಮತ್ತೆ ಮತ್ತೆ ಅನುರಣಿತಗೊಳ್ಳುತ್ತವೆ.

'ಬಂದು ಕವಿದರಿಬಳಾಂಬುಧಿ |ನಿಂದುದೆನರಸಿಂಹ ನೊಂದೆ ಸಬಳದ ಮೊನೆಯೊಳು||
ಬಿಂದು ವಿನಂದದೆ ಮುನ್ನಂ |ನಿಂದವೊಲಂಬೋಧಿ ರಾಮನಂಬಿನ ಮೊನೆಯೊಳು||[೩೭]

'ರಾಮಾನ್ಮತದಿಂ ನಳಂ ಸೇತುವಂ ಕಟ್ಟುವಂತೆ ಕಟ್ಟಿಸಿದರು ಕೆಱೆಯಂ''

ಪರಿಯಿಟ್ಟು ವೈರಿ ಮಂಡಳ |ದರಸುಗಳಂ ಪಿಡಿದು ತನ್ದು ನೆಱೆಯಿಟ್ಟಿರ್ಪ್ಪ||
ತೆರೆಯೂರಲೆಸೆವ ಲಂಕಾ |ಪುರದೊಳು ದಸಕಣ್ಠನಿಪ್ಪ ತೆರದಿಂದಿಪ್ಪಂ||[೩೮]

ಮೇಲಿನ ಗದ್ಯದ ತುಣುಕು ಹಾಗೂ ಪದ್ಯಗಳು ರಾಮಬಾಣದ ಅಗಾಧ ಶಕ್ತಿಯನ್ನು ನಳನ ಸೇತುಬಂಧದ ತಾಂತ್ರಿಕ ಪರಿಣತಿಯನ್ನು ರಾವಣನ ಗಂಡಗರ್ವವನ್ನು ಮನಮುಟ್ಟಿಸುತ್ತವೆ. ಇಲ್ಲಿ ರಾವಣನ ಪಾತ್ರ ತನ್ನ 'ಖಳ'ತನವನ್ನು ಕಳೆದುಕೊಂಡಿದೆ. ಕರ್ಕಡ ಮಹಾರಾಯನನ್ನು ರಾವಣನಿಗೆ ಹೋಲಿಸಲಾಗಿದೆ. ಎರೆಯಂಗನ ರಾಣಿ ಮಹಾದೇವಿಯ ಮಾತಾಮಹನಾದ ಈತನನ್ನು ಶಾಸನ ಕವಿ ಮೈದುಂಬಿ ಹೊಗಳಿದ್ದಾನೆ.

ತೊಂಡಿನೊಳೆ ಮಲೆ ಮಹೀಪರ |ಮಂಡಳಮಂ ಸೂಜೆಗೊಣ್ಡು ಮಾರ್ಕೊಣ್ಡವರಂ||
ಖಣ್ಡಿಸಿದನಮಮ ದುಟ್ಟರ |ಗಣ್ಡನ ಗಣ್ಡಂಗೆ ಮಲೆವ ಮಣ್ಡಳವೊಳವೇ||

ಎಂದು ಸವಾಲು ಹಾಕುವ ಕವಿ ಇವನನ್ನು ರಾವಣನಿಗೆ ಹೋಲಿಸಿರುವುದು ನಾಗಚಂದ್ರನ ಧಿರೋದಾತ್ತ ರಾವಣನನ್ನು ನೆನಪಿಸುತ್ತದೆ. ಸುಮಾರು ಇದೇ ಕಾಲದ ಶಾಸನ[೩೯]ವೊಂದರಲ್ಲಿ ಎರೆಯಂಗನ ಮನೆ ಮೊನೆಗಳೆರಡಕ್ಕೂ ವಿಜಯವನ್ನು ತರುವಂತ ಅರಸೀಕೆರೆಯ ಕಚ್ಚಪೆರ್ಗಡೆಯನ್ನು ಕಡಿತಲೆಗೊಣ್ಡಡೆ ರಾವಣನೆಂದೂ ಬಿಲುಗೊಣ್ಡಡೆ ಫಡಮಾತರ್ಜುನೆಂದೂ, ಅಹಿತ ಪಡೆಯಕೊಲ್ವೆಡೆಗೆ ಕಚ್ಚವೆಗ್ಗಡೆ ಭೀಮನೆಂದೂ ಹೇಳುತ್ತ 'ಧರ್ಮದೊಳಂ ದಾನದೊಳಂ ಪೆರ್ಮೆಯೊಳಂ ಶೌಚಗುಣದೊಳಂ ಸತ್ಯದೊಳಂ ನೂರ್ಮಡಿಯಯ್ದೂರ್ಮ್ಮಡಿ ಸಾಸಿರ್ಮಡಿ" ಎಂದು ಕವಿ ಆದಿತ್ಯ ದೇವನು ವರ್ಣಿಸುತ್ತಾನೆ. ಶಾಸನಗಳ ಯುದ್ಧ ವರ್ಣನೆ, ಪದೌಚಿತ್ಯ, ಮಹಾಭಾರತ ರಾಮಾಯಣ ಕಥೆಯ ಒಲವು ಕರ್ಣ, ಅರ್ಜುನ, ರಾವಣನ ಪಾತ್ರದ ಬಗೆಗಿರುವ ಅಭಿಮಾನಗಳಲ್ಲಿ ಪಂಪ ರನ್ನ ನಾಗಚಂದ್ರರ ಕಾವ್ಯಗಳ ಪ್ರಭಾವಗಳನ್ನು ಗಮನಿಸಬಹುದು. ಅರಸೀಕೆರೆಯ ಈ ಎರಡೂ ಶಾಸನಗಳೂ ಉತ್ತಮ ಸಾಹಿತ್ಯಾಂಶದಿಂದ ಕೂಡಿವೆ. ಯುಗ ಮಾಲ್ಯವಾದ ಸ್ವಾಮಿನಿಷ್ಠೆ, ಕ್ಷಾತ್ರತೇಜವನ್ನು ಎತ್ತಿ ಹಿಡಿದಿವೆ.

ಅರಸರು ಪ್ರತ್ಯಕ್ಷ ದೇವತೆ ಎಂಬುದನ್ನು ಮತ್ತೆ ಮತ್ತೆ ಸ್ಥಾಪಿಸಲು ಅವರನ್ನು ಅವತಾರ ಪುರುಷರೆಂದು ಕರೆಯುತ್ತ 'ಸುತಧರ್ಮ, ರಿಪುಭೀಮ, ಅರ್ಜುನ, ರಾಮ, ಭರತ, ಸುಮಿತ್ರೋದ್ಭವ, ಶತೃಘ್ನ ಮುಂತಾದ ಭಾರತ ರಾಮಾಯಣ ಪೂರ್ವ ಪುಣ್ಯ ಪುರ್ಷ ಪ್ರಖ್ಯಾತಿಯಂತಾಳ್ದಿದ' ಎಂದೂ, ನಳ, ಅಂಬರೀಶ, ಪ್ರಿಥು, ಹರಿಶ್ಚಂದ್ರ, ಚಂದ್ರಗುಪ್ತ, ಉಜ್ವಳ ಕೀರ್ತ್ಯಾರಾಮ ರಾಮಾರ್ಜುನ ಪುರು, ಸಗರ ಖ್ಯಾತ ದುಷ್ಯಂತ ಧಾತ್ರೀತಳಪಾಳಕರ್ಕ್ಕೂಡಿ ಬಂದೀ ಕಲಿಯುಗದೊಳಗೊಂದಾದವೊಲು ಕ್ಷಾತ್ರ ಧರ್ಮ ತೊಳಗಲು ವಿಖ್ಯಾತಿ ವೆತ್ತರ್ "ಎಂದೂ ಹೇಳುವುದು ಅವರ ವಂಶಾವಳಿಯನ್ನು ಪುರಾಣೀಕರಿಸುವುದು, ವೈಭವೀಕರಿಸುವುದು ಶಾಸನಗಳಲ್ಲಿ ವಿಶೇಷವಾಗಿ ಕಂಡುಬರುತ್ತದೆ.[೪೦]

ಕೀರ್ತನ ಸಾಹಿತ್ಯವು ಪುರಾಣದ ಕಥೆ ಮತ್ತು ಪ್ರತೀಕಗಳನ್ನು ಬಳಸಲು ಪ್ರಾರಂಭಿಸುವುದಕ್ಕಿಂತ ಮುಂಚೆ ಭಾಗವತ ಸಂಪ್ರದಾಯವನ್ನು ಅನುಸರಿಸಿದ ಶಾಸನ ಕವಿಗಳು ವೈಷ್ಣವ ಧರ್ಮದ ಶಾಸನಗಳ ರಚನೆಯಲ್ಲಿ ಪ್ರತಿಮೆ ರೂಪಕ ಪ್ರತೀಕಗಳನ್ನು ಪುರಾಣಲೋಕದಿಂದಲೇ ತೆಗೆದುಕೊಂಡು ಪುಟ್ಟ

ಪುರಾಣಗಳನ್ನು ಕೆಲವೇ ಸಾಲುಗಳಲ್ಲಿ ಅದ್ಭುತವಾಗಿ ಹಿಡಿದಿಟ್ಟಿದ್ದಾರೆ. ಕೃಷ್ಣನ ಲೀಲೆಗಳನ್ನು ವಿಷ್ಣುವಿನ ದಶಾವತಾರಗಳನ್ನು ಕಟ್ಟಿಕೊಟ್ಟಿರುವುದು, ಪ್ರಾರ್ಥನಾ ಶ್ಲೋಕಗಳಲ್ಲಿ ಕಂಡುಬರುವ ಸಂಕೀರ್ತನ ಅಂಶಗಳು ಗಮನ ಸೆಳೆಯುತ್ತವೆ. ಒಂದೆರಡು ಉದಾಹರಣೆಗಳನ್ನು ನೋಡಬಹುದು.

ಶ್ರೀ ರಾಮಾವಲ್ಲಭಂ ಸದ್ಗುಣಗಣನಿಳಯಂ ಸರ್ವಗಂ ಸರ್ವಲೋಕಾ
ಧಾರಂ ಭಕ್ತಪ್ರಿಯಂಶಾಶ್ವತನಖಿಳ ಜಗದ್ವಂದ್ಯನಾನಂದ ರೂಪಂ
ಕ್ಷೀರಾಂಭೋರಾಶಿ ಸಂಸ್ಥಂ ಭವದುರಿತಹರಂ ಮುಕ್ತಿದಂ ಭಕ್ತಿಗಮ್ಯಂ
ಕಾರುಣ್ಯಾಂಬೋಧಿ ನಾರಾಯಣನೆಮಗಮಳಾನಂದಮಂ ಮಾಳ್ಕನಂತಂ[೪೧]

ಸುಮಾರು ಹತ್ತು ಉಸಿರ್ದಾಣಗಳನ್ನು ಹೊಂದಿ ಭಗವಂತನ ಗುಣವಿಶೇಷತೆಯನ್ನು ಮನಮುಟ್ಟಿಸುತ್ತ ಭಕ್ತಿರಸ ತುಂಬಿ ಹರಿದಿದ್ದು ಉತ್ತಮ ಸಂಕೀರ್ತನೆಯಂತಿದೆ ಈ ಪದ್ಯ. ವೀರ ಆಡಂಬರ ರೌದ್ರರಸಗಳಿಗೆ ಹೊಂದುವ ಸ್ರಗ್ಧರೆಯನ್ನು ಇಲ್ಲಿ ಭಕ್ತಿ ಭಾವಕ್ಕೆ ಹದಗೊಳಿಸಿರುವುದು ವಿಶಿಷ್ಟವಾಗಿದೆ. ಕಿರಿದಾದ ಸ್ಥಳಾವಕಾಶದಲ್ಲೇ ಹರಿಸರ್ವೋತ್ತಮತೆ, ಜಿನಸರ್ವೋತ್ತಮತೆ, ಶಿವಪಾರಮ್ಯ ಹರಿಹರ ಅಭೇದ, ಭಕ್ತಿ, ಸಂಕೀರ್ತನೆ ಇವುಗಳು ಕಾಣಿಸಿಕೊಂಡು ಸಫಲವಾಗಿರುವುದನ್ನು ಕೆಲವು ಶಾಸನಗಳಲ್ಲಿ ಕಾಣಬಹುದು.

ವಿಷ್ಣುವಿನ ದಶಾವತಾರಗಳಲ್ಲಿ ಕೃಷ್ಣಾವತಾರ, ನರಸಿಂಹಾವತಾರ, ತ್ರಿವಿಕ್ರಮ, ವರಾಹಾವತಾರಗಳು ಹೆಚ್ಚು ಕಾಣಿಸಿಕೊಂಡಿವೆ. ಕೃಷ್ಣನ ಲೀಲಾ ವಿನೋದದ ರಮಣೀಯ ಕಥೆಗಳನ್ನು ಭಾಗವತ ಮೂಲದಿಂದ ಶಾಸನಗಳು ತೆಗೆದುಕೊಂಡಿವೆ. ಶ್ರೀವೈಷ್ಣವ ಧರ್ಮದ ಪ್ರಾಬಲ್ಯದೊಂದಿಗೆ ಅವು ವಿಪುಲವಾಗಿ ದೇವಾಲಯ ಶಿಲ್ಪಗಳಲ್ಲಿ ಕಾಣಿಸಿಕೊಳ್ಳತೊಡಗಿದವು. ಕೇಶವ ನರಸಿಂಹರೊಂದಿಗೆ ಮೋಹಕವಾದ ಕೊಳಲಗೋಪಾಲಮೂರ್ತಿ ಈ ಪ್ರದೇಶದ ದೇವಾಲಯಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಮೋಹಕ ಕೊಳಲಿನ ನಾದದಲ್ಲಿ ಇಡೀ ಜಡ-ಚೇತನವೆಲ್ಲವೂ ಮುಳುಗಿರುವಂತೆ ಶಿಲ್ಪಿಗಳು ಅದ್ಭುತವಾಗಿ ಶಿಲ್ಪಿಸಿದ್ದಾರೆ. ಅರಕೆರೆಯ ಒಂದು ಶಾಸನದಲ್ಲಿ ಈ ಗೋಪಾಲ ಮೂರ್ತಿಯ ವರ್ಣನೆ ಸುಂದರವಾಗಿದೆ.

ಅಮರೋರ್ವ್ವೀರುಹಮಂ ಮಲಂಗಿ ಚೆಲುವಿಂತ್ರೈಭಂಗಿಯಿಂ ವೇಣುನಾ
ದಮನಾಗೋಪಿಯರಂ ನಿರೀಕ್ಷಿಸುತ ಮಾಡುತ್ತಾಡುತಂ ಲೀಲೆಯಿಂ
ದಮೆ ಗೋಪಾಳಕಮೂರ್ತ್ತನಾಗಿ ನಡೆತಂದಾ ನಂನ್ದದಿಂ....''[೪೨]

ಗೋಪಾಲನು ಚೆಲುವಾದ ಅರಕೆರೆಯಲ್ಲಿ ನೆಲೆಸಿದನಂತೆ ನಿತ್ಯವೂ ಬೆಳಗಿನ ಜಾವದಲ್ಲಿ ಊರಸುತ್ತ ಸುತ್ತುತ್ತಿದ್ದ ಕೊಳಲಿನ ನಾದಕ್ಕೆ ಮೋಹಿತನಾದ ಬೆಂಡೆಕೆರೆಯ ಶ್ರೀಮಂತ ಶೆಟ್ಟಿಯೊಬ್ಬ ಹುಚ್ಚನಂತೆ ಹುಡುಹುಡುಕಿ ಕೊನೆಗೂ ಮುರುಳಿ ಲೋಲನ ದರ್ಶನ ಪಡೆದು ಪ್ರಾರ್ಥಿಸಿ ಅವನು ಶಾಶ್ವತವಾಗಿ ತನ್ನೂರಿನಲ್ಲಿ ನೆಲಸಬೇಕೆಂದು ಗುಡಿಕಟ್ಟಿಸಿ ಗೋಪಾಲನ ಪ್ರತಿಷ್ಠೆ ಮಾಡಿದನೆಂದು ಐತಿಹ್ಯವಿದೆ.[೪೩] ಈ ಕಥೆಯು ಬೆಂಡೆಕೆರೆ, ಅರಕೆರೆ ಎರಡರಲ್ಲೂ ವೈಷ್ಣವ ದೇವಾಲಯಗಳನ್ನು ನಿರ್ಮಿಸಿದ ಪರಮ ವೈಷ್ಣವ ಮಹಾವಡ್ಡ ವ್ಯವಹಾರಿ ಶ್ರೀಮಂತ ದಾಮೋದರ ಶೆಟ್ಟಿಯ ಭಕ್ತಿಯ ಸುತ್ತ ಹುಟ್ಟಿಕೊಂಡ ಕಥೆಯೇ ಆಗಿದೆ.

ಸುಮನಸ್ಸಿಂ ಪ್ರಹಳಾದನತ್ಯಧಿಕನಂ ವಿಶ್ವಾತ್ಮನಂ ರೌದ್ರವಿ
ಕ್ರಮನಂ ತೋಱುವೆನಾಂ ಹಿರಣ್ಯಕನೆ ನೀಂ ನೋಡೆಂಬುದುಂ ಸ್ತಂಭದಿಂ
ದಮೆಯುಗ್ರೋಗ್ರ ನೃಸಿಂಹನಾಗೆ ತುತಿಸಲ್ಪ್ರಾಹ್ಲಾದನಂ ಣೋಡಿವಿ
ಕ್ರಮಮಂ ಮಾಣ್ದುಪಶಾಂತನಾಗಿ ಸಿರಿಯಂ ತಾಳ್ದಿರ್ದ್ದನುಚ್ಛಾಹದಿಂ[೪೪]

ನರಸಿಂಹಾವತಾರದ ಈ ಪದ್ಯವು ಕನಕದಾಸರ ಕೀರ್ತನೆಯ ನರಸಿಂಹಾವತಾರವನ್ನು ನೆನಪಿಸುತ್ತದೆ. ಕೀರ್ತನ ಸಾಹಿತ್ಯದ ಮೊದಲ ಹೆಜ್ಜೆಗಳನ್ನು ಇಂತಹ ಶಾಸನ ಪದ್ಯಗಳಲ್ಲಿ ಗುರುತಿಸಬಹುದು. ಈ ರೀತಿಯ ಪೌರಾಣಿಕ ಕಥನಗಳು, ಪಾತ್ರಗಳು ಸನ್ನಿವೇಶಗಳು ಇತ್ಯಾದಿಗಳು ಶಾಸನಗಳಲ್ಲಿ ಸಾಕಷ್ಟಿದ್ದು ಅವು ಯಾವೆಲ್ಲ ಮೌಲ್ಯಗಳನ್ನು ಬಿಂಬಿಸುತ್ತಿವೆ ಮತ್ತು ಅವುಗಳ ಪ್ರಸರಣಕ್ಕಾಗಿ ದುಡಿದಿವೆ ಮತ್ತು ಆ ಅಭಿವ್ಯಕ್ತಿಗಳಲ್ಲಿ ಕಂಡುಬರುವ ಸಾಹಿತ್ಯಿಕ ಸೌಂದರ್ಯವೆಂದಹುದು ಎಂಬುದೇ ಒಂದು ಪ್ರತ್ಯೇಕ ಅಧ್ಯಯನ ಮಾಡುವಂಥ ವಿಷಯವಾಗಿದೆ.

**೨. ಯುದ್ಧ ಭೂಮಿ, ಯುದ್ಧಗಳ ವರ್ಣನೆ :** ಕ್ಷಾತ್ರ ತೇಜಸ್ಸು ಪರಾಕ್ರಮಗಳೇ ಮುಖ್ಯ ಮೌಲ್ಯವಾದ ಕಾಲದಲ್ಲಿ ವೀರರ ಕಥೆಗಳನ್ನು ಅವರ ಯುದ್ಧ ದಿಗ್ವಿಜಯ ಸಾಧನೆಗಳನ್ನು ವಿಶೇಷವಾಗಿ ವರ್ಣಿಸಿರುವುದು, ಕಂಡುಬರುತ್ತದೆ. ಯುದ್ಧಗಳ ಭೀಕರತೆ, ಕೋಲಾಹಲ, ಸುಭಟರ ಯುದ್ಧೋತ್ಸಾಹ, ಚತುರಂಗಬಲದ ಸಂಧಣೆ ಮುರಿದ ಅಲಗು ಸುರಿದ ರಕ್ತ, ರಾಶಿ ರಾಶಿಯಾಗಿ ಬಿದ್ದ ಹೆಣಗಳು ಇತ್ಯಾದಿಗಳ ಚಿತ್ರ ಕಣ್ಣಿಗೆ ಕಟ್ಟುವಂತೆ ಕವಿಗಳು ಚಿತ್ರಿಸಿದ್ದಾರೆ. ' ನೆಣದ ಬಣಂಬೆ ಕೋಳ್ಮಿದುಳ ತಿಂತಿಣಿ.... "ಎಂದು ಪ್ರಾರಂಭವಾಗುವ ಪದ್ಯದಲ್ಲಿ[೪೫] ಮಾಂಸದ ಮೆದೆ, ಮಿದುಳ ರಾಶಿ, ಮೂಳೆಗಳ ಬೆಟ್ಟ, ಹೆಣದ ದೊಗರು ಹರಿಯುತ್ತಿರುವ ನೆತ್ತರು ತಲೆಗಡಿದರೂ ಮುಂದುವರಿಯುತ್ತಿರುವ ಅಟ್ಟೆಗಳ! ಭೀಬತ್ಸ ಚಿತ್ರದೊಂದಿಗೆ ತಲೆಬುರುಡೆಗಳನ್ನು ಸಂಗ್ರಹಿಸಿಕೊಳ್ಳುತ್ತಿರುವ ಭೂತಕೋಟಿಯ ಕಲ್ಪನೆಯೂ ಬೆರೆತು ಭೀಕರತೆ ಮನ ಮುಟ್ಟುತ್ತದೆ. ಮತ್ತೊಬ್ಬ ಕವಿ 'ಖಳ್ಗಕಾಂತೆಯ ವಿನೋದವನಕ್ಕೆಣೆಯಾಯ್ತು ಸಂಗರಂ' ಎನ್ನುತ್ತಾನೆ.

ಮಿಱುಗುವ ಖಂಡದಿಂದೆಸೆವ ಮಂಡಳಿಗಳು ರಿಪುಕುಂಭೀಕುಂಭದಿಂ
ಪೊರಗೊಗುತಿರ್ಪ್ಪ ಮುತ್ತುಗಳ ಮಲ್ಲಿಗೆ ತೀಬ್ರಕರಾಭಿಘಾತದಿಂ
ದೊಱಗುವರಾತಿ ಪತ್ರವೇಲೆಗಂ ಯಿ [ಛ] ಭೃಂಗನಿನಾದಮಾಗೆನೋ
ಡೆಱಗನ ಖಳ್ಗಕಾಂತೆಯ ವಿನೋದವನಕ್ಕೆಣೆಯಾಯ್ತು ಸಂಗರಂ[೪೬]

ಈ ವರ್ಣನೆಗಳಲ್ಲಿ ಪಂಪನ ಪ್ರಭಾವವನ್ನು ಗುರುತಿಸಬಹುದು. ವೀರರ ದರ್ಪ, ಉತ್ಸಾಹ, ಅಟೋಪಗಳ ವರ್ಣನೆಯು ವೀರರಸವನ್ನು ಹೊಮ್ಮಿಸುವುದಕ್ಕೆ ಉಚಿತ ಪದಬಂಧ ಓಜಸ್ಸಿನಿಂದ ಕೂಡಿರುತ್ತದೆ.

ಎರಗಿದ ಗಂಡ ಮಂಡಳಿಯನಂಡಲೆದಾಳ್ದನ ಪಾದದಲ್ಲಿ ತನ್ನೆರಗಿಪ...
ಎರಗನ ಗಂಡ ಡಿಂಡಿಮದ ಡಂಬರವೊಪ್ಪುವುದೀ ಧರಿತ್ರಿಯೊಳ್

ಎಂಬಲ್ಲಿ ಹಲವು ಬವರಗಳನ್ನು ಏಕಾಂಗದಿಂದ ಗೆದ್ದು ಆಳ್ದನನ್ನು ಮೆಚ್ಚಿಸಿದ್ದ ವೀರ ಶ್ರೀಕರಣದ ಹೆಗ್ಗಡೆ ಎಱೆಯಣ್ಣನ ಗಂಡುತನವೂ ಸ್ವಾಮಿನಿಷ್ಠೆಯೂ ಇಲ್ಲಿ ವ್ಯಕ್ತವಾಗಿದೆ.

ಆಡುವ ತೊಳುವ ಕುರುಂಚುವ ನಿಚ್ಚುಗಲಿ ರಾಮನಾರ್ದುಯಿಳಿದಡೆ ರಣದೊಳು ತಟ್ಟುರ್ಚ್ಚಿ ಹೋಗಿ ಕಳ್ಳರ ನಿಟ್ಟೆಲುವಂ ಮುಱಿದು' ತುರುಗಳನ್ನು ಕಾಪಾಡಿ ಮಡಿದ ವೀರ ರಾಮನ ಚಿತ್ರ ಅವನು ಮಿಂಚಿನ ವೇಗದಲ್ಲಿ ಕತ್ತಿಯನ್ನು ಝಳಪಿಸುವುದನ್ನು ತೋಳು ಬೀಸುವ ಚಾತುರ್ಯವನ್ನು ಮನಮುಟ್ಟಿಸುತ್ತದೆ.[೪೭]

ರಣರಂಗದಲ್ಲಿ ಮೊಳಗುವ ರಣಗಹಳೆ ರಣಭೇರಿಗಳು ಮದ್ದಾನೆಗಳ ಘೀಂಕಾರ, ನುಗ್ಗಿ ಬರುವ ಸೈನ್ಯವು ವೀರನ ಮನದಲ್ಲಿ ರಣೋತ್ಸಾಹವನ್ನು ಉಕ್ಕಿಸುತ್ತದೆ. 'ಬಿಸುಗೆಕಳನಾಗಿ' ಹೋರಾಡಿ ವೈರಿ ಪ್ರಮುಖರನ್ನು ಕೊಂದ ಅಣ್ಣವಸಯ್ಯನ ಯುದ್ಧ ವೈಖರಿಯನ್ನು ಆ ಶಾಸನದ ಕವಿಯೂ, ಶಿಲ್ಪಿ ವಿಭೋಗನೂ ಅದ್ಭುತವಾಗಿ ಕಡೆದಿದ್ದಾರೆ.[೪೮]

ರಣರಂಗ, ಯುದ್ಧವರ್ಣನೆಗಳಲ್ಲಿ ಉತ್ಪ್ರೇಕ್ಷೆ ಹೆಚ್ಚು, ಅನೇಕ ಕವಿಸಮಯಗಳನ್ನು ಬಳಸಿಕೊಂಡು ಕಲ್ಪನೆಯನ್ನು ಹರಿಯಬಿಡುತ್ತಾನೆ ಕವಿ.

> ಕದನದೊಳಿದಿರ್ಚಿದದಟರ| ಮದರದನಿಯ ಬಿದುವಿನಲ್ಲಿ ನಟ್ಟ ಸರಲ್ ಬಾ||
> ಲದ ಮೊದಲೊಳುಚ್ಚಳಿಸುವೊಂ| ದದಟಾ ನೃಪನಾರಸಿಂಹ ದೇವಂಗೆ ನಿಜಂ||[೪೯]

ಇತ್ಯಾದಿ ಅನೇಕ ವರ್ಣನೆಗಳನ್ನು ನೋಡಬಹುದು.

**೩. ದೈವ ದೇವಾಲಯಗಳ ವರ್ಣನೆ :**

> ಕತ್ತುರಿ (ಯ) ಕಂಪು ಕೈಸುರಿಗೆ ಹೊಂನೊಱೆ ಹಟ್ಟಿಗೆ ಸಂಣಗಗ್ಗರಂ
> ಮುತ್ತಿನ ದಂಡೆ ತೋಳ ಮಣಿ ಬೈತಲೆ ನೆಯ್ದುಲೆ ತೂಲ ಜಂನ್ನುರಂ
> ಬೆತ್ತದ ಸೆಂಡುಕೋಲ್ ಮೊರೆವ ದಂತದ ಪಾವುಗೆ ಬ್ರಿಂಗದೋಲೆ ಮೈ
> ವೆತ್ತಿರೆ ರಾತ್ರಿಯೊಳ್ ಸುಳಿವ ಬ್ರಹ್ಮಯನೀಗೆಮಗಿಷ್ಟ ಸಿದ್ಧಿಯಂ[೫೦]

ಬ್ರಹ್ಮಯ್ಯನ ಈ ವರ್ಣನೆ ದೇಸೀ ಸೌಂದರ್ಯದಿಂದ ಕೂಡಿ ಮೋಹಕವಾಗಿದೆ. ಸುಂದರ ಮೋಹಕ ಪ್ರತಿಮೆಯನ್ನು ನೋಡಿಯೇ ಕವಿ ಪದ್ಯ ಬರೆದಂತಿದೆ.

> ಪಳುಕಿನ ಕಳೆವೆಳಗಿನಮಯಿ |ವೊಳಪಿನ ತಿಳಿ ಜೊಂನನಗೆಯ ಕಱೆಗೊರಲಿಂ ಕ||
> ಣ್ಗೊಳಿಪ ಪೆಱೆದಲೆಯದೇವಂ |ಹೊಳೆಯನ ಪಾಲಿಸುಗೆ ಕರುಣದಿಂ ರಾಮೇಸಂ||[೫೧]

ತಿಳಿಯಾದ ಕನ್ನಡ, ದೇಸೀತನ ಸರಳ, ಆಕರ್ಷಕ ಚಿತ್ರ ಶಿವನನ್ನು ಆತ್ಮೀಯ ದೈವವನ್ನಾಗಿಸಿದೆ.

ಕ್ರಿ.ಶ.೯೭೧-೭೨ರ ನೇರ್ಲಿಗೆಯ ಅಣ್ಣವಸಯ್ಯನ ಕ್ಷಾತ್ರತೇಜವನ್ನು ಬಣ್ಣಿಸುವ ಕಂದಪದ್ಯಗಳನ್ನು ರಚಿಸಿದ ಕವಿ ಈ ಪ್ರದೇಶದ ಶಾಸನದ ಮೊದಲ ಕವಿಯಾದರೆ, ಕೋಳಿಗುಂದದ ಸ್ಥಳೀಯ ಪ್ರಭು ಹೊಳೆಯ ಗಾವುಂಡನ ಈ ಶಾಸನವನ್ನು ಬರೆದ ಕವಿ ಕೊನೆಯ ಕವಿಯಾಗುತ್ತಾನೆ. ದುರ್ದೈವದಿಂದ ಇಬ್ಬರೂ ತಮ್ಮ ಹೆಸರನ್ನು ಹೇಳಿಕೊಂಡಿಲ್ಲ.

ಹಿರಿಯೂರಿನ ಕುಂಜೇಶ್ವರ ದೇವಾಲಯವನ್ನು ಯಿದು ಕೈಲಾ ಸಮೊ ಮೇಣೆದೆತ್ತಿಸಿದ ವುದ್ಯತ್ಪುಂಣ್ಯ ಸಂಶುದ್ಧ ಬೀಜದ ಹೇಜೊಟ್ಟಿಲೊ.... ದಿಶಾಳೋಕನಿಮಿತ್ತ ವೇಱುವೆಡೆಗೆಂದಿಕ್ಕಿರ್ದ್ದ ವೇದೀ ವಿಳಾ ಸದ ವಿಸ್ತಾರಮೊ ಪೇಳೆನಲ್ಕೆ ಮೆಱಗುಂ ಶ್ರೀಕುಂಜನಾಥಾಶ್ರಯಂ" ಎಂದಿದ್ದಾನೆ ಕವಿ.[೫೨]

ಉದ್ಯತ್ಪುಂಣ್ಯ ಸಂಶುದ್ಧ ಬೀಜದ ಹೇರೊಟ್ಟಿಲೆಂಬ ಮಾತು ಸುಕೃತ ಪುಂಜನಾದ ಶಿವಶರಣ ಕುಂಜನ ಪರೋಕ್ಷವಿನಯದ ಆ ದೇವಾಲಯಕ್ಕೆ ಉಚಿತವಾಗಿದೆ. ಏಳು ಅಡಿ ಎತ್ತರವಾದ ಮೆಟ್ಟಲುಗಳನ್ನು ಹೊಂದಿದ್ದು ಎದ್ದು ನಿಂತಂತಿರುವ ಈ ದೇವಾಲಯವನ್ನು ದಿಶಾಲೋಕನಕ್ಕಾಗಿ ನಿರ್ಮಿಸಿದ ವೇದೀ ವಿಳಾಸವೆಂದಿರುವುದೂ ಸಾರ್ಥಕವಾದ ಹೋಲಿಕೆಯೇ ಆಗಿದೆ. ಉತ್ತಮ ಕವಿತ್ವ ಪ್ರತಿಭೆಯುಳ್ಳ ಈ ಅಜ್ಞಾತ ಕವಿಯ ಕುಂಜೇಶ್ವರನ ಪ್ರಾರ್ಥನಾ ಪದ್ಯವೂ ಚಂದ್ರನ ಸೌಂದರ್ಯ, ಬೆಳುದಿಂಗಳ ಆಕರ್ಷಕತೆ, ತಂಪು ಇತ್ಯಾದಿಗಳನ್ನು ಅನುಭವಕ್ಕೆ ತಂದುಕೊಡುತ್ತದೆ.

**೪. ಪ್ರದೇಶ ವರ್ಣನೆ :** ಚಂಪೂ ಕಾವ್ಯಗಳಲ್ಲಿ ಕಂಡುಬರುವ ಅಷ್ಟಾದಶ ವರ್ಣನೆಗಳಲ್ಲಿ ಕೆಲವನ್ನಾದರೂ ಶಾಸನ ಕವಿ ವರ್ಣಿಸಲು ಅವಕಾಶ ಮಾಡಿಕೊಳ್ಳುತ್ತಾನೆ. ನಾಡಿನ ಭೌಗೋಳಿಕ ವರ್ಣನೆ ಪ್ರಕೃತಿ ಸೌಂದರ್ಯ, ಸುಖ ಸಂಪತ್ತು, ಕೆರೆ, ಕಾಲುವೆ ತೋಪು, ತೋಟ, ಹೂವು, ದುಂಬಿ, ಹಕ್ಕಿ ಪಕ್ಷಿಗಳು, ಹಣ್ಣು ಹಂಪಲು ಬೆಳೆದು ನಿಂತ ಪೈರು ಪಚ್ಚೆಯ ವರ್ಣನೆಯನ್ನು ಚುಟುಕಾಗಿ ತರುತ್ತಾನೆ. ಜೊತೆಗೆ ಪುರಜನರ ವರ್ಣನೆ ಕೋಟೆ, ಅಗಳುಗಳ ವರ್ಣನೆ, ದೇವಾಲಯ, ವರ್ತಕರು, ಮಹಾಜನರು, ಅಗ್ರಹಾರ ಹೀಗೆ ಅವಕಾಶ ಸಿಕ್ಕಲೆಲ್ಲ ತನ್ನ ಪ್ರತಿಭೆಯನ್ನು ಹರಿಯಬಿಟ್ಟಿರುವುದು ಕಾಣುತ್ತೇವೆ. ಕಡೆಗೆ ಸಮುದ್ರ ವರ್ಣನೆಯನ್ನು ಸೇರಿಸುವ ಚಪಲಕ್ಕೂ ಕವಿಗಳು ಒಳಗಾಗಿದ್ದಾರೆ.

'ಗಂಭೀರಾಸ್ಫಾರ ವೇಳಾಂ ಬಹಳ ಪರಿವ್ರಿಡಲ್ಲೋಲ ಕಲ್ಲೋಲ ಮಾಲಾರಂಭ ಪ್ರೋಡ್ಡೀನ ಫೇನಪ್ರಬಳ ಜಳಚರಲ್ಲೋಲಶಪಾಠೀನ..." ಮುಂತಾಗಿ ಘನ ಘನ ಧ್ವಾನರೌದ್ರವಾದ ಸಮುದ್ರವನ್ನು ಅದರ ಗಾಂಭೀರ್ಯ ಅಬ್ಬರಗಳು ಮನಮುಟ್ಟುವಂತೆ ವರ್ಣಿಸಲಾಗಿದೆ.[೫೩] ನೀರ್ಗುಂದನಾಡಿನ ಸಂತೆಶಿವರದ ಶಾಸನದ ಈ ಸಮುದ್ರವರ್ಣನೆಯು ಗುಣವರ್ಮನ ಶೂದ್ರಕ'ದಲ್ಲಿನ ವರ್ಣನೆಯಾಗಿದೆ. ಅದನ್ನು ಈ ಶಾಸನದಲ್ಲಿ ಕವಿ ಸೇರಿಸಿಕೊಂಡಿದ್ದಾನೆಂದು ವಿದ್ವಾಂಸರು ಗುರುತಿಸಿದ್ದಾರೆ.[೫೪] ಈ ಶಾಸನ ಕವಿಯ ಇತರ ವರ್ಣನೆಗಳು ಶ್ರೇಷ್ಠವಾಗಿದ್ದು ಅವನ ಕಾವ್ಯ ಪ್ರತಿಭೆಗೆ ಸಾಕ್ಷಿಯಾಗಿವೆ. ಶೂದ್ರಕನ ಪದ್ಯದ ಆಕರ್ಷಣೆಗೆ ಒಳಗಾಗಿರುವ ಈ ಕವಿ ಸೂಕ್ತಿ ಸುದಾರ್ಣವದ ಸಂಕಲನಕಾರ ಮಲ್ಲಿಕಾರ್ಜುನನಿರಬಹುದೇ ಎಂಬ ಅನುಮಾನ ಉಂಟಾಗುತ್ತದೆ ಈ ಪದ್ಯ ಸೂಕ್ತಿಸುಧಾರ್ಣವದಲ್ಲಿಯೂ ಇದೆ. ಮಲ್ಲಿಕಾರ್ಜುನನ ಕಾಲ ದೇಶಗಳಿಗೆ ಈ ಶಾಸನ ಕಾಲ ಪ್ರದೇಶ ಹೊಂದಿಕೆಯಾಗುತ್ತದೆ. ಈ ಶಾಸನದಲ್ಲಿ ಅಮಿತ ದಂಡನಾಯಕನ ಕೃತಕೃತ್ಯತೆ, ತ್ಯಾಗ ಪುಣ್ಯ ವಿತರಣ ಗುಣಗಳನ್ನು ತಾನು ಪಡೆಯಬೇಕೆಂದು ಸುರತರುವು ಉಗ್ರ ತಪಸ್ಸುಗೆಯ್ಯುತ್ತಿರುವ ಚಿತ್ರ ಮುದಗೊಳಿಸುವಂತಿದೆ. ''.... ಸಜಟಾವಲ್ಕಲ, ಪೌಷ್ಪ ಧೂಳೀ

ಶಿತಭಸ್ಮಾಲೇಪ, ಆಲಂಬಿತ ಫಲವು ವಿಲುಳಿತ ಕುಂಡಳಗಳು, ಭೃಂಗ ಮಾಲೆಯು ಶ್ರೇಷ್ಠವಾದ ಕೃಷ್ಣಾಜಿನ ಉದಕಾಹಾರವನ್ನು ಮಾತ್ರ ಸೇವಿಸುತ್ತ ಬದ್ಧಮೌನದಲ್ಲಿ ನಿಂತಿರುವ ತಪಸ್ವಿ ಸುರತರುವಿನ ರೂಪಕ ಚಿತ್ರವು ಫಲಪುಷ್ಪ ಭರಿತ ವೃಕ್ಷರಾಜನ ಧೀರ ಗಾಂಭೀರ್ಯವನ್ನೂ ತಪಸ್ವಿಯ ಸ್ಥಿರತೆ ಕಠಿಣ ವ್ರತಾಚಾರಣೆಯನ್ನು ತಪೋವನದ ಬದ್ಧ ಮೌನವ ವಾತಾವರಣವನ್ನು ಅನುಭವವೇದ್ಯವಾಗಿಸುತ್ತದೆ.

ಒಂದೊಂದು ಯೋಜನಕ್ಕೂ ಹಲವು ಊರುಗಳೂ ಊರನ್ನು ಸುತ್ತಿ ಬಳಸಿದ ನಂದನವನ ಉಪವನಗಳು ಅಲ್ಲಿಗಲ್ಲಿಗೆ ಕಂಡುಬರುವ ತಾವರೆಯಕೊಳಗಳಿಂದ ಕೂಡಿ ಪಥಿಕರನ್ನು ತಡೆದು ತನ್ನತ್ತ ಸೆಳೆಯುವ ಮನೋಜ ವಿಭ್ರಾಜಿತರಾಗದ ಆಲಯ'ದಂತೆ ಹೊಯ್ಸಳನಾಡು ಕಂಗೊಳಿಸುತ್ತಿತ್ತೆಂದು ನಾಡಿನ ಚೆಲುವನ್ನು ಹೊಗಳಿದೆ.[೫೫] ತಾವರೆಗಳಿಂದಲೂ ದುಂಬಿಗಳಿಂದಲೂ ತುಂಬಿದ ಕೆರೆಗಳು, ಶುಕಪಿಕಗಳಿಂದ ತುಂಬಿದ ಉದ್ಯಾನಗಳು, ತುಂಬಿನಿಂತ ಪೂರ್ಣತಟಾಕಗಳು, ಕಳಿತ ಗಂಧಶಾಳೀ ಪರಿಮಳ, ಕಮಲ ಕಣ್ದೆರೆದಂತಿರುವ ಕೊಳಗಳು, ಉತ್ತುಂಗ ಪ್ರಭೆಯಿಂದ ಕೂಡಿದ ಸುರ ಗೃಹ, ಸಿರಿವಂತ ಪ್ರಜಾಪೂರಿತವಾದ ಅರಸಿಯಕೆರೆಯ ವಿಶೇಷತೆಯನ್ನು ವಸುಧೈಕ ಬಾಂಧವ ರೇಚಿದಂಡನಾಯಕನ ಶಾಸನ ಕವಿ ವರ್ಣಿಸಿದ್ದಾನೆ. ಈ ಕವಿಯು ಶ್ರೇಷ್ಠ ಕವಿತಾ ಶಕ್ತಿಯನ್ನು ಹೊಂದಿದ್ದು ರೇಚರಸನ ವ್ಯಕ್ತಿ ಚಿತ್ರವನ್ನು ಉತ್ತಮವಾಗಿ ಕಡೆದಿದ್ದಾನೆ.[೫೬]

ಕಣೆಕಟ್ಟೆಯ ಸಂಪತ್ತನ್ನು ಪ್ರಕೃತಿ ಸೌಂದರ್ಯವನ್ನು ಕವಿ ಶಾಂತಿನಾಥನು 'ತೀವಿದ ಚಂನನಪ್ಪ ಕೆಱೆಯೊಪ್ಪುವ ಕಾತ ಕವುಂಗು ಸುತ್ತಲುಂ ಬೆಳೆದಿರ್ದ ಸುಗಂಧ ಶಾಳಿಯಿಂದ ಶ್ರೀ ವನಲಕ್ಷ್ಮಿಯು ಕಣ್ದೆರೆದ ಹಾಗೆ ಕಂಗೊಳಿಸುತ್ತಿತ್ತೆಂದು ವರ್ಣಿಸಿದ್ದಾನೆ. "ಹಸವಿಲ್ಲ ಜನಕೆ ಬೆಳೆಯಿಂ, ಹಸವಿಲ್ಲಳಿಗಲರ್ಗ್ಗಳಿಂದೆ, ಹಕ್ಕಿಗೆ ಬನದಿಂದ ಹಸವಿಲ್ಲೆಂದೆನೆ" ಮುತ್ತನ ಹೊಸವೂರು ಸಮಸ್ತ ಸೌಖ್ಯಾವಾಸವಾಗಿತ್ತೆಂದು, ಎತ್ತರದ ಕೋಟೆ ಆಳವಾದ ಅಗಳು ಮುಗಿಲನ್ನೂ ಪಾತಾಳವನ್ನು ಮುಟ್ಟಿದ್ದವೆಂದು ಉತ್ಪ್ರೇಕ್ಷೆ ಮಾಡಿದ್ದಾನೆ ಮತ್ತೊಬ್ಬ ಕವಿ.[೫೭]

ಊರಿನ ಕೆರೆ ತಟಾಕಗಳ ವರ್ಣನೆಯು ಅವುಗಳ ವೈಶಾಲ್ಯತೆ, ಆಳಗಳನ್ನು ತಿಳಿಯಾದ ಸಿಹಿಯಾದ ನೀರನ್ನು ಅಲ್ಲಿ ಆಡುವ ಹಂಸೆ, ಮೀನುಗಳನ್ನು ತಾವರೆಗಳನ್ನೂ ಒಳಗೊಳ್ಳುತ್ತದೆ.

'ವದನ ಪಂಕಜ ವಕ್ಷಿಮತ್ಸ್ಯ ವುದರ ನೀರಂ ಕೂರ್ಮ್ಮ ವು
ನ್ಮದ ಚಕ್ರಂ ಕುಚಮಾಗೆ ಕಂನೆಗೆಱೆಯಂ ವಿಪ್ರೊತ್ತಮರ್ಗ್ಗಿತ್ತು....."

ಎಂಬ ಪದ್ಯದಲ್ಲಿ[೫೮] ಹುಲ್ಲೇಕೆರೆಯ ಶಾಸನ ಕವಿ ಬೂಚಿರಾಜ ಕಟ್ಟಿಸಿದ ಕನ್ನೆಗೆರೆಯನ್ನು ಕನ್ನಿಕೆಯೊಬ್ಬಳ ಚಲುವಿಗೆ ಸಮೀಕರಿಸಿ ಆ ಸುಂದರಿಯನ್ನು ಮಂತ್ರ ಪೂರ್ವಕವಾಗಿ ವಿಪ್ರೋತ್ತಮರಿಗಿತ್ತು ಕನ್ಯಾದಾನ ಮಾಡಲಾಯಿತೆಂದು ವಿಭಿನ್ನವಾಗಿ ವರ್ಣಿಸಿದ್ದಾನೆ.

೫. ಸ್ತ್ರೀ ವರ್ಣನೆ : ಶಾಸನಗಳಲ್ಲಿ ಸ್ತ್ರೀ ವರ್ಣನೆಗೆ ಹೆಚ್ಚು ಅವಕಾಶವಿರುವುದಿಲ್ಲ. ಅರಸಿಯರ ವರ್ಣನೆ ಅಧಿಕಾರಿ, ದಾನಿಗಳ ಮಡದಿಯರು ತಾಯಂದಿರ ವರ್ಣನೆಗಳಲ್ಲಿ ತೀರ ಸಾಂಪ್ರದಾಯಿಕವಾದ ಸ್ತ್ರೀತ್ವ, ಗರತಿತನ ಚೆಲುವಿಕೆಗಳ ವರ್ಣನೆಯು ಪುರಾಣ ಸ್ತ್ರೀಯರ ಹೋಲಿಕೆಯೊಂದಿಗೆ ಮುಗಿಯುತ್ತವೆ.

ಹೊಯ್ಸಳ ವಿನಯಾದಿತ್ಯನ ರಾಣಿಗೆ ಕೆಳೆಯಬ್ಬೆಯೆಂಬ ಹೆಸರು ಹೇಗೆ ಅನ್ವರ್ಥವಾದುದೆಂದು ಕವಿ ಮಲ್ಲಣ್ಣ ಪಂಡಿತ ಹೀಗೆ ಹೇಳಿದ್ದಾನೆ.

ಕೆಳೆಗಂಗೆಯೊಳಮಳತೆಯಿಂ |ಕೆಳೆ ಸೊಬಗಿಂ ಗಿರಿಜೆಯೊಡನೆ ಸಿರಿಯೊಡನೆಂದು||
ಕೆಳೆ ನಿಜ ಪತಿಯಭಿವೃದ್ಧಿಗೆ |ಕೆಳೆಯಬ್ಬೆಗೆ ನಾಮಮಾದುದಿಂತನ್ವರ್ತ್ಥಂ[೫೯]

ಸೆಳೆನಡುವಿನುರುಳಿಗುರುಳಿನಾ |ತೊಳಪಧರದ ಬೆಳಪ ಕಣ್ಗಳಬುಜಾನನದಿ ||
ಕಳಸ ಕುಚದ್ವಯದಾಕೆಯೆ |ವಿಳಸಿತವಾದರಸಿ ಕೆಳೆಯಬ್ಬರಸಿಯೆ ತನಗಂ ||[೬೦]

ಹೆಚ್ಚು ಲಘುವಕ್ಷರಗಳಿಂದ ಕೂಡಿ ಕೆಳೆಯಬ್ಬೆಯ ಹೆಸರಿನ ಜೊತೆಗೆ ಪ್ರಾಸಾಕ್ಷರಗಳು ಅನುವರ್ತನಗೊಳ್ಳುತ್ತ ಅವಳ ಸೌಂದರ್ಯವನ್ನು ವರ್ಣಿಸುವ ಚಮತ್ಕಾರ ಈ ಪದ್ಯದಲ್ಲಿದೆ. ಇಲ್ಲಿ ಅವಳ ಬಾಹ್ಯ ಸೌಂದರ್ಯ ಮಿಂಚಿದರೆ ಮೇಲಿನ ಪದ್ಯದಲ್ಲಿ ಅವಳ ಚಾರಿತ್ರ್ಯ, ಸ್ನೇಹಶೀಲತೆ ಅಭಿವ್ಯಕ್ತಗೊಂಡಿದೆ.

ಮಲಮಲದು ಮಲೆದು ಮಲೆಪರಾಗ |ಕುಲಮಂ ಬೇರ್ವೆರಸಿ ಕಿತ್ತು ಬಂಮಲೆ ಮುದದಿಂ||
ಘುಲಘುಲಕು ಘಲಕು ಘುಲಕೆನ|ಲಲೆವಳು ಪರಸತಿಯರ ವರ ಕೀರ್ತ್ಯೋನತಿಯಂ||[೬೧]

ಈ ಪದ್ಯದಲ್ಲಿ ಬಮ್ಮಲಾದೇವಿಯ ಕ್ಷಾತ್ರ ತೇಜವನ್ನು ಶಬ್ದಾಲಂಕಾರದಿಂದ ಕವಿಶಾಂತ ಮಹಂತ ಆಕರ್ಷಕವಾಗಿ ಹೇಳಿದ್ದಾನೆ. ಲ'ಕಾರ ಆವರ್ತನಗೊಂಡು ಇಡೀ ಶಬ್ದ ಚಿತ್ರಕ್ಕೊಂದು ಲಾವಣ್ಯವನ್ನು ತಂದುಕೊಟ್ಟಿದೆ. ಇವಳನ್ನು ಸವತಿ ಮುಖದರ್ಪಣೆ, ಸವತಿಯರ ಬೆಂನ ಚಂಮಟಿಗೆ, ಸವತಿಯರ ಮುಖದ ಕೈ ಇತ್ಯಾದಿಯಾಗಿ ವರ್ಣಿಸಲಾಗಿದೆ. ಇದು ಅರಸಿಯರ ವರ್ಣನೆಯಲ್ಲಿ ಸಾಮಾನ್ಯವಾದದ್ದು.

೬. ಕೀರ್ತಿಯ ವರ್ಣನೆ : ಯಶಸ್ಸನ್ನು ಕೀರ್ತಿಯನ್ನು ಶುಭ್ರಳೂ, ಶ್ವೇತ ವರ್ಣಳೂ, ಪವಿತ್ರಳೂ ಆದ ಹೆಣ್ಣಿಂಬಂತೆ ಕೀರ್ತಿ ಲಕ್ಷ್ಮಿಯೆಂದು ಕರೆದು ವರ್ಣನೆಗೆ ಅನೇಕ ಧವಳ' ವಸ್ತುಗಳನ್ನು ಬಳಸಿಕೊಳ್ಳುವುದು ಸಾಮಾನ್ಯವಾಗಿ ಕಂಡುಬರುತ್ತದೆ. "ಇಳೆಶುದ್ಧ ಸ್ಪಟಿಕೋಪಸ್ಥಗಿತಮಾಶಾಮಂಡಳಂ.....ಜ್ವಳಿತಂ ತಾನೆನೆ ಕೊರ್ಬಿ ಪರ್ವಿತು ಜಸಂ ಬಲ್ಲಾಳ ಭೂಪಾಳನಾ"[೬೨]

ಎಂಬ ಪದ್ಯದಲ್ಲಿನ ಶುದ್ಧ, ಸ್ಪಟಿಕ, ಕುಸುಮ, ಹಾರ, ನಿರ್ಮಳ ಶುಂಡಾಳ, ಪ್ರಭೆ, ಧವಳ, ತಾರಾಪಥ, ತಾರಕ ಇತ್ಯಾದಿ ಪದಗಳು ಅಕಳಂಕವಾದ ಶುಭ್ರ ಕೀರ್ತಿಯ ವರ್ಣನೆಗೆ ಸಾರ್ಥಕವಾಗಿ ದುಡಿದಿವೆ. ಇದು 'ಜಸವೆಂಬುದು ಬಿಳಿ' ಎಂಬ ಕವಿಸಮಯಕ್ಕೆ ಪೂರಕವಾಗಿದೆ. ಮತ್ತೊಂದು ಪದ್ಯದಲ್ಲಿ ಕೀರ್ತಿಯನ್ನು ಅಂಗನೆಗೆ ಹೋಲಿಸಿ ಅವಳ ಧೈರ್ಯ, ಸಾಹಸ, ಗಾಳು (ನೀಚ)ತನಕ್ಕೆ ಆಶ್ಚರ್ಯಪಡಲಾಗಿದೆ.

ಜಲವನ್ನು ದಾಟಬೇಕಾದರೆ ಕಾಂತೆಯರು ಗೇಣಂತರವನ್ನು ದಾಟಲಾರರು ಆದರೆ ಆಶ್ಚರ್ಯವೇನೆಂದು ಕೇಳು ಉಗುರು ಮುನ್ನೂರ್ವರುಗಳ ಜೊತೆಗೂಡಿ ನಿರ್ಮಲೆ ಕೀರ್ತ್ಯಂಗನೆಯು ಅಂಬುಧಿ ಪ್ರಕರವನ್ನು ದಾಟಿದ್ದಾಳೆ ಅಲ್ಲದೆ ದಿಗ್ದಂತಿ ಸಂಕುಲದ ದಂತಾಗ್ರದಲ್ಲಿ ವಿಶೇಷವಾಗಿ ನರ್ತಿಸುತ್ತಿದ್ದಾಳೆ ಇವಳಂತಗಾಳು ಯಾರಿದ್ದಾರೆ? ಎಂಬ ಅಭಿವ್ಯಕ್ತಿ ವಿಶೇಷವಾಗಿದೆ.[೬೩] ಇದು ಅಂಗನೆಯರ ಅಬಲತೆಯನ್ನು ಕೀರ್ತ್ಯಂಗನೆಯ ಸ್ವಾತಂತ್ರ್ಯವನ್ನು ಏಕಕಾಲದಲ್ಲಿ ಹೇಳಿದೆ.

**೭. ಕಾವ್ಯ ಸೌಂದಯ್ಯ, ನಾಟಕೀಯತೆ** : ಕೆಲವು ಶಾಸನ ಕವಿಯ ಪದ್ಯಗಳು ಸಂಭಾಷಣಾ ಚಾತುರ್ಯದಿಂದ, ಪ್ರಶ್ನೆ ಉತ್ತರ, ಆಶ್ಚರ್ಯ, ಆಡುಮಾತಿನ ಕಾಕುಗಳಿಂದ ಕೂಡಿದ್ದು ಲವಲವಿಕೆಯನ್ನು ಆತ್ಮೀಯತೆಯನ್ನು ಹೊರಹೊಮ್ಮಿಸುತ್ತವೆ. ನಾಟಕೀಯ ಗುಣಗಳಿಂದ ಕೂಡಿವೆ.

ಅತಿಶಯವಾದ ಅಲಕಾದೀಶನು ನಮಗೆ ಸಮಾನ, 'ಬಾರಾ, ನೋಡಾ' ಎಂದು ಪಥಿಕರನ್ನು ಆಹ್ವಾನಿಸುವ ವಾಣಿಜ್ಯರು ಅರಸೀಕೆರೆಯಲ್ಲಿದ್ದರಂತೆ. ಅಷ್ಟೇ ಅಲ್ಲ ಕವಿ ಅಲ್ಲಿನ ಕೊಯ್ಲಾಳ್ಗಳ ಗುಣವಿಶೇಷತೆಯ ಬಗೆಗೆ ಅನುಮಾನ ಬೇಡವೆಂದು ಹೇಳುತ್ತಾನೆ.

"ಸ್ಥಿರರೇ? ಮೇರುಗೆ ಸಂನಿಬರ್ , ಗುಣಿಗಳೇ? ಧರ್ಮ್ಮಾತ್ಮಜ ಪ್ರಖ್ಯರ್, ಈವರೆ? ಮಿತ್ರಾತ್ಮಜ ಪಾಟಿಗಳ್, ಕಲಿಗಳೇ? ದೇವೇಂದ್ರ ಪುತ್ರಂಗವರ್ದೊರೆಗಳ್, ಶೌಚಿಗಳೇ? ನದೀಜನೆ ಸಮಂ, ಗುಣ್ಪುಳ್ಳರೇ? ಸಾಗರ ನಿರುತಂ ಪಾಸಟಿ"ಗಳೆಂದ ಮೇಲೆ ಕೊಯ್ಲಾಳ್ಗಳನ್ನು ಏನೆಂದು ಹೊಗಳುವುದು.

ಸ್ಥಿರರೇ, ಗುಣಿಗಳೇ, ಈವರೇ, ಕಲಿಗಳೇ, ಶೌಚಿಗಳೇ, ಗುಣ್ಪುಳ್ಳರೇ? ಇತ್ಯಾದಿ ಚುಟುಕಾದ ಪ್ರಶ್ನೆಗಳಲ್ಲಿ ಜನರ ಶಂಕೆ, ಕೊಂಕುಗಳು ಕಾಣಿಸಿಕೊಂಡರೆ ಅದಕ್ಕೆ ಅಷ್ಟೇ ಚುಟುಕಾಗಿ ಸಮರ್ಥವಾಗಿ ಶಂಕೆಗೆ ಅವಕಾಶವಿಲ್ಲದಂತೆ ಉತ್ತರಿಸಿರುವ ಕ್ರಮ ಕವಿಯ, ಪ್ರತಿಭೆಗೆ ಸಾಕ್ಷಿಯಾಗಿದೆ.

ಯುದ್ಧರಂಗದಲ್ಲಿ ಮೊಳಗುತ್ತಿರುವ ನಿಸ್ಸಾಳ ರಣಕಹಳೆಯ ರವವನ್ನು ಆಲಿಸಿ ತಲ್ಲಣಿಸಿದ ವೈರಿರಾಯರು ವೀರನರಸಿಂಹನಲ್ಲಿಗೆ ಬಂದು ಅಂಜುತ್ತಾ ಕೈ ಮುಗಿದುಕೊಂಡು 'ನಿನ್ನೊಡನೆ ವಿರೋಧಮಂ ನೆಗಳ್ದರಾರ್ಬದಿಕಿರ್ಪರ್? ಅದೆಲ್ಲಿ ಪೊಕ್ಕಪರ್? ಕಡುಪನೆ ಮಾಣ್ದು ಕಾವುದು" ಎನ್ನುತ್ತಾ ಅಂಗಲಾಚುತ್ತಾರಂತೆ. ಮತ್ತೆ ಕೆಲವರು 'ದೇವಾ ಎಮ್ಮನೆಮ್ಮ ಸ್ಥಳದಿಂ ಬಿಟ್ಟೆರ್ದು ಪೋಪಂತಿರೆ ನೆನೆಯದಿರ್" ಎಂದು ಅರ್ಥ, ಹಸ್ತಿ, ಅಶ್ವ, ರತ್ನಾವಳಿಯನ್ನು ತಂದಿತ್ತು ಪಾದಕ್ಕೆರಗುವರಂತೆ[೬೪] ಈತನೊಂದಿಗೆ ಕಾದುವುದು ನಮ್ಮಳವಿಗೆ ಆಗದೆಂಬ ಅರಿವು ಅವರಿಗಿದೆ.

'ಮನುಮಾರ್ಗ ವಿಷ್ಣುಭಕ್ತಂ ರಿಪುಗಿರಿಕುಲಿಶಂ ವೀರವಿಷ್ಣುಕ್ಷಿತೀಶಂ ಮುನಿಸಿಂದೆಳ್ತಂದನ್ ಇನ್ನಾವೆಡೆಯೊಳ್ ಅಡಗುವಂ? ನಮ್ಮ ಕಾವಂನನಾವಂ? ಮನಂಬಂದಂತೆ ಈಗಳಾತಂ ನಡಪಲಿ ದಯೆಯಿಂದ" ಎಂದು ಕಾಣಿಕೆಯಿತ್ತು ಬದುಕಲು ಬಯಸುವ ಶತ್ರುಗಳ ದಿಗ್ಭ್ರಾಂತಿಯನ್ನೂ ಅಡಗುವ

ತಾಣವಿಲ್ಲವೆಂಬ, ಆಶ್ರಯ ನೀಡಿ ಕಾಯುವವರಿಲ್ಲವೆಂಬ ಅಸಹಾಯಕತೆ, ಮನಬಂದಂತೆ ಆತ ನಡೆಸಲಿ ಎಂಬ ಅವರ ಪೂರ್ಣ ಶರಣಾಗತಿಯ ಭಾವ, ತುಂಡು ತುಂಡಾದ ವಾಕ್ಯಗಳು ಮಾತಿನ ಕಾಕಿನಿಂದ ನಾಟಕೀಯವಾಗಿ ಮೂಡಿ ಬಂದಿದೆ. ವೀರರಸ, ಹಾಸ್ಯರಸವನ್ನು ಅಭಿವ್ಯಂಜಿಸುತ್ತದೆ.[೬೫]

**೮. ಅಲಂಕಾರಗಳು :** ಶಾಸನ ಕವಿಗಳ ಉಪಮೆ, ರೂಪಕ, ಪ್ರತಿಮೆ. ಸಹಜೋಕ್ತಿಗಳು ಆಕರ್ಷಕವಾಗಿವೆ. ಗ್ರಹಣದಂತಹ ಸಹಜಕ್ರಿಯೆಯನ್ನು ಬಳಸಿಕೊಂಡು ಬಲ್ಲಾಳನ ಪರಾಕ್ರಮದ ವರ್ಣನೆ ಮಾಡಿರುವ ಪದ್ಯ ಹೀಗಿದೆ.

ಇದು ಸರ್ವಗ್ರಾಸಂಗೊ|ಳ್ವುದು ಭಾಸ್ವದ್ರಾಜ ಮಂಡಳಂಗಳನಿಂ ಮೋ||
ಕ್ಷದ ದೆಸೆಯಿಲ್ಲೆಂಬಿನಮೀ |ಯದು ಪತಿ ಬಲ್ಲಾಳ ಬಾಹು ರಾಹು ವಿಚಿತ್ರಂ||[೬೬]

ರಾಹು ಕೇತುಗಳ ಆಕ್ರಮಣಕ್ಕೆ ತುತ್ತಾಗಿ ಸೆರೆ ಸಿಕ್ಕುವ ಸೂರ್ಯಚಂದ್ರರಿಗಾದರೋ ಬಿಡುಗಡೆ ದೊರಕುವುದೆಂಬ ಬರವಸೆಯಿದೆ ಆದರೆ ಪರಾಕ್ರಮಿಯಾದ ಬಲ್ಲಾಳ 'ಬಾಹು ರಾಹು' ವಿಚಿತ್ರವಾದುದು. ಅದು ತೇಜೋಮಯ ರಾಜಮಂಡಳಗನ್ನು ಮೋಕ್ಷಕ್ಕೆ ಅವಕಾಶವೇ ಇಲ್ಲದಂತೆ ಸರ್ವಗ್ರಾಸಂಗೊಳ್ವುದು ಎಂದು ಹೇಳುತ್ತಾ ಕವಿ ವೀರ ಬಲ್ಲಾಳನ ವಿಚಿತ್ರ ಬಾಹುಗ್ರಹಣಕ್ಕೆ ಒಳಗಾದವರ ಸ್ಥಿತಿಯನ್ನೂ, ಬಲ್ಲಾಳನ ಪರಾಕ್ರಮವನ್ನು ಯಶಸ್ವಿ ರೂಪಕ ಚಿತ್ರದ ಮೂಲಕ ಕಟ್ಟಿಕೊಟ್ಟಿದ್ದಾನೆ. ಮತ್ತೊಬ್ಬ ಕವಿ ಎರೆಯಂಗ ನೃಪನ 'ಭುಜದಸಿಹಂಸ'ದ ಚಿತ್ರವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ.

ಅನತರಾಗದ ರಿಪು ನೃಪ|ರಾನನ ಸರಸಿರುಹ ನಾಳಮಂ ಖಂಡಿಸಲೆಂ||
ದಾ ನೀಳ್ಕುಮದಾನೀಳ್ಕುಮ |ದಾ ನೀಳ್ಕುಮದೆಱಗನೃಪನ ಭುಜದಸಿ ಹಂಸಂ||[೬೭]

ತನಗೆ ಶರಣಾಗದ ವೈರಿ ರಾಜರನ್ನು ತನ್ನಂಕೆಗೆ ತಂದುಕೊಳ್ಳಲು ಮತ್ತೆ ಮತ್ತೆ ಚಾಚುವ ಎರೆಯಂಗ ನೃಪನ ಭುಜಾಸಿಗೂ, ಬಾಗದೆ ನಿಂತಿರುವ ತಾವರೆಯ ದಂಟನ್ನು ಖಂಡಿಸುವ ಸಲುವಾಗಿ ಮತ್ತೆ ಮತ್ತೆ ಕತ್ತನ್ನು ಚಾಚುತ್ತಿರುವ ಹಂಸಕ್ಕೂ ಅಭೇದ ಕಲ್ಪಿಸಿ ಚಿತ್ರಿಸಲಾಗಿದೆ. ಇಲ್ಲಿ ಎರೆಯಂಗನ 'ಭುಜಾಸಿ' ಹಿನ್ನೆಲೆಗೆ ಸರಿದು ತನ್ನ ಕೊರಳನ್ನು ಚಾಚುತ್ತ ಮತ್ತೆ ಮತ್ತೆ ತಾವರೆಯ ದಂಟನ್ನು ತುಂಡು ಮಾಡಲು ಹವಣಿಸುತ್ತಿರುವ ಹಂಸದ ಚೆಲುವು ಓದುಗರ ಕಣ್ಣ ಮುಂದೆ ನಿಲ್ಲುತ್ತದೆ. ಹಂಸದ ಕೊರಳ ಮೃದುತ್ವದ ಮುಂದೆ 'ಭುಜಾಸಿಯ' ಕಾಠಿಣ್ಯವು ಮರೆಯಾಗಿಬಿಡುತ್ತದೆ. 'ಆ ನೀಳ್ಕುಮದಾನೀಳ್ಕುಮದಾನೀಳ್ಕುಮದು' ಎಂಬ ದೀರ್ಘಗಳ ಪುನರಾವರ್ತನೆ ಹಂಸದ ಕೊರಳ ಕೊಂಕನ್ನು ನಾಟ್ಯೀಕರಿಸಿದೆ. ಈ ಪದ್ಯ ಕ್ರಿ.ಶ.೧೨೧೩ರ ಮತ್ತೊಂದು ಶಾಸನದಲ್ಲೂ ಕಾಣಿಸಿಕೊಂಡಿದೆ.[೬೮] ಇದೇ ಕವಿ ತೈಲ ದಂಡಾದೀಶನ ಚೆಲುವು, ಪರಾಕ್ರಮ ದಾನಗುಣಗಳನ್ನು 'ಹರಿತನಯ' ಎಂಬ ಪದದ ಶ್ಲೇಷೆಯ ಮೂಲಕ ಮನಗಾಣಿಸಿದ್ದಾನೆ.

ಆದಿತ್ಯನ ಕೆಲದೊಳ್ ಚಂ|ದ್ರೋದಯ ಮೆಸೆಯದ ಪೊಲೀಧರಾಮಂಡಳದೊಳ್||
ವಾದಿಗಳೇವೆಂಬ ಟುಂಟುಕ|ವಾದಿಗಳೆಸೆದಪರೆ ವಾದಿರಾಜನ ಸಭೆಯೊಳ್||[೬೯]

ಎಂಬ ಪದ್ಯದಲ್ಲಿ ಜಗದೇಕ ಮಲ್ಲನೆಂಬ ಬಿರುದಿನ ವಾದಿರಾಜ ಮುನಿಯ ವಾಗ್ ವೈಖರಿಯ ಮುಂದೆ ಇತರರು ಹೇಗೆ ನಿಸ್ತೇಜರಾಗುತ್ತಾರೆಂಬುದನ್ನು ಉತ್ತಮ ಉಪಮೆಯ ಮೂಲಕ ಹೇಳಿದ್ದಾನೆ. ಸ್ವಯಂ ಪ್ರಕಾಶಿಯಲ್ಲದ ಚಂದ್ರನಂತೆ ಸತ್ವ ಹೀನರಾದ 'ಟುಂಟುಕವಾದಿ'ಗಳು ಸ್ವಯಂ ಪ್ರಕಾಶ ಹೊಂದಿ ತೇಜೋಮಯನಾದ ಸೂರ್ಯನಂತಿರುವ ವಾದಿರಾಜನ 'ವಾದ ಸಭೆಯಲ್ಲಿ' ಕಳಾಹೀನರಾಗುತ್ತಿದ್ದರೆಂಬ ಹೋಲಿಕೆಯು ವಾದಿರಾಜನ ಸ್ವಸಾಮರ್ಥ್ಯ, ಜ್ಞಾನ ಪ್ರಭೆಯನ್ನು ಪ್ರಕಟಪಡಿಸುವಲ್ಲಿ ಯಶಸ್ವಿಯಾಗಿದೆ.

> ಪಡೆ ಮಾತೇಂ ಬಂದು ಕಂಡಂಗಮೃತ ಜಳದಿತಾಂಗರ್ವದಿಂಗಂಡವಾತಂ
> ನುಡಿವನಂಗೇನನೆಂಬೈ ಪ್ರಳಯ ಸಮಯದೊಳು ಮೇರೆಯಂ ಮೀಱಿಬರ್ಪಾ
> ಕಡಲಂನಂ ಕಾಳನಂನಂ ಮುಳಿದ ಕುಳಿಕನಂನಂ ಯುಗಾಂತಾಗ್ನಿಯಂನಂ
> ಸಿಡಿಲಂನಂ ಸಿಂಗದಂನಂ ಪುರಹರನುರಿಗಣ್ಣಂನನೀ ನಾರಸಿಂಹಂ[೨೧]

ಪ್ರತಿಮೆಗಳ ಮಾಲಿಕೆಗಳಿಂದ ತುಂಬಿಹೋಗಿರುವ ಈ ವರ್ಣನೆಯು ಪರಾಕ್ರಮಿಯ ಪ್ರತಾಪದ ಬಿಸಿಯನ್ನು ಮುಟ್ಟಿಸುವಲ್ಲಿ ಯಶಸ್ವಿಯಾಗಿದೆ. ಸಾಲುಸಾಲಾಗಿ ಮೂಡಿರುವ ಪ್ರಳಯ, ಮೇರೆಮೀರಿ ಬರುವ ಕಡಲು, ಕಾಳಕೂಟ, ಮುಳಿದ ಕುಳಿಕ, ಪ್ರಳಯಾಗ್ನಿ, ಸಿಡಿಲು, ಸಿಂಘ, ಶಿವನ ಉರಿಗಣ್ಣುಗಳ ಪ್ರತಿಮೆಗಳ ಮಾಲೆಯು ರೌದ್ರ ಭೀಷಣತೆಯನ್ನು ಹೇಳುತ್ತಿದ್ದರೆ ಅಮೃತ ಜಳದಿಯ ಪ್ರತಿಮೆಯು ಈ ಭಾವಕ್ಕೆ ವಿರುದ್ಧವಾಗಿ ಪ್ರಶಾಂತತೆಯನ್ನು, ಅಭಯದ ಸಾಂತ್ವನವನ್ನು ನೀಡುವಂತಿದ್ದು ಅರಸರ ದುಷ್ಟ ಶಿಕ್ಷಣ ಶಿಷ್ಟರಕ್ಷಣೆಯ ಮೌಲ್ಯವನ್ನು ಎತ್ತಿ ಹಿಡಿಯುತ್ತಿದೆ.

"..... ಬಿಟ್ಟದೇವಂ ಕರವಾಳಂ ತೋಡಿಕೊಂಡಿಂಬಳಿಕೆಲೆಲೆ ಮಹಾದೇವ ಕಾಳಾಗ್ನಿರುದ್ರಂಗುರಿಗಣ್ಬಂದಂತೆ ಮಾಕಾಳಿಗೆ ಗರುವಡೆರ್ದಂತೆ...." ಇತ್ಯಾದಿ ಹೋಲಿಕೆಗಳು ವೀರ ರಸೋದ್ದೀಪನಕ್ಕೆ ನೆರವಾಗುತ್ತವೆ. ಕವಿ ಶಾಂತಮಹಂತನ ಈ ಪದ್ಯಗಳು ಈ ಪ್ರದೇಶದಲ್ಲಿ ಪ್ರಸಿದ್ಧವಾಗಿದ್ದು ಇತರ ಕವಿಗಳನ್ನೂ ಆಕರ್ಷಿಸಿವೆ.

### ೯. ಪಾತ್ರ ಚಿತ್ರಣ

**ಹೊಯ್ಸಳ ದೊರೆ ನರಸಿಂಹ :** ಇವನ ಪಾತ್ರ ಚಿತ್ರಣವು ಹೆಸರಿನ ಹಿನ್ನೆಲೆ ಹಿಡಿದು ರೌದ್ರವಾಗಿ ಮೂಡಿ ಬಂದಿದೆ. 'ಮಾರಿಯ ಮೂರಿಯಂತೆಯೂ,ಮೃತ್ಯುವಿನ ನಾಲಗೆ, ನಂಜಿನ ಪುಂಜದಂತೆಯೂ,ಬಂದೆರಗುವ ಸಿಡಿಲಿನಂತೆ, ಬ್ರಹ್ಮ ರಾಕ್ಷಸನಂತೆ, ವೀರವೇ ಮೂರ್ತಿಗೊಂಡಂತಿದ್ದ ನರನಾಥ ನಾರಸಿಂಹ ಭೂಪನನ್ನು ಎದುರಿಸಿ ಬದುಕುವಂತಹವರ್ಯಾರು? ಎಂದು ಕವಿಯೊಬ್ಬ ಪ್ರಶ್ನಿಸುತ್ತಾನೆ.[೨೧]

**ಗಣಕ ವಲ್ಲಭ ದಾವರಸ :** 'ಬರಪದ ಬಲ್ಮೆ ಲೆಕ್ಕಿಪ ಬೆಡಂಗು ಮನೋಹರಮಾಗೆ ರಾಜಿಪ ಉಚ್ಚರಣ ವಿಶೇಷ ಸಾತ್ವಿಕ ಜನಕ್ಕತಿ ಹರ್ಷಮೆ ಪುಟ್ಟೆ ವರ್ತಿಪತ್ತುರುತರ ಸಾತ್ವಿಕತ್ವವೆರದರ್ತಿಯ ಬೇಳ್ಪುದನೀವ ಭೋಗಂ....'[೨೨] ಎಂಬ ವರ್ಣನೆ ದಾವರಸನ ತೀಕ್ಷ್ಣಮತಿ, ಬರವಣಿಗೆಯ ಅಂದ, ಲೆಕ್ಕಮಾಡುವ

ಚಾತುರ್ಯ, ಅವನ ಭಾಷೆ ಉಚ್ಛಾರಣೆಗಳ ವಿಶೇಷತೆ ಅವನ ಸಾತ್ವಿಕತೆಯನ್ನು ಕವಿ ತ್ರಿವಿಕ್ರಮ ಪಂಡಿತ ವಿಶೇಷವಾಗಿ ಹೊಗಳಿದ್ದಾನೆ. ಈ ವಿಶೇಷತೆಗಳಿಗಾಗಿ ದಾವರಸ ಪ್ರಖ್ಯಾತನಾಗಿದ್ದನು.

**ಧರ್ಮರಾಶಿ ವೃತೀಷ** : ಹೊಯ್ಸಳ ವಿನಯಾದಿತ್ಯನ ಕಾಲದಲ್ಲಿ ದೇಸವಣಿಯಲ್ಲಿ ನೆಲಸಿದ್ದ ಧರ್ಮರಾಶಿ ವೃತೀಷನ ವ್ಯಕ್ತಿ ಚಿತ್ರ ವಿಶೇಷ ವರ್ಣನೆಯಿಂದ ಗಮನ ಸೆಳೆಯುತ್ತದೆ.

ನೆಚಿತಪದೊಂದು ಪೆಂಪು ಗುಣದಾಗರಮೆಂಬುದಿದೊಂದು ಪೆಂಪು ಪೇ
ರಚೆಕೆಯ ಕೀರ್ತಿಯಿಂ ಕೆಚೆಯ ಕಟ್ಟಿದ ಪೆಂಪು ಸುರೇಶಭಕ್ತಿಯಿಂ
ತಱಿಸಲವಿಂದೆ ದೇಗುಲಮನೆತ್ತಿದ ಪೆಂಪು ಸಮಸ್ತಧಾತ್ರಿಯೊ
ಳ್ಪೆಱರನದೇಕೆ ಪೇಳ್ವೊಗರ್ದಪ್ಪೆ ಪೊಗಳಿಂ ಸಲೆಧರ್ಮರಾಶಿಯಂ[೬೩]

ಎಂಬ ಧರ್ಮರಾಶಿಯ ವರ್ಣನೆಯು ನೇರವಾಗಿ ಪಂಪನ ಕರ್ಣನನ್ನು ಕುರಿತು ಬರೆದಿರುವ ಪದ್ಯವನ್ನು ಅನುಕರಿಸಿದೆ. ಪಂಪನ ದಟ್ಟ ಪ್ರಭಾವವನ್ನು ಇಲ್ಲಿ ಗುರುತಿಸಬಹುದು. ಇದೇ ಶಾಸನದ ಮಸಣಗವುಂಡ ಮತ್ತು ಬರ್ಮಗಾವುಂಡರ ವರ್ಣನೆಯಲ್ಲಿಯೂ ಈ ಪ್ರಭಾವ ಕಾಣಿಸಿಕೊಂಡಿದೆ.

ವಸುಧಾತಳಕ್ಕೆ ಧರ್ಮದ |ಪಸುಗೆಯ ಪಾಳಿಯ ವಿನೆಯದ ಒಳ್ಪಿನ ಕುಲಮಂ||
ಮುಸುಳಿಸದ ಚಲದ ನನ್ನಿಯ|ಮಸಣಜಃಗವುಡಂ ಸುಕೀರ್ತಿನಿಲಿಸುವ ಗಂಡಂ||

ಶ್ರೀಗಂ ವಿಸ್ರುತ ವಾಣಿ|ಶ್ರೀಗಂ ಹರಹಾಸಭಾಸಮೆನಿಸುವ ಕೀರ್ತಿ||
ಶ್ರೀಗಂ ವಿನೂತ ವಿಜಯ|ಶ್ರೀಗಂ ನೆಲೆಯೆನಿಸಿ ನೆಗರ್ದ ಬರ್ಮ್ಮಗವುಡಂ||

ಮುಂತಾದ ವರ್ಣನೆಯಲ್ಲಿ ಕಂಡುಬರುವ ಪಾಳಿಯ ವಿನಯ, ಒಳ್ಪು, ಕುಲ, ಚಲ, ನನ್ನಿ, ಕೀರ್ತಿಶ್ರೀ, ವಿಜಯಶ್ರೀ ಇತ್ಯಾದಿ ಪದಗಳು ಕೇವಲ ಪದಗಳಾಗದೆ ಹತ್ತನೇ ಶತಮಾನದ ಕನ್ನಡ ಕಾವ್ಯಗಳು ಕಟ್ಟಿಕೊಟ್ಟ ಕ್ಷಾತ್ರ ಮೌಲ್ಯಗಳನ್ನು ಬಿಂಬಿಸುವ ಪಾರಿಭಾಷಿಕ ಪದಗಳೇ ಆಗಿವೆ ಎನ್ನಬಹುದು. ಇಲ್ಲಿ ಮಸಣನಾಗಲೀ ಬರ್ಮನಾಗಲೀ ಅಂತಹ ಮೌಲ್ಯಗಳನ್ನು ಹಿಡಿದು ಬದುಕಿದವರು.

**೧೦. ಶಾಸನ ಗದ್ಯ** : ಪ್ರಸ್ತುತ ಪ್ರದೇಶದ ಆರಂಭಕಾಲದ ಶಾಸನಗಳು ಹೆಚ್ಚಾಗಿ ಗದ್ಯದಲ್ಲೇ ಇದ್ದು ಕೇವಲ ಘಟನೆಗಳ ದಾಖಲೆಗಳಂತಿವೆ. ಸಾಹಿತ್ಯಾಂಶ ಕಂಡುಬರುವುದಿಲ್ಲ. ಗದ್ಯ ತುಣುಕುಗಳು ಸರಳ ನೇರವಾಗಿವೆ. ಎಱೆದು, ವಿಟ್ಟೋದು ಇತ್ಯಾದಿ ಪೂರ್ವದ ಹಳಗನ್ನಡ ಲಕ್ಷಣಗಳಿದ್ದು, ತಪ್ಪದೋನ್, ಬಿಱುದೋನ್ ಇತ್ಯಾದಿ ಹಳಗನ್ನಡ ಲಕ್ಷಣಗಳೂ ೯ನೇ ಶತಮಾನದ ಹೊತ್ತಿಗೆ ಕಾಣಿಸಿಕೊಳ್ಳತೊಡಗಿದೆ.[೬೪]

೧೧-೧೨ನೇ ಶತಮಾನದಲ್ಲಿ ರಚನೆಗೊಂಡಿರುವ ಕಿರುಚಂಪುಕಾವ್ಯಗಳಂತಿರುವ ಕೆಲವು ಶಾಸನ ಗದ್ಯವು ಪ್ರೌಢವಾಗಿದೆ. "....ಮೃಗಮದಾಮೋದಂ ವಿನಮಿತಹಿತಮಹಿಪ ಚೂಡಾಲೀಢನೂತ್ನರತ್ನ ರಶ್ಮಿಜಾಳಜಟಿಳಿತನಖಕಿರಣಂ....'[೬೫] ಇಂತಹ ಪ್ರೌಢ ಪದ್ಯಗದ್ಯವಿರುವ ಶಾಸನಗಳಲ್ಲೂ ಸಹ ದಾನದ ಭಾಗ, ಹೊಲಮೇರೆ, ಸೀಮಾ ವಿವರ ತೆರಿಗೆ ವಿವರಗಳು ನೇರ ಮತ್ತು ಸರಳಗದ್ಯದಲ್ಲಿರುತ್ತವೆ.

ವಿಜಯನಗರ ಕಾಲದ ಶಾಸನಗಳಲ್ಲಿ ಗದ್ಯವು ಹೆಚ್ಚಾಗಿದ್ದು ಅವು ಅತ್ಯಂತ ಸರಳವಾಗಿದ್ದು ಆಡು ನುಡಿಗೆ ಹತ್ತಿರವಾಗಿರುತ್ತವೆ ಮತ್ತು ಕೆಲವು ಶಾಸನ ರಚನೆಕಾರರು ಶ್ರೇಷ್ಠ ವಿದ್ಯಾವಂತರಾಗದೇ ಕೇವಲ ಪ್ರಾಥಮಿಕ ಅಕ್ಷರಜ್ಞಾನವುಳ್ಳವರಂತೆ ಅನೇಕ ತಪ್ಪುಗಳನ್ನು ಮಾಡಿರುವುದು ಕಂಡುಬರುತ್ತದೆ. 'ರಾಯರ ಹಡಪದ ಪೋತಮನಾಯಕರು ಶಕುನದ ರಾಯನ ಶ್ರೀಪಾದಕೆ... ಕಟಹಳಿ ಆ ತೋಟಗದೆ ನಾಯಿಂದ ಕಟಿಗದೆ ಯಿಟನು ಕೊಟೆ'[೭೬] ಗ್ರಾಂಥಿಕವಾದ ಶಿಷ್ಟಭಾಷೆ ಹಿಂದೆ ಸರಿದು ಆಡುವ ಮಾತಿನಂತೆ ಬರೆಯುವ ಪ್ರವೃತ್ತಿ ಕಂಡುಬಂದಿದೆ.

ಜಾವಗಲ್ಲಿನ ಒಂದು ಶಾಸನವು ಸಂಸ್ಕೃತ ಕನ್ನಡ ಮಿಶ್ರಿತವಾಗಿದೆ. ಸಂಸ್ಕೃತ ಶ್ಲೋಕ, ವೃತ್ತಗಳ ಮಧ್ಯೆ ಬಂದಿರುವ ಕನ್ನಡ ಭಾಷೆಯು ಆಡು ಭಾಷೆಯಂತಿದ್ದು, ಅದರ ಕಾಲ ೧೫೫೧ ಆಗಿದ್ದರೂ ೧೯ನೇ ಶತಮಾನದ ಕೈಫಿಯತ್ತುಗಳಲ್ಲಿ ಕಂಡುಬರುವ ಭಾಷೆಯಂತಿರುವುದನ್ನು ಗಮನಿಸಬಹುದು.

'ಬಯಿರ ಸಮುದ್ರವೆಂಬ ಮಹಾತಟಾಕವನು ನೇಮಿಸಿ ಆ ತಟಾಕದ ಕೆಳಗೆ ಸಾಳುವನ ಅಗಳೆಂಬ ಕಾಲುವೆನೂ ಹೊಸ್ತಾಗಿ ತೆಗಸಿ.... ಕೆಜೆಗಳೂ ದೃಢವಹ ಹಾಗೆ ಮಾಡಿಸ್ತರು .... ಜಾವಗಲಿಗೆ ಹೊಸ್ತಾಗಿ ತೆಂಕಲಬಾಗಿಲನೂ ತೆಗಸಿ ಆ ಹೆಬ್ಬಾಗಿಲ ಕಲ್ಲಿಲಿ ಕಟ್ಟಿಸಿ ಆ ಹೆಬ್ಬಾಗಿಲು ಮೊಡಗಿ ತಾವು ಕಟಿದ....'[೭೭] ಇತ್ಯಾದಿಯಾಗಿ ಸಾಗುತ್ತದೆ.

ಕ್ರಿ.ಶ.೧೭೪೪ರ ಮಾಲೆಕಲ್ಲು ತಿರುಪತಿಯ ತಾಮ್ರ ಶಾಸನ[೭೮] ಶಾಪಾಶಯ ಹಾಗೂ ಪ್ರಾರ್ಥನಾ ಶ್ಲೋಕ ಬಿಟ್ಟರೆ ಪೂರ್ಣ ಗದ್ಯದಲ್ಲಿದ್ದು. ಉಭಯ ನಾನಾ ದೇಶಿ ವರ್ತಕರ ವರ್ಣನೆ ವಿಶಿಷ್ಟವಾಗಿದೆ. ಜಾನಪದ ಸೊಗಡಿನ ವೀರಗಾಸೆ ವೀರಭದ್ರನ ಕಥೆಯನ್ನು ಹೇಳುವ ಧಾಟಿಯಲ್ಲಿದೆ. ಇದರಲ್ಲಿ ಉತ್ಸಾಹ, ಮಂದಾನಿಲರಗಳೆ ಹಾಗೂ ಭಾಮಿನಿ ಷಟ್ಪದಿಯ ಲಯಗಳನ್ನು ಗುರುತಿಸಬಹುದು.

'ಶ್ರೀಮತು ಸಜ್ಜನಶುಧ ಶಿವಾಚಾರ ಸಂಪನ್ನರಾದ, ಗುರುಲಿಂಗ ಜಂಗಮ ಪ್ರೇಮಿಗಳಾದ, ಬಂಣಕೆ ಸಾವಿರ ಬಸವನ ಶೃಂಗರಿಶಿ, ಮಹಾಘನವೆಂಬ ಗಂಟೆಯನ್ನು ಕಟ್ಟಿ, ನಕ್ಷತ್ರವೆಂಬ ಹುರಿಗೆಜ್ಜೆಯನ್ನು ಹಾಕಿ, ನವಗ್ರಹವೆಂಬ ಭಾಸಿಗವನು ಸೂಡಿ, ತ್ರಿಭುವನವೆಂಬ ಕಂದಳಿಕೆಯನು ಹಾಕಿ, ಮಹಾಶೇಷನೆಂಬ ಪಠಣೆಯನ್ನು ಬಿಗಿದು, ಚಪ್ಪನ್ನ ಐವತ್ತಾರು ದೇಶದಲ್ಲು ಸಂಚರಿಸುವಂತ್ಹಾ ಮಹಾನಾಡಿನ ಬಿರುದುಳ್ಳ ಉದ್ದಂಡ ಕೋಲಾಹಲರಾದ, ಅಡವಿಯ ಅಂಗಡಿಯ ಮಾಡಿ, ಗಿಡುವ ಪಟ್ಟಣವಂ ಮಾಡಿ, ಸಲ್ಲದ ನಾಣ್ಯವನ್ನು ಸಲಿಸುವರಾದ, ಹಾದಿಜಗಳವ ಹಣವಡ್ಡಕೆ ಕೊಂಬವರಾದ, ಬೀದಿಜಗಳವ ಬೇಳವಡ್ಡಿಗೆ ಕೊಡುವವರಾದ, ಧರ್ಮಾಧರ್ಮಕ್ಕೆ ವರಗಲ್ಲರಾದ...." ಮುಂತಾಗಿ ತಡೆಬಿಡೆಯಿಲ್ಲದೆ ಸಾಗುವ ಈ ಗದ್ಯಶೈಲಿಯು ಅತ್ಯಂತ ನಾಟಕೀಯವಾಗಿದೆ. ಬಯಲು ನಾಟಕಗಳ ಪಾತ್ರಗಳು ತಮ್ಮನ್ನು ಪರಿಚಯ ಮಾಡಿಕೊಳ್ಳುವಂತಹ ಭಾಷೆ ಈಗಲೂ ಇದೆ ರೀತಿ ಸಾಗುವುದನ್ನು ಗಮನಿಸಬಹುದು. 'ಮಹಾಘುವೆಂಬ ಗಂಟೆ ಇತ್ಯಾದಿ ಹೋಲಿಕೆಗಳಲ್ಲಿ ವಚನ ಸಾಹಿತ್ಯದ ಪ್ರಭಾವವನ್ನು ಗುರುತಿಸಬಹುದು.

ಈ ಶಾಸನದ ತೆರಿಗೆ ವಿವರ ಇತ್ಯಾದಿಗಳು ಸಾಮಾನ್ಯ ಗದ್ಯದಲ್ಲಿದೆ. ಇದೇ ಕಾಲದ ತಿರುಪತಿಯ ಇತರ ಕೆಲವು ತಾಮ್ರ ಶಾಸನಗಳಲ್ಲಿ ಸೇರ್ರುಗಾರ್ರು, ವಂಟ್ರಿ ಗಾರ್ರು, ವಾಲಕಾರ್ರು, ಕಂದಾಚಾರ, ಅಠವಣೆ ಹೋಬಳಿ, ರಾಣ್ಪೆ ಇತ್ಯಾದಿ ಕಛೇರಿ ಸ್ವೀಕರಣ ಪದಗಳು, ಆಡುನುಡಿಯ ವಪ್ಪಿಸ್ತ, ವಂದಕೆ, ಪ್ರಾಕಾರಭ್ಯ, ಬಿಟ್ಯಾಗ್ಯೂ, ಲೆಖ್ಖ, ಅದಾಗಿ, ವಾಲೈಸಿಕೊಂಡಿರೋ ಮುಂತಾದ ಪದ ಪ್ರಯೋಗಗಳನ್ನು ಕಾಣಬಹುದು.

### ೭.೨.೨. ಶಾಸನ ಕವಿಗಳು

ಅರಸೀಕೆರೆಯು ಹೊಯ್ಸಳರ ಪ್ರಾಂತೀಯ ರಾಜಧಾನಿಯಾಗಿದ್ದು, ಈ ಪರಿಸರದಲ್ಲಿ ಅನೇಕ ಶ್ರೇಷ್ಠ ಅಗ್ರಹಾರಗಳಿದ್ದುದನ್ನು ಗಮನಿಸಿದ್ದೇವೆ. ಈ ಅಗ್ರಹಾರಗಳು ಶ್ರೇಷ್ಠ ಪಂಡಿತರನ್ನು, ಕವಿ, ಗಮಕಿ, ವಾದಿ, ಗಣಕರನ್ನು, ಆಡಳಿತಾತ್ಮಕ ಚಾಣಾಕ್ಷತೆಯುಳ್ಳ ಅನೇಕ ಮುತ್ಸದ್ಧಿಗಳನ್ನು ತಯಾರು ಮಾಡುತ್ತಿದ್ದವು. ಈ ಪರಿಸರದ ಆಳ್ವಿಕೆ ನಡೆಸುತ್ತಿದ್ದ ರಾಣಿಯರು, ಸಾಮಂತ, ದಂಡನಾಯಕರು, ಪ್ರಧಾನಿಗಳೂ ಕವಿಗಳಿಗೆ ಕಲಾವಿದರಿಗೆ ಆಶ್ರಯ ನೀಡಿ ಪ್ರೋತ್ಸಾಹಿಸುತ್ತಿದ್ದರೆಂಬುದನ್ನು ಇಲ್ಲಿನ ಶಾಸನಗಳು ತಿಳಿಸುತ್ತದೆ. ಅನೇಕ ಪ್ರಧಾನಿ ದಂಡಾಧಿಪರು ಸ್ವತಃ ಪಂಡಿತರೂ ಕವಿಗಳೂ ಕಲಾವಿದರೂ ಆಗಿದ್ದರೆಂಬುದೂ ತಿಳಿದುಬರುತ್ತದೆ.

ಹೊಯ್ಸಳ ವಿಷ್ಣುವರ್ಧನನ ಸಕಲ ಸಮಸ್ತಾಧಿಕಾರಿ ಮಹಾಪ್ರಧಾನ ಹೆಗ್ಗಡೆ ಚಾವುಂಡಮಯ್ಯನ ಶ್ರೇಷ್ಠಪುತ್ರರಲ್ಲಿ ಜಿನದೇವನು ಸಕಳಾರ್ಥ ಶಾಸ್ತ್ರಕೋವಿದನಾಗಿದ್ದನೆಂದು ಗೋವಿಂದ ಪುರದ ಶಾಸನ[೭೯] ಹಾಗೂ ಕರುಗುಂದದ ಶಾಸನಗಳು ಕೀರ್ತಿಸಿವೆ.[೮೦]

ಅರಸೀಕೆರೆಯ ಹರಿಹರ ವಿಭುವಿನ ಮೊಮ್ಮಗಳು ರಾಣಿ ಉಮಾ ದೇವಿಯನ್ನು 'ಜಂಗಮ ಸರಸ್ವತಿ' (ನಡೆದಾಡುವ ವಿಶ್ವಕೋಶ) ಎಂದು ಒಂದು ಶಾಸನದಲ್ಲಿ ಕರೆಯಲಾಗಿದೆ.[೮೧] ಇವಳ ತಂದೆ ಕೇಶವದೇವನಾದರೋ ಅತ್ಯಂತ ಪ್ರತಿಭಾವಂತನಾಗಿದ್ದು, ಬುಧ ಸಂದೋಹಕ್ಕೆ ಅವನು ವಿಶೇಷ ಪ್ರೋತ್ಸಾಹ ನೀಡಿದ್ದನು.

ಕಣಿಕಟ್ಟೆಯನ್ನಾಳುತ್ತಿದ್ದ ಮಹಾಸಾಮಂತ ಕೆಚ್ಚನ ಮಾಚಯ್ಯನನ್ನು ಸಾಹಿತ್ಯ ನಿಳಯನೆಂದು, ಸಕಳ ಸಾಹಿತ್ಯ ಸರ್ವ್ವಜ್ಞನೆಂದು ಶಾಂತಿನಾಥ ಕವಿ ಹೊಗಳಿದ್ದಾನೆ.[೮೨] ಕಳಿಕಟ್ಟೆಯನ್ನಾಳುತ್ತಿದ್ದ ಸಾಮಂತ ಗೋಯಿದೇವನು 'ವಾದ್ಯವಾದನ ಲಘುಹಾಸ, ಛಂದ, ಅಳಂಕಾರ, ನಾಟ್ಯ, ಕಾವ್ಯ, ನಾಟಕ, ನಾಟಿಕಾ, ಸಾಹಿತ್ಯಗಳಲ್ಲಿ ಪರಿಣತನಾಗಿದ್ದನು.[೮೩]

ತಳಿರೂರಿನಲ್ಲಿ ಚೆನ್ನಶಂಕರ ದೇವಾಲಯವನ್ನು ನಿರ್ಮಾಣಮಾಡಿಸಿದ ಪೆರ್ಗಡೆ ಶಂಕರನು ಅತ್ಯಂತ ಮೇಧಾವಿಯಾಗಿದ್ದ. ಸಾಮವೇದಿಯಾದ ಪ್ರಸಿದ್ಧ ವಿಮಳ ಶಿವಾಚಾರ್ಯರ ಶಿಷ್ಯನಾಗಿದ್ದು ಅವರ 'ಗುರುಕುಲತಿಲಕ'ನಾಗಿದ್ದನು. 'ಸಾಕ್ಷರ ನಿಧಿ' ಸಂಧಿವಿಗ್ರಹಿ ಕೇಶಿರಾಜನ ಮಗನಾದ ಈತ ವೇದಶಾಸ್ತ್ರ

ವಿದ್ಯೆಯಲ್ಲಿ ವಾಕ್ಪತಿಯೂ ಆಗಿದ್ದನು. ಪರಮ ಪುರೋಹಿತತ್ವದಲ್ಲಿ, ನೃಪನೀತಿಯಲ್ಲಿ, ಸುಕವಿಸಂಗತಿಯಲ್ಲಿ, ರಸಗೀತ ಗೋಷ್ಠಿಯಲ್ಲಿ, ರತ್ನ ಲಕ್ಷಣ ಪರೀಕ್ಷಣದಲ್ಲಿ ವೀರಬಲ್ಲಾಳ ಭೂವರನ ಮೆಚ್ಚಿನವನಾಗಿದ್ದು ಸಕಲ ವಿದ್ಯಾ ಪ್ರೌಢಿಮೆಯನ್ನು ಪಡೆದಿದ್ದನು. ಅವನ ಮಗ ಚಂದ್ರಮೌಳಿ.[೮೪]

ಚಂದ್ರಮೌಳಿಯಣ್ಣನು ಹೊಯ್ಸಳವೀರ ಬಲ್ಲಾಳನ ಮಹಾಪ್ರಧಾನ ಹಿರಿಯ ಮನೆವೆರ್ಗಡೆಯಾಗಿದ್ದನು. ಚಂದ್ರಮೌಳಿಯನ್ನು ಈ ಶಾಸನವು ಕಳಾರಮಣಂ ಬುಧ ಸೇವ್ಯಂ ಚಂದ್ರಮೌಳಿ ಗುಣಶಾಳಿ" ಅಮೃತಾಪುರ ಶಾಸನ[೮೫] 'ಬಹುಕಳಾನಿಧಿಯಂಕದ ಚಂದ್ರಮೌಳಿ' ಎಂದೂ 'ಸೂರಿಜನಸ್ತುತ'ನೆಂದು ಹೊಗಳಿವೆ. ಜಗನ್ನಾಥ ವಿಜಯವನ್ನು ಬರೆದು ಪ್ರಸಿದ್ಧನಾಗಿರುವ ರುದ್ರಭಟ್ಟನಿಗೆ ಚಂದ್ರಮೌಳಿಯು ಆಶ್ರಯದಾತನೆಂದು ತಿಳಿದುಬರುತ್ತದೆ. ಚಂದ್ರಮೌಳಿಯ ಹಾಗೂ ಅವನ ಮಡದಿ ಅಚಿಯಕ್ಕನ ಶಾಸನಗಳನ್ನು ಇವನು ಬರೆದಿರುವ ಸಾಧ್ಯತೆಯಿದೆ. ಯಾವ ಶಾಸನದಲ್ಲೂ ಇವನ ಹೆಸರು ಕಂಡುಬಂದಿಲ್ಲ. ತಳಲೂರಿನ ೧೬೧ನೇ ಶಾಸನವು ಪ್ರತಿಭಾನ್ವಿತ ಕವಿಯ ರಚನೆಯಾಗಿದ್ದು ಇದನ್ನು ರುದ್ರಭಟ್ಟ ಚಂದ್ರಮೌಳಿಯ ಕುಟುಂಬದವರಿಗಾಗಿ ಬರೆದಿರಬಹುದೆನಿಸುತ್ತದೆ. ಶಾಸನಾಂತ್ಯದಲ್ಲಿ ಕವಿಯ ವಿಚಾರ ಹೇಳಿರುವ ಭಾಗ ಹಾಳಾಗಿದೆ.

ಅರಸೀಕೆರೆಯ ಸಹಸ್ರಕೂಟ ಜಿನಾಲಯವನ್ನು ಮಾಡಿಸಿದ ವಸುಧೈಕ ಬಾಂಧವರೇಚರಸನು ಕಲಾಪ್ರೇಮಿಯಾಗಿದ್ದು ಆಚಣ್ಣ ಕವಿಗೆ ಆಶ್ರಯ ನೀಡಿದ್ದನು. ಆಚಣ್ಣನು ವರ್ಧಮಾನ ಪುರಾಣವೆಂಬ ಚಂಪೂಕೃತಿಯನ್ನು ಬರೆದಿದ್ದಾನೆ. ಅವನ ಇನ್ನೊಂದು ಕೃತಿ 'ಶ್ರೀಪದಾಶೀತಿ' ರೇಚರಸನ ಶಾಸನಗಳನ್ನು ಈತ ಬರೆದಿರಬಹುದು.

ಒಟ್ಟಿನಲ್ಲಿ ಶ್ರೇಷ್ಠರಾದ ಸಂಸ್ಕೃತ ಪಂಡಿತರಿಗೆ, ಕನ್ನಡ ಕವಿಗಳಿಗೆ ಕಲಾವಿಧರಿಗೆ ಆಶ್ರಯ ನೀಡಿದ್ದ ಹೊಯ್ಸಳ ಅರಸರು, ಅಧಿಕಾರಿಗಳು ಸಾಹಿತ್ಯ ಕಲೆ ವಿಶಿಷ್ಟವಾಗಿ ಬೆಳೆಯಲು ಪ್ರೋತ್ಸಾಹ ನೀಡಿದ್ದರಿಂದ ವಿಪುಲವಾದ ಕೊಡುಗೆ ಈ ಕ್ಷೇತ್ರದಲ್ಲಿ ಕಂಡುಬಂದಿತು.

**೧. ಆದಿತ್ಯ ದೇವ (೧೦೭೪-೧೧೦೦) :** ಈತ ಹೊಯ್ಸಳ ಎರೆಯಂಗನ ಅಧಿಕಾರಿಯಾದ, ಅರಸೀಕೆರೆಯ ಕಚ್ಚಪೆರ್ಗಡೆಯ ಶಾಸನವನ್ನು ಬರೆದಿದ್ದಾನೆ. ಈತ ತನ್ನನ್ನು ಅಭಿನವ ವಾಗ್ದೇವಿ ಸರಸ್ವತಿ ಪಾಸಿ ಸೇನಬೋವ ಆದಿತ್ಯದೇವ ಆರ್ಯ'ನೆಂದು ಪರಿಚಯಿಸಿದ್ದಾನೆ. ಸೇನಬೋವಿಕೆ ಇವನ ವೃತ್ತಿಯಾಗಿದ್ದರೂ 'ಅಭಿನವ ವಾಗ್ದೇವಿ ಸರಸ್ವತಿ ಪಾಸಿ' ಎಂಬ ಈ ವಿಶೇಷಣಕ್ಕೆ ಸಾಕ್ಷಿಯಂತೆ ಅತ್ಯುತ್ತಮ ಕಾವ್ಯಶಕ್ತಿ ಅವನ ಈ ಶಾಸನದಲ್ಲಿ ಪ್ರಕಟಗೊಂಡಿದೆ. ಹದಿಮೂರು ಕಂದಪದ್ಯಗಳನ್ನು ಕೇವಲ ಒಂದು ವೃತ್ತವನ್ನು ಬಳಸಿದ್ದಾನೆ. ಛಂದಸ್ಸಿನಲ್ಲಿ ಅಶುದ್ಧತೆ ಕಂಡುಬಂದಿರುವುದನ್ನು ಬಿಟ್ಟರೆ ಇವನ ಕಾವ್ಯದಲ್ಲಿ ಕ್ಷಾತ್ರ ಮೌಲ್ಯಗಳು, ಸ್ವಾಮಿನಿಷ್ಠೆ, ಶೌಚ, ಸತ್ಯಗಳು, ಪರಾಕ್ರಮಗಳಿಂದ ಕೂಡಿದ ಪಾತ್ರಚಿತ್ರಣ ಆಕರ್ಷಕವಾಗಿ ಮೂಡಿದೆ.

ಆಳ್ದನ ಬೆಸಸಿದ ಬೆಸನಂ| ಕೊಟ್ಟು ಕಳೆವವೊಲುಳಿದು ನಿಲ್ಪಳಿಯಾಳ||
ಕೇಳ್ದಡೆ ಕಿವಿಯಂ ಮುಚ್ಚುವ| ನಾಳ್ದನೆಗತಿಮತಿಯೆ ಕಚ್ಚವೆರ್ಗಡೆ ಜಗದೊಳ್[೮೬]||

ಮುಂತಾಗಿ ಐದು ಕಂದ ಪದ್ಯಗಳಲ್ಲಿ ಕಚ್ಚವೆರ್ಗಡೆಯನ್ನು ಮನತುಂಬಿ ಹೊಗಳಿದ್ದಾನೆ.

**೨. ಕವಿ ಸಾಂತಮಹಂತ (೧೧೨೦-೧೧೯೦) :** ಈ ಕವಿಯು ಉತ್ತಮ ಭಾಷೆ ಶೈಲಿ ಪ್ರೌಢಿಮೆಗಳಿಂದ ಕೂಡಿದ್ದು. ಹನ್ನೆರಡನೆಯ ಶತಮಾನದ ಮಧ್ಯಕಾಲದಲ್ಲಿ ಇದ್ದನೆಂದು ತಿಳಿದುಬರುತ್ತದೆ. ಅನೇಕ ಶಾಸನಗಳನ್ನು ರಚಿಸಿರುವ ಈತನ ಇತರ ಯಾವ ಕೃತಿಗಳೂ ಲಭ್ಯವಾಗಿಲ್ಲ. ಇವನ ರಚನೆಗಳು ಕ್ರಿ.ಶ.೧೧೬೮ರ ಅರಸೀಕೆರೆಯ ನಖರಜಿನಾಲಯ ಶಾಸನದಲ್ಲಿ ಈ ಪ್ರದೇಶದಲ್ಲಿ ಮೊದಲು ಕಾಣಿಸಿಕೊಂಡಿವೆ. ನಂತರ ಕೆಲ್ಲಂಗೆರೆ, ಕಣಕಟ್ಟೆಯ ಶಾಸನಗಳು[೮೭] ಚಿಕ್ಕನಾಯಕನ ಹಳ್ಳಿ ಶಾಸನ[೮೮] ಇತ್ಯಾದಿಗಳನ್ನು ಬರೆದಿದ್ದಾನೆ. ಎಲ್ಲಕ್ಕಿಂತ ಮೊದಲು ವಿಷ್ಣುವರ್ಧನನ ಕ್ರಿ.ಶ.೧೧೩೭ರ ನಾಗಮಂಗಲ ಶಾಸನ[೮೯] ಪ್ರಾಚೀನವಾಗಿದೆ.

ಇವನು ಶಾಸನಗಳಲ್ಲಿ ತಿಳಿಸಿರುವಂತೆ ಇವನ ತಂದೆ ಸಬ್ಬ್ರದೇವ ತಾಯಿ ಸೋಮಿಯಕ್ಕ. ಈತ ದಕ್ಷಿಣ ಸೋಮನ ಮೊಮ್ಮಗ[೯೦] ಅಜ್ಜನ ಹೆಸರು ದಕ್ಷಿಣ ಹೆಮ್ಮನೆಂಬ ಪಾಠವಿದೆ.[೯೧] ಇವನ ತಂದೆಯ ಹೆಸರು ಸಬ್ಬ್ರದೇವನೆಂದು ಹಲುಕೂರಿನ ಶಾಸನ ಹೇಳುತ್ತದೆ.[೯೨] ಕೆಲ್ಲಂಗೆರೆಯ ಒಂದು ಶಾಸನ[೯೩]ದಲ್ಲಿ ಚಬ್ಬರಾಜನ ಪುತ್ರ ಶಾಂತಿನಾಥ ಪಂಡಿತರು ಹೇಳ್ದಶಾಸನ ಎಂಬ ವಾಕ್ಯವಿದ್ದು ಈ ಶಾಸನದ ಪದ್ಯಗಳೆಲ್ಲವೂ ಶಾಂತ ಮಹಂತನ ಇತರ ಶಾಸನಗಳಲ್ಲಿರುವಂತಹವೇ ಆಗಿದ್ದು, ಶಾಂತಿನಾಥ ಪಂಡಿತ ಎಂಬ ಹೆಸರು ಈ ಸಾಂತ ಮಹಂತನ ಹೆಸರೇ ಎಂಬುದು ಖಚಿತವಾಗುತ್ತದೆ. ಸಬ್ಬ್ರದೇವ ಎಂಬ ಹೆಸರೇ ಇಲ್ಲಿ ಚಬ್ಬರಾಜನೆಂದು ಉಲ್ಲೇಖಗೊಂಡಿರುವ ಸಾಧ್ಯತೆಯಿದೆ. ಅರಸೀಕೆರೆಯ ಮತ್ತೊಂದು ಶಾಸನದಲ್ಲಿ[೯೪] ಅನೇಕ ಪದ್ಯಗಳು ಶಾಂತ ಮಹಂತನ ರಚನೆಗಳೇ ಆಗಿದ್ದು ಆ ಶಾಸನದ ಕವಿ ಮಲ್ಲಣ್ಣನು ತನ್ನನ್ನು ಕ್ಷಿತಿವಿನುತೆ ಶಾಂತಿನಾಥನ ಸತಿ ಸಂನುತೆ ಚಂದಿಯಕ್ಕನ ಅಣುಗಿನ ಪುತ್ರ" ಎಂದು ಕರೆದುಕೊಂಡಿರುವುದರಿಂದ ಈ ಮಲ್ಲಣ ಸಾಂತಮಹಂತನ (ಶಾಂತಿನಾಥ) ಮಗನಾಗಿರಬೇಕು ಆ ಕಾರಣದಿಂದ ತಂದೆಯ ಅನೇಕ ಪದ್ಯಗಳನ್ನು ಮಗ ಶಾಸನದಲ್ಲಿ ಸೇರಿಸಿಕೊಂಡಿದ್ದಾನೆ. ಅರಸೀಕೆರೆಯ ಶಾಸನ ಸಂಖ್ಯೆ ೧೨, ೬೧ ಮತ್ತು ಇತರ ಅನೇಕ ಶಾಸನಗಳಲ್ಲಿ ಶಾಂತಮಹಂತನ ಪ್ರಸಿದ್ಧ ಪದ್ಯಗಳು ಅನಂತರದ ಕಾಲದಲ್ಲೂ ಕಾಣಿಸಿಕೊಂಡಿದ್ದು ಈತ ಅರಸೀಕೆರೆ ಪರಿಸರದ ಅತ್ಯಂತ ಪ್ರಸಿದ್ಧ ಕವಿಯಾಗಿದ್ದು ರಾಜಧಾನಿ ಅರಸೀಕೆರೆಯ ಅರಮನೆಯ ಪೋಷಿತ ಕವಿಯಾಗಿರುವ ಸಾಧ್ಯತೆಯನ್ನು ಊಹಿಸಬಹುದು. ಬೇಲೂರಿನ ೧೬೧ನೇ ಶಾಸನ[೯೫]ದಲ್ಲೂ ಇವನ ಪದ್ಯಗಳಿವೆ. ಇವನ ಹೆಸರು ಉಲ್ಲೇಖವಾಗದ, ಹಿರೇಕಲ್ಲು ಬೆಟ್ಟದಶಾಸನ, ರಾಮಪುರದ ಶಾಸನ ತಳಿರೂರ ಶಾಸನಗಳನ್ನು ಈತನೇ ಬರೆದಿದ್ದಾನೆಂದು ಹೇಳಬಹುದು.[೯೬]

ಇದಿರಾದರಿ ಭೂಪಾಳರ |ಮದದಾನೆಯ ಕೊಂಬನುಡಿದು ದಂತದ ಬಳೆಯಂ ||
ಬಿದುವಿನ ಮುತ್ತಿನ ಹಾರಮನೊದವಿಸಿ ಜಯಸಿರಿಗೆ ತೊಡಿಸುವಂ ನರಸಿಂಹಂ ||[೯೭]

ಈ ಪದ್ಯ ಸೂಕ್ತಿ ಸುಧಾರ್ಣವದಲ್ಲಿ ಸೇರ್ಪಡೆಯಾಗಿರುವುದು ಇವನ ಪ್ರಸಿದ್ಧಿಗೆ ಸಾಕ್ಷಿಯಾಗಿದೆ.

ಕಡು ಜಿಡ್ಡುನಾರ್ಕುರ್ವಾ ಹಾಲ್ಗಡಲಮಗಳು ಲಕ್ಷ್ಮಿ ನಾರ್ತಡಂ ಗೋಪಾಳಂ ||
ಬಿಡನುಚಿತವೆಂಬಳೊಪ್ಪಂ |ಬಡೆದೇಚಲೆ ಪದುಮಗಂಧಿ ಸಿರಿವಂ ಹರಿವಂ ||[೯೮]

ಈ ಪದ್ಯವು ಹೊಸ ರೀತಿಯ ಅಭಿವ್ಯಕ್ತಿಯಿಂದ ಆಕರ್ಷಕವಾಗಿದೆ. ಲಕ್ಷ್ಮಿಯು ಹಾಲ್ಗಡಲಿನ ಮಗಳಾದ ಕಾರಣ ಜಿಡ್ಡುವಾಸನೆಯಿಂದ ನಾರುತ್ತಾಳಾದರೂ ಅವಳನ್ನು ಪತಿ ಸಹಿಸಿಕೊಳ್ಳುತ್ತಾನೆ. ಏಕೆಂದರೆ ಅವನೂ ಗೋಪಾಲಕನಲ್ಲವೇ. ಆದರೆ ಏಚಲಾ ದೇವಿಯಾದರೋ ಪದುಮಗಂಧಿಯಾಗಿದ್ದುದರಿಂದ ಪತಿ ಎಚೆಯಂಗನಿಗೆ ಸಹಜವಾಗಿಯೇ ಪ್ರಿಯಳಾಗಿ 'ಒಪ್ಪಂ ಪಡೆದಿದ್ದಳು' ಎಂಬ ಕವಿಯ ಕಲ್ಪನೆಯಲ್ಲಿ ಹೊಸತನವಿದೆ. 'ಮಲಮಲದು ಮಲೆದು ಮಲಪರ ಕುಲಮಂ ಬೇರ್ವೆರಸಿ ಕಿತ್ತು'' 'ಘುಲಘುಲ ಘುಲಕು ಘುಲಕೆನಲಲೆವಳು'' 'ಬವರದೊಳೆಲೆಲೆಲೆಯೆಂದೊಡಸಾರ್ಚಿ'' 'ಚೇರಮ ಭೈರಮಂಬಿಸುಡು... ಎಲೇ ತಿಗುಳ ನೀಂ ಜಗುಳು'' ಇತ್ಯಾದಿ ಪ್ರಯೋಗಗಳು ಕವಿಯ ಪದಬಂಧ ಚಮತ್ಕಾರ ಉಕ್ತಿ ವೈಚಿತ್ರ್ಯಗಳಿಗೆ ಸಾಕ್ಷಿಯಾಗಿವೆ.

''ವಿಕಸನದಿಂದ ಕಿತ್ತ ನರಸಿಂಹ ಭೂಪನ ಅಸಿಲತೆ ವೈರಿಗಳ ಹೃದಯದಲ್ಲಿ ನಾಟಿ ತಳಿರ್ಪಸರಿಸಿ ಬೆನ್ನಲ್ಲಿ ಬೆಳೆವುದು ಹೊಸ ಅಚ್ಚರಿ'' ಎನ್ನುವ ಕವಿಯ ಅನೇಕ ಉತ್ತಮ ಕಲ್ಪಕತೆಯ, ಪ್ರೌಢಿಮೆಯ, ಪ್ರತಿಭಾ ಸ್ಫುರಣೆಯಿರುವ ಪದ್ಯಗಳನ್ನು ಅವನ ಶಾಸನಗಳು ಒಳಗೊಂಡಿವೆ. 'ಭೇದಂ ಮೂರ್ತಿಯೊಳಲ್ಲದೆ... ಪರಮಾರ್ಥತತ್ವದೊಳು ಸಲ್ಲದು'' ಎನ್ನುವ ಸಮನ್ವಯ ಭಾವದ ಕವಿ ಈತ.[೯೯]

ಇವನು ತನ್ನನ್ನು 'ಕವಿಕುಳತಿಳಕ' ಎಂದು ಹೇಳಿಕೊಂಡಿದ್ದಾನೆ. ದಾಕ್ಷಿಣ್ಯನಿಧಿಯೂ, ಗುಣಕರನೂ ಆಗಿದ್ದ ಈತ ತನ್ನನ್ನು ಶಿಕ್ಷಾಗುರು ಎಂದು ಹೇಳಿರುವುದರಿಂದ ಇವನು ಉಪಾಧ್ಯಾಯನಾಗಿದ್ದು ಅನೇಕ ಶ್ರೇಷ್ಠ ಶಿಷ್ಯರನ್ನು ಹೊಂದಿ ಅವರ ಮೇಲೆ ಹೆಚ್ಚು ಪ್ರಭಾವ ಬೀರಿರುವುದರಿಂದಲೇ ಈ ಪ್ರದೇಶದ ಇತರ ಶಾಸನ ಕವಿಗಳು ತಮ್ಮ ಗುರುವಿನ ಪದ್ಯಗಳನ್ನು ಯಥೇಚ್ಛವಾಗಿ ಬಳಸಿದ್ದಾರೆನಿಸುತ್ತದೆ. ಒಟ್ಟಿನಲ್ಲಿ ಶಾಂತಮಹಂತ ಅಥವಾ ಶಾಂತಿನಾಥ ರಾಜಧಾನಿ ಅರಸೀಕೆರೆಯ ಪ್ರಸಿದ್ಧ ಕವಿಯಾಗಿದ್ದನೆಂದು ಹೇಳಬಹುದು. ಇವನ ಅಜ್ಜ ಕಲಿಹೆಮ್ಮ (ಸೋಮ) 'ಅಜಿಗುಮ್ಮ'ನೆಂದು ಪ್ರಸಿದ್ಧನಾಗಿದ್ದು, ಈ ವಂಶವು ಕಲಿಗಳಿಗೂ ಕವಿಗಳಿಗೂ ಪ್ರಸಿದ್ಧವಾಗಿತ್ತೆನ್ನಬಹುದು. ಇವನ ಸೋದರ ಸೂರ್ಯಣ ಕೂಡ ಪ್ರಸಿದ್ಧ ಶಾಸನ ಕವಿ, 'ಬಿರುದ ಲೇಖಕೋಪಾಧ್ಯಾಯ'ನಾಗಿದ್ದನು.[೧೦೦]

**೩. ಕವಿ ಬಾಚಣ್ಣ (೧೧೬೪) :** ಅರಸೀಕೆರೆ ತಾಲ್ಲೂಕಿನ ಕಿತ್ತನಕೆರೆ ಅಗ್ರಹಾರದ ಒಂದು ಶಾಸನವನ್ನು ಈತ ಬರೆದಿದ್ದಾನೆ. ಈತ ಸಂಸ್ಕೃತ ಪಂಡಿತನಾಗಿದ್ದು, ಸಂಸ್ಕೃತ ಪದ್ಯಗಳನ್ನು ರಚಿಸಿದ್ದಾನೆ. ಜೊತೆಗೆ ಸರಳ ಕನ್ನಡ ಗದ್ಯವನ್ನು ಬಳಸಿದ್ದಾನೆ. ವಿಶೇಷ ಪ್ರತಿಭಾ ಸಾಮರ್ಥ್ಯವು ಕಂಡುಬರುವುದಿಲ್ಲ. ಈತ ಯಾವುದೇ ಬಿರುದನ್ನಾಗಲೀ ವಿಶೇಷಣವನ್ನಾಗಲಿ, ತಾನು ಕವಿಯೆಂದಾಗಲೀ ಹೇಳಿಕೊಂಡಿಲ್ಲ.

'ಬಾಚಣ್ಣಂಗಳು ಬರದರು" ಎಂದಷ್ಟೇ ಹೇಳಿಕೊಂಡಿದ್ದಾನೆ.[೧೦೧] ಬಹುಶಃ ಈತನೂ ಅದೇ ಅಗ್ರಹಾರದ ಸಂಸ್ಕೃತ ಪಂಡಿತನಾಗಿರಬೇಕು. ಒಂದೂ ಕನ್ನಡ ಪದ್ಯಗಳಿಲ್ಲ. ಗದ್ಯ ತೀರ ಸಾಮಾನ್ಯವಾಗಿದೆ.

ಬಾಚಣ್ಣನೆಂಬ ಮತ್ತೊಬ್ಬ ಶಾಸನ ಕತೃ ಕಣಿಕಟ್ಟೆಯ ೧೨೨೭ರ ಶಾಸನವೊಂದನ್ನು ಬರೆದಿದ್ದಾನೆ.[೧೦೨] ಒಂದು ಕಂದಪದ್ಯ ಒಂದು ಚಂಪಕ ಮಾಲೆಯನ್ನು ಹೊರತುಪಡಿಸಿ ಉಳಿದ ಶಾಸನ ಸರಳಗದ್ಯದ ವರದಿಯಾಗಿದೆ. ಶಾಪಾಶಯ ಭಾಗದ ಗದ್ಯ ಭಿನ್ನವಾಗಿದೆ. ಕೊಟ್ಟದಾನವನ್ನು ಕಾಪಾಡುವವರನ್ನು ಅಥವಾ ಕೆಡಿಸುವವರನ್ನು 'ಅಂಬುವೇಗದಿಂದೆತ್ತಿ ಕೆರೆಗೆಶಯಲು, ಅಥವಾ ಕಾಪಾಡಲು ನೀಲೇಶ್ವರ ತಾನೆ ಬಲ್ಲನೆಂದು" ಹೇಳಲಾಗಿದೆ. ಈತ ಈ ಶಾಸನ ಕವಿಯೂ ಲಿಪಿಕಾರನೂ ಆಗಿದ್ದಾನೆ. ಈತನಿಗೆ ಸಂಸ್ಕೃತ ತಿಳಿದಂತೆನಿಸುವುದಿಲ್ಲ. ಯಾವುದೇ ಶ್ಲೋಕವಾಗಲಿ ಸಂಸ್ಕೃತ ಪದಬಂಧಗಳಾಗಲೀ ಕಂಡುಬರುವುದಿಲ್ಲ. ಕಾವ್ಯ ಪ್ರತಿಭೆಯ ಹೊಳಹು ಇಲ್ಲದ ಈತ ತೀರ ಸಾಮಾನ್ಯ ಬರಹಗಾರ. ಹಾಗಾಗಿ ಕಿತ್ತನ ಕೆರೆಯ ಶಾಸನ ಹಾಗೂ ಕಳಿಕಟ್ಟಿ ಶಾಸನಗಳ ಕವಿಗಳು ಭಿನ್ನರೆನಿಸುತ್ತದೆ. ಕಾಲದ ಅಂತರವೂ ಹೆಚ್ಚಿದೆ.

**೪. ಮಲ್ಲಣ್ಣ ಪಂಡಿತ (೧೧೮೩) :** ಅರಸೀಕೆರೆಯ ಗೊಜ್ಜೇಶ್ವರ ದೇವ ದಾನದ ಶಾಸನವನ್ನು ಬರೆದಿರುವ ಮಲ್ಲಣ್ಣನು ತನ್ನ ಹೆಸರಿನೊಂದಿಗೆ ಪಂಡಿತ ಎಂಬ ವಿಶೇಷಣವನ್ನು ಇಟ್ಟುಂಡಿರುವುದರಿಂದ ಇವನು ಉನ್ನತ ವಿದ್ಯಾಭ್ಯಾಸವನ್ನು ಪಡೆದಿದ್ದ ಕವಿ ಎಂಬುದು ಸ್ಪಷ್ಟವಾಗುತ್ತದೆ. ಸಂಸ್ಕೃತ ಮತ್ತು ಕನ್ನಡ ಭಾಷೆಗಳೆರಡರಲ್ಲೂ ಪಾಂಡಿತ್ಯವಿದ್ದಂತೆ ತೋರುತ್ತದೆ. ಹೊಯ್ಸಳ ವಂಶೋದಯವನ್ನು ಶ್ಲೋಕ, ವಸಂತ ತಿಲಕಗಳಲ್ಲಿ ರಚಿಸಿದ್ದಾನೆ. ಕೆಳೆಯಬ್ಬರಸಿ, ಎರೆಯಂಗ, ಏಚಲಾದೇವಿಯರ ವರ್ಣನೆ ಆಕರ್ಷಕವಾಗಿದೆ.[೧೦೩]

ಅಱಿಯಂ ಪೆರರಂಗನೆಯರ ನಱಿಯಂ ಕ್ರಪಣತ್ವಮಂ ರಣಾಂಗಣದೊಳು ತಾ ||
ನಱಿಯಂ ಪೆರಗಡಿಯಿಡುವುದ ನಱಿಯದವರ ಹೊಗಳಱಿಯನೆಱಿಯಂಗನೃಪಂ ||

ಎಂದು ಎಱಿಯಂಗನನ್ನು ವರ್ಣಿಸಿದ್ದಾನೆ. ಏಚಲದೇವಿಯು ತನ್ನ ಪವಿತ್ರ ವಂಶವೇ ಗಂಗೆಯಾಗಿರಲು ಪತಿವ್ರತಾನುರಾಗಕ್ಕೆಡೆಯಾದ ಪಲ್ಲವಗಳು ಮೇಖಲ ಮಾಲೆಯೇ ಪುಷ್ಪ ಮಾಲೆ ಅವಳ ಶುದ್ಧಾಂಗವೇ ದರ್ಪಣಹೃದಯವಾಗಿ ಮಂಗಳಪ್ರದವಾದ ಪೂರ್ಣಕುಂಭದಂತೆ ಒಪ್ಪವಾಗಿದ್ದಳೆಂಬ ವರ್ಣನೆ ಸುಂದರವಾಗಿದೆ. ಕಲಶ ಕನ್ನಡಿ ಗಂಗೆ ಪಲ್ಲವ ಪುಷ್ಪಗಳಿಂದ ಕೂಡಿದ ಪೂರ್ಣಕುಂಬಕ್ಕೆ ಹೆಣ್ಣನ್ನು ಹೋಲಿಸಿರುವುದು ಅವಳ ಫಲವಂತಿಕೆಗೆ ಪವಿತ್ರತೆಗೆ, ಶುಭಕ್ಕೆ ಸಂಕೇತವಾಗಿದೆ.

ಅರಸೀಕೆರೆಯಲ್ಲಿ ತಂಬುಲವಳ್ಳಿಯ, ಕಿತ್ತಲೆ, ಮಾಂಬನ, ದಳದಳಿತ ಸಂಜೆಮಲ್ಲೆ ಹೂವೆಂಬ ಬೆಳುದಿಂಗಳು ಕಣ್ಬಾಯಕೆಯ ಚೆಲುವನ್ನು ನೀಡುವುದೆಂಬ ಇವನ ವರ್ಣನೆ ಚೆನ್ನಾಗಿದೆ.

ಶಾಸನಾಂತ್ಯದಲ್ಲಿ ಈತ ತನ್ನನ್ನು ಸತುಕವಿ ಎಂದು ಕರೆದುಕೊಂಡು ತಾನು ಕ್ಷಿತಿವಿನುತೆ ಸಾಂತಿನಾಥನ ಸತಿ ಸಂನುತೆ ಚಂದಿಯಕ್ಕನಣುಗಿನ ಪುತ್ರ" ಎಂದು ಹೇಳಿದ್ದಾನೆ ಮತ್ತು ತನ್ನ ಶಾಸನದಲ್ಲಿ ತಂದೆ ಶಾಂತಿನಾಥ (ಸಾಂತಮಹಂತ)ನ ಕೆಲವು ಪದ್ಯಗಳನ್ನು ಸೇರಿಸಿರುವುದು ಕಂಡುಬರುತ್ತದೆ.

**೫. ಕವಿ ದೇವಪಾರ್ಯ (೧೧೭೩-೧೨೩೩) :** ಕವಿರಾಜನೆಂಬ ಬಿರುದನ್ನು ಪಡೆದಿದ್ದ ಕವಿ ದೇವಪಾರ್ಯನು ಅರಸೀಕೆರೆಯ ಪ್ರಸನ್ನ ಚನ್ನಕೇಶವ ದೇವಾಲಯ ನಿರ್ಮಾಣ, ದಾನ ಶಾಸನವನ್ನು ಬರೆದಿದ್ದಾನೆ. ಈತ ತನ್ನ ಪರಿಚಯವನ್ನು ನೀಡುತ್ತ ವಾಜಿವಂಶೋದ್ಭವನಾದ ವಿಭು ಸೋಮನಾಥನ ಪುತ್ರನೆಂದು ಹೇಳಿಕೊಂಡಿದ್ದಾನೆ. ಈ ವಾಜಿವಂಶದ ಕಾಶ್ಯಪ ಗೋತ್ರದ ಸೋಮನಾಥನನ್ನು ಕಡೂರಿನ ಕೆರೆಸಂತೆಯ ಶಾಸನವು[೧೦೪] ಉಲ್ಲೇಖಿಸುತ್ತದೆ. ಆ ಶಾಸನದ ಕವಿ ನಾಗದೇವನು ತನ್ನನ್ನು ವಾಜಿವಂಶಶೇಖರ ಅಕಳಂಕ ಕೀರ್ತಿ ಕಲಿಕಾಲ ಬೃಹಸ್ಪತಿ' ಸೋಮನಾಥ, ಶಂಕರರ ಸೋದರನೆಂದು ಹೇಳಿಕೊಂಡಿದ್ದಾನೆ. ಅಲ್ಲದೆ, ಹರಿಹರ ಮಾಯಿದೇವಿಯರ ಪುತ್ರನೆಂದು ಹೇಳಿಕೊಂಡಿದ್ದಾನೆ. ಕಲಿಕಾಲ ಬೃಹಸ್ಪತಿ' ಎಂಬ ಬಿರುದನ್ನು ಗಮನಿಸಿದರೆ ಸೋಮನಾಥನು ಶ್ರೇಷ್ಠ ಕವಿಯೂ ವಿದ್ವಾಂಸನೂ ಆಗಿದ್ದುದು ಸ್ಪಷ್ಟವಾಗಿದೆ.

ಭುವನನುತ ವಾಜಿವಂಶದ ಕಾಶ್ಯಪ ಗೋತ್ರದ ದೇವಪಾರ್ಯನ ತಂದೆ ಈ ಸೋಮನಾಥನೇ ಆಗಿರುವ ಸಾಧ್ಯತೆಯಿದೆ. ಒಟ್ಟಿನಲ್ಲಿ ಈ ಕುಟುಂಬ ಶ್ರೇಷ್ಠ ಪಂಡಿತರು ಕವಿಗಳಿಗೆ ಪ್ರಸಿದ್ಧವಾಗಿದ್ದಂತೆ ತೋರುತ್ತದೆ. ಕೆರೆಸಂತೆ ಅರಸೀಕೆರೆಗಳು ಸಮೀಪವಿದ್ದು ಇವರ ವಾಸ್ತವ್ಯ ಈ ಪ್ರದೇಶದಲ್ಲಿತ್ತೆಂದು ಊಹಿಸಬಹುದು.

ಕವಿದೇವ ಪಾರ್ಯನು ತನ್ನ ಬಿರುದು ಕವಿರಾಜನೆಂದು ಹೇಳಿರುವುದು ಅವನ ಶಾಸನ ಪದ್ಯಗಳನ್ನು ಗಮನಿಸಿದಾಗ ಉಚಿತವಾಗಿದೆ ಎನಿಸುತ್ತದೆ. ಉತ್ತಮ ಪ್ರೌಢಿಮೆ, ಪ್ರತಿಭಾಸ್ಪರ್ಶ, ಕಲ್ಪಕತೆಗಳಿಂದ ಆಕರ್ಷಕವಾದ ರಚನೆಗಳನ್ನು ಶಾಸನದಲ್ಲಿ ಕಾಣಬಹುದು.[೧೦೫] ಅರಸೀಕೆರೆ ಶಾಸನದ ಹದಿನಾಲ್ಕು ಪದ್ಯಗಳು ಅರಕೆರೆಯ ಶಾಸನದಲ್ಲಿ ಕಾಣಿಸಿಕೊಂಡಿರುವುದರಿಂದ [೧೦೬] ಆ ಶಾಸನವನ್ನೂ ದೇವಪಾರ್ಯನೇ ಬರೆದಿರಬಹುದೆನಿಸುತ್ತದೆ. ಅರಸೀಕೆರೆಯ ಶಾಸನದಲ್ಲಿಲ್ಲದ ಮತ್ತೂ ಕೆಲವು ಅತ್ಯಂತ ಸುಂದರ ಪದ್ಯಗಳು ಈ ಶಾಸನದಲ್ಲಿ ಕಂಡುಬಂದಿವೆ. ಕೆಲವನ್ನು ಅಲ್ಪಸ್ವಲ್ಪ ತಿದ್ದಿ ಬರೆಯಲಾಗಿದೆ. ಕಡೂರಿನ ಕೆರೆಸಂತೆಯ ಶಾಸನದಲ್ಲಿರುವ ಎರಡು ಪದ್ಯಗಳನ್ನು ಈ ಶಾಸನದಲ್ಲಿ ಪರಿಷ್ಕರಿಸಿ ಮತ್ತೂ ಸುಂದರವಾಗಿ ಮಾಡಲಾಗಿದೆ.[೧೦೭] ಅರಕೆರೆಯ ಶಾಸನ ಇವನ ಕಾವ್ಯ ಪ್ರತಿಭೆಗೆ ಉತ್ತಮ ಉದಾಹರಣೆಯಾಗಿದೆ.

> ಕರಿಘಟೆ ಕೂಡೆ ನೂಂಕಿದವು ವಾಜಿಧಳಂ ಪೊಡ್ಡಣಂ
> ತರತರದಿಂದ ಪೊಡ್ಡಿ ನಡೆಗೋಂಟೆವೊಲೆತ್ತಿ ಬರುತ್ತವಿರ್ದವಾ
> ಸುರವೆನೆ ಬರ್ಪಬಿಲ್ಲಣಿಗೆಯಾಂಪವರಾರೆನುತಂಜಿ ಭೂಭುಜ
> ರ್ಕರುಣಿಸಿ ಕಾವುದೆಮ್ಮನೆನುತಿರ್ಪ್ಪರು ವೀರನೃಸಿಂಹರಾಯನಂ[೧೦೮]

ಎಂಬ ಪದ್ಯದಲ್ಲಿ ಇಡೀ ಸೈನ ಬಲವು ವಿಶಿಷ್ಟವಾದ ವ್ಯೂಹವನ್ನು ರಚಿಸಿಕೊಂಡು ರಕ್ಷಣಾವ್ಯವಸ್ಥೆಯನ್ನು ಮಾಡಿಕೊಳ್ಳುವ ವೈಖರಿಯನ್ನು ಕೋಟೆಗೆ ಹೋಲಿಸಿರುವುದಲ್ಲದೆ ಅದನ್ನು 'ನಡೆಗೋಂಟೆ' ಎಂದು ಕರೆದಿರುವುದು ಔಚಿತ್ಯ ಪೂರ್ಣವಾಗಿದೆ. ಶತೃಗಳಿಗೆ ದುರ್ಭೇದ್ಯವಾಗುವಂತೆ ರಚಿಸಲಾಗುತ್ತಿದ್ದ ಪದ್ಮವ್ಯೂಹ

ಚಕ್ರವ್ಯೂಹಗಳು ಇದೇ ರೀತಿ ತರತರದ ಒಡ್ಡುಗಳಾಗಿರುತ್ತಿದ್ದವೆಂದು ಊಹಿಸಬಹುದು. ಮದಿಸಿದ ಆನೆಗಳ ಸಮೂಹವು ದುರ್ಭೇಧ್ಯವಾದ ಕೋಟೆಯ ಗೋಡೆಯಂತೆ ಕಾಣುವುದರಲ್ಲಿ ಆಶ್ಚರ್ಯವಿಲ್ಲ.

**೬. ತ್ರಿವಿಕ್ರಮಾಂಕ (ಸು.೧೧೫೦-೧೨೦೦) :** ತ್ರಿವಿಕ್ರಮಾಂಕ ಅಥವಾ ತ್ರಿವಿಕ್ರಮ ಪಂಡಿತನು ರಾಜಧಾನಿ ಅರಸೀಕೆರೆಯ ಪ್ರಸಿದ್ಧ ಕವಿಯಾಗಿದ್ದನು. ಪ್ರಸಿದ್ಧರಾದ ಹೊಯ್ಸಳ ವೀರ ಬಲ್ಲಾಳ, ಕಮ್ಮಟದ ಚಟ್ಟಪ್ಪಶೆಟ್ಟಿ, ಅರಸೀಕೆರೆಯ ರಾಜ್ಯಾಧ್ಯಕ್ಷದ ಹೆಗ್ಗಡೆ, ರಾಣಿ ಉಮಾದೇವಿಯ ತಂದೆ ಕೇಶವ ದೇವಯ್ಯನ ಶಾಸನಗಳನ್ನು ರಚಿಸಿದ್ದಾನೆ. ಪ್ರತಿಭಾನ್ವಿತನಾದ ಈತನ ಶಾಸನದ ಪದ್ಯಗಳು ಅರಸೀಕೆರೆ, ಕುರುವಂಕ ಬೆಂಡೆಕೆರೆಯ ಇತರ ಶಾಸನಗಳಲ್ಲೂ ಕಂಡುಬಂದಿದ್ದು ಅವುಗಳನ್ನೂ ಈತನೇ ರಚಿಸಿರಬಹುದೇ ಎಂಬ ಅನುಮಾನ ಬರುತ್ತದೆ. ಅಥವಾ ಅವನ ಕವಿತ್ವದಿಂದ ಪ್ರಭಾವಿತರಾದ ಅವನ ಶಿಷ್ಯರೋ, ಸೇನಬೋವರೋ ಅವುಗಳನ್ನು ಸೇರಿಸಿಕೊಂಡು ಶಾಸನ ಬರೆದಿರಬಹುದು.

ಬಾಣಾವರದ ಕಮ್ಮಟದ ಚಟ್ಟಪ್ಪಸೆಟ್ಟಿ ಮತ್ತು ಅವನ ಸೋದರ ದಾಸಿಸೆಟ್ಟಿಯರ ವರ್ಣನೆ ವಿಶೇಷವಾಗಿ ಮೂಡಿಬಂದಿದ್ದು ಆ ಕುಟುಂಬದ ದಾನ, ಧರ್ಮ, ಪ್ರಭಾವ, ವೃತ್ತಿ ನೈಪುಣ್ಯತೆ ಇತ್ಯಾದಿಗಳನ್ನು ಮನಮುಟ್ಟಿಸುತ್ತದೆ. ಸುಲಲಿತವಾದ ಪದಬಂಧದಿಂದ ಕಂದ ವೃತ್ತಗಳಂತೆ ಗದ್ಯವೂ ಆಕರ್ಷಕವಾಗಿದೆ.

ಬೆಳದೆರಗಿದ ಕಳವೆಗಳಿಂ |ಗಿಳಿವಿಂಡಿಂ ನಂದನಂಗಳಿಂದಳಿಕುಳದಿಂ ||
ಬಳಸಿದ ಪೂರ್ಣ ತಟಾಕಾ|ವಳಿಯಿಂದುರ್ವ್ವರೆಗೆ ಬಾಣವೂರ್ ಸೊಗಯಿಸುಗುಂ ||[೧೦೯]
ಮುಳಿದಾಗಡೆ ಕೂರ್ಪ್ಪವರೊ|ಳ್ತಿಳಿವುದು ತಿಳಿವುದು ಗಡೆನ್ದು ಸಾಱುವತೆ ದಿಂ||
ಗಳಪುವಗಿಳಿವಿಂಡಿನಕಳ|ಕಳವರಸಿಯ ಕೆಱೆಯ ಬನದೊಳೊಪ್ಪುತ್ತಿರ್ಕ್ಕು ||[೧೧೦]

ಪ್ರಸ್ತುತ ಪದ್ಯಗಳೆರಡೂ ಗಳಗಳನೆ ಸಾಗುವ ಸುಲಲಿತವಾದ ಉತ್ಸಾಹದಿಂದ ಕೂಡಿದ ತ್ರಿವಿಕ್ರಮಾಂಕನ ಶೈಲಿಯನ್ನು ಪರಿಚಯಿಸುತ್ತವೆ.

ಕದನದೊಳಾನ್ತರಾತಿಗಳ ದನ್ತಿಯ ದನ್ತಮನೊತ್ತಿ ಕಿಱುತದ್
ಬಿದುವನೆ ಪೊಯ್ಕೆ ಪೊಳ್ಳು ಪೊರಪೊಣ್ಮೆಸರಕ್ತರ ಮೌಕ್ತಿಕಂಗಳಾ
ಪದದೊಳವಂ ಜಯಾಂಗನೆಗೆ ಹಾರಮನೊಪ್ಪಿರೆ ಮಾಳ್ಪನೆಂದೊಡಾ
ರ್ಕದನದೊಳಾಂಪಿದಿರ್ಚ್ಚುವದಟರ್ಜ್ಜಗದೊಳ್ ನರಸಿಂಹದೇವನಂ

ಕವಿಸಮಯ ಉತ್ಪ್ರೇಷೆ ಸಶಕ್ತ ಪದ ಬಂಧದಿಂದ ಕೂಡಿದ ಈ ವೃತ್ತ ನರಸಿಂಹನ ಶೌರ್ಯವನ್ನು ಬಿತ್ತರಿಸಿದೆ.

ಬಾಣಾವರದ ಶಾಸನದಲ್ಲಿ ತಾನು ಬುಧನಿಧಿವಿವೇಕನಿಧಿ ಗುಣನಿಧಿಯಾದ ಆದಿತ್ಯನ ಅನುಜನೆಂದೂ 'ತದಂತೇವಾಸಿ' ಎಂದೂ ಹೇಳಿಕೊಂಡಿದ್ದಾನೆ. ಅಂದರೆ ಇವನು ಅಣ್ಣನಾದ ಆದಿತ್ಯನಲ್ಲಿಯೇ ಶಿಷ್ಯತ್ವ ಮಾಡಿ ವಿದ್ಯಾವಂತನಾಗಿದ್ದನೆನ್ನಬಹುದು. ಹಾಗಾಗಿ ಹಿರಿಯಣ್ಣನೂ ಗುರುವು ಆದ ಆದಿತ್ಯನನ್ನು ಗೌರವದಿಂದ ನೆನೆದಿದ್ದಾನೆ.

೭. ಹರಿಹರ ಸೂರಿ (೧೧೯೪) : ಇವನು ಅರಸೀಕೆರೆ ತಾಲ್ಲೂಕಿನ ಬೊಮ್ಮೇನಹಳ್ಳಿಯ ಶಾಸನವನ್ನು ಬರೆದಿದ್ದಾನೆ.[೧೧೧] ಈತನು ಶಾಸನಾಂತ್ಯದಲ್ಲಿ ಸ್ವವಿವರ ನೀಡಿದ್ದಾನೆ.

'ಹರಿಹರಸೂರಿ ಸೀಗುರಿಯ ಕಾಮನ ತಮ್ಮನುಮೇಶದತ್ತವಾ
ಗ್ಗಿರಚಿಸಿದಂ ತ್ರಿವಿಕ್ರಮ ಕವೀಶ್ವರನೂರ್ಜಿತವಾಣಿ ತಿಳ್ದಿತಾಂ
ಬರೆದನುಪೇತ ಲಕ್ಷಣಗಣಂ......"

ಈ ವೃತ್ತದ ಪ್ರಕಾರ ಹರಿಹರಸೂರಿಯು ಸೀಗುರಿಯ ಕಾಮನ ಕಿರಿಯ ಸೋದರನೆಂಬುದು ಶಿವಭಕ್ತನೆಂಬುದು ತಿಳಿಯುವುದಲ್ಲದೆ, ಅವನು ರಚಿಸಿದ ಪ್ರಸ್ತುತ ಶಾಸನವನ್ನು ಊರ್ಜಿವಾಣಿಯುಳ್ಳ ಕವೀಶ್ವರನಾದ ತ್ರಿವಿಕ್ರಮನು ತಿದ್ದಿ ಬರೆದನೆಂದು ತಿಳಿಯುತ್ತದೆ. ಅರಸೀಕೆರೆ ಪರಿಸರದ ಪ್ರಸಿದ್ಧ ಕವಿಯಾದ ತ್ರಿವಿಕ್ರಮ ಪಂಡಿತನಿಂದ ತನ್ನ ರಚನೆಗಳನ್ನು ತಿದ್ದಿಸಿಕೊಂಡಿರುವುದನ್ನು ಗಮನಿಸಿದರೆ ಮತ್ತು ತ್ರಿವಿಕ್ರಮನನ್ನು ಕವೀಶ್ವರನೆಂದು ಗೌರವಿಸಿರುವುದನ್ನು ಗಮನಿಸಿದರೆ ಹರಿಹರ ಸೂರಿ ಆತನಲ್ಲಿ ಶಿಷ್ಯತ್ವವನ್ನು ಹೊಂದಿರುವ ಸಾಧ್ಯತೆಯನ್ನು ಊಹಿಸಬಹುದು. ಸೀಗುರಿಯ ಕಾಮನೂ ಪ್ರಸಿದ್ಧ ವ್ಯಕ್ತಿಯಿರಬಹುದು.

ಹರಿಹರಸೂರಿಯು ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಪಾಂಡಿತ್ಯ ಪಡೆದವನಾಗಿದ್ದು ಶ್ಲೋಕ ಗೀತಿ, ಶಿಖರಣಿ, ಶಾಲಿನಿ, ಕಂದ ಹಾಗೂ ಚಂಪಕ ಆದಿ ಖ್ಯಾತ ಕರ್ನಾಟಕಗಳಲ್ಲಿ ರಚನೆ ಮಾಡಿದ್ದಾನೆ. ತ್ರಿವಿಕ್ರಮ ಪಂಡಿತನ ಕೆಲವು ಪದ್ಯಗಳು, ಶಾಂತಮಹಂತನ ಪದ್ಯವೂ ಈ ಶಾಸನದಲ್ಲಿ ಸೇರಿದೆ.

ವಿಷ್ಣುವಿಗೆ ಚಕ್ರ, ಇಂದ್ರನಿಗೆ ವಜ್ರಾಯುಧ ಪುರಹರನಾದ ಶಿವನಿಗೆ ಭಯಂಕರವಾದ ಜ್ವಾಲೆಯುಳ್ಳ ಕಣ್ಣು ಉಗ್ರವಾದ ಸಿಂಹಕ್ಕೆ ಭಯಂಕರವಾದ ಉಗುರು ಎಷ್ಟು ಪ್ರಧಾನ ಶಕ್ತಿ ಆಗಿವೆಯೋ ಅದೇ ರೀತಿ ಬಲ್ಲಾಳಭೂಪನಿಗೆ ದ್ರೋಹ ಘರಟ್ಟನಾದ ಮಾಚಣನು ಪ್ರಧಾನನೂ, ಶಕ್ತಿಯೂ ಆಗಿ ಅವನ ಜಯಕ್ರೀಡೆಗಳಿಗೆ ಒದಗುತ್ತಿದ್ದನೆಂಬ ವರ್ಣನೆ ಮಾಚಣ್ಣನ ವ್ಯಕ್ತಿತ್ವ ಪರಾಕ್ರಮ ಘನತೆಯನ್ನು ಎತ್ತಿ ಹಿಡಿದಿದೆ.

೮. ಸೋಮನಾಥ ಪಂಡಿತ ಮತ್ತು ವಿಶ್ವನಾಥದೇವ : ಹಿರಿಯಪಟ್ಟದ ಅಗ್ರಹಾರ ಸೋಮನಾಥಪುರವೆಂದು ಪ್ರಸಿದ್ಧವಾದ ಹಾರುವನಹಳ್ಳಿಯಲ್ಲಿ ಸಿಂದವಿಗೆಯ ಸ್ವಾಮಿಗಳ ಹೆಸರಿನಲ್ಲಿ ನಿರ್ಮಿಸಲಾದ ಶ್ರೀ ಲಕ್ಷ್ಮೀ ನರಸಿಂಹ ದೇವಾಲಯದ ಶಾಸನದಲ್ಲಿ[೧೧೨] ಆ ಶಾಸನ ಪದ್ಯಗಳನ್ನು 'ಶ್ರೀಮದಾನಂದ ಬೋಧಪ್ರಭುಗಳ ದಾಸ, ಕವಿಕುಳತಿಳಕ, ಸುಕವಿ ಕಂಠಾಭರಣ ಸೋಮನಾಥ ಪಂಡಿತರು ಹೇಳಿದರೆಂದು ಉಭಯಹಸ್ತ ಲೇಖನ ಕುಶಲ ಅವಧಾನ ಚಕ್ರವರ್ತಿ ಶ್ರೀಕರಣದ ವಿಶ್ವನಾಥ ದೇವ ಬರದನೆಂದು ಹೇಳಿದೆ.

ಈ ಶಾಸನದಲ್ಲಿ ಹೇಳಿರುವ ಸೋಮನಾಥ ಪಂಡಿತ ಮತ್ತು ವಿಶ್ವನಾಥ ಇಬ್ಬರೂ ಸಿಂದವಿಗೆಯ ಸ್ವಾಮಿಗಳಾದ ಆನಂದಬೋಧ ದೇವ ಮುನಿಂದ್ರನ ದಾಸರೆಂದು ಹೇಳಿಕೊಂಡಿದ್ದಾರೆ. ಈ ಆನಂದ ಬೋಧ ಪ್ರಭುವು 'ಪರಮ ಮುನಿ ವರಿಷ್ಠನೂ ಬ್ರಹ್ಮ ಕರ್ಮನಿಷ್ಠನೂ, ಶಾಂತಚಿತ್ತನೂ ತಪಸ್ವಿಯೂ,

ವಿದ್ಯಾಪರಿಣತಿಯೂ ಚಿತ್ತವೇಧನೂ ಆದ ಶ್ರೇಷ್ಠ ಪಂಡಿತನಾಗಿದ್ದು ಅನೇಕ ಶ್ರೇಷ್ಠ ಶಿಷ್ಯರನ್ನು ಪಡೆದಿದ್ದನು. ಸೋಮನಾಥಪುರವಾದರೋ ವಲ್ಲಭಿಗೆ ಸಮನಾದ ಅಗ್ರಹಾರವಾಗಿದ್ದು, ಅಲ್ಲಿ ಛಂದಃಪರಿಣತರೂ ನಿಶಿತ ಶಾಸ್ತ್ರ ಬಲಸಂಪನ್ನರೂ, ಶ್ರೇಷ್ಠ ಕವೀಶ್ವರರು ಇದ್ದರೆಂದು ಇದೇ ಶಾಸನ ಹೇಳುತ್ತದೆ.

ಸೋಮನಾಥ ಪಂಡಿತನಿಗೆ ಕವಿಕುಳತಿಳಕ ಸುಕವಿ ಕಂಠಾಭರಣ'ನೆಂಬ ಬಿರುದಿದ್ದುದನ್ನು ಗಮನಿಸಿದರೆ ಆತ ಶ್ರೇಷ್ಠ ಕವಿಯಾಗಿದ್ದು ಹೊಯ್ಸಳ ಇಮ್ಮಡಿ ವೀರ ನರಸಿಂಹ ಮತ್ತು ಅವನ ಮಗ ಸೋಮೇಶ್ವರನಲ್ಲಿ ಆಶ್ರಿತನಾಗಿದ್ದು ಈ ಬಿರುದನ್ನು ಪಡೆದಿದ್ದನೆಂದು ಹೇಳಬಹುದು. ಈತ ಈ ಶಾಸನ ಪದ್ಯಗಳನ್ನು ಮಾತ್ರ ಹೇಳಿದ್ದು ಉಳಿದ ಗದ್ಯ ಭಾಗಗಳನ್ನು ಶ್ರೀಕರಣದ ವಿಶ್ವನಾಥ ಸೇರಿಸಿದ್ದಾನೆ. ಇವರಿಬ್ಬರೂ ಒಂದೇ ಗುರುಕುಲದಲ್ಲಿ ಸಹಪಾಠಿಗಳಾಗಿದ್ದವರು.

ಶ್ರೀಕರಣದ ವಿಶ್ವನಾಥದೇವನೂ ಅಸಾಮಾನ್ಯ ಸಾಮರ್ಥ್ಯವುಳ್ಳ ಪ್ರತಿಭಾವಂತ. ಇವನ ವಿಶೇಷತೆಯೆಂದರೆ ಇವನು ಉಭಯ ಹಸ್ತ'ಗಳಲ್ಲೂ ಬರೆಯಬಲ್ಲ ಲೇಖನ ಕುಶಲಿ'ಯಾಗಿದ್ದ ಅಷ್ಟೇ ಅಲ್ಲ ಈತನು ಅವಧಾನ ಕಲೆಯಲ್ಲಿ ಪ್ರಸಿದ್ಧನಾಗಿದ್ದು ಹೊಯ್ಸಳ ಚಕ್ರವರ್ತಿಯಿಂದ ಅವಧಾನ ಚಕ್ರವರ್ತಿ ಎಂಬ ಬಿರುದನ್ನು ಪಡೆದುಕೊಂಡಿದ್ದನು. ಈ ಶಾಸನದ ಪದ್ಯ ಗದ್ಯಗಳೆರಡೂ ಇವರ ಪ್ರತಿಭೆ ಪಾಂಡಿತ್ಯಕ್ಕೆ ಸಾಕ್ಷಿಯಾಗಿದ್ದು ಅವರ ಬಿರುದನ್ನು ಸಾರ್ಥಕಗೊಳಿಸಿದೆ.

ವಿಶೇಷವಾದ ದಾನಗಳನ್ನು ಮಾಡುತ್ತಿದ್ದ ಸೋವಲದೇವಿಯ ದಾನಧಾರಾಜಲದಿಂದ ಕೀರ್ತಿಲತೆ ಕೊಬ್ಬಿಹಬ್ಬಿತಂತೆ ಅಲ್ಲದೆ ಗುಣಮಂಡನೆಯಾದ ಸೋಮಲದೇವಿ ಸೋವಿದೇವನಿಗೆ (ಅಣ್ಣನ ಮಗ) 'ಕೂರ್ಮ್ಮೆಯಿಂ ತಾಯೆನೆ ಪೆರ್ಮೆಗೆ ತಾನೆ ದಲ್ತವರ್ಮನೆಯಾದಳೆಂದು ಕವಿ ಹೊಗಳಿದ್ದಾನೆ. ಈ ಶಾಸನದಲ್ಲಿ ಹದಿನೇಳು ಪದ್ಯಗಳಿದ್ದು ಶ್ಲೋಕ, ಕಂದ, ಮಾಲಿನಿ, ಚಂಪಕ, ಸ್ರಗ್ಧರೆ, ಮಹಾಸ್ರಗ್ಧರೆ, ಮತ್ತೇಬ ವಿಕ್ರೀಡಿತ ವೃತ್ತಗಳಲ್ಲಿ ಪದ್ಯಗಳಿವೆ.

ಈ ಶಾಸನದ ಗದ್ಯಭಾಗವನ್ನು ವಿಶ್ವನಾಥನು ಬರೆದಿದ್ದಾನೆ. ಈ ಗದ್ಯವು ಅತ್ಯಂತ ಸರಳವಾಗಿಯೂ ಸಂಭಾಷಣಾ ಸೌಂದರ್ಯದಿಂದಲೂ ಕೂಡಿ ಕಥಾ ನಿರೂಪಣೆಯಂತೆ ಆಕರ್ಷಕವಾಗಿದೆ. ೧೩ನೇ ಶತಮಾನದ ಕನ್ನಡ ಸಾಮಾಜಿಕ ಉಪಭಾಷೆಯ ಸ್ವರೂಪ ತಿಳಿಯಲು ಇದು ಸಹಾಯಕವಾಗಿದೆ. ಶಿಷ್ಟವಾದರೂ ಬ್ರಾಹ್ಮಣರ ಸರಳ ಆಡು ಮಾತಿನ ಶೈಲಿಯನ್ನಿಲ್ಲಿ ಕಾಣಬಹುದು.

**೯. ಸವಣ ಬಲ್ಲರ ದೇವ (೧೨೧೯) :** ಸಹಸ್ರ ಕೂಟ ಬಸದಿಯ ಶಾಸನಾಂತ್ಯದಲ್ಲಿ 'ಸವಣಬಲ್ಲರದೇವ ರೂವಾರಿ ನೇಮೋಜನೆಂದು ಬರೆಯಲಾಗಿದೆ. 'ಸವಣಬಲ್ಲರದೇವ' ಎಂಬುದು ಶಾಸನ ಬರೆದ ಕವಿಯೆಂದು ಮೇವುಂಡಿ ಮಲ್ಲಾರಿಯವರು ಗುರುತಿಸಿದ್ದಾರೆ, ಮತ್ತು ಖಂಡರಣೆಕಾರನನ್ನು ರೂವಾರಿ ನೇಮೋಜನೆಂದು ಭಾವಿಸಲಾಗಿದೆ.[೧೧೩]

ಭರದಿಂ ಜೋಳದ ಕೂಳುವೆಣ್ಣೆಯುಮನುಂಡಂತತ್ಯಾಸೆಯಿಂಪನ್ನೆರ
ಡ್ವರಿಸಂ ಕೂಡಿ ಸಹಸ್ರ ಕೂಟಗೃಹಮಂ ಶ್ರೀ ರೇಚಿದಂಡೇಶನಿಂ
ಪರಿಪೂರ್ಣ ಬ್ರತನಾಗಿ ಮಾಡಿಸಿದನ್ ...'[೧೧೪]

ಎಂಬ ಪದ್ಯಭಾಗದಲ್ಲಿ ಸಾಗರಣಂದಿ ವ್ರತಿಪಾಳನು ಹನ್ನೆರಡುವರ್ಷ ವ್ರತನಿಷ್ಠನಾಗಿ ಈ ಕಾರ್ಯವನ್ನು ಅತಿ ಆಸ್ತೆವಹಿಸಿ ರೇಚಿದಂಡೇಶನಿಂದ ಮಾಡಿಸಿದನೆಂದು ಹೇಳುವಾಗ ಜೋಳದ ಕೂಳುವೆಣ್ಣೆಯನ್ನು ಅತಿ ಆಸ್ತೆಯಿಂದ ಭರದಿಂದ ಅಂದರೆ ಕಾತುರತೆಯಿಂದ ಉಂಡಂತೆ ಎಂಬ ಹೋಲಿಕೆಯಿದೆ. ಜೋಳದ ಕೂಳುಬೆಣ್ಣೆಗಳ ಸವಿಯನ್ನರಿತ ಕವಿ ಮಾತ್ರ ಇಂಥ ಹೋಲಿಕೆಯನ್ನು ಕೊಡಬಲ್ಲ. ರೇಚರಸ ಉತ್ತರ ಕರ್ನಾಟಕದವನು ಬಿಜ್ಜಳನ ಸೇವೆಯಲ್ಲಿದ್ದವನು. ಅವನು ವಲಸೆ ಬರುವಾಗ ಅವನೊಂದಿಗೆ ಆ ಪ್ರದೇಶದ ಕವಿಗಳು ಬಂದಿರಬಹುದು. ಜೋಳದ ರೊಟ್ಟಿ ಬೆಣ್ಣೆಯ ಸವಿನೆನಪನ್ನು ಹೊತ್ತು ತಂದಿರಬಹುದು!

**೧೦. ಕವಿ ಲೇಖಕೋಪಾಧ್ಯಾಯ :** ಕರುಗುಂದದ ಬಸದಿಯ ಶಾಸನವನ್ನು ಬರೆದ ಕವಿ ಶಾಸನದ ಕೊನೆಯಲ್ಲಿ

ಪುಟದೊಳು ಗೋಗ್ರಹಣಮನುತ್ಕಟಮಾಗಿರೆ ಬರೆದು ಮೆಚ್ಚಿಪುದಱಿಂಕಾಪಿಂ ||
ದಿಟದಿಂದ ಮೂಱುರಾಯರ |ಕಟಕದ ಬಿರುದುಗ ಲೇಖಕೋಪಾಧ್ಯಾಯ ||

ಎಂಬ ಪದ್ಯದ ನಂತರ 'ಇ ಶಾಸನಮಂ ಮಾಳೋಜನ ಮಗ ರೂವಾರಿ ಮಲ್ಲೋಜ ಖಡ್ಡರಿಸಿದ' ಎಂದು ಹೇಳಿದೆ.[೧೧೫]

ಮೂಱುರಾಯರ ಕಟಕದ ಲೇಖಕೋಪಾಧ್ಯಾಯ'ನೆಂಬ ಬಿರುದುಗನಾದ ಈ ಶಾಸನ ಕವಿಯು ಪುಟದಲ್ಲಿ (ಬಹುಶಃ ಒಂದೇ ಪುಟದಲ್ಲಿ) ಗೋಗ್ರಹಣವನ್ನು ಉತ್ಕಟವಾಗಿ ಬರೆದು ಮೆಚ್ಚಿಸುವುದರಿಂದ, ಕಾಪಿನಿಂದ (ರಕ್ಷಣೆ) ದಿಟದಿಂ (ಸತ್ಯದಿಂದ)ದಾಗಿ ಆ ಬಿರುದನ್ನು ಪಡೆದನೆಂಬ ಅರ್ಥವುಂಟಾಗುತ್ತದೆ. ಕನ್ನಡ ಕವಿಗಳಲ್ಲಿ ಕಟಕೋಪಾಧ್ಯಾಯನೆಂಬ ಬಿರುದನ್ನು ಪಡೆದಿದ್ದ ಕವಿಗಳೆಂದರೆ ಸುಮನೋಬಾಣ ಮತ್ತು ೨ನೇ ನಾಗವರ್ಮ. ನಾಗವರ್ಮನು ಚಾಳುಕ್ಯ ಜಗದೇಕ ಮಲ್ಲನಲ್ಲಿದ್ದು ಆ ಬಿರುದನ್ನು ಪಡೆದಿದ್ದನು. ಸುಮನೋಬಾಣ ಹೊಯ್ಸಳ ನರಸಿಂಹನಲ್ಲಿದ್ದು ಆ ಬಿರುದನ್ನು ಪಡೆದಿದ್ದನು.

ಪ್ರಸ್ತುತ ಶಾಸನ ತೇದಿಯು ೧೧೫೪ಕ್ಕೆ ಹೊಂದುತಿದ್ದು ಹೊಯ್ಸಳ ನರಸಿಂಹನ ಕಾಲದ್ದೇ ಆಗಿದೆ. ಹಾಗಾಗಿ ಈ ಲೇಖಕೋಪಾಧ್ಯಾಯ ಸುಮನೋಬಾಣನಿರಬಹುದೇ ಎಂಬ ಅನುಮಾನ ಉಂಟಾಗುತ್ತದೆ. ಈ ಪ್ರದೇಶವು ಜನ್ನ, ಮಲ್ಲಿಕಾರ್ಜುನ, ಕೇಶಿರಾಜ ಹಾಗೂ ಸುಮನೋಬಾಣರಿದ್ದ ಪ್ರದೇಶವೂ ಹೌದು. ಆದರೂ ಈ ಶಾಸನ ಕವಿ ಸುಮನೋಬಾಣನೆಂದು ಹೇಳಲು ಆಧಾರ ಸಾಲದು.

ಈ ಶಾಸನವು ಜೈನ ಶಾಸನವಾಗಿದ್ದು, ಸನ್ಧಿವಿಗ್ರಹಿ ಚಾವುಂಡರಾಯನ ವಂಶಕ್ಕೆ ಸೇರಿದೆ. ಅವನ ಮಕ್ಕಳಾದ ಮಾದವ, ಜಿನ್ನ (ಜಿನದೇವ) ಪಾರ್ಶ್ವನಾಥರನ್ನು ಹೊಗಳಿದೆ. ಪಟ್ಟಿಸ ಭಂಡಾರಿ ಪಾರ್ಶ್ವನ

ಮಡದಿ ಮರಿಯಾನೆ ಮಂತ್ರಿ ತಿಳಕನ ಮಗಳು ಬಮ್ಮವ್ವೆಯನ್ನು ಅತ್ತಿಮಬ್ಬೆಗೆ ಹೋಲಿಸಲಾಗಿದೆ. ಶ್ರೇಷ್ಠರಾದ ಜೈನ ಆಚಾರ್ಯರನ್ನು ಭಕ್ತಿಯಿಂದ ಸ್ಮರಿಸಿದೆ ಶ್ರೀಪಾದ ತ್ರೈವಿದ್ಯದೇವನನ್ನು, ವಾದಿರಾಜನನ್ನು ವಿಶೇಷವಾಗಿ ಕೀರ್ತಿಸಿದೆ. ಜಗದೇಕ ಮಲ್ಲನ ಆಸ್ಥಾನದಲ್ಲಿ ವಾದಿರಾಜನೊಂದಿಗೆ ಕಟಕೋಪಾಧ್ಯಾಯ ಬಿರುದನ್ನು ಹೊಂದಿದ್ದ ಇಮ್ಮಡಿ ನಾಗವರ್ಮನೂ ಇದ್ದು, ತನ್ನ ಗ್ರಂಥ ವರ್ಧಮಾನ ಪುರಾಣವನ್ನು 'ಶೋಧಿಸಿದರ್ ಸಲೆ ವಾದಿರಾಜ ಪಂಡಿತರ್' ಎಂದಿದ್ದಾನೆ. ಈತ ಕವಿ ಜನ್ನನ ಗುರುವೂ ಹೌದು. ಈ ಶಾಸನ ಕೃರ್ತವಿಗೆ ವಾದಿರಾಜನ ಬಗೆಗೆ ಅಪಾರ ಗೌರವವಿರುವುದು ಕಂಡುಬರುತ್ತದೆ. ಈ ಶಾಸನ ಕವಿ ಯಾವ ಲೇಖಕೋಪಾಧ್ಯಾಯನೇ ಆಗಿರಲಿ ಇವನು ಪ್ರಸಿದ್ಧನು, ರಾಜಾಶ್ರಯ ಪಡೆದಿದ್ದ ಶ್ರೇಷ್ಠ ಕವಿಯಾಗಿದ್ದನೆಂದು ಹೇಳಬಹುದು. ಇವನು ಗೋಗ್ರಹಣ ಪ್ರಸಂಗವನ್ನು ಉತ್ಕಟವಾಗಿ ಬರೆದು ಮೆಚ್ಚುಗೆ ಗಳಿಸಿದವನಾಗಿದ್ದನು.

**೧೧. ಕವಿ ಸಭಾಪತಿ (೧೫೩೫) :** ಕವಿ ಸಭಾಪತಿಯು ಹಾರನಹಳ್ಳಿಯ ಒಂದು ಸಂಸ್ಕೃತ ಭಾಷೆಯ ತಾಮ್ರಶಾಸನವನ್ನು ರಚಿಸಿದ್ದಾನೆ. ವಿಜಯನಗರದ ಅರಸು ಅಚ್ಚುತರಾಯ ಮಹಾರಾಯರ ಕಾರ್ಯಕೆ ಕರ್ತನಾದ ಹೊನ್ನವಳ್ಳಿ ಸೀಮೆಯನ್ನು ಆಳುತ್ತಿದ್ದ ವಾಗೇಯಕಾರಿ ತಿಲಕನಾದ ಬಯಕಾರ ರಾಮಪ್ಪಯ್ಯನಿಗೆ ಸೇರಿದ ಈ ಶಾಸನ ಅರಸೀಕೆರೆ ತಾಲ್ಲೂಕಿನ ಏಕೈಕ ಪೂರ್ಣ, ಸಂಸ್ಕೃತ ಭಾಷೆಯ ಶಾಸನವಾಗಿದೆ. ವಿರೂಪಾಕ್ಷನೆಂಬ ಒಪ್ಪ ಕನ್ನಡದಲ್ಲಿದೆ. ಶ್ಲೋಕ, ಹರಿಣಿ, ದೋಧಕ, ಮಾಲಿನಿ ಉಪಜಾತಿ, ಪೃಥ್ವೀ ವಸಂತತಿಲಕ, ಸ್ರಗ್ಧರೆ, ಶಾರ್ದೂಲವಿಕ್ರೀಡಿತ, ಗೀತಿ, ಶಾಲಿನಿಯಂತಹ ಛಂದೋ ವೈವಿಧ್ಯಗಳನ್ನು ಈ ಶಾಸನದಲ್ಲಿ ಕಾಣಬಹುದು.

ಅಚ್ಚುತೇಂದ್ರ ಮಹಾರಾಯ ಶಾಸನೇನ ಸಭಾಪತಿ :
ಅಭಾಣೀನ್ ಮೃದು ಸಂದರ್ಭ ತದಿದಂ ತಾಂಬ್ರ ಶಾಸನಂ[೧೧೬]

ಎಂಬ ಶ್ಲೋಕ ಕೃಷ್ಣದೇವರಾಯ ಅಚ್ಚುತರಾಯ ಸದಾಶಿವರಾಯರ ಕೆಲವು ಶಾಸನಗಳಲ್ಲಿ ಕಂಡುಬರುತ್ತದೆ. ಇವನ ಶಾಸನಗಳು ವಿಜಯನಗರ ಅರಸರ ಆಳ್ವಿಕೆಯ ಪ್ರದೇಶದ ಬೇರೆ ಬೇರೆ ಭಾಗಗಳಲ್ಲಿ ಕಂಡುಬಂದಿರುವುದರಿಂದ ಈತ ಅವರ ಆಸ್ಥಾನದಲ್ಲಿ ಶಾಸನ ರಚನೆಯ ಸಲುವಾಗಿಯೇ ನೇಮಕಗೊಂಡಿದ್ದಂತೆ ಕಂಡುಬರುತ್ತದೆ. ಇವನ ಶಾಸನಗಳಲ್ಲಿನ ಪದ್ಯಗಳು ತೀರ ಸಾಮಾನ್ಯವಾಗಿದ್ದು ಸಾಹಿತ್ಯಕ ಆಕರ್ಷಣೆಯನ್ನು ಹೊಂದಿಲ್ಲದಿರುವುದಕ್ಕೆ ಕಾರಣ ಕಾವ್ಯರಚನೆಯು ಪ್ರವೃತ್ತಿಯಾಗದೇ ವೃತ್ತಿಯಾಗಿದ್ದು, ಏಕತಾನತೆಗೆ ಒಳಗಾಗಿದೆ ಎನ್ನಬಹುದು.

**೧೨. ಶ್ರೀರಂಗ ದೇವ ಲಿಖಿತ ವಿಧ್ಯಾಧರ (ಸು. ಕ್ರಿ.ಶ.೧೧೭೩-೧೨೨೦) :** ತಳಲೂರಿನ ಎರಡು ಶಾಸನಗಳನ್ನು ಬರೆದಿರುವ ಶ್ರೀರಂಗದೇವ ತನ್ನನ್ನು 'ಲಿಖಿತ ವಿದ್ಯಾಧರ'[೧೧೭]ನೆಂದೂ 'ಶ್ರೀ ಮನ್ಮಹಾಯೋಗೇಶ್ವರ ಬ್ರಹ್ಮಾನನ್ದ ಸ್ವಾಮಿಗಳ ಸುಪುತ್ರನೆಂದು ಆ ಶಾಸನ 'ಶ್ರೀರಂಗದೇವನ ಶ್ರೀಘ್ರ

ಲಿಖಿತ'ವೆಂದೂ ಹೇಳಿಕೊಂಡಿದ್ದಾನೆ. ಈ ಶಾಸನದಲ್ಲಿ ಬೇರೆ ಕವಿ ಅಥವಾ ಲಿಪಿಕಾರರ ಹೆಸರನ್ನು ಹೇಳಿಲ್ಲವಾಗಿ ಮತ್ತು ಶ್ರೀರಂಗದೇವನು ವಿದ್ಯಾಧರನೆಂದು ಕರೆದುಕೊಂಡಿರುವದರಿಂದ ಈತನೇ ಶಾಸನದ ಕರ್ತೃ ಹಾಗೂ ಲಿಪಿಕಾರನೆಂದು ಹೇಳಬಹುದು. 'ಶೀಘ್ರುಲಿಖಿತ' ಎಂಬ ಮಾತು ಅವನ ತ್ವರಿತ ಬರವಣಿಗೆಯ ಕೌಶಲ್ಯವನ್ನು ಹೇಳುತ್ತಿದೆ. ಈ ಶಾಸನಗಳನ್ನು ಕಣ್ಣಾರೆ ಕಂಡಾಗ ಅತ್ಯಂತ ಸುಂದರವಾದ ಅಕ್ಷರಗಳು ಶ್ರೀರಂಗನ ಬರವಣಿಗೆಯು ಶೀಘ್ರುವಾಗಿದ್ದರೂ ಅಂದಗೆಡದೆ ಮೋಹಕವಾಗಿರುವುದರಿಂದ ಗಮನಸೆಳೆಯುತ್ತದೆ.

ತಳಲೂರು ಪ್ರಸಿದ್ಧವಾದ ಅಗ್ರಹಾರವಾಗಿದ್ದು ಅಲ್ಲಿ ನಾನಾ ಭಾಷೆಗಳ ಪಂಡಿತರು, ಕವಿಗಳು, ಕಲಾವಿದರೂ ತುಂಬಿದ್ದರೆಂಬುದು ಅಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ. ಅಲ್ಲಿ ಮಠವೂ ಕೂಡ ಇದ್ದಂತೆ ತಿಳಿದುಬರುತ್ತದೆ. ಶ್ರೀ ಯೋಗೇಶ್ವರ ಬ್ರಹ್ಮಾನಂದ ಸ್ವಾಮಿಗಳು ಶ್ರೇಷ್ಠ ಪಂಡಿತರಾಗಿರುವ ಸಾಧ್ಯತೆಯಿದೆ ಅವರ ಸುಪುತ್ರನಾದ ಶ್ರೀರಂಗದೇವ ಸಹಜವಾಗಿಯೇ ಉತ್ತಮ ವಿದ್ಯಾಸಂಸ್ಕಾರವನ್ನು ಪಡೆದಿದ್ದನೆಂದು ಹೇಳಬಹುದು.

ತಳಲೂರಿನ ೧೬೨ನೇ ಶಾಸನದಲ್ಲಿನ ಹೊಯ್ಸಳ ಅರಸರ ಹೊಗಳಿಕೆಗೆ ಶಾಂತ ಮಹಂತನ ಪದ್ಯಗಳನ್ನು ಸೇರಿಸಿಕೊಂಡಿರುವ ಶ್ರೀರಂಗದೇವ ೧೬೩ನೇ ಶಾಸನ (೧೬೨ನೇ ಶಾಸನದ ಮುಂದುವರೆದ ಭಾಗ)ದಲ್ಲಿ ತಳಿರೂರ ಮಹಾಜನಗಳ ವರ್ಣನೆ ಹಾಗೂ ಮಧುಸೂಧನ ದೇವಾಲಯ ನಿರ್ಮಿಸಿದ ರೇವರಾಜನ ವರ್ಣನೆಯಲ್ಲಿ ಸ್ವಂತಿಕೆಯನ್ನು ಮೆರೆದಿದ್ದಾನೆ. ಇವನ ಕಾವ್ಯ ಪ್ರತಿಭೆ ಅಸಾಧಾರಣವಾದುದಲ್ಲವಾದರೂ, ಉತ್ತಮ ಅಭಿರುಚಿಯುಳ್ಳವನೆನ್ನಬಹುದು.

## ೭.೨.೩. ಶಾಸನೋಕ್ತ ಕವಿಗಳು ಪಂಡಿತರು

ಅನೇಕ ಶ್ರೇಷ್ಠ ಕವಿಗಳನ್ನು, ಪಂಡಿತರನ್ನು, ಶಾಸ್ತ್ರ ಸಿದ್ಧಾಂತಕಾರರನ್ನು, ತರ್ಕ ಮೀಮಾಂಸಕಾರರನ್ನು ಪ್ರಸ್ತುತ ಅಧ್ಯಯನ ಕ್ಷೇತ್ರದ ಶಾಸನಗಳು ಅನುಷಂಗಿಕವಾಗಿ ಉಲ್ಲೇಖಿಸುತ್ತವೆ ಕೇವಲ ನಾಮಮಾತ್ರ ಉಲ್ಲೇಖಗಳಿರುವಂತೆಯೇ, ಅವರನ್ನು ಕುರಿತ ವಿಶೇಷಣಗಳು, ವಿವರಗಳನ್ನು ಕೆಲವು ಬಾರಿ ಒದಗಿಸಿರುವುದು ಕಂಡುಬರುತ್ತದೆ.

**೧. ಜಿನಸೇನ (೮೩೮) ಗುಣಭದ್ರ ಆಚಾರ್ಯರು (೮೯೮) :** ಗಂಡಸಿಯ ಶಾಸನವೊಂದರಲ್ಲಿ[೧೧೮] ಜೈನ ಸಾಹಿತ್ಯ ಪರಂಪರೆಯಲ್ಲಿ ಪ್ರಸಿದ್ಧರಾದ ಜಿನಸೇನಾ ಚಾರ್ಯರು ಮತ್ತು ಅದರ ಶಿಷ್ಯ ಗುಣಭದ್ರಾಚಾರ್ಯರ ಉಲ್ಲೇಖ ಕಂಡುಬಂದಿದೆ.* ಈ ಶಾಸನದಲ್ಲಿ ಗುಣಭದ್ರಾಚಾರ್ಯರ ಶಿಷ್ಯತಿ ಕಾಡಬ್ಬೆಕನ್ತಿಯರು

---

* ಗಂಡಸಿಯ ಶಂಬುಲಿಂಗೇಶ್ವರ ದೇವಾಲಯದ ತೊಲೆಯಲ್ಲಿ ಈ ಶಾಸನವಿದ್ದು. ಇದು ಸತ್ಯ ವಾಕ್ಯ ಕೋ ಙ್ಗೊಣಿ ವರ್ಮಧರ್ಮ್ಮ ಮಹಾರಾಜ ಅಂದರೆ ಗಂಗರ ಸತ್ಯ ವಾಕ್ಯ ಒಂದನೇ ರಾಚಮಲ್ಲ ಹಾಗೂ ಬಲ್ಲಹ ಅಂದರೆ ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗರ ಹೆಸರನ್ನು ಹೇಳಿರುವುದರಿಂದ ವಿದ್ವಾಂಸರು ಈ ಶಾಸನದ ಕಾಲವನ್ನು ಕ್ರಿ.ಶ.೮೩೭ ರಿಂದ ಕ್ರಿ.ಶ.೮೪೩ ಎಂದು ತೀರ್ಮಾನಿಸಿದ್ದಾರೆ. (ಸೀತಾರಾಮ್ ಜಾಗೀರ್ ದಾರ್, ಎಚ್.ಆರ್. ರಘುನಾಥಭಟ್ ಮಾನವಿಕ ಕರ್ನಾಟಕ ಸಂಪುಟ ೧೬ ಸಂ ೧. ಪು.೫-೯ ನವೆಂಬರ್ ೧೯೮೫)

'ಬಾಸಯ್ಯ ಬಲ್ಲವರ ಬೆಸದೊಳೆ' ಅಂದರೆ ಅವರ ಆಜ್ಞೆಯ ಮೇರೆಗೆ ಯಾವುದೋ ಮಹತ್ ಕಾರ್ಯ ಕೈಗೊಂಡಿರಬೇಕೆನಿಸುತ್ತದೆ. ಈ ಜಿನಸೇನ ಹಾಗೂ ಗುಣಭದ್ರರ ಮಹಾಪುರಾಣ ಅನೇಕ ಜೈನ ಕವಿಗಳಿಗೆ ಸ್ಫೂರ್ತಿ ಮೂಲವೆಂಬುದು ತಿಳಿದ ವಿಚಾರವೇ ಆಗಿದೆ. ಇಲ್ಲಿನ ಶಾಸನಗಳಲ್ಲಿ ಅನೇಕ ಜೈನ ಮುನಿಗಳ ಗುರುಕುಲಾನ್ವಯವು ಕಂಡುಬಂದಿದ್ದು ಕೆಲವು ಮುನಿಗಳನ್ನು ವಿಶೇಷವಾಗಿ ವರ್ಣಿಸಲಾಗಿದೆ.

**೨. ವಾದಿರಾಜ (ಕ್ರಿ.ಶ.೧೦೨೫) :** ಕರುಗುಂದ ಶಾಸನವು[೧೯೯] ಕನಕಸೇನ ವಾದಿರಾಜದೇವನನ್ನು ವಿಶೇಷವಾಗಿ ಹೊಗಳಿದೆ. ಈತನು ಜೈನ ಸಾಹಿತ್ಯ ಮತ್ತು ಟೀಕಾಕಾರರಲ್ಲಿ ಶ್ರೇಷ್ಠ ಸ್ಥಾನವನ್ನು ಪಡೆದಿದ್ದಾನೆ. ಪಶ್ಚಿಮ ಚಾಲುಕ್ಯ ವಂಶದ ೨ನೆಯ ಜಯಸಿಂಹ, ಜಗದೇಕ ಮಲ್ಲನ ಗುರುವಾಗಿದ್ದು ಅವನಿಂದ 'ಜಗದೇಕ ಮಲ್ಲವಾದಿರಾಜ'ನೆಂಬ ಬಿರುದನ್ನು ಪಡೆದಿದ್ದನು. ಕನಕಸೇನನೆಂಬುದು ಈ ವಾದಿರಾಜನ ಮೂಲ ಹೆಸರು. ಜಗದೇಕ ಮಲ್ಲವಾದಿ ರಾಜದೇವರನ್ನು ಪ್ರಸ್ತುತ ಶಾಸನವು ಆದಿತ್ಯನ ಕೆಲದೊಳು ಚಂದ್ರೋದಯಮೆಸೆಯದವೊಲೀ ಧರಾಮಂಡಳದೊಳು ತಾವು ಶ್ರೇಷ್ಠವಾದಿಗಳೆಂದು ಮೆರೆಯುವ ಟುಂಟುಕ ವಾದಿಗಳು ಈ ಮುನಿಯ ವಾದ ಪ್ರಭೆಯ ಮುಂದೆ ನಿಸ್ತೇಜರಾಗುತ್ತಾರೆಂದು ಕೀರ್ತಿಸಿದೆ. ಇವನು ರಚಿಸಿರುವ 'ನ್ಯಾಯ ವಿನಿಶ್ಚಯ ವಿವರ ಕೃತಿಯು ಅಕಲಂಕದೇವ ಮುನಿಯ ನ್ಯಾಯವಿನಿಶ್ಚಯದ ಮೇಲೆ ಬರೆದಿರುವ ೨೦,೦೦೦ ಶ್ಲೋಕಗಳಿಂದ ಕೂಡಿದ ಭಾಷ್ಯವಾಗಿದೆ. ಈ ಕೃತಿಯು ಭಾರತೀಯ ದರ್ಶನ ಕ್ಷೇತ್ರದಲ್ಲಿ ಪ್ರಮುಖ ಕೃತಿಯಾಗಿದೆ. ಈ ಕೃತಿಯಿಂದಾಗಿಯೇ ಕನಕಸೇನ ಮುನಿಗೆ ವಾದಿರಾಜನೆಂಬ, 'ಜಗದೇಕ ಮಲ್ಲವಾದಿ'ಯೆಂಬ ಬಿರುದು ಬಂದಿದೆ.

ಇವನು ಏಕೀಭಾವ ಸ್ತೋತ್ರ ಪಾರ್ಶ್ವನಾಥ ಚರಿತ, ಯಶೋಧರ ಚರಿತೆ, ಪ್ರಮಾಣ ನಿರ್ಣಯ ಎಂಬ ಇತರ ಕೃತಿಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಯಶೋಧರ ಚರಿತೆ ಮಹತ್ವದ ಕೃತಿಯಾಗಿದ್ದು. ಜನ್ನನ ಯಶೋಧರ ಚರಿತೆಗೆ ಮೂಲ ಸಾಮಗ್ರಿಯನ್ನು ಒದಗಿಸಿದೆ.[೨೦೦]

**೩. ಕವಿ ಶ್ರೀಪಾಲ (೧೧೫೦) :** ಅರಸೀಕೆರೆ ತಾಲ್ಲೂಕಿನ ಕರುಗುಂದದ ಬಸದಿಯ ಶಾಸನದಲ್ಲಿ ಜೈನ ಗುರು ಪರಂಪರೆಯನ್ನು ಹೇಳುತ್ತಾ ಶ್ರೀಪಾಲನನ್ನು ವಿಶೇಷವಾಗಿ ಹೊಗಳಿದೆ. ಈತ ಅಕಳಂಕ ಸಿಂಹಾಸನಾರೂಢರು ತಾರ್ಕಿಕ ಚಕ್ರವರ್ತಿಯೂ ಆಗಿದ್ದರು. 'ಶಟ್ತರ್ಕಾವಿಳ ಬಹುಭಂಗಿಸಂಗತಂ ಶ್ರೀಪಾಳ ತ್ರೈವಿದ್ಯ ಗದ್ಯ ಪದ್ಯ ವಚೋವಿನ್ಯಾಸಂ ನಿಸರ್ಗ ವಿಜಯವಿಳಾಸ'[೨೦೧] ಎಂದು ಪ್ರಸಿದ್ಧನಾಗಿದ್ದನು. ಹೊಯ್ಸಳ ವಿಷ್ಣುವರ್ಧನ ಮತ್ತು ಅವನ ಮಗ ನರಸಿಂಹನ ಕಾಲದಲ್ಲಿ ಈತ ಅತ್ಯಂತ ಪ್ರಸಿದ್ಧಿಯನ್ನು ಪಡೆದ ಮುನಿಯಾಗಿದ್ದನು. ವಿಷ್ಣುವರ್ಧನನು ಚೆಲ್ಯಗ್ರಾಮದಲ್ಲಿ ಇವರಿಗೆಂದು ಬಸದಿಯೊಂದನ್ನು ಕಟ್ಟಿಸಿದ್ದನು. ಚಲ್ಯದ ಶಾಸನವು[೨೦೨] ಕರಿಗುಂದ ಶಾಸನವೂ ಈ ಮುನಿಯನ್ನು 'ನಿಸರ್ಗವಿಜಯವಿಳಾಸ' ಎಂದು ಕರೆದಿದ್ದು ಅವರ ತಪಸಿದ್ಧಿಯನ್ನು ಮನಮುಟ್ಟಿಸುತ್ತದೆ. ಅಲ್ಲದೆ 'ವಿಜಯವಿಳಾಸ' ಎಂಬುದರ ಕರ್ತೃ ಈತನೆಂದು ಚಲ್ಯ ಶಾಸನ ತಿಳಿಸುತ್ತದೆ. ಶ್ರೀಪಾಳ ತ್ರೈವಿದ್ಯ ದೇವರ ಪರೋಕ್ಷ ವಿನಯಕ್ಕಾಗಿ

ಅವರ ಶಿಷ್ಯ ವಾದಿರಾಜರು ಪರವಾದಿಮಲ್ಲ ಜಿನಾಲಯವನ್ನು ಕುಂಬೇನಹಳ್ಳಿಯಲ್ಲಿ ನಿರ್ಮಿಸಿದ್ದಾರೆ. ಬಂದೂರಿನ ಪಾರ್ಶ್ವನಾಥ ಬಸದಿಯ ಶಾಸನವು ಪರವಾದಿಮಲ್ಲ ಶ್ರೀಪಾಲದೇವನನ್ನು ಹೀಗೆ ಹೊಗಳಿದೆ

ತಮಗಾಜ್ಞಾವಶ ಮಾದುದುನ್ನತ ಮಹೀಭೃತ್ಕೋಟಿ ತಮ್ಮಿಂದೆ ಬಿ
ಣ್ಪಮರ್ದತ್ತೀಧರೆಗೆಯ್ದೆ ತಮ್ಮ ಮುಖದೊಳ್ ಷಟ್ತರ್ಕ ವಾರಾಶಿವಿ
ಭ್ರಮಮಾಪೋಶನ ಮಾತ್ರಮಾದುದೆನಲಿಂ ಮಾತೇನಗಸ್ತ್ಯ ಪ್ರಭಾ
ವ ಮುಮಂ ಕೀಳ್ಪಡಿಸಿತ್ತು ಪೆಂಪಿನೆಸಕಂ ಶ್ರೀಪಾಳಯೋಗೀಂದ್ರರಾ[೧೨೩]

ಜೈನಧರ್ಮವು ಅನ್ಯಧರ್ಮ ತತ್ವಗಳೊಂದಿಗೆ ಸೆಣಸಿ ತನ್ನ ಧರ್ಮ ತತ್ವಗಳನ್ನು ಸ್ಥಾಪಿಸಬೇಕಾಗಿದ್ದ ಕಾಲಮಾನದಲ್ಲಿ ಶ್ರೀಪಾಳ, ವಾದಿರಾಜ, ವಾಸುಪೂಜ್ಯ ಇತ್ಯಾದಿ ಜಿನ ಮುನಿಗಳು ತಮ್ಮ ಧರ್ಮ ರಕ್ಷಣೆ ಪ್ರಸಾರಕ್ಕಾಗಿ ತಮ್ಮ ಅಧ್ಯಯನ ಕೃತಿರಚನೆ, ವಾದ ಸ್ಪರ್ಧೆಗಳಲ್ಲಿ ಭಾಗವಹಿಸಬೇಕಾಗಿದ್ದು, ಅದಕ್ಕಾಗಿ ತ್ರೈವಿದ್ಯಗಳಲ್ಲಿ ಪಾರಂಗತರಾಗುತ್ತಿದ್ದರು. ಪ್ರಸ್ತುತ ಪದ್ಯದಲ್ಲಿ ಗರ್ವದಿಂದ ಧುಮುಕಿದ ಗಂಗೆಯನ್ನು ಆಪೋಷನ ಮಾಡಿದಂಥ, ವೈದಿಕ ಧರ್ಮದಲ್ಲಿ ಶ್ರೇಷ್ಠ ಸ್ಥಾನಮಾನ ಪಡೆದಿರುವ ಅಗಸ್ತ್ಯನನ್ನು ಕೀಳು ಮಾಡುವಂತೆ ಶ್ರೀಪಾಳ ತ್ರೈವಿದ್ಯನು ಷಟ್ತರ್ಕವೆಂಬ ಸಮುದ್ರವನ್ನೇ ಆಪೋಷಣ ಮಾಡಿದವನೆಂದು ಹೇಳಿರುವುದನ್ನು ಧಾರ್ಮಿಕ ಸಂಘರ್ಷದ ಹಿನ್ನೆಲೆಯಲ್ಲಿ ಅರ್ಥೈಸಬೇಕಾಗುತ್ತದೆ.

**೪. ವಾಸು ಪೂಜ್ಯ ವ್ರತೀಂದ್ರ (ಕ್ರಿ.ಶ.೧೧೨೦-೧೧೭೭) :** ವಾಸು ಪೂಜ್ಯ ಸಿದ್ಧಾಂತ ದೇವನೆಂದು ಪ್ರಸಿದ್ಧನಾದ ಈತ ಶ್ರೀಪಾಳ ತ್ರೈವಿದ್ಯ ದೇವನ ಅಗ್ರ ಶಿಷ್ಯರೆಂದು ಬಂದೂರಿನ ಶಾಸನ ಹೇಳಿದೆ.[೧೨೪] 'ಶ್ರೀ ಪಾಳತ್ರೈವಿದ್ಯ ವಿದ್ಯಾಪತಿ ಪದಕಮಲಾರಾಧನೆಯಿಂದ ಬುದ್ಧಿಯನ್ನು ಪಡೆದವನೂ, ಸಿದ್ಧಾಂತಾಂಬೋನಿಧಿಯೆಂಬ ಅಮೃತದ ಆಸ್ವಾದನೆ ಮಾಡಿ ಪುಷ್ಟನಾಗಿ ಆನಂದಿಸುತ್ತಿರುವವನೂ ದೀಕ್ಷಾ ಶಿಕ್ಷಾ ಸುರಕ್ಷಾಕ್ರಮ ಕೃತಿ ನಿಪುಣನೂ ಭವ್ಯರಿಂದ ಸೇವಿಸಲ್ಪಡುವವನೂ ದಾಕ್ಷಿಣ್ಯ ಮೂರ್ತಿಯೂ ಆದ ವಾಸುಪೂಜ್ಯ ವ್ರತೀಂದ್ರನಿಗೆ ಜಯವಾಗಲಿ' ಎಂದು ಈತನನ್ನು ಶಾಸನ ಕವಿ ಕೊಂಡಾಡಿದ್ದಾನೆ. ಈ ಪದ್ಯ ವರ್ಣನೆಯಿಂದ ವಾಸು ಪೂಜ್ಯನು ಜೈನ ಸಿದ್ಧಾಂತದಲ್ಲಿ ಪಾರಂಗತನಾಗಿದ್ದನೆಂದೂ ತಿಳಿಯುತ್ತದೆ. ಆ ಕಾರಣದಿಂದಲೇ ಆತನನ್ನು ಸಿದ್ಧಾಂತ ದೇವನೆಂದು ಗುರುತಿಸಲಾಗುತ್ತದೆ. ಅಲ್ಲದೆ 'ದೀಕ್ಷಾ ಶಿಕ್ಷಾಸುರಷಾ ಕ್ರಮ'ವೆಂಬ ಕೃತಿಯ ಕತೃವೆಂಬುದೂ ತಿಳಿದುಬರುತ್ತದೆ. ಹಾಸನದ ಮುಗಳೂರಿನ ಬಸದಿಯಲ್ಲಿ ಇವರ ನಿಸಿಧಿ ಶಾಸನವಿದೆ.[೧೨೫]

## ೭.೩. ಕಲೆ

ಕಲೆ ಮಾನವ ಬದುಕಿನ ಅದ್ಭುತ ಸೃಷ್ಟಿ ಅವನ ಸಂಸ್ಕೃತಿಯ ಪ್ರತೀಕ. ಶಿಲೆಯನ್ನು ಖಂಡರಿಸಿ ಸೌಂದರ್ಯವನ್ನು ಅರಳಿಸುವ ಕಲೆಯು ೬೪ ವಿದ್ಯೆಗಳಲ್ಲಿ ಒಂದು. ಕಲಾವಿದನ ಶ್ರದ್ಧೆ, ತಾಳ್ಮೆ, ನೈಪುಣ್ಯತೆಗಳಿಂದ ಶಿಲೆಯು ತನ್ನ ಕಠೋರತೆಯನ್ನು ಕಳೆದುಕೊಂಡು ದಿವ್ಯ ಸೌಂದರ್ಯವನ್ನು ಜೀವಂತ ಕಳೆಯನ್ನು ಪಡೆದು ಮನಮೋಹಕವಾಗುತ್ತದೆ.

## ೭.೩.೧. ಶಾಸನ ಲಿಪಿಕಾರರು ಖಂಡರಣೆಕಾರರು

ಪ್ರಸ್ತುತ ಪ್ರದೇಶದ ಶಾಸನಗಳು ಶೇಕಡ ತೊಂಬತ್ತು ಭಾಗ ಮೃದುವಾದ ಬಳಪಿನ ಕಲ್ಲಿನ ಮೇಲೆ ಮೂಡಿಸಿರುವ ಅತ್ಯಂತ ಸುಂದರವಾದ ಅಲಂಕೃತವಾದ ನಾಜೂಕಾದ ಬರಹಗಳನ್ನು ಹೊಂದಿದ್ದು ಆಕರ್ಷಕವಾಗಿದೆ. ಕನ್ನಡ ಲಿಪಿಯ ಸೌಂದರ್ಯದ ದೃಷ್ಟಿಯಿಂದ ಹೊಯ್ಸಳರ ಕಾಲ ಉನ್ನತಿಯ ಕಾಲ.

ಶಾಸನಗಳನ್ನು ಬರೆಸುವ ಕಾರ್ಯದಲ್ಲಿ ರಚನೆಕಾರನಷ್ಟೇ ಲಿಪಿಕಾರ ಹಾಗೂ ಖಂಡರಣೆಕಾರರೂ ಮುಖ್ಯವಾಗುತ್ತಾರೆ. ಪ್ರಸ್ತುತ ಪ್ರದೇಶದ ಅನೇಕ ಲಿಪಿಕಾರರು ವಿಶೇಷವಾಗಿ ಬರವಣಿಗೆಯ ಕಲೆಯಲ್ಲಿ ಪರಿಣತಿ ಪಡೆದವರೆಂಬುದು, ಖಂಡರಣೆಕಾರರಲ್ಲಿ ಅನೇಕರು ಶ್ರೇಷ್ಠ ರೂವಾರಿಗಳೂ ಪ್ರತಿಭಾನ್ವಿತರೂ ಆಗಿದ್ದರೆಂಬುದು ಅವರು ನೀಡಿರುವ ವಿವರಗಳಿಂದ ತಿಳಿದುಬರುತ್ತದೆ. ಶಾಸನ ಬರವಣಿಗೆ ಖಂಡರಣೆಯೂ ಒಂದು ಕಲಾತ್ಮಕ ಕಾರ್ಯವೆಂದು ಪರಿಗಣಿಸಲಾಗಿದ್ದ ಕಾಲದಲ್ಲಿ ಶಾಸನ ಶಿಲ್ಪ ಸೌಂದರ್ಯ ಲಿಪಿಸೌಂದರ್ಯ ಅಲಂಕರಣ ಅಚ್ಚುಕಟ್ಟುತನಗಳು ಈ ಲಿಪಿಕಾರರು ಹಾಗೂ ಖಂಡರಣೆಕಾರರಿಗೆ ಗೌರವವನ್ನು ಪ್ರಸಿದ್ಧಿಯನ್ನು ತಂದು ಕೊಟ್ಟಿತ್ತು ಜೊತೆಗೆ ಅವರಿಗೆ ಜೀವಿತ ಆಧಾರವನ್ನು ಒದಗಿಸಿತ್ತು. ವಿಜಯನಗರ ಕಾಲದ ನಂತರ ಒಟ್ಟಾರೆಯಾಗಿ ಈ ಕಲಾತ್ಮಕತೆ ಸೌಂದರ್ಯ ಪ್ರಜ್ಞೆ ಕಡಿಮೆಯಾಯಿತೆಂದೇ ಹೇಳಬೇಕಾಗುತ್ತದೆ.

೧. ಲೇಖನ ಕಲೆ : ಹುಲ್ಲೇಕೆರೆಯ ಚನ್ನಕೇಶವದೇವಾಲಯದ ಶಾಸನ ಹಾಗೂ ಅರಸೀಕೆರೆಯ ಪ್ರಸನ್ನ ಚನ್ನಕೇಶವ ದೇವಾಲಯದ ಸ್ಥಾಪನೆಯ ಶಾಸನವು ಅತ್ಯಂತ ಸುಂದರವಾದ ಶಿಲ್ಪವನ್ನು ಲಿಪಿಯನ್ನು ಹೊಂದಿವೆ. ಅರಸೀಕೆರೆ ಶಾಸನದ ಕವಿ ದೇವಪಾರ್ಯನಾದರೆ, ಲಿಪಿಕಾರ ಬಸವರಾಜ.

ಸಮವೃತ್ತಶ್ಲೋತಂಗಳ ಸಮಸ್ತ ಸಂಪತ್ಕರಂಗಳತಿನಿಬಿಡಂಗಳ್
ಕಮನೀಯ ಮೃದುಸುರೇಖಾ ರಮಣಂಗಳು ನೆಗಳ್ದ ಬಸವರಾಜನ ಬರಪಂ[೧೨೬]

ಎಂಬ ಪದ್ಯ, ಲಿಪಿಕಾರ ಬಸವರಾಜನ ಕೈಚಳಕವನ್ನು ಕೊಂಡಾಡಿದೆ. ಈ ಮಾತು ಉತ್ಪ್ರೇಕ್ಷೆಯಲ್ಲವೆಂಬುದು ಆ ಶಾಸನ ಲಿಪಿಯ ಮೋಹಕತೆಯಿಂದ ದೃಢಪಡುತ್ತದೆ. ದುಂಡಾದ ಅಕ್ಷರಗಳು ಸಮನಾಗಿ ಪೋಣಿಸಿದಂತೆ ನಾಜೂಕಾಗಿ ಮೂಡಿವೆ. ಖಂಡರಣೆಕಾರನೂ ಅಷ್ಟೇ ಸೊಗಸಾಗಿ ಅಲಂಕರಿಸಿದ್ದಾನೆ.

ಕಲ್ಲಿನ ಮೇಲೆ ಎಷ್ಟೇ ಸುಂದರವಾಗಿ ಅಕ್ಷರಗಳನ್ನು ಬರೆದುಕೊಟ್ಟಿದ್ದರೂ ನೈಪುಣ್ಯತೆ ಇಲ್ಲದ ಖಂಡರಣೆಕಾರನಾದರೆ ಲಿಪಿ ಸೌಂದರ್ಯಕ್ಕೆ ಧಕ್ಕೆ ಒದಗುತ್ತದೆ. ಅಕ್ಷರ ಜ್ಞಾನವಿಲ್ಲದೆಯೂ ಕೆಡುವ ಸಾಧ್ಯತೆಯಿದೆ. ತಳಿರೂರಿನ ಶಾಸನವು ಅತ್ಯಂತ ಸುಂದರವಾಗಿ ಖಂಡರಣೆಗೊಂಡಿದೆ. ಬ್ರಹ್ಮನು ಬರೆದ ನೊಸಲ ಬರಹವಾದರು ಹಿಂಚು ಮುಂಚಾಗಬಹುದು, ಹರಸಿದ ಮಾತು ಹಿಂಚು ಮುಂಚಾಗಬಹುದು. ಆದರೆ ಬರ್ಮದೇವನ ಬರಹವು ಹಿಂಚು ಮುಂಚಾಗುವುದಿಲ್ಲವೆಂದು ಲಿಪಿಕಾರ ಬರ್ಮನ ಬರಹದ ಅಂದವನ್ನು, ಶಿಸ್ತನ್ನು ವರ್ಣಿಸಿದೆ ಈ ಶಾಸನ.[೧೨೬]

ಬರವರಾಚಾರ್ಯ ಸೂರ್ಯಾಣನು 'ಬಿರುದುಗಲೇಖಕ ಮದನಮಹೇಶ್ವರ' ಎಂಬ ಬಿರುದನ್ನು ಹೊಂದಿದ್ದ ಕವಿ ಲಿಪಿಕಾರ ಎರಡೂ ಆಗಿದ್ದನು. ಮತ್ತೊಂದು ಶಾಸನ[೧೨೮] ಇವನನ್ನು 'ಬರವರ ಮೊಗಗತ್ತಲೆಯ ಪರಿಹರಿಸುವ ಸೂರ್ಯನೆಂದು' ಅವನ ಬರವಣಿಗೆ ಅಮೋಘವೆಂದುಕೊಂಡಾಡಿದೆ. ಇವನ ಶಿಷ್ಯ ಬರಹದ ಕಲೆಯನ್ನು ಕಲಿತಿದ್ದ ಬಾಚಯನು ಗುರುವನ್ನು ಸ್ಮರಿಸಿದ್ದಾನೆ.

ಈ ಬರವಣಿಗೆಯ ಕಲೆಯನ್ನೇ ಕಲಿಸುವ ಏರ್ಪಾಟೂ ಇದ್ದಿತೆಂಬುದು,[೧೨೯] ಕರ್ನಾಟಲಾಟ ದ್ರಾವಿಳ ನಾನಾ ದೇಶ ಭಾಷಾ ವಿಶೇಷ ಲಿಪಿ ನಿಪುಣ ವಿದ್ಯಾಧರರು ತಳಿರೂರು ಅಗ್ರಹಾರದಲ್ಲಿದ್ದರೆಂದು ತಿಳಿದುಬರುತ್ತದೆ. ಇದೇ ಗ್ರಾಮದವನಾದ ಶ್ರೀರಂಗದೇವನು ತನ್ನನ್ನು ಲಿಖಿತ ವಿದ್ಯಾಧರನೆಂದು ಹೇಳಿಕೊಂಡಿದ್ದಾನೆ. ಮತ್ತು ಶೀಘ್ರ ಲಿಖಿತ ಕಲೆಯಲ್ಲಿ ನಿಪುಣನಾಗಿದ್ದನೆಂದು ತಿಳಿದುಬರುತ್ತದೆ.[೧೩೦]

ಹಾರನಹಳ್ಳಿಯ ಆನಂದ ಬೋಧಸ್ವಾಮಿಗಳ ದಾಸ ಶ್ರೀಕರಣದ ವಿಶ್ವನಾಥನು ಉಭಯ ಹಸ್ತ ಲೇಖನ ಕುಶಲನಾಗಿದ್ದು 'ಅವಧಾನ ಚಕ್ರವರ್ತಿ' ಎಂಬ ಬಿರುದು ಪಡೆದಿದ್ದು ಪ್ರಸಿದ್ಧನಾಗಿದ್ದನು.[೧೩೧] ಇವನ ಬರಹದ ನೈಪುಣ್ಯತೆಯನ್ನು ಮತ್ತೊಂದು ಶಾಸನ[೧೩೨] 'ದುಸರಮಾಗೆ ಭಾರತಿಗೆ ಹಾರಮನೋಹರಮಾಗೆ ಕೋದವೋಲೆಸೆವಿನಮಕ್ಕರಂ ಕರಯುಗಂಗಳೊಳು ಬರೆವಂ" ಎಂದಿದೆ. 'ಸರಸ್ವತಿಯ ಕೊರಳ ಮುತ್ತು ವೊಲಿರೆ ವೃತ್ತಂ ಕೋಮಲಂ...[೧೩೩] ಎಂಬ ವರ್ಣನೆ ಅವನ ಕೈಬರಹದ ಕೌಶಲ್ಯವನ್ನು ಹೇಳುತ್ತದೆ. ದುಂಡಾದ ಪೋಣಿಸಿದ ಮುತ್ತುಗಳಂತೆ ಕಾಣುವ ಈ ಅಕ್ಷರಗಳನ್ನು ಸರಸ್ವತಿಯ ಕೊರಳ ಮುತ್ತಿನ ಹಾರಕ್ಕೆ ಹೋಲಿಸಿರುವುದು ಯಥಾರ್ಥವಾಗಿದೆ.

**೨. ಶಾಸನ ಖಂಡರಣೆಯ ಕಲೆ :** ಅನೇಕ ಶಾಸನಗಳಲ್ಲಿ ಕವಿ ಲಿಪಿಕಾರ ಖಂಡರಣೆಕಾರರ ಹೆಸರುಗಳಿದ್ದರೂ ಅವರ ಅಗ್ಗಳಿಕೆಯನ್ನು ಹೇಳಿಲ್ಲ. ಕೆಲವು ಶಾಸನಗಳಲ್ಲಿ ಒಬ್ಬರ ಇಲ್ಲವೆ ಇಬ್ಬರ ಹೆಸರು, ಇರುತ್ತದೆ. ಮತ್ತೆ ಕೆಲವು ಶಾಸನಗಳಲ್ಲಿ ಉಲ್ಲೇಖವಿರುವುದಿಲ್ಲ. ಈ ಪ್ರದೇಶದ ಶಾಸನಗಳ ಲಿಪಿ ಹಾಗೂ ಖಂಡರಣೆಕಾರರ ಕಲಾ ನೈಪುಣ್ಯತೆ ಮೆಚ್ಚುವಂತಿದೆ.

ಚೆಂದೋಜರ ಪುತ್ರ ಹೊನ್ನೋಜರ ಲಿಖಿತ [೧೩೪] ಅರ ದೇವನ ಬರಹ ಬಕುರಿ ವೋಜನು ಕಂಡಳಿಸಿದ[೧೩೫] ಮಾಣಿಕಾಚಾರಿ ಈ ಶಾಸನವ ಬರೆದ[೧೩೬] ತಲ್ಲಿಖಿತ ಸಿಂಗೋಜನ ಮಗ ಮಹೇಶ್ವರ ಭೈರೋಜನ ಕಂಡರಣೆ[೧೩೭] ತ್ರಿವಿಕ್ರಮ ಪಂಡಿತರ ಪದ್ಯ ತಲ್ಲಿಖಿತ ಬೊಪ್ಪೋಜನ ಕಂಡರಣೆ ಇಸನವ ಬರದು ಕೊಟ್ಟ ಸೇನಬೋವ ಚವುಡೈಯ್ಯ ಇಸಸನ ಹೊಇದ ಬುಚೊಜನ ಮಗ ಗುಂಡೋಜ[೧೩೮] ಇತ್ಯಾದಿ ಹೇಳಿಕೆಗಳು ಲಿಪಿಕಾರರು ಖಂಡರಣೆಕಾರರು ಪ್ರತ್ಯೇಕವಾಗಿರುತ್ತಿದ್ದುದನ್ನು ತಿಳಿಸಿದರೆ ಮತ್ತೆ ಕೆಲವು ಶಾಸನಗಳಲ್ಲಿ ಖಂಡರಣೆ ಕಾರರು ಅಕ್ಷರಸ್ತರಾಗಿದ್ದು ಅವರೆ ಲಿಖಿತವನ್ನು ಖಂಡರಣೆಯನ್ನು ಮಾಡಿರುವುದು ಕಂಡುಬರುತ್ತದೆ. ಮಲ್ಲಿತಮ, ಮಕಸ, ಚಿಕ್ಕಮಲ್ಲಿತಮ್ಮ ದೇವತಾ ಮೂರ್ತಿಗಳ

ಹೆಸರುಗಳು ಇತ್ಯಾದಿ ಪಟ್ಟಿಕಾ ಶಾಸನಗಳು ಪ್ರತಿಮೆಗಳ ಪೀಠದಲ್ಲಿ ಕಂಡುಬರುತ್ತವೆ. (ಚಾವಗಲ್ಲು, ಅರಸೀಕೆರೆ, ಹುಲ್ಲೇಕೆರೆ) ಅರಸೀಕೆರೆಯ ಕಚ್ಚಪೆರ್ಗಡೆಯ ಶಾಸನದ ಕೇತೋಜನನ್ನು 'ಸರಸ್ವತಿ ಗಣದಾಸಿ' ಎಂದೂ 'ವಿದ್ಯಾಮಂತ'ನೆಂದೂ ಕರೆದಿದೆ.

ದೇವಾಲಯ ಮಂಟಪ, ಕೆರೆ ಕಾಲುವೆ ನಿರ್ಮಾಣ ಮಾಡಿದ ಸಂದರ್ಭದಲ್ಲಿ ಆ ಕಾರ್ಯಗಳಲ್ಲಿ ತೊಡಿಗಿಸಿಕೊಂಡವರೇ ಸಂಬಂಧಪಟ್ಟ ಶಾಸನಗಳನ್ನು ಖಂಡರಿಸಿದ ಉದಾಹರಣೆಯಿದೆ. ಚಿಟ್ಟಪ್ಪಸೆಟ್ಟಿ ಬಾಣಾವರದ ಕಮ್ಮಟದ ಅಧಿಕಾರಿ ಕೈಗೆತ್ತಿಕೊಂಡ ದೇವಾಲಯ ಕೆರೆ, ಬಾವಿ ಮಂಟಪನಿರ್ಮಾಣಗಳಲ್ಲಿ ಸತತವಾಗಿ ತೊಡಗಿಸಿಕೊಂಡಿದ್ದ ಸೇನೋಜ ಮತ್ತು ಅವನ ಮಕ್ಕಳಾದ ಬೈರೋಜ ಬಲ್ಲ, ಸೋಮೋಜ ಇವರ ಕುಟುಂಬ ದೇವಾಲಯ ನಿರ್ಮಾಣ ಮಾಡಿದ್ದಾರೆ. ಮತ್ತು 'ಬೈರೋಜ ಲೇಸೆನೆ ಶಾಸನ ಮನತ್ರ್ಯಿಯಿಂ ಟಂಕಿಸಿದಂ' ಎಂಬುದು. ಆತನ ಖಂಡರಣೆ ಕಾರ್ಯವನ್ನು ಮಾಡಿರುವುದನ್ನು ಹೇಳುತ್ತಿದೆ.

ಇದೇ ರೀತಿ ತಳಲೂರಿನ ಚೆನ್ನಶಂಕರ ದೇವರ ದೇವಾಲಯವನ್ನು ನಿರ್ಮಾಣ ಮಾಡಿರಬಹುದಾದ ಶಿಲ್ಪಿಗಳೇ ರೂವಾರಿಗಳೇ ಆ ಶಾಸನವನ್ನು ಬರೆದಿರುವಂತಿದೆ. ಈ ಶಾಸನವನ್ನು ಅತ್ಯಂತ ಸುಂದರವಾಗಿ ಖಂಡರಿಸಿರುವ ಮಸಣ, ದಾಸೋಜನ ಹಿರಿಯ ಮಗನೆಂದು ಹೇಳಿದೆ. ಈ ದಾಸೋಜ ಪ್ರಸಿದ್ಧ ಬೇಲೂರಿನ ಶಾಸನದ ರೂವಾರಿಯೋ ಅಥವಾ ಬೇರೆಯವನೋ ತಿಳಿಯದು. ದಾಸೋಜನಿಗೆ ಅವನಷ್ಟೇ ಪ್ರಖ್ಯಾತನಾದ ಚಾವಣನೆಂಬ ಮಗನಿದ್ದುದು ತಿಳಿದಿರುವ ಸಂಗತಿ. ಹೊಯ್ಸಳರ ಕಾಲದಲ್ಲಿ ದಾಸೋಜನೆಂಬ ಹೆಸರಿನ ನಾಲ್ಕು ಜನ ಕಲಾಕಾರರಿದ್ದರು. ಈ ಮಸಣ ಯಾರ ಮಗನೇ ಆಗಿರಲಿ ಅತ್ಯಂತ ಶ್ರೇಷ್ಠ ಕಲಾವಿದನೆಂಬುದು ಸತ್ಯ. ಅವನ ಖಂಡರಣೆಯ ನೈಪುಣ್ಯತೆಯೂ ಅದ್ಭುತವಾಗಿದೆ.[೧೩೯] 'ಬಹುರೇಖೆಯಾಗಿ ಬಾರದೆಯತಿನಿಬಿಡಂ ನೋರ್ಪಡೆಲ್ಲರುಂ ಹೊಗಳಲು ವಸುಮತಿಯಲ್ಲಿ ಕಂಗೊಳಿಸಬಲ್ಲ'ವನಾದ ಈ ಮಸಣ ಕೇವಲ ಖಂಡರಣೆಕಾರನಲ್ಲ. ಆತ ರೂವಾರಿಯೂ ಹೌದು ಎನಿಸುತ್ತದೆ. (ಮಸಣೋಜನೆಂಬ ಹೆಸರನಿಂದ ಆರು ಕಲಾವಿದರು ಹೊಯ್ಸಳರ ಕಾಲದಲ್ಲಿ ಕಂಡುಬಂದಿದ್ದಾರೆ.) ಹೂ ಬಳ್ಳಿ, ಹಂಸಗಳಿಂದ ಕೂಡಿದ ಅಕ್ಷರಗಳೂ, ಅಲಂಕೃತಗಳೂ, ಅಲಂಕೃತವಾಗಿರುವ ಸುಂದರ ಉಬ್ಬುಶಿಲ್ಪವೂ ಲಲಾಟವೂ ಇರುವ ಈ ಶಾಸನವು ಅವನ ನೈಪುಣ್ಯತೆಯನ್ನು ಸಾರುತ್ತದೆ.

### ೭.೩.೨. ಶಿಲ್ಪ ಮತ್ತು ವಾಸ್ತುಕಲೆ

ಮಾನವನ ಭಾವಾಭಿವ್ಯಕ್ತಿಯ ಸಂವಹನ ಮಾಧ್ಯಮವಾಗಿ ಶಿಲ್ಪಕಲೆಯ ಕೊಡುಗೆ ಅಪಾರ. ತಾನು ಸೃಷ್ಟಿಗೊಂಡ ಜನಾಂಗದ ಸಂಸ್ಕೃತಿಯ ವಿವಿಧ ಆಯಾಮಗಳನ್ನು ಮಿಡಿತಗಳನ್ನು ತನ್ನಲ್ಲಿ ಸೂಕ್ಷ್ಮವಾಗಿ ಅಡಗಿಸಿಟ್ಟುಕೊಂಡಿರುತ್ತದೆ. ಹಾಗಾಗಿ ಒಂದು ಸಮಾಜದ ಸಂಸ್ಕೃತಿಯನ್ನು ಅರಿಯಲು ಇವು ಅತಿ ಅವಶ್ಯಕ ಸಾಧನಗಳಾಗುತ್ತವೆ. ದೊಡ್ಡ ಮೊತ್ತದ ಅನಕ್ಷರಸ್ತ ಸಮಾಜಕ್ಕೆ ತನ್ನ ನಂಬಿಕೆಗಳನ್ನು

ಆಶಯಗಳನ್ನು ಮೌಲ್ಯಗಳನ್ನು ಮುಟ್ಟಿಸುವಲ್ಲಿ ಚಾಕ್ಷುಷ ಸಂವಹನ ಮಾಧ್ಯಮವಾದ ಈ ಕಲೆಯು ವಹಿಸಿರುವ ಪಾತ್ರ ಅಸಾಧಾರಣವಾದುದು.

ಸಹಜ ಬಂಡೆಯ ಮೇಲೆ ಮೂಡಿಸಿರುವ ಶಿಲ್ಪಗಳು, ಸಿದ್ಧ ಶಿಲಾ ಫಲಕಗಳ ಮೇಲೆ ಮೂಡಿಸಿರುವಂತಹ ಶಿಲ್ಪಗಳು, ದೇವಾಲಯ ಬಿತ್ತಿಗಳನ್ನು ಅಲಂಕರಿಸುವ ಉಬ್ಬು ಶಿಲ್ಪಗಳು, ದುಂಡಾದ ಪೂರ್ಣ ಶಿಲ್ಪಕಲಾ ಮೂರ್ತಿಗಳೂ, ದಿವ್ಯ ಸೌಂದರ್ಯದಿಂದ ಕೂಡಿದ ದೇವಾಲಯ ಮಂಟಪ ಮುಂತಾದ ವಾಸ್ತುಕಲೆಗಳೂ ಈ ಕಲೆಯ ವಿವಿಧ ಮಾದರಿಗಳೇ ಆಗಿವೆ. ಚಲುವನಹಳ್ಳಿಯ ಹುಟ್ಟು ಬಂಡೆಗಳ ಕಲ್ಲಾಸರೆಯಲ್ಲಿ ಕೊರೆಯಲಾಗಿರುವ ವೀರಭದ್ರ, ಷಣ್ಮುಖ, ಹಾಲುಸಿದ್ದೇಶ್ವರನ ಉಬ್ಬು ಶಿಲ್ಪಗಳು ೭x೬ ಅಡಿಗಳ ವಿಸ್ತಾರ ಪಡೆದಿದ್ದು ಆಕರ್ಷಕವಾಗಿವೆ. ಸಿದ್ಧವಾದ ಶಿಲಾಫಲಕಗಳಲ್ಲಿ ಮೂಡಿರುವ ಸುಂದರ ಉಬ್ಬುಶಿಲ್ಪಗಳನ್ನು ಇಲ್ಲಿನ ಸ್ಮಾರಕ ಶಾಸನಗಳಲ್ಲಿ ಕಾಣಬಹುದು. ದೇವಾಲಯ ಭಿತ್ತಿ ಚಿತ್ರಗಳೂ ಮೂರ್ತಿಗಳು ಪ್ರತಿಮೆಗಳೂ ಅದ್ಭುತ ಸೌಂದರ್ಯದಿಂದ ಕೂಡಿದ ಶ್ರೇಷ್ಠ ರೂವಾರಿಗಳಿಂದ ನಿರ್ಮಿತವಾದ ದೇವಾಲಯಗಳಿಗೂ ಈ ಪ್ರದೇಶದಲ್ಲಿ ಕೊರತೆಯಿಲ್ಲ.

**೧. ಶಾಸನ ಶಿಲ್ಪ** : ಕರ್ನಾಟಕದ ಶಾಸನ ಶಿಲ್ಪಕಲೆಯು ಸುಮಾರು ಒಂದೂವರೆ ಸಹಸ್ರವರ್ಷಗಳ ಇತಿಹಾಸವನ್ನು ಹೊಂದಿ ವಿವಿಧ ಕಾಲಘಟ್ಟಗಳಲ್ಲಿ ಬೆಳವಣಿಗೆಯನ್ನು ಹೊಂದುತ್ತಾ ವೈವಿಧ್ಯಮಯವಾಗಿ ಬೆಳೆದುಬಂದಿದೆ. ಗಂಗರ ಸ್ಮಾರಕ ಶಿಲೆಗಳಿಗೆ ಒರಟು ಕಲ್ಲುಗಳನ್ನು ಬಳಸಿದ್ದು ಅವುಗಳು ಹೆಚ್ಚು ಎತ್ತರ ಮತ್ತು ಅಗಲವಾಗಿವೆ ಹಾಗೂ ನಿಶ್ಚಿತವಾದ ಆಕಾರವಿಲ್ಲ.

ಅರಕೆರೆಯ ಮುತ್ತರನ ಸ್ಮಾರಕ ಶಾಸನ, ನೇರ್ಲಿಗೆಯ ಅಣ್ಣವಸಯ್ಯನ ವೀರಗಲ್ಲು ಕೆಲವತ್ತಿಯ ಲಿಪಿ ರಹಿತ ವೀರಗಲ್ಲು ಜೀವಂತಿಕೆಯ ಸ್ಪರ್ಷ ಪಡೆದಿವೆ. ಮುತ್ತರನ ಶಾಸನ ಬೇಗೂರು ವೀರಗಲ್ಲನ್ನು ನೆನಪಿಸುತ್ತದೆ. ಬಿಸುಗೆಯನ್ನೇ ರಣರಂಗವಾಗಿ ಮಾಡಿಕೊಂಡ ಅಣ್ಣವಸಯ್ಯ, ಸೊಂಡಿಲುಗಳನ್ನು ಹೆಣೆದು ಹರಿಹಾಯುತ್ತಿರುವ ಮದ್ದಾನೆಗಳ ಶಿಲ್ಪವು ಆ ಶಾಸನ ಸಾಹಿತ್ಯದ ಶಿಲ್ಪ ಕಾವ್ಯದಂತೆ ಮೂಡಿದೆ ಅಥವಾ ದೃಶ್ಯೀಕರಣವಾಗಿದೆ. 'ಈ ಕಲ್ಲ ಬೆಸಗೆಯ್ದ ವಿಭೋಗ'ನಿಗೆ ಹತ್ತು ಕೊಳಗ ಭೂಮಿಯನ್ನು ಕೊಟ್ಟಿರುವುದು ಅವನ ಕಲೆಗೆ ಸಂಧಿರುವ ಉಚಿತವಾದ ಗೌರವವೇ ಆಗಿದೆ.

ಹೊಯ್ಸಳರ ಕಾಲದಲ್ಲಿ ಶಾಸನ ಖಂಡರಣೆಯೂ ಕೂಡ ಉತ್ತಮ ಕಲಾಭಿವ್ಯಕ್ತಿಯ ಮಾಧ್ಯಮ ಎಂಬುದಕ್ಕೆ ಸಾಕ್ಷಿಯಾಗಿದೆ. ಈ ಪ್ರದೇಶದಲ್ಲಿ ದೊರೆಯುವ ಮೃದುವಾದ ಬಳಪಿನ ಕಲ್ಲು ಕಲಾವಿದನ ಭಾವಭಂಗಿಗೆ ತಕ್ಕಂತೆ ಒದಗಿಬಂದುದರಿಂದ ಸೂಕ್ಷ್ಮತೆಯ ನಾಜೂಕಿನ ಹೊಯ್ಸಳರ ಶಿಲ್ಪ ವೈಶಿಷ್ಟ್ಯದ ಎಲ್ಲಾ ಲಕ್ಷಣಗಳೂ ಇಲ್ಲಿನ ಶಾಸನ ಉಬ್ಬುಶಿಲ್ಪಗಳಲ್ಲಿಯೂ ನೋಡಲು ಸಿಗುತ್ತವೆ. ಕಣಿಕಟ್ಟೆ, ಕಲ್ಲುಗುಂಡಿ, ಮುದುಡಿ, ಅರಸೀಕೆರೆ, ಬಾಗಡೆ, ಹಲುಕೂರು, ಶಂಕರನಹಳ್ಳಿ, ಕಲ್ಲುಗುಂಡಿ ಹುಲ್ಲೇಕೆರೆಗಳಲ್ಲಿ

ಕಂಡುಬರುವ ಶಾಸನ ಶಿಲ್ಪಗಳು ಖಂಡರಣೆಕಾರರ ಬಗೆಗೆ ಅಪಾರ ಮೆಚ್ಚುಗೆಯನ್ನು ಗೌರವವನ್ನು ಮೂಡಿಸುತ್ತವೆ.

**ದಾನ ಶಾಸನ :** ದಾನ ಶಾಸನಗಳಲ್ಲಿ ಶಿಲ್ಪ ವಿನ್ಯಾಸಕ್ಕೆ ಹೆಚ್ಚು ಅವಕಾಶವಿಲ್ಲದಿದ್ದರೂ ಈ ಪ್ರದೇಶದ ಹೊಯ್ಸಳರ ದಾನ ಶಾಸನಗಳ ಶಿರೋಭಾಗವು ಅತ್ಯುತ್ತಮ ಉಬ್ಬು ಶಿಲ್ಪಗಳಿಂದ, ಅಲಂಕೃತ ಅಂಚು, ಸಿಂಹಲಲಾಟಗಳಿಂದ, ಹೂಬಳ್ಳಿ ಎಲೆ ಹಂಸಗಳಿಂದ ಅಲಂಕೃತ ಲಿಪಿಗಳಿಂದ ಮನಸೂರೆಗೊಳ್ಳುತ್ತವೆ.

**ಸ್ಮಾರಕ ಶಾಸನ :** ಸ್ಮಾರಕ ಶಾಸನಗಳಾದ ವೀರಗಲ್ಲು ಮಾಸ್ತಿಕಲ್ಲು, ವೀರಮಾಸ್ತಿ, ಬಲಿದಾನ ಶಿಲ್ಪಗಳು, ವೀರಸ್ಮಾರಕ ಕಂಬಗಳು ಇತ್ಯಾದಿಗಳ ಖಂಡರಣೆಯು ಲಿಪಿಸಹಿತವಾದ, ಲಿಪಿ ರಹಿತವಾದ ಸುಂದರ ಶಿಲ್ಪಗಳಿಂದ ಕಂಡುಬಂದಿವೆ. ಖಂಡರಣೆಕಾರರ ಕುಸುರಿಗೆಲಸ, ಕಲ್ಪಕತೆಯಿಂದ ವೀರರ, ಮಾಸ್ತಿಗಳ, ಅಪ್ಸರೆಯರ ಕೇಶವಿನ್ಯಾಸ ಉಡುಗೆ ತೊಡುಗೆ ಮಂಟಪಗಳ ವೈವಿಧ್ಯತೆ, ಪಲ್ಲಕ್ಕಿಗಳು, ಅಪ್ಸರೆಯರ ದಿವ್ಯ ಸೌಂದರ್ಯ ಇವುಗಳಿಂದ ಕೂಡಿ ಅಪೂರ್ವ ಕಲಾಕೃತಿಗಳಾಗಿ ಶಾಸನಗಳು ಮನಸೆಳೆಯುತ್ತವೆ.

ಮುದುಡಿಯಲ್ಲಿ ಹಾಗೂ ಕಹಕೂರಿನ ಅನೇಕ ವೀರಗಲ್ಲು ಶಿಲ್ಪಗಳು ಅತ್ಯಂತ ಸುಂದರವಾಗಿವೆ. ಮುದುಡಿಯ ದಾನ ಶಾಸನದಲ್ಲಿ ಬಂಕಾಪುರದ ಶಿಲ್ಪಿಯ ಉಲ್ಲೇಖವಿದೆ. ಲಿಪಿರಹಿತವಾದ ಹುಲಿಬೇಟೆಯ ಶಿಲ್ಪವು ಶ್ರೇಷ್ಠ ಕಲಾವಿದನ ನಿರ್ಮಿತಿ ಎಂದೇ ಹೇಳಬಹುದು. ಹಲಕೂರಿನ ವೀರರ ಸಮೂಹಿಕ ಮರಣದ ಸ್ಮಾರಕ ವೀರಗಲ್ಲು ಪ್ರತಿಭಾವಂತ ಶಿಲ್ಪಿಯ ಅದ್ಭುತ ಕಲಾ ನಿರ್ಮಿತಿಯೇ ಆಗಿದೆ.

ಹಂದಿಬೇಟೆಯ ಉಂಡಿಗನಾಳಿನ ಸ್ಮಾರಕವು ಒಡೆಯನೊಂದಿಗೆ ಹಂದಿಬೇಟೆಯಲ್ಲಿ ಪಾಲ್ಗೊಂಡು ಪ್ರಾಣತೆತ್ತ ಸ್ವಾಮಿನಿಷ್ಠ ನಾಯಿಯನ್ನು ಸ್ವರ್ಗದಲ್ಲಿ ದೇವಸನ್ನಿಧಿಯಲ್ಲಿ ಖಂಡರಿಸಿರುವ ಅಪೂರ್ವ ಶಿಲ್ಪವಾಗಿದೆ. ಈ ಸ್ಮಾರಕ ಶಾಸನ ಮೂರು ಪಟ್ಟಿಕೆಗಳಿಂದ ಕೂಡಿದೆ. ಕೆಳಸ್ಥರದಲ್ಲಿ ತನ್ನ ನಾಯಿಗಳೊಂದಿಗೆ ಹಂದಿಯನ್ನು ಎದುರಿಸುತ್ತಿರುವ ಬಿಲ್ಲು ಬಾಣ ಸಮೇತನಾದ ವೀರನಿದ್ದಾನೆ. ನಾಯಿಗಳು ಹಂದಿಯನ್ನು ಹಿಂದು ಮುಂದಾಗಿ ಸುತ್ತಿ ಆಕ್ರಮಿಸಿವೆ. ಎರಡನೆಯ ಪಟ್ಟಿಯಲ್ಲಿ ಕೇವಲ ಮೂರು ನಾಯಿಗಳು ಮತ್ತು ಹಂದಿಯ ಹೋರಾಟ ಚಿತ್ರಣವಿದೆ. ಈ ಪಟ್ಟಿಕೆಯಲ್ಲಿ ವೀರನಿಲ್ಲ. ಒಂದು ನಾಯಿ ಹಂದಿಯ ಕಾಲಕೆಳಗೆ ಸಿಕ್ಕಿದೆ. ಮೇಲಿನ ಪಟ್ಟಿಕೆಯಲ್ಲಿ ಶಿವಸಾನಿಧ್ಯದಲ್ಲಿ ವೀರಭಾವದಲ್ಲಿ ಬಾಲವನ್ನು ಮುಖವನ್ನೂ ಮೇಲೆತ್ತಿ ಮುಂಗಾಲು ಚಾಚಿ ಮಲಗಿರುವ ನಾಯಿಯನ್ನು ಬಿಡಿಸಲಾಗಿದೆ. ವೀರನ ಮರಣವಾಗಿಲ್ಲ, ನಾಯಿ ಮಾತ್ರ ಪ್ರಾಣತೆತ್ತಿದೆ ಎಂಬುದನ್ನು ಇದು ಸೂಚಿಸುತ್ತಿದೆ. ಇಲ್ಲಿನ ನಾಯಿಗಳ ವೀರವೇಶವನ್ನು ಗಮನಿಸಿದರೆ ಅವು ಇಂಥ ಬೇಟೆಯಲ್ಲಿ ನುರಿತ ಪ್ರಾಣಿಗಳೆಂದು ತೋರುತ್ತದೆ. ಒಂದು ನಾಯಿ ನೇರವಾಗಿ ಹಂದಿಯ ಮೂತಿಗೆ ಬಾಯಿ ಹಾಕಿದೆ. ಮತ್ತೊಂದು ಕಾಲನ್ನು ಹಿಡಿಯುತ್ತಿದೆ. ಎತ್ತರವಾದ ನೀಳಕಾಯದ ಅಗಲ ಎದೆಯ, ಮೇಲೆತ್ತಿ ಸುರುಳಿಕಟ್ಟಿದ ಬಾಲ, ನೆಟ್ಟನೆ ನಿಂತ ಕಿವಿಗಳಿಂದ ಆಕರ್ಷಕವಾಗಿರುವ ಈ ನಾಯಿಗಳು ನಿರ್ಭಯವಾಗಿ ಹೋರಾಡುತ್ತಿರುವ ದೃಶ್ಯ ನೈಜತೆ ಚಿತ್ತಾಕರ್ಷಕವಾಗಿದೆ.

**ವೀರ ಸ್ಥಂಬಗಳು :** ಸ್ಮಾರಕ ಶಿಲ್ಪಗಳಲ್ಲಿ ವೀರ ಸ್ಥಂಬಗಳೂ ಬಹಳ ಮುಖ್ಯ. ಕರ್ನಾಟಕದ ಕರಾವಳಿ ಪ್ರದೇಶಗಳಲ್ಲಿ ಸುಂದರ ಶಿಲ್ಪಗಳಿಂದ ಕೂಡಿದ ವೀರಗಂಬಗಳು ವಿಶೇಷವಾಗಿ ಕಂಡುಬರುತ್ತವೆ. ಇವು ತಮ್ಮ ವಿಶಿಷ್ಟವಾದ ರಚನೆ ಮತ್ತು ಸಂಕೀರ್ಣ ಶಿಲ್ಪ ಶೈಲಿಯಿಂದಾಗಿ ವೀರಗಲ್ಲುಗಳಲ್ಲೇ ಬೇರೆಯಾದ ಸ್ಥಾನ ಪಡೆಯುತ್ತವೆ.[೧೮೦] ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ವೀರಗಂಬಗಳಿದ್ದರೂ ಅವು ತೀರ ಸಾಮಾನ್ಯವಾಗಿದ್ದು ಶಿಲ್ಪ ಸೌಂದರ್ಯವನ್ನು ಹೊಂದಿಲ್ಲ.

ಉಂಡಿಗನಾಳಿನ ಜಟ್ಟಿಗಳು ವಿಷ್ಣುವರ್ದನನ ಕಾರುಣ್ಯವನ್ನು ಪಡೆದು ಸಾಮಂತರಾಗಿ ನಿಷ್ಠರಾಗಿ ಬಾಳಿದವರು. ಈ ಕಾರುಣ್ಯದ ಕಥೆಯನ್ನು ಮೂರು ಉಬ್ಬುಶಿಲ್ಪ ಪಟ್ಟಿಕೆಗಳಲ್ಲಿ ತಿಳಿಸಿಕೊಡುವ ವೀರಗಂಬ ನಿಂಬಜಾದೇವಾಲಯದ ಎದುರು ನಿಂತಿದೆ. ಇದಲ್ಲದೆ ಉಂಡಿಗನಾಳಿನಲ್ಲಿ ಮೂರು ದುಂಡು ಗಂಬಗಳು ಕಂಡುಬಂದಿವೆ. ದೇವಾಲಯದ ಆವರಣದಲ್ಲಿ ಎರಡಿದ್ದರೆ, ಅರಮನೆಯಿದ್ದ ಆವರಣದಲ್ಲಿ ಒಂದು ಕಂಡು ಬಂದಿದೆ. ಅವನ್ನು ಸ್ಥಳೀಯರು ವೀರಗಂಬವೆನ್ನುತ್ತಾರೆ. ಸುಮಾರು ಎಂಟು ಅಡಿ ಎತ್ತರವಾಗಿದ್ದು ನುಣುಪಾದ ಈ ದುಂಡು ಕಂಬಗಳು ಜಟ್ಟಿಗಳು ನಿತ್ಯ ತಾಲೀಮು ನಡೆಸುವ ಮಲ್ಲಗಂಬಗಳೆಂದು ತೋರುತ್ತದೆ. ಗುಜಾರಾತಿನ ವಲಸಿಗರಾದ ಈ ಜಟ್ಟಿಗಳೊಂದಿಗೆ ಈ ಮಲ್ಲಕಂಬ ಕ್ರೀಡೆಯೂ ಈ ಪ್ರದೇಶಕ್ಕೆ ವಲಸೆಯಾಗಿದೆ.

ಶಂಕರನ ಹಳ್ಳಿಯಲ್ಲಿ ಮಾಸ್ತಿಯ ವೀರಗಂಬವಿದೆ. ಇದಲ್ಲದೆ ಈ ಪ್ರದೇಶದ ಬೆಂಡೆಕೆರೆ, ಹಿರಿಯೂರು, ಮೊಸಳೆ ಮುಂತಾದ ಕಡೆ ಸೂರ್ಯಕಿರಣ ಕಂಬಗಳೆಂದು ಕರೆಯುವ ೪ ಅಡಿ ಎತ್ತರದ ಮೇಲ್ಭಾಗದಲ್ಲಿ ಕಮಲದ ದಳಗಳನ್ನು ದ್ವಾದಶಾದಿತ್ಯರ ಶಿಲ್ಪಗಳನ್ನು ಹೊಂದಿರುವ ಆಕರ್ಷಕ ಕಂಬಗಳಿವೆ.

**ಆತ್ಮಬಲಿಯ ಶಿಲ್ಪಗಳು :** ಬದುಕಿನಲ್ಲಿ ವೈರಾಗ್ಯ ತಾಳಿ ಮೋಕ್ಷ ಪ್ರಾಪ್ತಿಗಾಗಿಯೋ ದೇವತೆಗಳಿಗೆ ಹರಕೆ ತೀರಿಸಲೋಸುಗವೋ ಅನೇಕ ರೀತಿಯ ಧಾರ್ಮಿಕ ಬಲಿಗಳು ನಡೆಯುತ್ತಿದ್ದವು. ಸಲ್ಲೇಖನದಿಂದ ಮುಡಿಪುವುದು, ಗ್ರಹಣ ಕಾಲದಲ್ಲಿ ಪ್ರಾಣತ್ಯಾಗ ಮಾಡುವ ಉದಾಹರಣೆಗಳು ಜಲಸಮಾಧಿ ಹೊಂದಿದ, ಸಿಡಿತಲೆ ಗೊಟ್ಟ ವೀರ ಭಕ್ತರನ್ನು ನೋಡಬಹುದು. ಸಿಡಿ ಆಡುವುದು ಇಂದಿಗೂ ಸಾಂಕೇತಿಕವಾಗಿ ಉಳಿದುಬಂದಿದೆ. ತಳಲೂರಿನ ಗಂಗರ ಕಾಲದ ಲಿಪಿ ರಹಿತ ಸಿಡಿತಲೆ ಶಿಲ್ಪ ಸರಳವಾದ ರಚನೆಯಾಗಿದ್ದರೂ ವೀರನ ದೃಢತೆ ಎದ್ದು ಕಾಣುತ್ತದೆ. ಮಾವುತನ ಹಳ್ಳಿಯಲ್ಲಿರುವ ಸಿಡಿ ಕಂಬದ ಬುಡದಲ್ಲಿ ಕತ್ತರಿಸಿದ ಕುಂಡದ ಶಿಲ್ಪವಿದೆ.

ಕಲ್ಗುಂಡಿಯ ಲಿಪಿ ರಹಿತವಾದ ಸ್ಮಾರಕ ಶಿಲ್ಪವೊಂದರಲ್ಲಿ ಸ್ತ್ರೀಯೊಬ್ಬಳು ಧ್ಯಾನಸ್ತಳಾಗಿ ಕುಳಿತಿದ್ದು ತಲೆಗಡಿಯಲು ಸಿದ್ಧವಾಗಿ ಪುರುಷನೊಬ್ಬ ಆಯುಧದೊಂದಿಗೆ ನಿಂತಿದ್ದಾನೆ. ಪಕ್ಕದಲ್ಲಿ

ಅಲಂಕರಿಸಿದ ಕುದುರೆ ಹಾಗೂ ಛತ್ರಿಯನ್ನು ಬಿಡಿಸಲಾಗಿದೆ. ಅಲ್ಲದೆ ಆಕೆಯ ಕೇಶವಿನ್ಯಾಸ ಉಡುಗೆ ತೊಡಗೆಗಳಿಂದ ಉನ್ನತ ಸ್ಥಾನಮಾನವನ್ನು ಅಧಿಕಾರವನ್ನು ಪಡೆದಿದ್ದ ಅಧಿಕಾರಿಯ ಪತ್ನಿ ಇಲ್ಲವೇ ರಾಜವಂಶದ ಸ್ತ್ರೀಯಂತೆ ಕಂಡುಬರುತ್ತಾಳೆ. ಇದು ತನ್ನ ಪ್ರಿಯ ಪುರುಷನಿಗೆ ವೇಳೆಗೊಂಡ ರಾಣಿಯ ಸ್ಮಾರಕವಿರಬಹುದು. ಈಕೆ ಮಾಸ್ತಿಯಾಗದೆ ಅಥವಾ ಸಲ್ಲೇಖನದಲ್ಲಿ ಪ್ರಾಣ ನೀಗದೆ ತಲೆಗಡಿಸಿ ಕೊಂಡಿರುವುದು ಅಪರೂಪ ಮತ್ತು ವಿಶೇಷ.

**ಸ್ಮಾರಕ ಶಿಲ್ಪಗಳು-ಆಚರಣೆಗಳು :** ಸ್ಮಾರಕ ಶಿಲ್ಪಗಳು ಒಂದಲ್ಲಾ ಒಂದು ರೀತಿಯ ತ್ಯಾಗ ಬಲಿದಾನ, ಶೌರ್ಯ, ಶೌಚ, ನಿಷ್ಠೆ ಮುಂತಾದ ಮೌಲ್ಯಗಳನ್ನು ಸಾರುತ್ತ ಈ ಪ್ರದೇಶದ ಸಂಸ್ಕೃತಿ ನಂಬಿಕೆ ಆಚರಣೆಗಳ ಸಂಕೇತವಾಗಿವೆ. ಭಯದಿಂದಲೋ ಭಕ್ತಿಯಿಂದಲೋ ಜನಪದರು ಇವುಗಳನ್ನು ಆರಾಧಿಸುತ್ತಾ ಬಂದಿದ್ದಾರೆ. ಇಲ್ಲಿನ ಮಾಸ್ತಿ, ವೀರರುಗಳು ಸಮುದಾಯಗಳ ಮೇಲೆ ಪ್ರಭಾವ ಬೀರುತ್ತ, ಮಹಾ ಪುರುಷ ಸ್ತ್ರೀಯರಾಗಿ ವೀರಗಾಥೆಗಳಿಗೆ ಐತಿಹ್ಯಗಳಿಗೆ ವಸ್ತುವಾಗಿದ್ದಾರೆ. ಇವರ ವೀರತ್ವ ತ್ಯಾಗಗಳು ಕೇವಲ ಸ್ವಾರ್ಥ ಸಾಧನೆಯಾಗದೆ ಸಮುದಾಯದ ಒಳಿತಿಗಾಗಿ ರಕ್ಷಣೆಗಾಗಿ ನಡೆದಿದ್ದು ಆ ಸಮಾಜದ ಜನಮನಕ್ಕೆ ಒಂದು ಸ್ಫೂರ್ತಿ ಬಿಂದುವಾಗಿ ಸಂಘಟಕ ಶಕ್ತಿಯಾಗಿ ಒದಗಿ ಬರುತ್ತವಾದ್ದರಿಂದ ಆ ಸಮುದಾಯಗಳ ದೈವವಾಗಿ ಬಿಡುತ್ತವೆ. ನವನೂಲು ಚೆಟ್ಟಿಯ ಆರಾಧನೆಯನ್ನು ಹಿಂದೆ ಚರ್ಚಿಸಲಾಗಿದೆ.

ಗೀಜಿಹಳ್ಳಿಯ ಮಾಸ್ತಮ್ಮ ವೀರಣ್ಣರ 'ಕೆಂಡ'ದ ಜಾತ್ರೆಯು ಅಂತರ್ಜಾತೀಯ ವಿವಾಹಕ್ಕೆ ಅವಕಾಶ ಮಾಡಿಕೊಡದೆ ವೀರಣ್ಣನನ್ನು ಕೊಚ್ಚಿಹಾಕಿದ ಧಾರ್ಮಿಕ ಮತ್ತು ರಾಜಕೀಯ ಪ್ರಭುತ್ವಕ್ಕೆ ಪ್ರತಿರೋಧವನ್ನು ವ್ಯಕ್ತಪಡಿಸುವ ವಿಧಾನವೇ ಆಗಿದೆ. ಕೊಚ್ಚಿ ಹಾಕಲ್ಪಟ್ಟ ವೀರಣ್ಣನ ದೇಹದ ತುಂಡುಗಳನ್ನೇ ಮಡಿಲಿಗೆ ಕಟ್ಟಿಕೊಂಡು ಕಿಚ್ಚಿಗೆ ಹಾರಿದ ಕನ್ಯೆ ಮಾಸ್ತಿಯನ್ನು ಜಾತ್ರೆಯ ಆಚರಣೆಯಲ್ಲಿ ವೀರಣ್ಣನೊಂದಿಗೆ ವಿವಾಹ ಮಾಡಲಾಗುತ್ತದೆ. ಯಜಮಾನ ಸಂಸ್ಕೃತಿಯ ವಿರುದ್ಧವಾಗಿ ಹುಟ್ಟಿಕೊಂಡ ಈ ಆಚರಣೆಯು ಪ್ರತಿ ಸಂಸ್ಕೃತಿ ಸೃಷ್ಟಿಯ ಉತ್ತಮ ಉದಾಹರಣೆಯಾಗಿದೆ.

ಸ್ಮಾರಕ ಶಿಲ್ಪಗಳು ಸುಂದರವಾಗಿರಲಿ ಇಲ್ಲದಿರಲಿ ಕೇವಲ ಗುಂಡುಕಲ್ಲಾಗಿರಲಿ ಅದನ್ನು ನಾವು ಅಲಕ್ಷಿಸುವಂತಿಲ್ಲ. ಏಕೆಂದರೆ ಅನೇಕ ಆಚರಣೆಗಳ ಕೇಂದ್ರವಾಗಿರುವ ಇವುಗಳು ಸಂಸ್ಕೃತಿಯ 'ಜೀವಂತ ದಾಖಲೆ'ಗಳೇ ಆಗಿರುತ್ತವೆ. ಮನುಷ್ಯ ತನ್ನ ಅತ್ಯಂತ ಪುರಾತನ ಸ್ಮೃತಿಗಳನ್ನು ಮತ್ತೆ ಜೀವಿಸುವುದು ಈ ಆಚರಣೆಗಳ ಮೂಲಕ ಆದ್ದರಿಂದ ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಅವುಗಳ ಮಹತ್ವ ಹೆಚ್ಚಿನದು.

**೨. ಪ್ರಮುಖ ದೇವಾಲಯಗಳು :** ಅರಸೀಕೆರೆ ತಾಲ್ಲೂಕು ದೇವಾಲಯಗಳಿಂದ ಸ್ಮಾರಕಗಳಿಂದ ತುಂಬಿದೆ. ಪ್ರಾಚೀನ ಇತಿಹಾಸವುಳ್ಳ ಪ್ರತಿಹಳ್ಳಿ ಊರುಗಳಲ್ಲಿ ಅನೇಕ ದೇವಾಲಯಗಳು, ಕಡೆಯ ಪಕ್ಷ ಒಂದಾದರೂ ಇದ್ದೇ ಇದೆ.

ತಳಲೂರು, ಕೆಲ್ಲಂಗೆರೆ, ಅರಕೆರೆ, ಕಣಿಕಟ್ಟೆ, ಮಾಲೆಕಲ್ಲುತಿರುಪತಿ ಹೆಗ್ಗಟ್ಟಗಳಲ್ಲಿ ಗಂಗರ ಕಾಲದ ಕೆಲವು ದೇವಾಲಯಗಳ ಲಕ್ಷಣಗಳನ್ನು ಗುರುತಿಸಬಹುದು. ವಿನಯಾದಿತ್ಯನ ಕಾಲದಿಂದ[೧೪೧] ಇಲ್ಲಿ ದೇವಾಲಯ ನಿರ್ಮಾಣದ ಉಲ್ಲೇಖಗಳು ದೊರಕುವುದಾದರೂ ಉಳಿದುಬಂದಿರುವ ಸುಸ್ಥಿತಿಯಲ್ಲಿರುವ ಅಪೂರ್ವ ಕಲಾನಿರ್ಮಿತಿಗಳೆಂದು ಕರೆಯಬಹುದಾದ ದೇವಾಲಯಗಳೆಂದರೆ ಅರಸೀಕೆರೆಯಲ್ಲಿ ಶಿವಾಲಯವೆಂದು ಪ್ರಸಿದ್ಧವಾಗಿರುವ ದೇವಾಲಯ, ಹುಲ್ಲೇಕೆರೆಯ ಕೇಶವ ದೇವಾಲಯ, ಹಾರನಹಳ್ಳಿಯ ಸೋಮೇಶ್ವರ ಮತ್ತು ಲಕ್ಷ್ಮೀನರಸಿಂಹ ದೇವಾಲಯಗಳು, ಜಾವಗಲ್ಲಿನ ಲಕ್ಷ್ಮೀನರಸಿಂಹ ದೇವಾಲಯ ಮಾತ್ರ.

ಶಿವಾಲಯ ನಿರ್ಮಾಣವನ್ನು ಕುರಿತು ಹೇಳುವ ಯಾವುದೇ ಶಾಸನ ದೊರೆತಿಲ್ಲ. ಇದು ಇಮ್ಮಡಿ ವೀರ ಬಲ್ಲಾಳನ ಕಾಲದ ನಿರ್ಮಿತಿ ಎಂದು ವಿದ್ವಾಂಸರು ಪರಿಗಣಿಸಿದ್ದಾರೆ. ಈ ದೇವಾಲಯದ ಆಕರ್ಷಣೆ ಎಂದರೆ ಹಲವಾರು ಮೂಲೆಗಳುಳ್ಳ ನಕ್ಷತ್ರಾಕಾರದ ಮುಖಮಂಟಪ. ದೊಡ್ಡದಾದ ಒಂದೇ ಭುವನೇಶ್ವರಿಯನ್ನು ಹೊಂದಿ ಅನೇಕ ಕಂಬಗಳು ಕಲ್ಲಿನ ಜಗತಿಗಳನ್ನು ಹೊತ್ತಿರುವಂತಿರುವ ೨೪ ಆನೆಗಳೂ, ಅಪೂರ್ವ ಕೆತ್ತನೆಯುಳ್ಳ ಆಕರ್ಷಕ ಭುವನೇಶ್ವರಿಯ ಮಧ್ಯಭಾಗದಿಂದ ಇಳಿದಿರುವ ಕಮಲ ಕರ್ಣಿಕೆಗಳಿಂದ ಹೊರಕ್ಕೆ ಚಾಚಿರುವ ಜಗತಿಗಳ ಹೊರಭಾಗದ ಕಟಾಂಜನದ ಸೂಕ್ಷ್ಮ ಕಲೆಗಾರಿಕೆಯಿಂದ ಇದೊಂದು ಅಪೂರ್ವ ಮಾದರಿಯ ಏಕೈಕ ಮಂಟಪವಾಗಿದ್ದು ಜಗತಿಗಳಲ್ಲಿ ಸುತ್ತಲೂ ಕುಳಿತು ಮಧ್ಯದಲ್ಲಿನ ನೃತ್ಯಗಾರರನ್ನು ಎಲ್ಲ ದಿಕ್ಕುಗಳಿಂದಲೂ ನೋಡಲು ಸಾಧ್ಯವಾಗುವಂತಿದೆ. 'ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಹೊರಬಿತ್ತಿಯಲ್ಲಿ ಹೆಚ್ಚು ವೈಷ್ಣವ ಬಿಂಬಗಳಿದ್ದು ಇದೊಂದು ಧರ್ಮ ಸಮನ್ವಯದ ಅಪೂರ್ವ ದೇವಾಲಯವಾಗಿದೆ.'[೧೪೨]

ಹುಲ್ಲೇಕೆರೆಯ ಕೇಶವ ದೇವಾಲಯ ೧೧೬೨ರಲ್ಲಿ ಹೊಯ್ಸಳ ಒಂದನೇ ನರಸಿಂಹನ ಸರ್ವಾಧಿಕಾರಿ ಹೆಗ್ಗಡೆ ಮಹಾದಂಡನಾಯಕ ಬೂಚಿರಾಜನು ಕಟ್ಟಿಸಿದನು. ಜಗತಿಯಿಲ್ಲದೆ ಮೇಲೆದ್ದಿರುವ ದೇವಾಲಯದ ಗೋಡೆಯಲ್ಲಿ ಸುತ್ತಲೂ ಇರುವ ಹದಿನೈದು ಅಂಗುಲ ಎತ್ತರದ ವಿಷ್ಣುವಿನ ನಾನಾರೂಪಗಳ ವಿಗ್ರಹಗಳು ಸುಂದರವಾಗಿದ್ದು ಹಳೇಬೀಡಿನ ವಿಗ್ರಹಗಳನ್ನು ಹೋಲುತ್ತವೆ. ಶಿಖರವು ಮೂರು ಅಂತಸ್ತುಗಳಿದ್ದು ಮಧ್ಯದಲ್ಲಿ ವಿಗ್ರಹಗಳಿವೆ. ಶಿಖರದ ಕೊನೆಯಲ್ಲಿ ಅಲಂಕೃತವಾದ ಕಲ್ಲಿನ ಕಲಶವಿದೆ. ಸುಕನಾಸಿ ಮೇಲೆ ಚಾಚಿಕೊಂಡಿರುವ ಭಾಗದಲ್ಲಿ ಅತ್ಯಂತ ಸುಂದರವಾದ ಕೆತ್ತನೆಯುಳ್ಳ ಸಳನ ವಿಗ್ರಹವಿದೆ. ದೇವಾಲಯದ ನವರಂಗದ ಒಂದು ಭುವನೇಶ್ವರಿಯಲ್ಲಿ ಬೂಚಿರಾಜನು ನರ್ತನ ಗಾಯನವನ್ನು ವೀಕ್ಷಿಸುತ್ತಿರುವ ಓಲಗ ಚಿತ್ರಣವಿದೆ.

**ಹಾರನಹಳ್ಳಿ, ಜಾವಗಲ್ಲಿನ ದೇವಾಲಯಗಳು :** ಹಾರನಹಳ್ಳಿಯಲ್ಲಿರುವ ಲಕ್ಷ್ಮೀನರಸಿಂಹ ದೇವಾಲಯ ಹಾಗೂ ಸೋಮೇಶ್ವರ ದೇವಾಲಯಗಳು ಪ್ರಸಿದ್ಧ ರೂವಾರಿ ಮಲ್ಲಿತಮನ ಮುಖ್ಯ ನೇತೃತ್ವದಲ್ಲಿ

ನಿರ್ಮಾಣಗೊಂಡಿವೆ. ಜಾವಗಲ್ಲಿನ ಲಕ್ಷ್ಮೀನರಸಿಂಹ ದೇವಾಲಯವನ್ನು ಮಲ್ಲಿತಮ ಅವನ ಮಗ ಚಿಕ್ಕಮಲ್ಲಿತಮ, ಮಕಸ, ಪಮಾಯನ ಮುಂತಾದ ರೂವಾರಿಗಳು ಅತ್ಯಂತ ಸುಂದರವಾಗಿ ನಿರ್ಮಿಸಿದ್ದಾರೆ.

ನಕ್ಷತ್ರಾಕಾರದ ಜಗತಿಯ ಮೇಲೆ ಐದು ಸಾಲುಗಳು ಆನೆ, ಅಶ್ವ, ಲತಾ, ಪೌರಾಣಿಕ ದೃಶ್ಯಗಳು ಮಕರ,ಸಿಂಹ,ಹಂಸಗಳ ಚಿತ್ರಪಟ್ಟಿಕೆಗಳಿವೆ. ಈ ಮೂರು ದೇವಾಲಯಗಳಲ್ಲಿ ಭಿತ್ತಿಯನ್ನು ಪಟ್ಟಿಕೆಗಳಿಂದ ಎರಡು ಭಾಗ ಮಾಡಿ ಈ ಪಟ್ಟಿಕೆಯ ಮೇಲೆ ಕೀರ್ತಿಮುಖ, ಲತಾ, ಮಣಿಸಾಲುಗಳನ್ನು ಬಿಡಿಸಲಾಗಿದೆ. ಮೇಲ್ಭಾಗದಲ್ಲಿ ಯಕ್ಷರು ದೇವತೆಗಳನ್ನು ಕೆಳಭಾಗದಲ್ಲಿ ಎರಡಡಿ ಎತ್ತರದ ವಿಗ್ರಹಗಳನ್ನು ಖಂಡರಿಸಲಾಗಿದೆ. ಈ ಎಲ್ಲ ವಿಗ್ರಹಗಳ ಶೈಲಿ ಸೌಂದರ್ಯಗಳು ನುಗ್ಗೆಹಳ್ಳಿ ಸೋಮನಾಥಪುರ ದೇವಾಲಯಗಳಲ್ಲಿರುವಂತೆಯೇ ಇವೆ. ಇವೆಲ್ಲವೂ ಮಲ್ಲಿತಮನ ಪ್ರಧಾನ ರೂವಾರದಲ್ಲಿ ಸೃಷ್ಟಿಯಾದವೆಂಬುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಮಾವುತನ ಹಳ್ಳಿಯ ಬಲ್ಲಾಳ ಹರಹರೇಶ್ವರ ನರಸಿಂಹರ ತ್ರಿಕೂಟ ದೇವಾಲಯ ಮತ್ತು ನೀರ್ಗುಂದದ ಮಲ್ಲಿಕಾರ್ಜುನ ದೇವಾಲಯಗಳು ಅತ್ಯಂತ ಸುಂದರ ಭುವನೇಶ್ವರಿಯ ಅಲಂಕಾರಗಳನ್ನು ಹೊಂದಿದ್ದು ಬಣ್ಣ ಲೇಪನದಿಂದ ಮತ್ತಷ್ಟು ಆಕರ್ಷಕವಾಗಿದೆ. ಉರಿಮಂಜು, ಕಪ್ಪು, ತಿಳಿ ನೀಲಿಬಣ್ಣಗಳನ್ನು ಗುರುತಿಸಬಹುದು. ಮಾವುತನಹಳ್ಳಿಯ ನವರಂಗದ ಮೂರ್ತಿಶಿಲ್ಪಗಳು ಬೇಲೂರು ಹಳೇಬೀಡುಗಳ ಕಲಾವಂತಿಕೆಗೆ ಸ್ಪರ್ಧೆನೀಡುತ್ತವೆ. ಒಟ್ಟಿನಲ್ಲಿ ಈ ದೇವಾಲಯಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ದಿವ್ಯ ಸೌಂದರ್ಯಕ್ಕೂ ಕಲಾ ಪ್ರೌಢಿಮೆಗೂ ಸಾಕ್ಷಿಯಾಗಿ ನಿಂತಿವೆ.

**ಅಡಿಟಿಪ್ಪಣಿ**

೧. ಡಾ.ಎಂ.ಚಿದಾನಂದಮೂರ್ತಿ, ಕ.ಶಾ.ಸಾ.ಅ., ಪು.೨೦೬

೨. ಎ.ಕ.೧೦, ಅ.ಕೆ.ಶಾ.ಸಂ.೫೫, ಬಾಣಾವರ, ಕ್ರಿ.ಶ.೧೧೮೭

೩. ಅದೇ, ಶಾ.ಸಂ. ೧೬, ೧೬೩, ತಳಲೂರು, ೨೩೨ ಹಾರನಹಳ್ಳಿ

೪. ಅದೇ, ಶಾ.ಸಂ. ೧೪೯, ಕೆಲ್ಲಂಗೆರೆ, ಕ್ರಿ.ಶ.೧೧೪೨,

೫. ಅದೇ, ಶಾ.ಸಂ. ೧೫೫, ೧೫೯ ಕೆಲ್ಲಂಗೆರೆ, ಕ್ರಿ.ಶ.೧೧೯೦

೬. ಅದೇ, ಶಾ.ಸಂ. ೧೬೪, ತಳಲೂರು, ಕ್ರಿ.ಶ.೧೧೩೦

೭. ಅದೇ, ಶಾ.ಸಂ. ೧೬೧, ತಳಲೂರು, ಕ್ರಿ.ಶ.೧೧೮೫

೮. ಅದೇ, ಶಾ.ಸಂ. ೧೬೨, ೧೬೩, ಕ್ರಿ.ಶ.ಸು. ೧೧೦೪ ರಿಂದ ೧೧೪೨ ತಳಲೂರು.

೯. ಅದೇ, ಶಾ.ಸಂ. ೧೮೪, ಹುಲ್ಲೇಕೆರೆ, ಕ್ರಿ.ಶ.೧೧೬೨

೧೦. ಅದೇ, ಶಾ.ಸಂ. ೧೧೩, ಕಿತ್ತನಕೆರೆ, ಕ್ರಿ.ಶ.೧೧೬೪

೧೧. ಅದೇ, ಶಾ.ಸಂ. ೧೨೯, ಹಿರೇಕಲ್ಲುಬೆಟ್ಟ, ಕ್ರಿ.ಶ.೧೧೭೪

೧೨. ಅದೇ, ಶಾ.ಸಂ.೧೨೪, ನಾಗವೇದಿ, ಕ್ರಿ.ಶ.೧೧೭೩-೧೨೨೦,

೧೩. ಅದೇ, ಶಾ.ಸಂ.೧೩೯, ಬೊಮ್ಮೇನಹಳ್ಳಿ, ಕ್ರಿ.ಶ.೧೧೯೪, ೧೨೦, ಹೊಳಲಕೆರೆ, ಕ್ರಿ.ಶ.೧೧೮೫

೧೪. ಅದೇ, ಶಾ.ಸಂ.೧೯೭, ಕ್ರಿ.ಶ.೧೩೨೪, ೧೯೮, ಕ್ರಿ.ಶ.೧೪೦೩, ೨೦೬ ಗಂಡಸಿ, ಕ್ರಿ.ಶ.೧೫೩೫

೧೫. ಅದೇ, ಶಾ.ಸಂ. ೩೧೪, ಅರಕೆರೆ, ಕ್ರಿ.ಶ.೧೨೩೩

೧೬. ಅದೇ, ಶಾ.ಸಂ. ೨೫೩, ದೇಸಾಣಿ, ಕ್ರಿ.ಶ.೧೧೩೯ ೨೮೯, ಮೊಸಳೆ, ಕ್ರಿ.ಶ.೧೨೮೭

೧೭. ಅದೇ, ಶಾ.ಸಂ. ೨೫೩ ಕ್ರಿ.ಶ.೧೧೩೯, ೨೪೫, ಹೊಸಕಲ್ಯಾಡಿ, ಕ್ರಿ.ಶ.೧೧೧೪

೧೮. ಅದೇ, ಚ.ಪ.ಶಾ.ಸಂ.೩೨, ಆನೆಕೆರೆ, ಕ್ರಿ.ಶ.೧೫ನೇ ಶತಮಾನ

೧೯. ಅದೇ, ಅ.ಕೆ. ಶಾ.ಸಂ.೫೭, ಮನಕತ್ತೂರು, ಕ್ರಿ.ಶ.೧೧೦೧

೨೦. ಅದೇ, ಶಾ.ಸಂ.೫೨, ಬೆಂಡೆಕೆರೆ, ಕ್ರಿ.ಶ.೧೨೩೨,

೨೧. ಅದೇ, ಶಾ.ಸಂ.೩೧೨, ಕೋಳಿಗುಂದ, ಕ್ರಿ.ಶ.೧೨೩೪

೨೨. ಅದೇ, ಶಾ.ಸಂ.೬೬, ಸೆಟ್ಟಿಹಳ್ಳಿ, ೨೦೩, ಕ್ರಿ.ಶ.೯ನೇ ಶತಮಾನ, ಗಂಡಸಿ ೨೪೧-೧೧೫೮, ಕರುಗುಂದ.

೨೩. ಅದೇ, ಶಾ.ಸಂ.೭೩, ಕಣಕಟ್ಟೆ, ಕ್ರಿ.ಶ.೧೧೨೯

೨೪. ಅದೇ, ಶಾ.ಸಂ.೨೩೫, ಹಾರನಹಳ್ಳಿ, ಕ್ರಿ.ಶ.೧೧೩೮,

೨೫. ಎನ್.ಆರ್.ಲಲಿತಾಂಬ, ಮುರುಂಡಿಯ ಕನ್ನಡ ಶಾಲೆಯ ತಾಮ್ರಶಾಸನ, ಇ.ದ.ಸಂ.೨೧, ಪು.೬೮-೭೩

೨೬. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೨೨೭, ಮುರುಂಡಿ, ಕ್ರಿ.ಶ.೧೧೭೪

೨೭. ಅದೇ ಶಾ.ಸಂ.೫೦, ಕ್ರಿ.ಶ.೧೬-೧೭ನೇ ಶತಮಾನ

೨೮. ಎ.ಕ.೧೨ (ಪರಿ) ಕಡೂರು ಶಾ.ಸಂ.೧೯, ಆಸಂದಿ, ಕ್ರಿ.ಶ.೧೧-೧೨ನೇ ಶತಮಾನ

೨೯. ಅದೇ, ಸಂ.೧೧, ಅಕೆ.ಶಾ.ಸಂ.೧೨೦, ಹೊಳಲಕೆರೆ, ಕ್ರಿ.ಶ.೧೧೮೫

೩೦. ಅದೇ, ಶಾ.ಸಂ.೪೭, ಜಾಜೂರು, ಕ್ರಿ.ಶ.೧೨೦೦

೩೧. ಅದೇ, ಶಾ.ಸ.೩೯, ಅರಸೀಕೆರೆ, ಕ್ರಿ.ಶ.೧೧೮೪

೩೨. ರಹಮತ್ ತರೀಕೆರೆ, ಪಾವಿತ್ರ್ಯನಾಶವೂ ಪ್ರತಿಸಂಸ್ಕೃತಿ ನಿರ್ಮಾಣವೂ, ಸಂಕ್ರಮಣ, ಫೆ.೧೯೯೨, ಪು.೨೩೪

೩೩. ಎ.ಕ.೧೦, ಅ.ಕೆ.ಶಾ.ಸಂ.೨೩, ಕ್ರಿ.ಶ.೧೧೭೩, ೩೧೪, ಅರಕೆರೆ, ಕ್ರಿ.ಶ.೧೨೩೩

೩೪. ಅದೇ, ಶಾ.ಸಂ.೧೬೧, ತಳಲೂರು, ಕ್ರಿ.ಶ.೧೧೯೧

೩೫. ಅದೇ, ಶಾ.ಸಂ.೩೨೧, ಕಾಟಿಕೆರೆ, ಕ್ರಿ.ಶ.೧೧೦೦

೩೬. ಅದೇ, ಶಾ.ಸಂ.೧೮೪, ಹುಲ್ಲೇಕೆರೆ, ಕ್ರಿ.ಶ.೧೧೬೨

೩೭. ಅದೇ

೩೮. ಅದೇ, ಶಾ.ಸಂ.೩೨೧, ಕಾಟಿಕೆರೆ, ಕ್ರಿ.ಶ.೧೧೦೦

೩೯. ಅದೇ, ಶಾ.ಸಂ.೩೮, ಕ್ರಿ.ಶ.ಸು.೧೧೯೦

೪೦. ಅದೇ, ಶಾ.ಸಂ.೧೮೪, ಹುಲ್ಲೇಕೆರೆ, ಕ್ರಿ.ಶ.೧೧೬೨,

೪೧. ಅದೇ, ಶಾ.ಸಂ. ೨೩೨, ಹಾರನಹಳ್ಳಿ, ಕ್ರಿ.ಶ.೧೨೩೬,

೪೨. ಅದೇ, ಶಾ.ಸಂ.೩೧೪, ಅರಕೆರೆ, ಕ್ರಿ.ಶ.೧೨೩೩

೪೩. ವಕ್ತೃ, ರಾಧಮ್ಮ ವಯಸ್ಸು ೭೩, ಬೆಂಡೆಕೆರೆ

೪೪. ಎ.ಕ.೧೦, ಅ.ಕೆ.೩೧೪, ಅರಕೆರೆ, ಕ್ರಿ.ಶ.೧೨೩೩

೪೫. ಅದೇ, ಶಾ.ಸಂ.೩೨೧, ಕಾಟಿಕೆರೆ, ಕ್ರಿ.ಶ.೧೧೦೦

೪೬. ಅದೇ, ಶಾ.ಸಂ.೨೨೭, ಮುರುಂಡಿ, ಕ್ರಿ.ಶ.೧೧೭೪

೪೭. ಅದೇ, ಶಾ.ಸಂ.೧೮೦ ತಳಲುತೊರೆ, ಕ್ರಿ.ಶ.೧೩-೧೪ನೇ ಶತಮಾನ

೪೮. ಅದೇ, ಶಾ.ಸಂ.೨೮೪, ನೇರ್ಲಿಗೆ, ಕ್ರಿ.ಶ.೯೭೧-೭೨

೪೯. ಅದೇ, ಶಾ.ಸಂ.೪೪, ಅರಸೀಕೆರೆ, ಕ್ರಿ.ಶ.೧೧೮೯

೫೦. ಅದೇ, ಶಾ.ಸಂ.೩೯, ಅರಸೀಕೆರೆ, ಕ್ರಿ.ಶ.೧೧೮೩

೫೧. ಅದೇ, ಶಾ.ಸಂ.೨೬೧, ಸಿಂಗನಹಳ್ಳಿ, ಕ್ರಿ.ಶ.೧೫೫೫

೫೨. ಅದೇ, ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೫೩. ಅದೇ, ಶಾ.ಸಂ.೮೩, ಸಂತೆಶಿವರ, ಕ್ರಿ.ಶ.೧೨೨೩,

೫೪. ಆರ್.ನರಸಿಂಹಾಚಾರ್ ಕಾವ್ಯಾವಲೋಕನ

೫೫. ಎ.ಕ.೧೦, ಅ.ಕೆ. ಶಾ.ಸಂ, ೩೧೪, ಅರಕೆರೆ, ಕ್ರಿ.ಶ.೧೨೩೩

೫೬. ಅದೇ, ಶಾ.ಸಂ.೩೧, ಅರಸೀಕೆರೆ, ಕ್ರಿ.ಶ.೧೨೨೯

೫೭. ಅದೇ, ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೫೮. ಅದೇ, ಶಾ.ಸಂ.೧೮೪, ಹುಲ್ಲೇಕೆರೆ, ಕ್ರಿ.ಶ.೧೧೬೨

೫೯. ಅದೇ, ಶಾ.ಸಂ.೬, ಅರಸಿಕೆರೆ, ಕ್ರಿ.ಶ.೧೧೮೩

೬೦. ಅದೇ ಶಾ.ಸಂ.೧೨೮, ರಾಮಪುರ, ಕ್ರಿ.ಶ.೧೧೯೬

೬೧. ಅದೇ, ಶಾ.ಸಂ.೯೬, ಹಲುಕೂರು (ಚೆ.ಸಿ.ಪುರ), ಕ್ರಿ.ಶ.೧೧೭೭,

೬೨. ಅದೇ, ಶಾ.ಸಂ.೫೯, ಕುರುವಂಕ, ಕ್ರಿ.ಶ.೧೧೮೫

೬೩. ಅದೇ, ಶಾ.ಸಂ.೩೩, ಅರಸೀಕೆರೆ, ಕ್ರಿ.ಶ.೧೧೮೪

೬೪. ಅದೇ, ಶಾ.ಸಂ.೫೨, ಬೆಂಡೆಕೆರೆ, ಕ್ರಿ.ಶ.೧೨೩೨

೬೫. ಅದೇ, ಶಾ.ಸಂ.೩೧೪, ಅರಕೆರೆ, ಕ್ರಿ.ಶ.೧೨೩೩

೬೬. ಅದೇ, ಶಾ.ಸಂ.೨೭೭, ದ್ಯಾಮೇನಹಳ್ಳಿ, ಕ್ರಿ.ಶ.೧೧೮೯

೬೭. ಅದೇ, ಶಾ.ಸಂ.೨೪೧, ಕರುಗುಂದ, ಕ್ರಿ.ಶ.೧೧೫೮

೬೮. ಅದೇ, ಶಾ.ಸಂ.೨೪೫, ಹೊಸಕಲ್ಯಾಡಿ, ಕ್ರಿ.ಶ.೧೨೧೪

೬೯. ಅದೇ, ಶಾ.ಸಂ.೨೪೧, ಕರುಗುಂದ, ಕ್ರಿ.ಶ.೧೧೫೮,

೭೦. ಅದೇ, ಶಾ.ಸಂ. ೧೨೯, ಹಿರೇಕಲ್ಲುಬೆಟ್ಟ, ಕ್ರಿ.ಶ.೧೧೭೪,

೭೧. ಅದೇ, ಶಾ.ಸಂ.೬೧, ಗಂಜಿಗೆರೆ, ಕ್ರಿ.ಶ.೧೧೯೭

೭೨. ಅದೇ, ಶಾ.ಸಂ.೪೪, ಅರಸೀಕೆರೆ, ಕ್ರಿ.ಶ.೧೧೮೯

೭೩. ಅದೇ, ಶಾ.ಸಂ.೨೫೪, ಕುರಾದನಹಳ್ಳಿ, ಕ್ರಿ.ಶ.೧೧ನೇ ಶತಮಾನ

೭೪, ಅದೇ, ಶಾ.ಸಂ.೨೧೧, ಮಾವಿನಕೆರೆ, ಕ್ರಿ.ಶ.ಸು.೮ನೇ ಶತಮಾನ

೭೫. ಅದೇ, ಶಾ.ಸಂ.೩೧೭, ಹಿರಿಯೂರು, ಕ್ರಿ.ಶ.೧೨೫೪

೭೬. ಅದೇ, ಶಾ.ಸಂ.೨೭೮, ದ್ಯಾಮೇನಹಳ್ಳಿ, ಕ್ರಿ.ಶ.೧೫೮೬

೭೭. ಅದೇ, ಶಾ.ಸಂ.೨೭೩, ಜಾವಗಲ್ಲು, ಕ್ರಿ.ಶ.೧೫೧೫

೭೮. ಅದೇ, ಶಾ.ಸಂ.೧೩೪, ತಿರುಪತಿ, ಕ್ರಿ.ಶ.೧೭೪೪

೭೯. ಅದೇ, ಶಾ.ಸಂ.೨೪೪, ಗೋವಿಂದಪುರ, ಕ್ರಿ.ಶ.೧೧೩೬-೩೭

೮೦. ಅದೇ, ಶಾ.ಸಂ. ೨೪೧, ಕರುಗುಂದ, ಕ್ರಿ.ಶ.೧೧೫೮

೮೧. ಅದೇ, ಶಾ.ಸಂ.೩೬, ಅರಸೀಕೆರೆ, ಕ್ರಿ.ಶ.೧೧೯೦

೮೨. ಅದೇ, ಶಾ.ಸಂ.೮೨, ೮೮ ಕಣಿಕಟ್ಟೆ, ಕ್ರಿ.ಶ.೧೧೮೯

೮೩, ಅದೇ, ಶಾ.ಸಂ.೮೪, ಕಣಿಕಟ್ಟೆ, ಕ್ರಿ.ಶ.ಸು.೧೧೪೩

೮೪, ಅದೇ, ಶಾ.ಸಂ.೧೬೧, ತಳಲೂರು, ಕ್ರಿ.ಶ.೧೧೯೧

೮೫. ಎ.ಕ.೧೨ (ಪರಿ) ತರೀಕೆರೆ, ಶಾ.ಸಂ.೯, ಅಮೃತಾಪುರ, ಕ್ರಿ.ಶ.೧೨೦೫

೮೬. ಅದೇ, ಶಾ.ಸಂ.೩೮, ಅರಸೀಕೆರೆ, ಕ್ರಿ.ಶ.೧೧೯೦

೮೭. ಅದೇ, ಶಾ.ಸಂ.೧೫೧, ಕ್ರಿ.ಶ.೧೧೭೩, ೧೫೨, ಕ್ರಿ.ಶ.೧೧೭೫, ೮೮, ಕಣಿಕಟ್ಟೆ, ಕ್ರಿ.ಶ.೧೧೮೯

೮೮. ಎ.ಕ.೧೨ (ರೈಸ್) ಶಾ.ಸಂ.೯, ಚಿಕ್ಕನಾಯಕನಹಳ್ಳಿ, ಕ್ರಿ.ಶ.೧೧೭೩

೮೯. ಎ.ಕ.೭ (ಪರಿ) ಶಾ.ಸಂ.೬೧, ನೆಲಮಂಗಲ, ಕ್ರಿ.ಶ.೧೧೩೭

೯೦. ಅದೇ, ಶಾ.ಸಂ.೮೮, ಕಣಿಕಟ್ಟೆ, ಕ್ರಿ.ಶ.೧೧೮೯

೯೧. ಜೆ.ಕ.ಯು. ಎಚ್.ಸಂ.೧೦, ಪು.೧೬೩

೯೨. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೯೬, ಜೆ.ಸಿ.ಪುರ, ಕ್ರಿ.ಶ.೧೧೭೭

೯೩, ಅದೇ, ಶಾ.ಸಂ.೧೫೧, ಕೆಲ್ಲಂಗೆರೆ, ಕ್ರಿ.ಶ.೧೧೭೩

೯೪. ಅದೇ, ಶಾ.ಸಂ.೬, ಅರಸೀಕೆರೆ, ಕ್ರಿ.ಶ.೧೧೮೩

೯೫. ಎ.ಕ.೯ (ಪರಿ), ಶಾ.ಸಂ.೧೭೧, ಬೇಲೂರು

೯೬. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೧೨೯, ೧೨೮, ೧೬೮, ಅರಸೀಕೆರೆ, ಪರಿಸರ, ಕ್ರಿ.ಶ.೧೧೫೦ ರಿಂದ ೧೨೦೦

೯೭. ಅದೇ, ಶಾ.ಸಂ.೯೬, ಅರಸೀಕೆರೆ, ಕ್ರಿ.ಶ.೧೧೭೭

೯೮. ಅದೇ, ಶಾ.ಸಂ.೮೮, ಕಣಿಕಟ್ಟೆ, ಕ್ರಿ.ಶ.೧೧೮೯

೯೯. ಅದೇ, ಶಾ.ಸಂ.೯೬, ಜೆ.ಸಿ.ಪುರ, ಕ್ರಿ.ಶ.೧೧೭೭

೧೦೦. ಅದೇ

೧೦೧. ಅದೇ, ಶಾ.ಸಂ.೧೧೩, ಕಿತ್ತನಕೆರೆ, ಕ್ರಿ.ಶ.೧೧೬೪

೧೦೨. ಅದೇ, ಶಾ.ಸಂ.೮೭, ಕಣಕಟ್ಟೆ, ಕ್ರಿ.ಶ.೧೨೨೭

೧೦೩. ಅದೇ, ಶಾ.ಸಂ.೬, ಅರಸೀಕೆರೆ, ಕ್ರಿ.ಶ.೧೧೮೩

೧೦೪. ಎ.ಕ.೧೨ (ಪರಿ) ಕಡೂರು ಶಾ.ಸಂ.೬೪, ಕೆರೆಸಂತೆ, ಕ್ರಿ.ಶ.೧೨೨೩

೧೦೫. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೨೩, ಅರಸೀಕೆರೆ, ಕ್ರಿ.ಶ.೧೧೭೩

೧೦೬. ಅದೇ ಶಾ.ಸಂ.೩೧೪, ಅರಕೆರೆ, ಕ್ರಿ.ಶ.೧೨೨೩

೧೦೭. ಎ.ಕ.೧೨ (ಪರಿ), ಕಡೂರು ಶಾ.ಸಂ.೬೭, ಕೆರೆಸಂತೆ, ಕ್ರಿ.ಶ.೧೧೪೧

೧೦೮. ಎ.ಕ.೧೦ (ಪರಿ), ಅ.ಕೆ.ಶಾ.ಸಂ. ೩೧೪, ಅರಕೆರೆ, ಕ್ರಿ.ಶ.೧೨೩೩

೧೦೯. ಅದೇ, ಶಾ.ಸಂ.೫೫, ಬಾಣಾವರ, ಕ್ರಿ.ಶ.೧೧೮೭

೧೧೦. ಅದೇ, ಶಾ.ಸಂ.೪೪, ಅರಸೀಕೆರೆ, ಕ್ರಿ.ಶ.೧೧೮೯

೧೧೧. ಅದೇ, ಶಾ.ಸಂ. ೧೩೯, ಬೊಮ್ಮೇನಹಳ್ಳಿ, ಕ್ರಿ.ಶ.೧೧೯೪

೧೧೨. ಅದೇ, ಶಾ.ಸಂ.೨೩೨, ಹಾರನಹಳ್ಳಿ, ಕ್ರಿ.ಶ.೧೨೩೪

೧೧೩. ಮೇವುಂಡಿ ಮಲ್ಲಾರಿ, ಕನ್ನಡನಾಡಿನ ಶಾಸನ ಕವಿಗಳು, ಪುಟ.೨೪೪

೧೧೪. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೧೮, ಅರಸೀಕೆರೆ, ಕ್ರಿ.ಶ.೧೨೨೯

೧೧೫. ಅದೇ, ಶಾ.ಸಂ.೨೪೧, ಕರುಗುಂದ, ಕ್ರಿ.ಶ.೧೧೫೮

೧೧೬. ಅದೇ, ಶಾ.ಸಂ.೨೪೦, ಹಾರನಹಳ್ಳಿ, ಕ್ರಿ.ಶ.೧೫೩೫

೧೧೭. ಅದೇ, ಶಾ.ಸಂ.೧೬೨, ತಳಲೂರು, ಕ್ರಿ.ಶ.೧೧೭೩-೧೨೨೦

೧೧೮. ಅದೇ, ಶಾ.ಸಂ.೨೦೩, ಗಂಡಸಿ, ಕ್ರಿ.ಶ.೮೩೭-೮೪೩

೧೧೯. ಅದೇ, ಶಾ.ಸಂ.೨೪೧, ಕರುಗುಂದ, ಕ್ರಿ.ಶ.೧೧೫೮

೧೨೦. ಸ.ಕ.ಸಾ.ಚ.ಸಂಪುಟ ೨, ಬೆಂ.ವಿ.ವಿ., ಪು.೩೧೮

೧೨೧. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೨೪೧, ಕರುಗುಂದ, ಕ್ರಿ.ಶ.೧೧೫೮

೧೨೨. ಎ.ಕ.೨, ಶ್ರವಣಬೆಳಗೊಳ, ಶಾ.ಸಂ.೫೭೨, ಕ್ರಿ.ಶ.೧೧೫೦

೧೨೩. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೨೬೮, ಬಂದೂರು, ಕ್ರಿ.ಶ.೧೧೬೮

೧೨೪. ಅದೇ

೧೨೫. ಎ.ಕ.೮ (ಪರಿ) ಹಾಸನ, ಶಾ.ಸಂ.೧೫, ಮುಗಳೂರು, ಕ್ರಿ.ಶ.೧೧೭೭

೧೨೬. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೨೩, ಅರಸೀಕೆರೆ, ಕ್ರಿ.ಶ.೧೧೭೩

೧೨೭. ಅದೇ, ಶಾ.ಸಂ.೧೬೧, ತಳಲೂರು, ಕ್ರಿ.ಶ.೧೧೯೧

೧೨೮. ಅದೇ, ಚ.ಪ.ಶಾ.ಸಂ.೧, ಚನ್ನರಾಯಪಟ್ಟಣ, ಕ್ರಿ.ಶ.೧೧೮೬

೧೨೯. ಅದೇ, ಅ.ಕೆ.ಶಾ.ಸಂ.೧೬೩, ತಳಲೂರು, ಕ್ರಿ.ಶ.ಸು.೧೨೦೦

೧೩೦. ಅದೇ, ಶಾ.ಸಂ.೧೬೨, ೧೬೩, ತಳಲೂರು, ಕ್ರಿ.ಶ.ಸು.೧೨೦೦

೧೩೧. ಅದೇ, ಶಾ.ಸಂ.೨೩೨, ಹಾರನಹಳ್ಳಿ, ಕ್ರಿ.ಶ.೧೨೩೪

೧೩೨. ಅದೇ, ಚ.ಪ.ಶಾ.ಸಂ.೭೦, ಕೆಂಬಾಳು, ಕ್ರಿ.ಶ.೧೨೩೫

೧೩೩. ಅದೇ, ಶಾ.ಸಂ.೨೩೨, ಹಾರನಹಳ್ಳಿ, ಕ್ರಿ.ಶ.೧೨೩೪

೧೩೪. ಅದೇ, ಶಾ.ಸಂ.೨೩೫, ಹಾರನಹಳ್ಳಿ, ಕ್ರಿ.ಶ.೧೧೩೮

೧೩೫. ಅದೇ, ಶಾ.ಸಂ.೧೭೪, ಕೋಡಿಹಳ್ಳಿ, ಕ್ರಿ.ಶ.೧೧೫೮

೧೩೬. ಅದೇ, ಶಾ.ಸಂ.೧೯೦, ಬಾಗವಾಳು, ಕ್ರಿ.ಶ.೧೯೮-೯೯

೧೩೭. ಅದೇ, ಶಾ.ಸಂ.೪೪, ಅರಸೀಕೆರೆ, ಕ್ರಿ.ಶ.೧೧೪೯

೧೩೮. ಅದೇ, ಶಾ.ಸಂ.೨೪೯, ಉಂಡಿಗನಾಳು, ಕ್ರಿ.ಶ.೧೨೩೮

೧೩೯. ಅದೇ, ಶಾ.ಸಂ.೧೬೧, ತಳಲೂರು, ಕ್ರಿ.ಶ.೧೯೧,

೧೪೦. ಡಾ. ಡಿ.ವಿ.ಪರಮಶಿವಮೂರ್ತಿ, ಕನ್ನಡ ಶಾಸನಶಿಲ್ಪ, ಪು.೧೧೦

೧೪೧. ಎ.ಕ.೧೦ (ಪರಿ), ಅ.ಕೆ.ಶಾ.ಸಂ.೩೧೧, ಕೋಳಿಗುಂದ, ಕ್ರಿ.ಶ.೧೦೮೩

೧೪೨. ಎಸ್.ಶೆಟ್ಟರ್, ಅರಸೀಕೆರೆ ಅಂಡರ್ ಹೊಯ್ಸಳಾಸ್, ಜಿ.ಕೆ.ಯು, ಸಂ.೭, ಪು.೧೫೨-೧೬೮

೮

# ಸಮಾರೋಪ

ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಎರಡನೇ ಸಹಸ್ರಮಾನವು ಅನೇಕ ಕಾರಣಗಳಿಂದ ವಿಶಿಷ್ಟವಾದುದು. ಕ್ರಿ.ಶ.೧೧-೧೨ನೇ ಶತಮಾನದ ಹೊತ್ತಿಗೆ ರಾಜಕೀಯ, ಆರ್ಥಿಕ, ಧಾರ್ಮಿಕ ಕ್ಷೇತ್ರದಲ್ಲಿ ತೀವ್ರವಾದ ಬದಲಾವಣೆಗೆ ಕರ್ನಾಟಕವು ತೆರೆದುಕೊಂಡಿತು. ಈ ಬದಲಾವಣೆಯ ಮುಂಗಾಳಿ ಕ್ರಿ.ಶ.೮-೯ನೇ ಶತಮಾನದಲ್ಲೇ ಮಂದಗತಿಯಲ್ಲಿ ಕಾಣಿಸಿಕೊಂಡಿದ್ದು, ೧೧-೧೨ನೇ ಶತಮಾನದಲ್ಲಿ ವ್ಯಾಪಕವಾಗಿ ನಡೆದ ಕೃಷಿ ವಿಸ್ತರಣೆ, ನಂತರದಲ್ಲಾದ ಉತ್ಪಾದನಾ ಹೆಚ್ಚಳ, ವ್ಯಾಪಾರವಾಣಿಜ್ಯಕ್ಕೆ ಒದಗಿದ ಪ್ರೋತ್ಸಾಹ, ೧೨ನೇ ಶತಮಾನದ ಸಮಾಜೋ ಧಾರ್ಮಿಕ ಕ್ರಾಂತಿ, ಆಳರಸರ ಮಹತ್ವಾಕಾಂಕ್ಷೆ ಇವುಗಳೆಲ್ಲವೂ ಒಂದಕ್ಕೊಂದು ಬೆಸೆದುಕೊಂಡು ವಿಶಿಷ್ಟವಾದ ಸಾಮಾಜಿಕ ಸಂಚಲನವು ಕಾಣಿಸಿಕೊಳ್ಳತೊಡಗಿತು. ಈ ಬದಲಾವಣೆಗೆ ಸಮಾಜವನ್ನು ಒಗ್ಗಿಸಲು ಹೊಸ ರೀತಿಯ ನಿಯಂತ್ರಣ ವ್ಯವಸ್ಥೆ, ಕಾನೂನು ಕಟ್ಟಳೆ, ರಕ್ಷಣಾ ವ್ಯವಸ್ಥೆ, ಹೊಸ ಜೀವನ ಮೌಲ್ಯಗಳನ್ನು ಬಿತ್ತುವ ಶಾಸನ, ಸಾಹಿತ್ಯ ಕೃತಿಗಳು ನೀತಿ ಸಂಹಿತೆ, ಶಾಸ್ತ್ರ ಗ್ರಂಥಗಳು ಹುಟ್ಟಿಕೊಳ್ಳತೊಡಗಿದವು. ವಿವಿಧ ಜ್ಞಾನ ಶಾಖೆಗಳು, ವಿವಿಧ ಕಲೆ, ವೃತ್ತಿಗಳು ಪ್ರೋತ್ಸಾಹವನ್ನು ಪಡೆದು ಬೆಳೆಯತೊಡಗಿದವು. ಸಂಬಂಧಿತ ಗ್ರಂಥಗಳು, ಕೋಶಗಳು ರಚನೆಗೊಂಡವು ವಾಣಿಜ್ಯೋದ್ಯಮ ತ್ವರಿತಗತಿಯಲ್ಲಿ ಬೆಳೆಯತೊಡಗಿತು. ಹೊಸ ವಾಣಿಜ್ಯ ಪಟ್ಟಣಗಳು ತಲೆಯೆತ್ತತೊಡಗಿದವು. ಅದಕ್ಕಾಗಿ ವಾಣಿಜ್ಯ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ವಿಧಿ-ನಿಷೇಧಗಳು ನಿಯಮ ನಿಂಬಂಧನೆಗಳು ರೂಪಿತವಾಗತೊಡಗಿದವು. ಸಂಘಸಂಸ್ಥೆಗಳು ಹುಟ್ಟಿಕೊಂಡು ಸಹಕಾರಿ ತತ್ವದ ಮೇಲೆ ಕ್ರಿಯಾಶೀಲವಾಗ ತೊಡಗಿದವು. ಸಾಹಸಿಗರಾದವರಿಗೆ ಹೊಸ ಅವಕಾಶದ ಬಾಗಿಲುಗಳನ್ನು ತೆರೆದವು.

ಮೂರನೇ ಸಹಸ್ರ ಮಾನದ ಹೊಸ್ತಿಲಲ್ಲಿ ನಿಂತಿರುವ ನಮ್ಮ ಸಧ್ಯದ ಸಮಾಜದಲ್ಲಿ ಸುಮಾರು ಸಾವಿರ ವರ್ಷಗಳ ಹಿಂದೆ ಕಂಡುಬಂದಿದ್ದ ಸಾಮಾಜಿಕ ಪಲ್ಲಟವು ಮತ್ತೊಮ್ಮೆ ಮರುಕಳಿಸಿದೆ. ಹಿಂದೆಂದಿಗಿಂತ ತೀವ್ರವಾದ ಮತ್ತೊಂದು ಸಂಚಲನಕ್ಕೆ ಇಂದು ಸಮಾಜ ಸಿಕ್ಕಿದೆ. ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣಗಳು ಹೊಸ ಅವಕಾಶದ ಬಾಗಿಲನ್ನು ತೆರೆಯುತ್ತಿರುವಷ್ಟೇ ಸತ್ಯವಾಗಿ ಹೊಸ ಸವಾಲುಗಳನ್ನು, ವಿಭಿನ್ನ ಸಮಸ್ಯೆ ಸಂದಿಗ್ಧಗಳನ್ನು ತಂದೊಡ್ಡಿವೆ. ಸದ್ಯದ ಈ ಸವಾಲುಗಳನ್ನು ಅರ್ಥೈಸಿಕೊಂಡು ಅವುಗಳನ್ನು ಎದುರಿಸಲು ಬೇಕಾದ ಜೀವಶಕ್ತಿಯನ್ನು, ಸಮಾಜಮುಖೀ

ಚಿಂತನೆಗಳನ್ನು ರೂಢಿಸಿಕೊಂಡು ಸಜ್ಜಾಗಬೇಕಾಗಿದೆ. ಆ ಕಾರಣಕ್ಕಾಗಿ ಈ ಸಂದರ್ಭದಲ್ಲಿ ನಮ್ಮ ಪ್ರಾಚೀನ ಸಮಾಜವು ಕಾಲಕಾಲಕ್ಕೆ ಒದಗಿಬಂದ ಆರ್ಥಿಕ, ರಾಜಕೀಯ, ಧಾರ್ಮಿಕ ಪಲ್ಲಟಗಳಿಗೆ ತೆರೆದುಕೊಂಡ ಬಗೆಯನ್ನು, ಅವುಗಳು ಉಂಟುಮಾಡಿದ ಒತ್ತಡಗಳನ್ನು ಜೀರ್ಣಿಸಿಕೊಂಡು ಬದುಕಿಗೆ ಒತ್ತಾಸೆಯಾಗಿ ನಿಂತ ಒಳಸುಳಿಗಳನ್ನು ಕಂಡುಕೊಳ್ಳಬೇಕಾಗಿದೆ.

ಸಾಮಾಜಿಕ ಸ್ಥಿತಿ-ಸಂಚಲನಗಳನ್ನು ಅರಿಯುವುದೇ ಅಧ್ಯಯನದ ಮೂಲ ಉದ್ದೇಶವಾಗಿದ್ದು ಇಂತಹ ತೀವ್ರ ರಾಜಕೀಯ ಆರ್ಥಿಕ ಧಾರ್ಮಿಕ ಬದಲಾವಣೆಗೆ ತೆರೆದುಕೊಂಡು ಅದ್ಭುತ ಪ್ರಗತಿಯನ್ನು ಸಾಧಿಸಿದ ಹೊಯ್ಸಳರ ಪ್ರಾಂತೀಯ ರಾಜಧಾನಿಯಾದ, ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕು ಕೇಂದ್ರ ಹಾಗೂ ಅದರ ಆಡಳಿತ ವಿಭಾಗಗಳನ್ನು ಅಧ್ಯಯನಕ್ಕೆ ಆರಿಸಿಕೊಳ್ಳಲಾಯಿತು. ರಾಜಧಾನಿ ಪಟ್ಟಣವಾಗಿ, ಪ್ರಮುಖ ವಾಣಿಜ್ಯ ಕೇಂದ್ರವಾಗಿ, ಭಂಡಾರವಾಡವಾಗಿ ಮೆರೆದ ಅರಸೀಕೆರೆ ಹಾಗೂ ಆ ಪ್ರದೇಶದ ಇತರ ಪ್ರಮುಖ ಗ್ರಾಮ ಪಟ್ಟಣಗಳ ಸಾಂಸ್ಕೃತಿಕ, ಚಾರಿತ್ರಿಕ ಮಹತ್ವ ಹಾಗೂ ಈ ಪ್ರದೇಶದ ಶಾಸನ ಸಂಪತ್ತು ಒಳಗೊಂಡಿದ್ದ ಅನೇಕ ಮಹತ್ವದ ವಿಚಾರಗಳು ಬೆಳಕಿಗೆ ಬರಬೇಕೆಂಬ ಉದ್ದಿಶ್ಯದಿಂದ ಅರಸೀಕೆರೆ ತಾಲ್ಲೂಕಿನ ಶಾಸನಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳಿಗೆ ಪ್ರಾಮುಖ್ಯತೆ ನೀಡಿ ಸೂಕ್ಷ್ಮಸ್ತರದ ಅಧ್ಯಯನ ಕೈಗೊಂಡುದರ ಫಲ ಈ ಸಂಪ್ರಬಂಧ.

ಪ್ರಸ್ತುತ ಅಧ್ಯಯನವನ್ನು ಒಟ್ಟು ೮ ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿದ್ದು, ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ ವ್ಯಾಪ್ತಿಯನ್ನು, ಆಕರಗಳನ್ನು ಇಲ್ಲಿಯವರೆಗೆ ಈ ಪ್ರದೇಶಕ್ಕೆ ಸಂಬಂಧಿಸಿದಂತೆ ನಡೆದಿರುವ ಅಧ್ಯಯನಗಳನ್ನು ಕುರಿತಿದೆ. ಎರಡನೆಯ ಅಧ್ಯಾಯದಲ್ಲಿ ಪ್ರಸ್ತುತ ಪ್ರದೇಶದ ಪರಿಚಯ, ಇಲ್ಲಿನ ಪ್ರಾಗೈತಿಹಾಸಿಕ ನೆಲೆಗಳು, ಇತಿಹಾಸ ಆರಂಭಕಾಲ ಮತ್ತು ಈ ಪ್ರದೇಶವನ್ನಾಳಿದ ವಿವಿಧ ರಾಜಮನೆತನಗಳು ಅರಸರು ರಾಣಿಯರು, ಸ್ಥಳೀಯ ಸಾಮಂತನಾಯಕರು ಅಧಿಕಾರಿಗಳ ಬಗೆಗೆ ಕಿರುಪರಿಚಯ ನೀಡಲಾಗಿದೆ.

ಇಲ್ಲಿಯ ಶಾಸನಗಳ ಐತಿಹಾಸಿಕ ಪ್ರಾಮುಖ್ಯತೆಯನ್ನು ಗಮನಿಸಿದಾಗ ಅರಸೀಕೆರೆ ಪ್ರಾಂತ್ಯವು ಹೊಯ್ಸಳರ ಉದಯದೊಂದಿಗೆ ಪ್ರಾಮುಖ್ಯತೆಯನ್ನು ಪಡೆದುಕೊಂಡಿತು. ಇಮ್ಮಡಿ ವೀರ ಬಲ್ಲಾಳನ ಕಾಲದಲ್ಲಿ ಪ್ರಮುಖ ವ್ಯಾಪಾರಿ ಕೇಂದ್ರವಾಗಿ, ಭಂಡಾರವಾಡವಾಗಿ ಅರಸೀಕೆರೆ ಪಟ್ಟಣವು ಪ್ರಾಂತೀಯ ರಾಜಧಾನಿಯಾಗಿ ಅಭಿವೃದ್ಧಿಗೊಂಡಿತು. ಮಲೆನಾಡು ಬಯಲು ನಾಡುಗಳನ್ನು ಬೆಸೆಯುವ ಆಕಟ್ಟಿನ ಪ್ರದೇಶದಲ್ಲಿರುವ ಈ ತಾಲ್ಲೂಕಿನ ಜಾವಗಲ್ಲು, ಅರಕೆರೆ, ಬಾಣಾವರ, ಕಣಕಟ್ಟೆ, ಬೆಂಡೆಕೆರೆ, ಹಾರನಹಳ್ಳಿ, ಅರಸೀಕೆರೆ ಮುಂತಾದ ಗ್ರಾಮಗಳು ಶ್ರೀಮಂತ ವರ್ತಕರು, ಆಡಳಿತಗಾರರು, ಕಲಾವಿದರು, ವಿದ್ವಾಂಸರನ್ನು ಆಕರ್ಷಿಸತೊಡಗಿದ್ದರಿಂದ ಅವು ಪ್ರಮುಖ ಆಡಳಿತ ಕೇಂದ್ರಗಳಾಗಿ ವಾಣಿಜ್ಯ ಕೇಂದ್ರಗಳಾಗಿ ಸಾಂಸ್ಕೃತಿಕ ಕೇಂದ್ರಗಳಾಗಿ ಬೆಳೆದು ಸಂಪದ್ಭರಿತವಾದವು.

ಈ ಪ್ರದೇಶದ ಶಾಸನಗಳಲ್ಲಿ ಹೊಯ್ಸಳರ ಶಾಸನಗಳು ಹೆಚ್ಚಿದ್ದು ಅವುಗಳಲ್ಲಿ ಇಮ್ಮಡಿ ವೀರ ಬಲ್ಲಾಳನ ಶಾಸನಗಳೇ ಅಧಿಕವಾಗಿವೆ. ಅಲ್ಲದೆ ಅವನು ಯುವರಾಜನಾಗಿದ್ದಾನಿಂದ ಕ್ರಿ.ಶ.೧೧೬೫-೬೮ರ ಹೊತ್ತಿಗಾಗಲೇ ಈ ಪ್ರದೇಶದ ಆಳ್ವಿಕೆಯನ್ನು ವಹಿಸಿಕೊಂಡಿದ್ದು, ಕ್ರಿ.ಶ.೧೨೨೦ರವರೆಗೂ ಇಲ್ಲಿನ ರಾಜಕೀಯ ಸಾಂಸ್ಕೃತಿಕ ಕ್ಷೇತ್ರದಲ್ಲಿ ಚಟುವಟಿಕೆಯಿಂದಿದ್ದುದೇ ಇವನ ಶಾಸನಗಳು ಇತರ ತಾಲ್ಲೂಕುಗಳಿಗಿಂತ ಇಲ್ಲಿ ಹೆಚ್ಚು ಕಾಣಸಿಕೊಳ್ಳಲು ಕಾರಣ. ಈ ಪ್ರದೇಶದ ಮಗರೆನಾಡು, ನೀರ್ಗುಂದ ನಾಡುಗಳಲ್ಲಿ ಇವನು ಪ್ರಬಲವಾಗಿ ಅಲ್ಲಿನ ಸಾಮಂತರು, ನಿಷ್ಠಾವಂತ ದಂಡನಾಯಕರು, ಮಂತ್ರಿಗಳ ಹಾಗೂ ಇತರ ಸಾಮಂತರ ಬೆಂಬಲ ಪಡೆದು ಅಸಮರ್ಥನಾದ ತಂದೆಯ ವಿರುದ್ಧ ದಂಗೆ ಎದ್ದು ಪಟ್ಟಾಭಿಷಿಕ್ತನಾದಾಗ ಅರಸೀಕೆರೆ, ಬೆಂಡೆಕೆರೆಗೆ ಆ ಜಯದ ಕುರುಹಾಗಿ ಜಯಗೊಂಡ ಬಲ್ಲಾಳಪುರವೆಂದು ನಾಮಕರಣ ಮಾಡಿರುವುದು ಕಂಡುಬರುತ್ತದೆ. ಯುವ ರಾಜನಾಗಿದ್ದಾಗಿನಿಂದ ಚಕ್ರವರ್ತಿಯಾಗುವವರೆಗೆ (ಹಾಗೂ ನಂತರದಲ್ಲಿ) ಅವನಿಗೆ ಒತ್ತಾಸೆಯಾಗಿ ನಿಂತು ಆ ಗೆಲುವನ್ನು ಸಂಭ್ರಮಿಸಿರುವುದೂ ಈ ಪ್ರಾಂತ್ಯದ ಜನತೆ ಎಂಬುದಕ್ಕೆ ಪಟ್ಟ ಬಂಧೋತ್ಸವದಂದಿನ ವಿಶೇಷ ಪೂಜಾ ಕೈಂಕರ್ಯಗಳು ದೇವಾಲಯ ನಿರ್ಮಾಣ ದೈವ ಪ್ರತಿಷ್ಠೆಗಳು ದಾನದತ್ತಿ ನೀಡಿಕೆಗಳು ಇಲ್ಲಿ ಹೆಚ್ಚು ನಡೆದಿರುವುದೂ ಸಾಕ್ಷಿಯಾಗಿದೆ. ಈ ಪ್ರಾಂತ್ಯದಲ್ಲಿ ಅವನ ಮೂವರು ರಾಣಿಯರು ನೆಲೆಸಿದ್ದು ಆಡಳಿತದಲ್ಲಿ ಭಾಗವಹಿಸುತ್ತಿದ್ದರು. ಅರಸೀಕೆರೆಯು ಅವನ ನೆಚ್ಚಿನ ಪಿರಿಯರಸಿ ಉಮಾದೇವಿಯ ತವರೂರಾಗಿತ್ತು.

ನೀರ್ಗುಂದ ನಾಡಿನ ಆಡಳಿತ, ಭಾಗವು ಕ್ರಿ.ಶ.೫-೬ನೇ ಶತಮಾನದಿಂದಲೇ ಗಂಗವಾಡಿ ೯೬೦೦೦ದ ಪ್ರಮುಖ ಆಡಳಿತ ಭಾಗವಾಗಿ ಕಾಣಿಸಿಕೊಂಡಿದ್ದು, ಹೊಯ್ಸಳ ರಾಜಧಾನಿಯ ಪೂರ್ವದ ಗಡಿಯಾಗಿ ಅವರ ಆಡಳಿತದಲ್ಲಿ ಪ್ರಾಮುಖ್ಯತೆ ಪಡೆಯಿತು. ಇಲ್ಲಿ ಹೆಚ್ಚು ವ್ಯಾಪಾರಿ ಪಟ್ಟಣಗಳು ಇದ್ದುದರಿಂದ ವಾಣಿಜ್ಯ ವಹಿವಾಟು ವಿಶೇಷವಾಗಿದ್ದು, ತೆರಿಗೆ ಸುಂಕಗಳ ಮೂಲಕ ಸಂಪತ್ತಿನ ಕ್ರೋಢೀಕರಣಕ್ಕೆ ಅವಕಾಶ ಇದ್ದುದರಿಂದ ಹೊಯ್ಸಳ ಅರಸರು ಈ ಭಾಗದ ಆಡಳಿತ ಅಭಿವೃದ್ಧಿಗೆ ಹೆಚ್ಚು ಗಮನ ನೀಡಿದರು. ಈ ಪ್ರದೇಶದ ನಿಷ್ಠಾವಂತ ಸಾಮಂತರು, ಅಧಿಕಾರಿಗಳೊಂದಿಗೆ ವೈವಾಹಿಕ ಸಂಬಂಧ ಬೆಳೆಸಿ ರಾಣಿಯರನ್ನು, ತಮ್ಮ ಯುವ ರಾಜರನ್ನು ಇಲ್ಲಿನ ಆಡಳಿತಕ್ಕೆ ನೇಮಿಸುತ್ತಿದ್ದರು. ಹೊಯ್ಸಳ ವಿನಯಾದಿತ್ಯನ ಕಾಲ ದಿಂದಲೂ (ಕ್ರಿ.ಶ.೧೦೬೮) ನೀರ್ಗುಂದ ನಾಡಿನ ಕೆಂಬಾಳು ಹಾಗೂ ಬಾಗೀವಾಳುಗಳನ್ನು 'ನೀರ್ಗುಂದ ನಾಡ ಕುಮಾರವೃತ್ತಿಗಳೆಂದು ಕರೆಯಲಾಗಿದೆ. ಈ ಪ್ರದೇಶದಲ್ಲಿ ವಿಷ್ಣುವರ್ಧನ (ಕ್ರಿ.ಶ.೧೧೦೧) ಯುವ ರಾಜ ಉದಯಾದಿತ್ಯ (ಕ್ರಿ.ಶ.೧೧೨೩) ಒಂದನೇ ನರಸಿಂಹ (೧೧೪೯) ಅವನ ಮಕ್ಕಳಾದ ಕುಮಾರ ಎರೆಯಂಗದೇವ (೧೧೬೮) ಹಾಗೂ ಕುಮಾರ ಇಮ್ಮಡಿ ವೀರ ಬಲ್ಲಾಳದೇವ (೧೧೬೫) ಬಲ್ಲಾಳನ ಮಗ ಇಮ್ಮಡಿ ವೀರನರಸಿಂಹ (ಕ್ರಿ.ಶ.೧೨೦೭) ಇವರುಗಳು ಯುವರಾಜರಾಗಿದ್ದಾಗಲೇ ಆಳ್ವಿಕೆ ಮಾಡುತ್ತಿದ್ದರು. ಈ ಪ್ರದೇಶದಲ್ಲಿ ದೊರೆತಿರುವ ಅವರ ಆರಂಭದ ಶಾಸನಗಳನ್ನು ಗಮನಿಸಿ ಹೊಯ್ಸಳ ಯುಜರಾಜರ

ಆಡಳಿತ ತರಬೇತಿಯ ಕೇಂದ್ರ ನಮ್ಮ ಅಧ್ಯಯನದ ಪ್ರದೇಶವಾದ ಆರಸೀಕೆರೆ ಪ್ರಾಂತ್ಯವೇ ಆಗಿತ್ತೆಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ನೀರ್ಗುಂದ ನಾಡಿನ ಅಧ್ಯಯನವನ್ನು ಪ್ರತ್ಯೇಕವಾಗಿ ಕೈಗೊಂಡಲ್ಲಿ ಈ ಪ್ರಾಂತ್ಯದ ಪ್ರಾಮುಖ್ಯತೆ ಮತ್ತಷ್ಟು ಸ್ಫುಟಗೊಳ್ಳುವ ಸಾಧ್ಯತೆಯಿದೆ.

ಪ್ರಸ್ತುತ ಅಧ್ಯಯನ ಪ್ರದೇಶವು ಕರ್ನಾಟಕದ ಮಲೆನಾಡು ಮತ್ತು ಬಯಲುನಾಡಿನ ಕೂಡು ಪ್ರಾಂತ್ಯವಾಗಿದ್ದು, ಮಲೆನಾಡಿನ ವಾಣಿಜ್ಯ ಪಥಗಳೊಂದಿಗೆ ಒಳನಾಡಿನ ಹೆದ್ದಾರಿಗಳನ್ನು ಬೆಸೆಯುತ್ತಿತ್ತು. ಈ ಪ್ರದೇಶವು ಬೆಟ್ಟ, ಕಾಡು, ಬಯಲು ಹಳ್ಳಗಳಿಂದ ಕೂಡಿ ಕೆರೆ ನೀರಾವರಿಗೆ ಯೋಗ್ಯವಾಗಿತ್ತು. ಅಲ್ಲದೆ ಫಲವತ್ತಾದ ಕನ್ನೆ ನೆಲವನ್ನು ಹೊಂದಿದ್ದು ಕೃಷಿ ವಿಸ್ತರಣೆಗೆ, ಹೊಸ ವಸತಿ ನೆಲೆಗಳಿಗೆ ಪ್ರಶಸ್ತವಾಗಿತ್ತು. ಮಹಾತ್ವಾಕಾಂಕ್ಷಿಗಳಾದ ಹೊಯ್ಸಳರು ಗಂಗವಾಡಿ ತೊಂಬತ್ತಾರು ಸಾವಿರವನ್ನು ಗೆದ್ದುಕೊಂಡು ರಾಜ್ಯವಿಸ್ತರಣೆಗೆ ತೊಡಗುವ ಮೊದಲು ಚಿಕ್ಕಮಗಳೂರು ಜಿಲ್ಲೆ ಹಾಗೂ ಹಾಸನ ಜಿಲ್ಲೆಯ ಭಾಗಗಳಲ್ಲಿ ಭದ್ರವಾಗಿ ನೆಲೆಯೂರಿ ಬಲಿಷ್ಠ ಶಕ್ತಿಯಾಗಿ ಬೆಳೆಯಲು ಸಂಪತ್ತಿನ ಕ್ರೋಢೀಕರಣ ಅತಿ ಅವಶ್ಯಕವಾಗಿತ್ತು. ಅವರ ರಾಜಕೀಯ ನೆಲೆಗಳಾದ ಅಂಗಡಿ, ದೋರಸಮುದ್ರ, ಬೇಲೂರುಗಳು ಪೂರ್ವೋತ್ತರ ಪ್ರಾಂತ್ಯಗಳೊಂದಿಗೆ ಸಂಬಂಧ ಹೊಂದಲು ಐದ್ನಳ್ಳಕಾಡು, ರಾಮದೇವರಹಳ್ಳ, ಸೀಗೆಗುಡ್ಡದ ಕಾಡು, ರಂಗಾಪುರ ಕಾಡು ಪ್ರದೇಶವು ಅಡ್ಡಿಯಾಗಿತ್ತು. ಹಾಗಾಗಿ ದೋರಸಮುದ್ರಕ್ಕೆ ಕೇವಲ ೧೨ ಮೈಲು ದೂರದಲ್ಲಿರುವ ಜಾವಗಲ್ಲಿನ ಮುಖಾಂತರ ಉತ್ತರ ಹಾಗೂ ಪೂರ್ವದ ಆಡಳಿತ ವಿಭಾಗಗಳೊಂದಿಗೆ ವಿಶೇಷ ಸಂಪರ್ಕ ಪಥವನ್ನು ನಿರ್ಮಿಸಿಕೊಂಡು ಈ ಆಯಕಟ್ಟಿನ ಪ್ರದೇಶದ ಸಂಪೂರ್ಣ ಅಭಿವೃದ್ಧಿಗೆ ಗಮನನೀಡಿದರು. ಗಂಗ ನೊಳಂಬರ ಹೋರಾಟದಲ್ಲಿ ಸಿಕ್ಕಿದ್ದ ಈ ಪ್ರಾಂತ್ಯದಲ್ಲಿ ಹೊಯ್ಸಳರು ಕೈಗೊಂಡ ರಾಜಕೀಯ, ಆರ್ಥಿಕ ನೀತಿ, ಅಭಿವೃದ್ಧಿ ಕಾರ್ಯಗಳಿಗೆ ಅದ್ಭುತ ಚಾಲನೆ ನೀಡಿತೆಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಈ ಪ್ರದೇಶದ ಅಭಿವೃದ್ಧಿಯ ಮೊದಲ ಹೆಜ್ಜೆಗಳನ್ನು ಕೃಷಿ ವಿಸ್ತರಣೆ, ಭೂಮಿ ಒಡೆತನ ದಾನ ಜಲಸಂಪನ್ಮೂಲ ಅಭಿವೃದ್ಧಿಯಲ್ಲಿ ಗುರುತಿಸಿಕೊಳ್ಳಲಾಗಿದೆ. ಕೆರೆ ಕಟ್ಟೆ ಬಾವಿಗಳ ನಿರ್ಮಾಣ, ನಿರ್ವಹಣೆ ಇತ್ಯಾದಿಗಳನ್ನು ಪ್ರೋತ್ಸಾಹಿಸಲು ಅರಸರು ಕೈಗೊಂಡ ಪ್ರೋತ್ಸಾಹಕ ಆರ್ಥಿಕನೀತಿಗಳಾದ ತೆರಿಗೆ ವಿನಾಯಿತಿ ಕೊಡಗಿಗಳು, ಉಂಬಳಿಗಳು ಮುಂತಾದವು ಸ್ಥಳೀಯ ಸಾಮಂತರು, ವರ್ತಕರು, ಅಧಿಕಾರಿಗಳು ಸಿರಿವಂತರಿಗೆ ಇಂತಹ ಕಾರ್ಯಗಳಲ್ಲಿ ಬಂಡವಾಳ ಹೂಡಲು ಪ್ರೇರೇಪಣೆ ನೀಡಿದವು. ಆ ಮೂಲಕ ಕಾಡುಹಳುಗಳನ್ನು ಕಡಿದು ಸಾಗುವಳಿಗೆ ರೂಢಿಸಿರುವುದು, ಅಸಂಖ್ಯ ಕೆರೆಕಟ್ಟೆಗಳನ್ನು ನಿರ್ಮಿಸುವ ಕಾರ್ಯ, ಹೊಸ ಗ್ರಾಮಗಳನ್ನು ಕಟ್ಟುವುದು ೧೨-೧೩ನೇ ಶತಮಾನದಲ್ಲಿ ಸತತವಾಗಿ ನಡೆದು ಈ ಪ್ರದೇಶ ಸಂಪದ್ಭರಿತವಾಗಲು ಕಾರಣವಾಯಿತೆಂಬುದು ಈ ಅಧ್ಯಯನದಿಂದ ತಿಳಿದುಬಂದಿದೆ.

ಈ ರೀತಿ ಉತ್ಪನ್ನಗೊಂಡ ಸಂಪತ್ತು, ಇಲ್ಲಿನ ಭೂ ಒಡೆತನ-ಹಂಚಿಕೆಯಲ್ಲಾದ ಏರುಪೇರುಗಳು, ಅದು ಇಲ್ಲಿನ ಸಾಮಾಜಿಕ ರಚನೆಯ ಸ್ವರೂಪದಲ್ಲಿ ಉಂಟು ಮಾಡಿದ ಪಲ್ಲಟಗಳು ಯಾವುವು

ಎಂಬುದನ್ನು ಗುರುತಿಸಲಾಗಿದೆ. ಬಂಡವಾಳ ಹೂಡುವ ಸಿರಿವಂತರು, ವರ್ತಕರು, ಸಾಲ ಬಡ್ಡಿ ವ್ಯವಹಾರಿಗಳು ಅತ್ಯಂತ ಧನಿಕರೂ ಭೂ ಒಡೆಯರೂ ಆದದ್ದು, ಮೈಜೀವಿತಗಳಿಗಾಗಿ ಉಂಬಳಿ ಗ್ರಾಮಗಳನ್ನು ಕೊಡುಗೆಯಾಗಿ ಪಡೆದ ಬ್ರಾಹ್ಮಣರು ಮತ್ತು ಯೋಧರು ಭೂ ಒಡೆಯರಾದ ಕಾರಣದಿಂದ ಸೃಷ್ಟಿಯಾದ ಹೊಸ ಸಿರಿವಂತ ವರ್ಗ ಹಾಗೂ ಅವರ ಸೇವಕ ವರ್ಗಗಳ ಸಂಬಂಧಗಳನ್ನು, ಪರಿಣಾಮಗಳನ್ನು ಶಾಸನಗಳ ಸಹಾಯದಿಂದ ವಿಶ್ಲೇಷಿಸಲಾಗಿದೆ. ಭೂಮಿಯ ಕ್ರಯ, ಪರಿವರ್ತನೆ, ಸಾಲ, ಪುದಾವಳಿ ಕುರಿತ ಶಾಸನಗಳು ಹಾಗೂ ಸಾಗುವಳಿ ಗದ್ದೆ-ಬೆದ್ದಲು-ತೋಟಗಳ ಕಣ, ಮನೆ, ನಿವೇಶನಗಳ ಅಳತೆಗಳನ್ನು ಕರಾರುವಕ್ಕಾಗಿ ನೀಡಿ ವಲಯದ ಕಟ್ಟುಗಳನ್ನು ಗಡಿಕಲ್ಲುಗಳನ್ನು ನೆಡುವ ಚಟುವಟಿಕೆಗಳು ಇಲ್ಲಿ ಹೆಚ್ಚಾಗಿ ನಡೆದಿರುವುದು ಈ ಪ್ರದೇಶದ ಭೂಮಿ ಒಡೆತನ, ಕೃಷಿ ಸಂಬಂಧಿ ಚಟುವಟಿಕೆಗಳ ಮೇಲೆ ಬೆಳಕು ಬೀರಿವೆ. ಅತ್ಯಂತ ನಿಖರವಾಗಿ ಅಳತೆ ಕೋಲುಗಳನ್ನು ನಿಗದಿಪಡಿಸಿರುವುದು, ಕ್ಷೇತ್ರ ಫಲಗಳನ್ನು ಅಳತೆಯನ್ನು ಕರಾರುವಕ್ಕಾಗಿ ಅನುಮಾನಕ್ಕೆಡೆಯಿಲ್ಲದಂತೆ ತಿಳಿಸಿ ಕ್ರಯಪತ್ರ, ದಾನಪತ್ರ, ಸಾಲಪತ್ರಗಳನ್ನು ಬರೆಸಿರುವುದು ಹೊರನಾಡುಗಳಿಂದ ಬಂದು ಇಲ್ಲಿ ನೆಲಸಿದ ವಲಸಿಗರ ಶಾಸನಗಳಲ್ಲೇ ಹೆಚ್ಚಾಗಿ ಕಾಣಿಸಿಕೊಳ್ಳುವುದು ವಿಶೇಷವಾಗಿ ಗಮನಿಸಬೇಕಾದ ವಿಷಯ. ಅನ್ಯ ನೆಲದಲ್ಲಿ ವಲಸಿಗರು ತಮ್ಮ ಆಸ್ತಿಪಾಸ್ತಿಗಳ ರಕ್ಷಣೆಯ ಬಗೆಗೆ ಎಚ್ಚರವಹಿಸುವುದು ವ್ಯಾಜ್ಯಕ್ಕೆ ಅವಕಾಶವಿಲ್ಲದಂತೆ ಕರಾರುವಕ್ಕಾದ ವ್ಯವಹಾರ ವಹಿವಾಟು ನಡೆಸುವುದು ಸಹಜ ಹಾಗೂ ಅನಿವಾರ್ಯ ಕೂಡ. ಇಷ್ಟಾದರೂ ವ್ಯಾಜ್ಯಗಳಿಗೇನೂ ಕಡಿಮೆಯಿಲ್ಲ.

ಈ ಪ್ರದೇಶದಲ್ಲಿ ಯಾವುದೇ ನದಿಗಳಿಲ್ಲದಿರುವುದರಿಂದ ಕೆರೆ ನೀರಾವರಿಯ ಪ್ರಾಮುಖ್ಯತೆಯನ್ನು ಅರ್ಥಮಾಡಿಕೊಂಡ ಆಳರಸರು, ಅಧಿಕಾರಿಗಳು, ಸಿರಿವಂತರು ಮತ್ತು ವರ್ತಕರು ಅವುಗಳ ನಿರ್ಮಾಣಗಳಲ್ಲಿ ತೋರಿರುವ ಆಸಕ್ತಿ, ನಿರ್ಮಾಣದ ತಾಂತ್ರಿಕ ಪರಿಣತಿ, ಕೊಡಗಿಗಳು, ಕೆರೆಯ ಅಂಗಳ, ಏರಿ, ತೂಬು, ಕೋಡಿಗಳ ನಿರ್ವಹಣೆಗೆ ನೀಡಿರುವ ಮಹತ್ವ, ಕುಡಿಯುವ ನೀರಿನ ವ್ಯವಸ್ಥೆ, ತೋಟ ನೀರಾವರಿ ಇತ್ಯಾದಿಗಳ ಬಗೆಗೆ, ನೀರಿನ ವಿತರಣೆಗೆ ಸಂಬಂಧಿಸಿದ ಶರತ್ತುಗಳು, ವ್ಯಾಜ್ಯಗಳು ಇತ್ಯಾದಿಗಳನ್ನು ಇಲ್ಲಿನ ಶಾಸನಗಳು ಹಾಗು ಕ್ಷೇತ್ರ ಕಾರ್ಯದ ಬೆಂಬಲದಿಂದ ಅರ್ಥಮಾಡಿಕೊಳ್ಳಲಾಗಿದೆ. ಇವುಗಳ ಆರ್ಥಿಕ ಸಾಮಾಜಿಕ ಆಯಾಮಗಳನ್ನು ವಿವೇಚಿಸಲಾಗಿದೆ. ಸುಮಾರು ೧೨೫ಕ್ಕೂ ಮಿಕ್ಕ ಕೆರೆ ಕಟ್ಟೆಗಳ ಉಲ್ಲೇಖ ಇಲ್ಲಿನ ಶಾಸನಗಳಲ್ಲಿ ಕಂಡುಬಂದಿದ್ದು, ಇಂದು ಕೆಲವೇ ಕೆರೆಗಳು ಉತ್ತಮ ಸ್ಥಿತಿಯಲ್ಲಿವೆ. ಹೆಚ್ಚಿನವು ಹೂಳು ತುಂಬಿ, ಏರಿ ಒಡೆದು, ಹಾಳಾಗಿವೆ. ಅಸಂಖ್ಯವಾದ ಸೇದುವ ಬಾವಿಗಳು ಕಲ್ಯಾಣಿಗಳು ಬತ್ತಿ ಹೋಗಿ ಈ ಪ್ರದೇಶ ಇಂದು ನೀರಿನ ಕೊರತೆಯ ಸಮಸ್ಯೆಯನ್ನೆದುರಿಸುತ್ತಿದೆ. ಮಳೆ ನೀರನ್ನೇ ನಂಬಿರುವ ಇಲ್ಲಿನ ಕೃಷಿಕರ ಕಷ್ಟ ನೀಗಬೇಕಾದರೆ ಇಲ್ಲಿನ ಕೆರೆಗಳ ಪುನರುಜ್ಜೀವನಕಾರ್ಯವನ್ನು ಅಗತ್ಯವಾಗಿ ಕೈಗೊಳ್ಳಬೇಕಾಗಿದೆ. ಹಾಗಾದಾಗ ಈ ಪ್ರದೇಶ ಮತ್ತೆ ಮೊದಲಿನಂತೆ ಸಂಪದ್ಭರಿತವಾಗುವುದರಲ್ಲಿ

ಸಂದೇಹವಿಲ್ಲ. ಜಲ ಸಂಪತ್ತಿನ ಅಭಿವೃದ್ಧಿ ಮತ್ತು ನಿರ್ವಹಣೆಯಲ್ಲಿ ಪೂರ್ವಿಕರ ಶಿಸ್ತುಬದ್ಧ ಚಟುವಟಿಕೆಗಳಿಂದ ನಾವು ಪಾಠ ಕಲಿಯಬೇಕಿದೆ.

ಈ ಪ್ರದೇಶದ ಸಾಮಾಜಿಕ-ಸಾಂಸ್ಕೃತಿಕ ಸ್ಥಿತಿ ಸಂಚಲನಗಳನ್ನು ಅರ್ಥಮಾಡಿಕೊಳ್ಳಲು ಭೂ ಒಡೆತನ ಕೃಷಿ ವಿಸ್ತರಣೆ ಸಂಪತ್ತಿನ ಅಭಿವೃದ್ಧಿಯೊಂದಿಗೆ ಸಂತೆ ಪೇಟೆಗಳು, ಸೆಟ್ಟಿ ಪಟ್ಟಣಗಳು ವಾಣಿಜ್ಯ ಕೇಂದ್ರಗಳ ಬೆಳವಣಿಗೆಗೆ ಸಹಕಾರಿಯಾದ ವಾಣಿಜ್ಯೋದ್ಯಮ, ಸಾರಿಗೆ ಸಂಪರ್ಕ, ಬಂಡವಾಳ ಹೂಡಿಕೆಯಂತಹ ಅರ್ಥಸಂಬಂಧಿ ಪಲ್ಲಟಗಳು ಕೃಷಿ ಪ್ರಧಾನವಾಗಿದ್ದ ಗ್ರಾಮ ಸಮಾಜದಲ್ಲಿ ಉಂಟು ಮಾಡಿದ ಸಂಚಲನಗಳು ಹೇಗೆ ನಗರೀಕರಣಕ್ಕೆ ದಾರಿಯಾಯಿತೆಂಬುದನ್ನು, ಇಲ್ಲಿನ ಕೈಗಾರಿಕೆಗಳ ಬೆಳವಣಿಗೆ, ಪ್ರಮುಖ ಪಟ್ಟಣಗಳು ಅಗ್ರಹಾರಗಳ ಬೆಳವಣಿಗೆಗಳಿಗೆ ಕಾರಣವಾದ ಅಂಶಗಳನ್ನು ಗುರುತಿಸಿಕೊಳ್ಳಲಾಗಿದೆ. ಇಲ್ಲಿನ ಪ್ರಮುಖ ಕೃಷಿಯೇತರ ಉತ್ಪಾದನಾ ವೃತ್ತಿಗಳಾದ, ಪಶುಸಂಗೋಪನೆ, ಪಾಂಚಾಳವೃತ್ತಿ, ತೈಲ ಉದ್ದಿಮೆಗಳ ಪರಿಚಯ ಮಾಡಿಕೊಡಲಾಗಿದೆ. ಈ ಪ್ರದೇಶ ಸಾವಿರ ವರ್ಷಗಳಿಂದಲೂ ತೈಲೋದ್ಯಮಕ್ಕೆ ಪ್ರಸಿದ್ಧವಾಗಿದ್ದು ಇಂದಿಗೂ ತೆಂಗು, ಎಳ್ಳು, ಹರಳು ನೆಲಗಡಲೆಯ ಬೆಳೆ ಪ್ರಮುಖವಾಗಿದೆ ಎಂಬುದನ್ನು ಗುರುತಿಸಿಕೊಳ್ಳಲಾಗಿದೆ. ಹಾಗೂ ಈ ಪ್ರದೇಶದ ಪ್ರಮುಖ ಆಡಳಿತ ಕೇಂದ್ರಗಳು, ವಾಣಿಜ್ಯ ಕೇಂದ್ರಗಳು ಶಿಕ್ಷಣ ಹಾಗೂ ಸಾಂಸ್ಕೃತಿಕ ಧಾರ್ಮಿಕ ಕೇಂದ್ರಗಳಾವುವೆಂಬುದನ್ನು ಕಂಡುಕೊಂಡು ಪರಿಚಯಿಸಲಾಗಿದೆ. ಮತ್ತು ಇವುಗಳು ನಗರೀಕರಣ ಪ್ರಕ್ರಿಯೆಗೆ ತೆರೆದುಕೊಂಡ ಬಗೆಯನ್ನು ಚರ್ಚಿಸಲಾಗಿದೆ.

ನಗರೀಕರಣದ ಲಕ್ಷಣದಲ್ಲಿ ಜನಸಂಖ್ಯೆಯ ಹೆಚ್ಚಳ ಮುಖ್ಯವಾದುದು. ಸಂಪದ್ಭರಿತವಾಗಿದ್ದು ಎಲ್ಲ ಸವಲತ್ತುಗಳನ್ನು ಒದಗಿಸಬಲ್ಲ. ಪ್ರದೇಶಗಳಿಗೆ ಸೌಖ್ಯವನ್ನರಸಿ ಜನ ವಲಸೆ ಬರುವುದು ಸಹಜ. ಪ್ರಸ್ತುತ ಪ್ರದೇಶದ ಆಹಾರ ಸಮೃದ್ಧಿ, ಶಿಕ್ಷಣ ಸೌಲಭ್ಯ ಹಾಗೂ ಆಳರಸರು ಸಾಹಿತ್ಯ, ಕಲೆ ಪಾಂಡಿತ್ಯ, ಪರಾಕ್ರಮಗಳಿಗೆ ನೀಡುತ್ತಿದ್ದ ಪ್ರೋತ್ಸಾಹಗಳು ಮುಂತಾದ ಆರ್ಥಿಕ, ಸಾಮಾಜಿಕ, ರಾಜಕೀಯ ಕಾರಣಗಳು ಹೆಚ್ಚಿನ ಸಂಖ್ಯೆಯಲ್ಲಿ ವಲಸಿಗರನ್ನು ಈ ಪ್ರದೇಶಕ್ಕೆ ಆಕರ್ಷಿಸಿರುವುದನ್ನು ಗಮನಿಸಿ ಪ್ರಥಮ ಬಾರಿಗೆ ಶಾಸನಗಳಲ್ಲಿ ಕಂಡುಬರುವ ವಲಸೆ ಮತ್ತು ವಲಸಿಗರನ್ನು ಕುರಿತ ಚರ್ಚೆಯನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ. ಪ್ರಸ್ತುತ ಪ್ರದೇಶವು ವಲಸೆಗಳಿಗೆ ತೆರೆದುಕೊಂಡ ಬಗೆಯನ್ನು, ವಲಸೆಗೆ ಪ್ರೇರಕವಾದ ಅಂಶಗಳನ್ನು ಗುರುತಿಸಿಕೊಂಡು, ಪ್ರೇರಣೆ ಪ್ರಯೋಜನೆಯನ್ನಾಧರಿಸಿ ರಾಜಕೀಯ, ಆರ್ಥಿಕ ಸಾಮಾಜಿಕ ವಲಸೆಗಳೆಂದು ವಿಭಾಗಿಸಿ ವಲಸಿಗ ಸಾಮಂತರು ಅಧಿಕಾರಿಗಳು, ಬ್ರಾಹ್ಮಣರು ವ್ಯಾಪಾರಿಗಳು, ವೈದ್ಯರು, ರೂವಾರಿಗಳ ವಲಸೆ, ಧರ್ಮಗುರುಗಳ ವಲಸೆಗಳನ್ನು ಅಧ್ಯಯನ ಮಾಡಲಾಗಿದೆ.

ಈ ವಲಸೆಗಳು ಹೊಯ್ಸಳರ ಕಾಲದಲ್ಲೇ ವಿಶೇಷವಾಗಿ ನಡೆದಿರುವುದು ಕಂಡುಬಂದಿದೆ. ಹೊಯ್ಸಳ ವಿಷ್ಣುವರ್ಧನನು ಹೊರಗಿನಿಂದ ಬ್ರಾಹ್ಮಣೋತ್ತಮರನ್ನು ಮನ ಒಲಿಸಿ ಕರೆತಂದು ಅತ್ಯುತ್ತಮ ಪರಿಸರದಲ್ಲಿ ಅವರನ್ನು ಸೌಖ್ಯವಾಗಿ ನೆಲಸುವಂತೆ ಮಾಡುತ್ತಿದ್ದನೆಂಬುದನ್ನು ಇಲ್ಲಿ

ಶಾಸನೋಲ್ಲೇಖಗಳಿಂದ ತಿಳಿದುಕೊಳ್ಳಲಾಗಿದೆ. ಇದಲ್ಲದೆ ಅವನು ರಾಜಕೀಯ ಕಾರಣಕ್ಕಾಗಿ ಹೊರಗಿನಿಂದ ನಿಷ್ಠಾವಂತ ವ್ಯಕ್ತಿಗಳನ್ನು, ಕುಟುಂಬಗಳನ್ನು, ಪರಾಕ್ರಮಿಗಳನ್ನು ಕರೆತಂದು ಉತ್ತಮ ಕೃಷಿ ಭೂಮಿಗಳನ್ನು, ಸಂಪದಭಿವೃದ್ಧಿಗೆ ರೂಢಿಸಿಕೊಳ್ಳಲು ಕನ್ನೆ ನೆಲವನ್ನು, ಮೈಜೀವಿತಕ್ಕೆ ಆಡಳಿತ ಗ್ರಾಮಗಳನ್ನು ನೀಡಿ ಈ ಪ್ರದೇಶದಲ್ಲಿ ಸ್ಥಾಪಿಸುತ್ತಿದ್ದನೆಂಬುದು ಈ ಅಧ್ಯಯನದಿಂದ ತಿಳಿದುಬಂದಿದೆ. ಅವನು ಕಲ್ಯಾಣ ಪ್ರದೇಶದಿಂದ ಚಳುಕೆಯ ನಾಯಕನ ಕುಟುಂಬವನ್ನು ಕರೆತಂದು ಮಗರೆ ನಾಡಿನ ಸಿಂಗಟಗೆರೆ ಕಂಚಿಗಲ್ಲು ಬಿದರೆ ಶೇನವಗೆರೆ ಮುಂತಾದ ಗ್ರಾಮಗಳನ್ನೊಳಗೊಂಡು 'ಚಳುಕೆಯ ವೃತ್ತಿ'ಯೆಂಬ ಹೆಸರಿನಲ್ಲಿ ಆಡಳಿತ ವಿಭಾಗವನ್ನು ಸ್ಥಾಪಿಸಿಕೊಟ್ಟಿದ್ದು, ಆ ವಂಶದವರು ನಿಷ್ಠಾವಂತ ಸಾಮಂತರಾಗಿ ಸುಮಾರು ೨೫೦ ವರ್ಷಗಳು ಹೊಯ್ಸಳರ ಪತನದವರೆಗೂ ಸೇವೆ ಸಲ್ಲಿಸಿರುವುದನ್ನು ಪ್ರಥಮ ಬಾರಿಗೆ ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

ಇದೇ ರೀತಿ ಗುಜರಾತಿನ ಮೂಲದ ವಲಸಿಗ ಜಟ್ಟಿ ವಂಶವು ವಿಷ್ಣುವರ್ಧನನ ಕಾರುಣ್ಯದಿಂದ ಪ್ರಮುಖ ವಾಣಿಜ್ಯ ಪಥದ ಹರದಾರಿಗ್ರಾಮವಾದ ಉಂಡಿಗೆಹಾಳು ಮತ್ತು ಚಲವರವನಹಳ್ಳಿಯ ಆಡಳಿತ ಮಾಡುತ್ತಿದ್ದರೆಂಬುದನ್ನು ಇವರು ಕ್ರಿ.ಶ.ಸುಮಾರು ೧೨ನೇ ಶತಮಾನದ ಎರಡನೆಯ ದಶಕದಿಂದ ೧೮ನೇ ಶತಮಾನದವರೆಗೆ ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಈ ಗ್ರಾಮಗಳ ಕ್ಷೇತ್ರ ಕಾರ್ಯ ಹಾಗೂ ಜಟ್ಟಿ ವಂಶದವರೊಂದಿಗಿನ ಸಂದರ್ಶನಗಳಿಂದ, ಶಾಸನಗಳು ಮತ್ತು ಇತರ ಆಕರ ಆಧಾರಗಳಿಂದ ಈ ಜಟ್ಟಿಗಳ ಶೌರ್ಯ ಸಾಹಸ ಆಚಾರ ವಿಚಾರಗಳ ಬಗೆಗೆ ಕೊಡುಗೆಗಳ ಬಗೆಗೆ ಮಾಹಿತಿ ಸಂಗ್ರಹಿಸಿ ಈ ಅಧ್ಯಯನದಲ್ಲಿ ನೀಡಿದ್ದೇನೆ. ಈ ಕುಲದ ಆರಾಧ್ಯದೈವ ನಿಂಬಜಾದೇವಿ, ನವನೂಲು ಜಟ್ಟಪ್ಪ ದೇವರ ಬಗೆಗಿನ ಐತಿಹ್ಯಗಳನ್ನು ಸಂಗ್ರಹಿಸಿಕೊಂಡು ರಾಮಾನುಜರ ಹಾಗೂ ವೈಷ್ಣವ ಧರ್ಮದ ಪ್ರಭಾವಕ್ಕೆ ಒಳಗಾದ ಜಟ್ಟಿ ಕುಲದ ಧಾರ್ಮಿಕ ಸಾಮಾಜಿಕ ಸುಧಾರಕ ಕೊಂಡಾ ಜಟ್ಟಿ ಹೇಗೆ ಆ ಜಟ್ಟಿ ಕುಲದ ಸಾಂಸ್ಕೃತಿಕ ನಾಯಕನಾಗಿ ಬೆಳೆದು ಆರಾಧನೆಗೊಳ್ಳುತ್ತಿದ್ದಾನೆ, ರಾಮಾನುಜರಿಗೂ ಜಟ್ಟಪ್ಪನಿಗೂ ಅಭೇದ ಕಲ್ಪಿತವಾಗಿದೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಸುಮಾರು ೬೦೦ ವರ್ಷಗಳ ಇವರ ಆಳ್ವಿಕೆಯ ಕಾಲದಲ್ಲಿ ಒಟ್ಟು ೧೯ ಜಟ್ಟಿಗಳ ಹೆಸರು ಇಲ್ಲಿನ ಶಾಸನಗಳಿಂದ ತಿಳಿದುಬರುವುದಾದರೂ ಕಾಲಕ್ರಮದಲ್ಲಿ ಇವರ ಆಳ್ವಿಕೆಯನ್ನು ಗುರುತಿಸುವುದು ಸಾಧ್ಯವಾಗಿಲ್ಲ. ಕೆಳದಿ ಚೆನ್ನಮ್ಮನ ಮೋಸದ ಆಕ್ರಮಕ್ಕೆ ತುತ್ತಾಗಿ ಈ ವಂಶ ಪತನಗೊಂಡಿತು. ಉಳಿದುಕೊಂಡವರು ಚದುರಿ ಹೋಗಿ ಶಿವಮೊಗ್ಗದ ಕುಂಸಿ, ಮೈಸೂರು ಸೇರಿದರೆಂದೂ ಒಡೆಯರ ಆಶ್ರಯದಲ್ಲಿ ನಿಂತರೆಂದೂ ಐತಿಹ್ಯಗಳು ಹೇಳುತ್ತವೆ. ಇವರ ಶೌರ್ಯ ಪರಾಕ್ರಮ ತ್ಯಾಗ ಬಲಿದಾನಗಳಿಗೆ ಮೂಕ ಸಾಕ್ಷಿಗಳಾಗಿ ಅನೇಕ ಸ್ಮಾರಕಗಳು ಉಳಿದಿವೆ. ಇಂಥ ವೀರವೃತ್ತಿ ಪರಂಪರೆಯುಳ್ಳ ಜನಾಂಗಗಳಾದ ಜಟ್ಟಿಗಳು, ಮಾವಂತರನ್ನು ಕುರಿತು ವಿಶೇಷ ಅಧ್ಯಯನ ಮಾಡಲು ಅವಕಾಶವಿದೆ.

ಈ ಪ್ರದೇಶಕ್ಕೆ ವಿಷ್ಣುವರ್ಧನನಿಂದ ವಲಸೆಗೊಂಡ ಮತ್ತೊಬ್ಬ ಸಾಮಂತ, ಸಿಂಘರಸ. ಈತನನ್ನು ಅರಸೀಕೆರೆಯಿಂದೆತ್ತಿಸಿ ತಂದು ಮಗರೆನಾಡ ಮೊದಲ ಬಾಡದ ಕಳಿಕಟ್ಟೆಯಲ್ಲಿ ವಿಷ್ಣುವರ್ಧನ ಸ್ಥಾಪಿಸುತ್ತಾನೆ. ಈ ಅರಸೀಕೆರೆ ಎಂಬುದು ಬಳ್ಳಾರಿ ಜಿಲ್ಲೆಯ 'ನೊಣಬನರಸಿಯಕೆರೆ' ಎಂದು ಈ ಅಧ್ಯಯನದಲ್ಲಿ ಗುರುತಿಸಿಕೊಳ್ಳಲಾಗಿದೆ. ಈತನು ಪಾಂಡ್ಯರಸರ ದಂಡನಾಯಕನಾದ ನೊಣಂಬನರಸಿಯ ಕೆರೆಯಲ್ಲಿ ಸಾಮಂತನಾಗಿದ್ದ ಕಾಮರಸನ ಮಗನಾಗಿದ್ದನು. ಇವನೊಂದಿಗೆ ಅರಸೀಕೆರೆಯ ಶೈವಗುರುಗಳು ಕಣಿಕಟ್ಟೆಗೆ ಬಂದು ನೆಲಸಿ ಇಲ್ಲಿನ ಶೈವಧರ್ಮದ ಏಳಿಗೆಗೆ ಕಾರಣರಾಗಿದ್ದಾರೆಂಬುದನ್ನು ಕಂಡುಕೊಳ್ಳಲಾಗಿದೆ.

ವಿಷ್ಣುವರ್ಧನನ ಈ ರಾಜಕೀಯ ನೀತಿಯು ಹೊಯ್ಸಳರ ಆಡಳಿತದ ಸುಭದ್ರತೆಯ ಗುಟ್ಟಾಗಿತ್ತು. ಇದು ಸಾಮಂತರಿಂದ ಅಪಾರ ನಿಷ್ಠೆಯನ್ನು ಒತ್ತಾಯಿಸುತ್ತಿತ್ತು ಮತ್ತು ಪಡೆಯುತ್ತಿತ್ತೆಂಬುದು ಸತ್ಯ. ಈ ನೀತಿಯನ್ನು ಅವನ ಮುಂದಿನ ಅರಸರೂ ಅನುಸರಿಸಿರುವರೆಂಬುದನ್ನು ಬಿಜ್ಜಳನ ರಾಜ್ಯದಲ್ಲಿ ಬಿಜ್ಜಳನಿಗೂ ಆತನ ಮಕ್ಕಳಿಗೂ ಆಧಾರ ಸ್ಥಂಬನಾಗಿದ್ದ ದಂಡನಾಯಕ ವಸುಧೈಕ ಬಾಂಧವ ರೇಚರಸನು ಇಮ್ಮಡಿ ಬಲ್ಲಾಳನ ಪ್ರೀತ್ಯಾದರಗಳಿಗೆ ಪಾತ್ರನಾಗಿ ಪ್ರಾಂತೀಯ ರಾಜಧಾನಿ ಅರಸೀಕೆರೆಯ ಅಧಿಕಾರಿಯಾಗಿ ನೇಮಗೊಂಡಿರುವುದು ಸಾಕ್ಷಿಯಾಗಿದೆ. ಇವನ ವಲಸೆಯ ಹಿಂದೆ ಜೈನಧರ್ಮನಿಷ್ಠೆಯೂ ಕೆಲಸ ಮಾಡಿದ್ದು, ಬಿಜ್ಜಳನ ರಾಜ್ಯದಲ್ಲಿನ ಜೈನ ಧರ್ಮದ ಹೀನಸ್ಥಿತಿಯು ಹೊಯ್ಸಳ ನಾಡಿನಲ್ಲಿ ಅದಕ್ಕಿದ್ದ ಪ್ರೋತ್ಸಾಹವೂ ಕಾರಣವೆಂಬುದನ್ನು ಊಹಿಸಲಾಗಿದೆ. ಅವನ ವಲಸೆ ಈ ಪ್ರಾಂತ್ಯದ ಜೈನ ಧರ್ಮಕ್ಕೊಂದು ವರವಾಗಿ ಪರಿಣಮಿಸಿದುದನ್ನು ಇತಿಹಾಸಕಾರರು ಈಗಾಗಲೇ ಗುರುತಿಸಿದ್ದಾರೆ.

ಆರ್ಥಿಕ ಕಾರಣಕ್ಕೆ ಈ ಪ್ರದೇಶಕ್ಕಾದ ವಲಸೆಗಳಲ್ಲಿ ಕೇರಳ ವ್ಯಾಪಾರಿಗಳ ವಲಸೆ ಅತ್ಯಂತ ಪ್ರಮುಖವಾದುದು. ಈ ವರ್ತಕರ ಅಪಾರ ಸಂಪತ್ತು ರಾಜಕೀಯ ವರ್ಚಸ್ಸು, ಅವರ ಕೊಡುಗೈ ದಾನ ಪ್ರವೃತ್ತಿ, ಧಾರ್ಮಿಕತೆ ಸಾಮಾಜಿಕ ಸೇವೆ, ವ್ಯವಹಾರ ಚಾತುರ್ಯ ಇತ್ಯಾದಿಗಳ ಚರ್ಚೆಯೊಂದಿಗೆ ಅವರ ಸಾಲಬಡ್ಡಿ ವ್ಯವಹಾರ ಅವರ ಅಪಾರ ಭೂಮಿಯ ಒಡೆತನ, ಅವರಲ್ಲಿ ಸಾಲಿಗರಾದ ಸ್ಥಳೀಯ ಕೃಷಿಕರು ಮನೆ ಮಠಭೂಮಿ ಕಾಣೆಗಳನ್ನು ಕಳೆದುಕೊಂಡು ಹೀನಸ್ಥಿತಿಗೆ ಇಳಿದಿರುವ ವಿಚಾರಗಳನ್ನು ಗ್ರಹಿಸಿ ಇಂದಿನ ಬಂಡವಾಳಿಗರ ಲಾಲಸೆ ಹಾಗೂ ಸ್ಥಳೀಯ ಕೃಷಿಕರ ದಿವಾಳಿತನಗಳ ಹಿನ್ನೆಲೆಯಲ್ಲಿ ಅರ್ಥೈಸಲು ಪ್ರಯತ್ನಿಸಲಾಗಿದೆ.

ಧಾರ್ಮಿಕ ವಲಸೆಯಲ್ಲಿ ಪಾಂಡ್ಯ ನಾಡಿನಿಂದ ಶೈವ ಧಾರ್ಮಿಕ ಗುರು ಮಾರಜೀಯನ ನೇತೃತ್ವದಲ್ಲಾದ ವಲಸೆ ಕುತೂಹಲಕರವಾಗಿದೆ. ಆತನೊಂದಿಗೆ ಕೆಸೂರ ಮೆದೆಕೇರಿಯಿಂದ ಇಡೀ ಗ್ರಾಮವೇ (ಗಾವುಂಡುಗಳು ಪ್ರಜೆಗಳು) ಗುಳೆ ಹೊರಟು ಬಂದು ಈ ಪ್ರಾಂತ್ಯದ ಮುತ್ತನ ಹೊಸ ಊರಿನಲ್ಲಿ ನೆಲೆಸಿರುವುದು, ವಿಶಿಷ್ಟ ವಲಸೆಯಾಗಿದ್ದು, ಇಂದಿನ ಉತ್ತರ ಕರ್ನಾಟಕದ ಬರ ಪ್ರದೇಶಗಳ ಜನ ಗುಳೆ ಹೊರಡುವುದನ್ನು ನೆನಪಿಸುತ್ತದೆ. ಇಂಥ ವಲಸೆಯ ಕಾರಣ ನೈಸರ್ಗಿಕ ವಿಕೋಪವೋ,

ಕಲ್ಯಾಣ ಕ್ರಾಂತಿಯಂತಹ ಸಂಘರ್ಷವೋ ಅಥವಾ ರಾಜಕೀಯ ಪ್ರೇರಣೆಯೋ ಒಟ್ಟಿನಲ್ಲಿ ಬಲವಾದ ಕಾರಣವಿರಬಹುದೆಂದು ಊಹಿಸಬಹುದು. ಕಾರಣವೇನೇ ಇರಲಿ ಹೀಗೆ ಗುಳೆ ಹೊರಟು ಬಂದ ದೊಡ್ಡ ಗುಂಪಿಗೆ ನೆಲೆಯನ್ನು, ಆಧಾರವನ್ನು ಕಲ್ಪಿಸಿಕೊಡುವುದು ಸುಲಭದ ಮಾತಲ್ಲ. ಆದರೆ ಪ್ರಸ್ತುತ ಮುತ್ತನ ಹೊಸವೂರು ಆಹಾರಾಭಾವವಿಲ್ಲದ ಭೋಗದ ಆಗರವಾಗಿದ್ದು, ಸುಮಾರು ಹತ್ತಕ್ಕು ಹೆಚ್ಚಾದ ಕೆರೆ ಕಟ್ಟೆ, ಹಳ್ಳಗಳನ್ನು ತನ್ನ ಪರಿಸರದಲ್ಲಿ ಹೊಂದಿತ್ತು. ಸಿರಿವಂತ ಸೆಟ್ಟಿ ಪಟ್ಟಣವಾಗಿದ್ದು, ಅವಶ್ಯಕವಾದ ಸೌಕರ್ಯ ಸೌಲಭ್ಯಗಳನ್ನು ಹೊಂದಿತ್ತೆಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಸಾಮಾಜಿಕ ವೃತ್ತಿ ಸಂಬಂಧಿ ವಲಸೆಗಳಲ್ಲಿ ಹೊಯ್ಸಳರು ಶ್ರೇಷ್ಠವಾದ ವಿವಿಧ ಕಲೆ ಸಾಹಿತ್ಯ, ವೃತ್ತಿ, ನಿಪುಣತೆ, ಪಾಂಡಿತ್ಯ ಪ್ರತಿಭೆಗಳು ತಮ್ಮ ರಾಜ್ಯದಲ್ಲಿ ಅರಳಬೇಕು, ಬೆಳೆಯಬೇಕೆಂಬ ಕಾರಣಕ್ಕಾಗಿ ವಿದ್ವಾಂಸರಿಗೆ ಕಲಾವಿದರಿಗೆ ಸ್ಥಾನಮಾನ ಗೌರವಬಿರುದು ಜೀವನಾಧಾರಗಳನ್ನು ನೀಡಿ ಪೋಷಿಸುತ್ತಿದ್ದುದರಿಂದ ಈ ಪ್ರಾಂತ್ಯಕ್ಕೆ ಶ್ರೇಷ್ಠ ವಿದ್ವಾಂಸರು, ಬ್ರಾಹ್ಮಣರು, ಕಲಾವಿದರು, ರೂವಾರಿಗಳು, ವೈದ್ಯರು ಮುಂತಾದವರು ವಲಸೆಗೊಂಡಿರುವುದನ್ನು ಅಗ್ರಹಾರ, ಕೇಶವಪುರ, ನವಗ್ರಾಮಗಳಲ್ಲಿ ಅಪಾರ ಸಂಖ್ಯೆಯ ವಲಸಿಗ ವೈಷ್ಣವರು ಬಂದು ನೆಲಸಿದುದನ್ನು ಸ್ಥಳೀಯರೊಂದಿಗಿನ ಈ ವಲಸಿಗರ ಸಂಬಂಧದಲ್ಲಿ ದಾನದತ್ತಿ ಪಡೆದು ಭೂ ಒಡೆಯರಾದದ್ದು, ಸಾಲಬಡ್ಡಿ ವ್ಯವಹಾರದ ವಲಸಿಗ ವರ್ತಕರು ಸ್ಥಳೀಯರ ಸಾಲಕ್ಕೆ ಬದಲಾಗಿ ಭೂಮಿಯನ್ನು ಮನೆಗಳನ್ನು ದಕ್ಕು ಹಾಕಿಕೊಳ್ಳುವುದು ಅಗ್ರಹಾರಗಳ ವೈಷ್ಣವರು ಶೈವರ ಭೂಮಿ ಒಡೆತನ ಮತ್ತು ಹಂಚಿಕೆ ಹಾಗೂ ನೀರಿನ ಹಂಚಿಕೆಗೆ ಸಂಬಂಧಿಸಿದಂತಹ ವ್ಯಾಜ್ಯಗಳು, ಪರಸ್ಪರ ಸ್ವಾರ್ಥ ದ್ವೇಷಗಳು ಕೊಲೆ, ಕಾಳಗಗಳಿಗೆ ಕಾರಣವಾಗಿರುವುದು ಇತ್ಯಾದಿ ವಲಸೆಯ ದುಷ್ಪರಿಣಾಮಗಳನ್ನೂ ಹಾಗೂ ಅವರ ಕೊಡುಗೆಗಳನ್ನು, ಧರ್ಮಸಹಿಷ್ಣುತೆ, ಸೌಹಾರ್ದ, ಸಹಕಾರ ಒಡಂಬಡಿಕೆಗಳನ್ನು ವಿಶ್ಲೇಷಿಸಲಾಗಿದೆ.

ಒಟ್ಟಿನಲ್ಲಿ ಈ ವಲಸಿಗರು ಅನ್ಯ ನೆಲದಲ್ಲಿ ಬೇರು ಬಿಟ್ಟು ನೆಲಸಿ ಅಲ್ಲಿನ ರಾಜಕೀಯ, ಆರ್ಥಿಕ ಧಾರ್ಮಿಕ ಕ್ಷೇತ್ರಗಳಲ್ಲಿ ಸ್ಥಾನಮಾನ ಸಂಪತ್ತನ್ನು ಗಳಿಸುವ ಎಲ್ಲ ನೈಪುಣ್ಯತೆಯನ್ನು ಹೊಂದಿದ್ದು, ತಮ್ಮ ಅಭಿವೃದ್ಧಿಯೊಂದಿಗೆ ತಾವು ನೆಲೆ ನಿಂತ ಗ್ರಾಮಗಳ ಅಭಿವೃದ್ಧಿಗೂ ಶ್ರಮಿಸಿದ್ದಾರೆಂಬುದನ್ನು ಕಂಡುಕೊಳ್ಳಲಾಗಿದೆ.

ಪ್ರಸ್ತುತ ಪ್ರದೇಶದ ಶಾಸನಗಳಲ್ಲಿ ಬಿಂಬಿತವಾಗಿರುವ ಸ್ತ್ರೀ ಸಮಾಜದ ಸ್ಥಿತಿ ಸಂಚಲನಗಳನ್ನು ಕಂಡುಕೊಳ್ಳುವ ಮೂಲಕ ಮಧ್ಯಕಾಲೀನ ಕರ್ನಾಟಕದ ಸ್ತ್ರೀ ಸಮುದಾಯದ ಬದುಕಿನಲ್ಲಾದ ಸಂಚಲನವನ್ನು ಅರ್ಥಮಾಡಿಕೊಳ್ಳಲಾಗಿದೆ. ಅರಸಿಯರಿಂದ ಅತ್ಯಂತ ಸಾಮಾನ್ಯ ಸ್ತ್ರೀಯವರೆಗೆ ಸುಮಾರು ೩೦೦ರಷ್ಟು ಸ್ತ್ರೀಯರು ಇಲ್ಲಿನ ಶಾಸನಗಳಲ್ಲಿ ಉಲ್ಲೇಖಗೊಂಡಿದ್ದಾರಾದರೂ ಅವರ ಪ್ರಧಾನ ಕ್ಷೇತ್ರ ಗೃಹಜೀವನವಾಗಿದ್ದಿತು. ಅರಸರ ಅಧಿಕಾರಿಗಳ ದಾನಿಗಳ ಪರಾಕ್ರಮಿಗಳ ಮಡದಿಯರಾಗಿ ತಾಯಿಯರಾಗಿ

ಮಾತ್ರ ಅವರಿಗೆ ವಿಶೇಷ ಮಾನ್ಯತೆ ಇರುತಿದ್ದು, ಸ್ವತಂತ್ರ ವ್ಯಕ್ತಿತ್ವವನ್ನು ಬೆಳೆಸಿಕೊಂಡು ಸಾಧನೆ ಮಾಡಲು ಅವಕಾಶ ಪಡೆದವರ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರವಾಗಿತ್ತೆಂಬುದು ಕಂಡುಬಂದ ಸತ್ಯ.

ಮಧ್ಯಕಾಲೀನ ಕರ್ನಾಟಕದ ರಾಣಿಯರಿಗೆ ಆಡಳಿತಗಾರ್ತಿಯರಾಗಲು ದೊರೆತ ಅವಕಾಶ ಅದೇ ಕಾಲದ ಉತ್ತರ ಭಾರತದ ಯಾವ ರಾಣಿಯರಿಗೂ ದೊರೆತಿರಲಿಲ್ಲವೆಂಬ ಅಭಿಪ್ರಾಯವನ್ನು ಪುಷ್ಟೀಕರಿಸುವಂತೆ ಈ ಪ್ರಾಂತ್ಯದ ಆಸಂದಿ, ಮಗರೆ ಮತ್ತು ನೀರ್ಗುಂದ ನಾಡುಗಳಲ್ಲಿ ಹೊಯ್ಸಳ ರಾಣಿಯರ ಆಳ್ವಿಕೆ ವಿಶೇಷವಾಗಿತ್ತೆಂಬುದು ಈ ಅಧ್ಯಯನದಲ್ಲಿ ಸ್ಪಷ್ಟಗೊಂಡಿದೆ. ಅಲ್ಲದೆ 'ಗೌಡಿಕೆಯು ನಾಯಕನ ಹೆಣ್ಣು ಗಂಡಿಗೆ ಸಲ್ಲುವುದು' ಎಂಬ ನ್ಯಾಯ ತೀರ್ಮಾನವೊಂದು ಈ ಪ್ರದೇಶದ ಸ್ಥಳೀಯ ಪ್ರಭುಗಾವುಂಡಿಯರ ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯದ ಮೇಲೆ ಬೆಳಕು ಚೆಲ್ಲಿದೆ. ರಾಜಕೀಯ ಆಡಳಿತವಷ್ಟೇ ಅಲ್ಲದೆ ದೇವಾಲಯ ಮಠಗಳ ಒಡತಿಯರಾಗಿ ಗಣಕುಮಾರಿಯರಾಗಿ, ಸ್ಥಾನಿಕ ಸ್ತ್ರೀಯರಾಗಿ, ಪೂಜಾರಿಣಿಯರಾಗಿ, ಪಾತ್ರದವರಾಗಿ, ಬಾಣಸುಗಿತ್ತಿ, ಮಾಲೆಕಾರ್ತಿ, ತೈಲಗಿತ್ತಿಯರಾಗಿ ಗೃಹಜೀವನದ ಹೊರಗೂ ಸ್ತ್ರೀಯರು ಚಟುವಟಿಕೆಯಿಂದ ಇರುತ್ತಿದ್ದರೆಂಬುದು ಇಲ್ಲಿನ ಶಾಸನಗಳಿಂದ ತಿಳಿದುಬಂದಿದೆ.

ಪ್ರಸ್ತುತ ಪ್ರದೇಶದ ಶಾಸನಗಳ ಸಹಾಯದಿಂದ ಈ ಪ್ರದೇಶದಲ್ಲಿದ್ದ ಸಾಮಾಜಿಕ ನಿಯಂತ್ರಣ ಮತ್ತು ರಕ್ಷಣಾ ವ್ಯವಸ್ಥೆಯನ್ನು ಅರಿಯುವ ಮೂಲಕ ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ನಿಯಂತ್ರಣ ಮತ್ತು ರಕ್ಷಣಾ ವ್ಯವಸ್ಥೆಯ ಪರಿಚಯವನ್ನು ಐದನೆಯ ಅಧ್ಯಾಯದಲ್ಲಿ ಮಾಡಿಕೊಳ್ಳಲಾಗಿದೆ. ಯಾವುದೇ ಸಮಾಜದ ವ್ಯವಸ್ಥೆಯಲ್ಲಿ ಒಂದು ಪ್ರಕಮ ಹಾಗೂ ಸಮತೋಲನವನ್ನು ಕಾಪಾಡಲು ಔಪಚಾರಿಕ ಮತ್ತು ಅನೌಪಚಾರಿಕ ನಿಯಂತ್ರಣಾ ನಿಯೋಗಗಳನ್ನು ಬಳಸಿ ಇಲ್ಲಿನ ಸಮಾಜವು ತನ್ನ ಸದಸ್ಯರ ವರ್ತನೆಯನ್ನು ಯಾವ ರೀತಿ ನಿಯಂತ್ರಿಸಿದೆ ಎಂಬುದನ್ನು, ಇಲ್ಲಿನ ಶಾಸನಗಳಲ್ಲಿ ಭಿನ್ನ ಭಿನ್ನ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ವಿಧಿಸಲಾಗಿರುವ ವಿಧಿ ನಿಷೇಧಗಳು, ಶಾಪಾಶಯಗಳು, ಶಿಕ್ಷಾ ವಿಚಾರಗಳು ನೀತಿ ನಡಾವಳಿಯ ನಿಯಮ ನಿಬಂಧನೆಗಳ ಮೂಲಕ ತಿಳಿದುಕೊಳ್ಳಲಾಗಿದೆ. ಜೊತೆಗೆ ಸಾಮಾಜಿಕ ಭದ್ರತೆಗಾಗಿ ಪ್ರಜಾಕ್ಷೇಮಕ್ಕಾಗಿ ರಾಜ್ಯ ರಕ್ಷಣೆಯ ಹೊಣೆ ಹೊತ್ತ ನಿಯಂತ್ರಣ ಶಕ್ತಿಯು ದುಷ್ಟ ಶಿಕ್ಷಣದೊಂದಿಗೆ ಶಿಷ್ಟರಕ್ಷಣೆಯ ನೀತಿಯನ್ನು ಅಳವಡಿಸಿಕೊಂಡು ರೂಪಿಸಿಕೊಂಡಿದ್ದ ರಕ್ಷಣಾ ವ್ಯವಸ್ಥೆ ಎಂಥದ್ದೆಂಬುದನ್ನು ಆಕ್ರಮಣ ಆತಂಕಗಳಿಂದ ಗ್ರಾಮವನ್ನು ರಕ್ಷಿಸುವ ಹೊಣೆಹೊತ್ತ ಸ್ಥಳೀಯ ವೀರರುಗಳ ತ್ಯಾಗ ಪರಾಕ್ರಮಗಳನ್ನು ಇಲ್ಲಿನ ಶಾಸನಗಳು, ಕೋಟೆಗಳು, ವೀರ ಸ್ಮಾರಕಗಳ ಸಹಾಯ ದಿಂದ ವಿವರಿಸಿಕೊಳ್ಳಲಾಗಿದೆ.

ಮನುಷ್ಯನ ಅಪವರ್ತನೆಯನ್ನು ತಡೆಯಲು ಕೇವಲ ವಿಧಿ ನಿಷೇಧಗಳು ಶಿಕ್ಷೆ, ರಕ್ಷಣಾ ವ್ಯವಸ್ಥೆಗಳಷ್ಟೇ ಸಾಲದೆಂಬ ಅರಿವಿನಿಂದ ನಮ್ಮ ಹಿರಿಯರು ತಮ್ಮ ಸಮಾಜದ ಸದಸ್ಯರಲ್ಲಿ ಒಂದು ಸಾಮಾಜಿಕ ನಿಷ್ಠೆ, ಬದ್ಧತೆ, ಹೊಣೆಗಾರಿಕೆಯ ಇತ್ಯಾತ್ಮಕ ಭಾವವನ್ನು ಮೂಡಿಸಲು ಪ್ರೋತ್ಸಾಹಕ

ನಿಯೋಗಗಳಾಗಿ ಕೊಡುಗೆ ಪುರಸ್ಕಾರಗಳನ್ನು ನೀಡುವ ಯಾವೆಲ್ಲ ಯೋಜನೆಗಳನ್ನು ಹೊಂದಿದ್ದರೆಂಬುದನ್ನು ಗಮನಿಸಲಾಗಿದೆ.

ರಕ್ಷಣೆಯ ಅಂಗವಾಗಿ ಸೈನ್ಯದ ವ್ಯವಸ್ಥೆ, ಕೋಟೆಗಳು ಅನೇಕ ರೀತಿಯ ಕಾಳಗಗಳ ಬಗೆಗೆ, ಸ್ವಾಮಿ ನಿಷ್ಠ ವೀರ ಪಡೆಗಳ ಸೇವೆಯನ್ನು ಅವುಗಳ ವೈಶಿಷ್ಟ್ಯತೆಗಳನ್ನು ಅವುಗಳನ್ನು ಹುಟ್ಟುಹಾಕಿದ ವ್ಯವಸ್ಥೆಯ ಬಗೆಗೆ ವಿಶೇಷ ಗಮನ ಹರಿಸಿದ ಫಲವಾಗಿ ಈ ಅಧ್ಯಯನದಲ್ಲಿ ಕೂಸರು, ಎಕ್ಕಟಿಗರು, ಮೈಮೇಟಿಗಳಂತ ವೀರ ಸೇವಕರು ವೀರ ಪಡೆಗಳನ್ನು ಪ್ರಥಮ ಬಾರಿಗೆ ಬೆಳಕಿಗೆ ತರಲು ಸಾಧ್ಯವಾಗಿದೆ.

ಪ್ರಸ್ತುತ ಪ್ರದೇಶದ ಅನೇಕ ಶಾಸನಗಳಲ್ಲಿ ಹೊಯ್ಸಳರ ಅನೇಕ ದಿಗ್ವಿಜಯಗಳಲ್ಲಿ ಪಾಲ್ಗೊಂಡು ಗೆಲುವನ್ನು ಸಾಧಿಸಿದ, ಗೆದ್ದ ರಾಜ್ಯಗಳಲ್ಲಿ ಶಾಂತಿಪಾಲನೆಯ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿಭಾಯಿಸುತ್ತಿದ್ದ ವೀರಪಡೆಯನ್ನು 'ಭೇರುಂಡದ ಮೊತ್ತದ ಕೂಸರು, 'ಭೇರುಂಡ ವರ್ಗ' ಎಂದು 'ಹಿರಿಯ ಭೇರುಂಡದ ಮೊತ್ತದ ಕೂಸ' ಎಂದು ಉಲ್ಲೇಖಿಸಿರುವುದರಿಂದ ಮತ್ತು ಅವರ ಸ್ವಾಮಿನಿಷ್ಠೆ, ಶೌರ್ಯ, ತ್ಯಾಗ, ಧಾರ್ಮಿಕತೆಯನ್ನು ಹೊಗಳಿ ಅವರನ್ನು ಕೂಸ, ಪುತ್ರ, ಅಣುಗ, ಮಕ್ಕಳ್ ಇತ್ಯಾದಿ ಪದಗಳಿಂದ ಕರೆದಿರುವುದರಿಂದ ಕರ್ನಾಟಕದ ವೀರಪರಂಪರೆಯ ಜೋಳವಾಳಿ, ವೇಳವಾಳಿ, ಲೆಂಕ, ಮನೆಮಕ್ಕಳ ಸಾಲಿನಲ್ಲಿ ಇನ್ನು ಮುಂದೆ ಈ ಕೂಸರನ್ನು ಸೇರಿಸಿಕೊಳ್ಳಬೇಕಾಗುತ್ತದೆ. ಇವರು ತಮ್ಮ ಸೇವೆಗಾಗಿ ಅಣುಗ ಜೀವಿತ, ಮೈಜೀವಿತ, ಅಸಿಯಮಾನಿಗಳೆಂದು ಕೊಡಗಿ ಗ್ರಾಮಗಳನ್ನು, ಮಹಾಪಸಾಯತ ಸ್ಥಾನಮಾನಗಳನ್ನು ಪಡೆದಿದ್ದಾರೆಂಬುದನ್ನು ಬೆಳಕಿಗೆ ತರಲಾಗಿದೆ. ಹೊಯ್ಸಳ ಸೈನ್ಯದ ಬಲವನ್ನು ಗೆಲುವಿನ ಹೆಗ್ಗಳಿಕೆಯನ್ನು ಅವರ ಸ್ವಾಮಿನಿಷ್ಠ ಗರುಡರಿಗೆ ವಿದ್ವಾಂಸರು ಇದುವರೆಗೂ ನೀಡುತ್ತಾ ಬಂದಿದ್ದಾರೆ. ಆದರೆ ಹೊಯ್ಸಳರ ಸೈನ್ಯದಲ್ಲಿ ಗರುಡರಲ್ಲದೆ ಅನೇಕ ವಿಶಿಷ್ಠ ವೀರ ಪಡೆಗಳೂ ಇರುತ್ತಿದ್ದುವೆಂಬುದನ್ನು ಈ ಅಧ್ಯಯನದಲ್ಲಿ ತೋರಿಸಲಾಗಿದೆ. ಒಂದನೇ ನರಸಿಂಹನ ಕಾಲದಿಂದ ಮೂರನೇ ಬಲ್ಲಾಳನ ಕಾಲದವರೆಗೂ ಅವರ ಸೈನ್ಯದ ವಿಶೇಷ ಬಲವಾಗಿದ್ದು, ಗೆಲುವಿಗೆ ಕಾರಣವಾದ 'ಭೇರುಂಡನ ಮೊತ್ತ'ವೆಂಬ ವೀರ ಪಡೆಯನ್ನು ಅವರ ಶಾಸನಗಳು ಸ್ಪಷ್ಟವಾಗಿ ಉಲ್ಲೇಖಿಸಿವೆಯಾದ್ದರಿಂದ ಹೊಯ್ಸಳರ ವಿಶೇಷ ಸೈನ್ಯ ಪಡೆಯನ್ನು ಇನ್ನು ಮುಂದೆ 'ಭೇರುಂಡರು" ಎಂದೇ ಕರೆಯಬೇಕಾಗುತ್ತದೆ. ಹೊಯ್ಸಳರ ಗರುಡರು ವೇಳೆವಾಳಿಗಳಾದರೆ ಈ ಕೂಸರು ಜೋಳವಾಳಿಗಳೆನ್ನಬಹುದು.

ಇದೇ ರೀತಿ ಹೊಯ್ಸಳರ ಕಾಲದಲ್ಲಿ ಕಂಡುಬರುವ ಮತ್ತೊಂದು ವಿಶೇಷ ಅಂಗರಕ್ಷಕ ವೀರಪಡೆ, 'ಎಕ್ಕಟಿಗ ಅಂಗರಕ್ಷಕ'ರದ್ದು. ಇವರನ್ನು 'ಅರಿಕೆಯ ಬೋವ'ರೆಂದು ಕರೆಯಲಾಗಿದೆ. ಈ ಸ್ವಾಮಿನಿಷ್ಠ ವಿವಿಧ ಸಂಖ್ಯೆಯ ವೀರರ ಪಡೆಗಳನ್ನು 'ಅಱುವತ್ತು ಮಾನಸಿಗ ಎಕ್ಕಟಿಗರ್', 'ಯೆಕ್ಕಟಿಗ ಅಂಗರಕ್ಷಕರ್ ನಾಲ್ವದಿಂಬರ್' ಇತ್ಯಾದಿಯಾಗಿ ಶಾಸನಗಳು ಉಲ್ಲೇಖಿಸಿವೆ.

ಒಂದನೆನರಸಿಂಹ ಮತ್ತು ಇಮ್ಮಡಿ ವೀರ ಬಲ್ಲಾಳರ ಕಾಲದಲ್ಲಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದ ಈ ಎಕ್ಕಟಿಗರನ್ನು ಸ್ಥಳೀಯ ಪ್ರದೇಶಗಳನ್ನು ಆಳ್ವಿಕೆ ಮಾಡುತ್ತಿದ್ದ ಸಾಮಂತ ಅರಸರು ತಮ್ಮದೇ ಆದ ವಿಶಿಷ್ಟವಾದ ಕಾಯ್ದಿಟ್ಟ ಅಂಗರಕ್ಷಕ ಪಡೆಯಾಗಿ ರಕ್ಷಿಸುವ ಹಾಗೂ ಶತ್ರುವ್ಯೂಹವನ್ನು ಭೇದಿಸುವ ವಿಶಿಷ್ಟ' ತರಬೇತಿ ನೀಡಿ ರೂಪಿಸಿರುತ್ತಿದ್ದರು. ಇವರನ್ನು ಯುದ್ಧಗಳ ಸಂದರ್ಭದಲ್ಲಿ ಅರಸರ ಬೇಡಿಕೆಯ ಮೇರೆಗೆ ಕಳುಹಿಸಿಕೊಡುತ್ತಿದ್ದರೆಂಬುದನ್ನು ಆ ಕಾರಣಕ್ಕಾಗಿಯೇ ಕರೆಯ ಮೇರೆಗೆ ಸೇವೆ ನೀಡುವ' ಇವರನ್ನು ಅರಿಕೆಯ ಬೋವ'ರೆನ್ನಲಾಗುತ್ತಿತ್ತೆಂದು ಈ ಅಧ್ಯಯನದಲ್ಲಿ ಅರ್ಥೈಸಲಾಗಿದೆ. ಇವರಲ್ಲಿ 'ಆನೆಯ ಕಾಲ್ಗಾಪಿನ' ಎಕ್ಕಟಿಗರು, ಅರಸರ ಖಾಸಾ ಎಕ್ಕಟಿಗರೂ ಇರುತ್ತಿದ್ದರೆಂಬುದೂ ಬೆಳಕಿಗೆ ಬಂದಿದೆ.

ಈ ಸಂಶೋಧನೆಯಿಂದ ಬೆಳಕಿಗೆ ಬಂದಿರುವ ಈ ಪ್ರದೇಶದ ಮತ್ತೊಂದು ಸ್ವಾಮಿನಿಷ್ಠ ವೀರ ಸೇವಕರು ಮೈಮೇಟಿಗಳು. ಇವರು ಅಂಗಸಾಧನೆಗೆ ಅವಶ್ಯಕವಾದ ಅಂಗಮರ್ಧನ ತೈಲ ಲೇಪನ, ಮಟ್ಟಿಲೇಪನ, ಗರಡಿ ಸಾಧನೆಗಳಲ್ಲಿ ಪರಿಣತರಾದ ಸಂವಾಹಕರು (ದೇಹ ಸಂವರ್ಧಕರು body builders) ದೇಹ ಪೋಷಣೆಗೆ ಅಗತ್ಯವಾದ ಔಷಧೀಯ ಸಸ್ಯಗಳನ್ನು ಕಾಂತಿ ವರ್ಧಕಗಳನ್ನು ಸೇರಿಸಿ ತೈಲ ತಯಾರಿಸುವ ಹಾಗೂ ದೇಹ ಪುಷ್ಟಿಗೆ ವಿಶೇಷ ಪೇಯಗಳನ್ನು ತಯಾರಿಸುವ ವಿದ್ಯೆಗಳಲ್ಲಿ ಪರಿಣತರಾಗಿದ್ದರು. ಇವರು ಅರಸರ, ವೀರ ದಂಡನಾಯಕರ ಖಾಸಾ ಸಂವಾಹಕರಾಗಿ ನೇಮಕಗೊಳ್ಳುತ್ತಿದ್ದು, ಸೈನ್ಯದ ಯೋಧರ ತರಬೇತಿಯಲ್ಲಿ ಇವರ ಪಾತ್ರ ವಿಶೇಷವಾಗಿತ್ತು ದೇಹವನ್ನು ವಜ್ರ ಕಠಿಣವಾಗಿ ರೂಪಿಸಬಲ್ಲ ಜಟ್ಟಿಗಳಾಗಿದ್ದ ಇವರು ರಣಾಂಗಣಕ್ಕೆ ನುಗ್ಗುತ್ತಿದ್ದ ವೀರರಾಗಿ ಚಮೂಪತಿ, ದಂಡನಾಯಕರೂ ಆಗಿದ್ದರೆಂಬುದನ್ನು ಕಂಡುಕೊಳ್ಳಲಾಗಿದೆ.

ನನ್ನ ಅಧ್ಯಯನ ವ್ಯಾಪ್ತಿಯ ಪ್ರದೇಶದೊಳಗೆ ಕೇವಲ ಶಾಸನಗಳನ್ನಾಧರಿಸಿ ಕೈಗೊಂಡಿರುವ ಈ ವೀರ ಸೇವಕರ ಅಧ್ಯಯನವನ್ನು ಕರ್ನಾಟಕ ಹಾಗೂ ದಕ್ಷಿಣ ಭಾರತದ ಇತರ ಪ್ರದೇಶಗಳ ಶಾಸನಗಳನ್ನು ಹಾಗೂ ಸಾಹಿತ್ಯವನ್ನು ಆಕರವಾಗಿ ಬಳಸಿ ವ್ಯಾಪಕ ಅಧ್ಯಯನ ಕೈಗೊಂಡರೆ ಪ್ರಾಚೀನ ದಕ್ಷಿಣ ಭಾರತದ ಸಂಚಾರಿ ವೀರ ಪಡೆಯಾದ ಕೋಶರರು ಹಾಗೂ ಇಂದಿಗೂ ಉಳಿದಿರುವ ಕೂಸ ಸಮುದಾಯಕ್ಕೂ ಪ್ರಸ್ತುತ ವೀರಪಡೆ ಕೂಸರಿಗೂ ಇರಬಹುದಾದ ಸಂಬಂಧಗಳ ಬಗೆಗೆ ಕಳಚಿಕೊಂಡಿರುವ ಕೊಂಡಿಗಳನ್ನು ಬೆಸೆಯಲು ಅವಕಾಶವಾಗಬಹುದು ಮತ್ತು ಎಕ್ಕಟಿಗರು ಹಾಗೂ ಮೈಮೇಟಿಗಳ ಬಗೆಗೆ ಮತ್ತಷ್ಟು ಹೊಸ ವಿಚಾರಗಳು ಬೆಳಕಿಗೆ ಬರಬಹುದು.

ಪ್ರಭುತ್ವದಷ್ಟೇ ಪ್ರಬಲವಾಗಿ ಸಮಾಜವನ್ನು ತನ್ನ ತೆಕ್ಕೆಯಲ್ಲಿಟ್ಟು ನಡೆಸಿದ ಮತ್ತೊಂದು ಶಕ್ತಿ ಧರ್ಮವಾದ್ದರಿಂದ ಈ ಪ್ರದೇಶದಲ್ಲಿ ಕಂಡುಬಂದ ವಿವಿಧ ಧರ್ಮಗಳ ಪಂಥಪಂಡಗಳ ಸ್ಥಿತಿಗತಿ. ಅವುಗಳ ನಡುವಿನ ಪ್ರಭಾವ, ಪ್ರಸಾರ, ಸಂಘರ್ಷ, ಸಮನ್ವಯಗಳನ್ನು ಜನಪರವಾಗುವ ಜನಪ್ರಿಯವಾಗುವ

